# ಮಳೆಕಥನ : ಜನಪದ ಪರಂಪರೆಯನ್ನು ಅನುಲಕ್ಷಿಸಿ

ಡಾಕ್ಟರ್ ಆಫ್ ಫಿಲಾಸಫಿ (ಪಿ.ಹೆಚ್.ಡಿ.)

ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು

ಮಲ್ಲೇಶಪ್ಪ. ಕೆ.ಟಿ.

ಮಾರ್ಗದರ್ಶಕರು

ಡಾ. ಮೊಗಳ್ಳಿ ಗಣೇಶ್

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ



ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

ವಿದ್ಯಾರಣ್ಯ - ೫೮೩೨೭೬

೨೦೧೪

# ಮಳೆಕಥನ : ಜನಪದ ಪರಂಪರೆಯನ್ನು ಅನುಲಕ್ಷಿಸಿ

(ಡಾಕ್ಟರ್ ಆಫ್ ಫಿಲಾಸಫಿ (ಪಿಹೆಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ

ಮಹಾಪ್ರಬಂಧ)



ಸಂಶೋಧಕರು

ಮಲ್ಲೇಶಪ್ಪ. ಕೆ.ಟಿ

ಮಾರ್ಗದರ್ಶಕರು

ಡಾ. ಮೊಗಳ್ಳಿ ಗಣೇಶ್

ಪ್ರಾಧ್ಯಾಪಕರು

ಜಾನಪದ ಅದ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ. ಹಂಪಿ



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡವಿಶ್ವವಿದ್ಯಾನಿಲಯ, ಹಂಪಿ
ವಿದ್ಯಾರಣ್ಯ- ೫೮೩೨೭೬
೨೦೧೪

## ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯ ಸಮಾಜವಿಜ್ಞಾನ ನಿಕಾಯದ ಜಾನಪದ ಅಧ್ಯಯನ ವಿಭಾಗದಲ್ಲಿ ಪಿಎಚ್.ಡಿ. ಪದವಿಗಾಗಿ **"ಮಳೆಕಥನ : ಜನಪದ ಪರಂಪರೆಯನ್ನು ಅನುಲಕ್ಷಿಸಿ"** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಸಂಶೋಧನಾ ಅಭ್ಯರ್ಥಿಯಾದ ಮಲ್ಲೇಶಪ್ಪ ಕೆ.ಟಿ. ಇವರು ಸಿದ್ಧಪಡಿಸಿರುತ್ತಾರೆ. ಈ ಮಹಾಪ್ರಬಂಧವಾಗಲೀ, ಮಹಾಪ್ರಬಂಧದ ಅಧ್ಯಾಯವಾಗಲೀ ಬೇರೆ ಯಾವ ಗ್ರಂಥಗಳು, ನಿಯತಕಾಲಿಕೆಗಳಲ್ಲಿ ಪ್ರಕಟಿಸಲ್ಪಟ್ಟಿಲ್ಲ. ಈ ಸಂಶೋಧನಾ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗೆ ಮೌಲ್ಯಸ್ವೀಕಾರಕ್ಕಾಗಿ ಒಪ್ಪಿಸುತ್ತಿರುವುದಕ್ಕೆ ನನ್ನ ಒಪ್ಪಿಗೆಯಿದೆ.

ದಿನಾಂಕ :

ಮಾರ್ಗದರ್ಶಕರ ಸಹಿ

(ಡಾ. ಮೊಗಳ್ಳಿ ಗಣೇಶ್)

# ಅಭ್ಯರ್ಥಿಯ ಘೋಷಣೆ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯ ಸಮಾಜವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗದಲ್ಲಿ ಸಂಶೋಧನಾ ಅಭ್ಯರ್ಥಿಯಾಗಿ ಮಲ್ಲೇಶಪ್ಪ. ಕೆ.ಟಿ. ಆದ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಪಿ.ಹೆಚ್.ಡಿ ಅಧ್ಯಯನದ ಅಂಗವಾಗಿ ಸಂಶೋಧನಾ ಮಹಾಪ್ರಬಂಧ ರಚಿಸಲು **"ಮಳೆಕಥನ : ಜನಪದ ಪರಂಪರೆಯನ್ನು ಅನುಲಕ್ಷಿಸಿ"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು, ಡಾ. ಮೊಗಳ್ಳಿ ಗಣೇಶ್ ರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಮಹಾಪ್ರಬಂಧವನ್ನು ರಚಿಸಿರುತ್ತೇನೆ.

ಈ ಮಹಾಪ್ರಬಂಧವಾಗಲೀ ಮಹಾಪ್ರಬಂಧದ ಅಧ್ಯಾಯವಾಗಲೀ, ಬೇರೆ ಯಾವ ಗ್ರಂಥಗಳು, ನಿಯತಕಾಲಿಕಗಳಲ್ಲಿ ಪ್ರಕಟಿಸಲ್ಪಟ್ಟಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ. ಕನ್ನಡ ವಿಶ್ವವಿದ್ಯಾಲಯ ನೀಡುವ ಪಿ.ಹೆಚ್.ಡಿ ಪದವಿಗಾಗಿ ಈ ಮಹಾಪ್ರಬಂಧವನ್ನು ಒಪ್ಪಿಸುತ್ತಿದ್ದೇನೆ.

ದಿನಾಂಕ: ಅಭ್ಯರ್ಥಿಯ ಸಹಿ

(ಮಲ್ಲೇಶಪ್ಪ ಕೆ.ಟಿ)

# ಕೃತಜ್ಞತೆಗಳು

ಮಳೆಕಥನ: ಜನಪದ ಪರಂಪರೆಯನ್ನು ಅನುಲಕ್ಷಿಸಿ ಎಂಬ ಈ ಸಂಶೋಧನಾ ಮಹಾಪ್ರಬಂಧವು, ಜನಪದರ ಅಥವಾ ಜನಸಾಮಾನ್ಯರ, ಕೃಷಿ ಬದುಕು ಮತ್ತು ಸಾಂಸ್ಕೃತಿಕಅನನ್ಯತೆಯನ್ನು ಕುರಿತು ಅಧ್ಯಯನಕ್ಕೆ ಒಳಪಡಿಸಿದ್ದು, ಮಳೆ ಎನ್ನುವುದು ಜಗತ್ತಿನ ಅಳಿವು ಉಳಿವುಗಳ ಮೂಲವಾಗಿದೆ. ಮಳೆಕಥನ ಎನ್ನುವ ವಿಶ್ವವ್ಯಾಪಿ ಅಂಶವನ್ನು ಆಧ್ಯಯನಕ್ಕೆ ಆಯ್ದುಕೊಂಡಾಗ ಕ್ಷೇತ್ರಕಾರ್ಯವೇ ಪ್ರಧಾನ ವಸ್ತುವಾದಾಗ ಇದು ಸಾಧ್ಯವೇ ಎಂಬ ದುಗಡವಿತ್ತು. ಕ್ಷೇತ್ರಕಾರ್ಯದ ಕೈಗೊಂಡ ಮೇಲೆ ಇನ್ನೂ ನಮ್ಮ ಜನರಲ್ಲಿ ಸಂಪ್ರದಾಯ ಆಚರಣೆ ನಂಬಿಕೆಗಳು ಇವೆ ಎಂದು ತಿಳಿದಾಗ ದುಗುಡ ಕಡಿಮೆಯಾಯಿತು. ವಕ್ತೃಗಳು ಅಗತ್ಯ ಮಾಹಿತಿಗಳನ್ನು ನೀಡಿ ಸಂಶೋಧನೆಗೆ ಸಹಕರಿಸಿದ ಎಲ್ಲರಿಗೂ ಕೃತಜ್ಞನಾಗಿದ್ದೇನೆ.

ಜಲಸಂಸ್ಕೃತಿಯ ಬಗ್ಗೆ ವಿಷಯ ಪ್ರಸ್ತಾಪಿಸಿ ಸಂಶೋಧನೆ ಕೈಗೊಳ್ಳುತ್ತೇನೆ ಎಂದು ವಿಷಯ ಪ್ರಸ್ತಾಪಿಸಿದಾಗ ಜಲಕ್ಕೆ ಮೂಲ ಮಳೆ, ಈ ಕುರಿತು ಇದುವರೆಗಿನ ಅಧ್ಯಯನಗಳು ಕಡಿಮೆ ಎಂದು ಹಾಗಾಗಿ ಮಳೆ ಸಂಬಂಧಿಸಿದಂತೆ ಸಂಶೋಧನೆ ಕೈಗೊಳ್ಳುವ ಅಗತ್ಯತೆಯನ್ನು ತಿಳಿಸಿ, ಮಾಹಿತಿ ನೀಡಿ ಎಚ್ಚರಿಸಿ ಪ್ರೋತ್ಸಾಹಿಸಿದ ನನ್ನ ಮಾರ್ಗದರ್ಶಕರಾದ ಡಾ. ಮೊಗಳ್ಳಿ ಗಣೇಶ್ ಅವರಿಗೆ ಕೃತಜ್ಞನಗಿದ್ದೇನೆ.

ನನ್ನ ಅಧ್ಯಯನಕ್ಕೆ ಸದಾಕಾಲ ಪ್ರೋತ್ಸಾಹಿಸಿ, ಕ್ಷೇತ್ರಕಾರ್ಯ ಹಾಗೂ ಪುಸ್ತಕಗಳ ಶೋಧಕ್ಕೆ ನೆರವಾದ· ನನ್ನ ಸಹಪಾಠಿ ಅತ್ಮೀಯ ಗೆಳಯ ರವಿತೇಜ.ಪಿ.ಎ.ಎಂ. ಅವರಿಗೆ ಕೃತಜ್ಞತೆ ಸಲ್ಲುತ್ತವೆ.

ಕೋರ್ಸ್‌ವರ್ಕ್ ತರಗತಿಗಳಲ್ಲಿ ಮಾತ್ರವಲ್ಲದೆ ಸದಾಕಾಲ ಸಂಶೋಧನೆಗಳಗೆ ಸಂಬಂಧಿಸಿದಂತೆ ಸೂಕ್ತ ಸಲಹೆ ಸೂಚನೆ ನೀಡಿದ ಜನಪದ ಅಧ್ಯಯನ ವಿಭಾಗದ ಡಾ. ಸಿ.ಟಿ. ಗುರುಪ್ರಾಸಾದ್ ಮತ್ತು ಪ್ರಾಧ್ಯಾಪಕರಾದ ಡಾ. ಮಂಜುನಾಥ ಬೇವಿನಕಟ್ಟೆ, ಡಾ. ಹೆಬ್ಬಾಲೆ ನಾಗೇಶ್ ಡಾ. ಸ.ಚಿ, ರಮೇಶ್‌ರವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಸಂಶೋಧನೆಗೆ ಅಗತ್ಯವಾದ ತಾಂತ್ರಿಕ ಸಲಹೆ ಮತ್ತು ಸಹಕಾರ ನೀಡಿದ ಶ್ರೀ ಅಜಿತ್‌ರವರಿಗೂ ಕೃತಜ್ಞತೆ ಸಲ್ಲಿಸುತೇನೆ.

ಅಧ್ಯಯನಕ್ಕೆ ಸಹಕಾರ ನೀಡಿದ, ನಾನು ಕಾರ್ಯ ನಿರ್ವಹಿಸುತ್ತೀರುವ ಕಾಲೇಜಿನ ಡಾ. ಎ. ತಿಮ್ಮಾರೆಡ್ಡಿಯವರು ದಿ॥ ಶೇಷನವರತ್ನರವರು ದಿಲೀಪ್‌ಕುಮಾರ್‌ರವರಿಗೂ ಹಾಗೂ ನನ್ನ ಎಲ್ಲಾ ಸಹೋದ್ಯೋಗಿಗಳಿಗೂ ಕೃತಜ್ಞತೆ ಸಲ್ಲಿಸುತ್ತೇನೆ.

ನನ್ನ ಸಂಶೋಧನಾ ಮಹಾಪ್ರಬಂಧಕ್ಕೆ ಅಕ್ಷರಗಳ ರೂಪಕೊಟ್ಟ, ಶ್ರೀಮತಿ ಶಾರದ, ಸಂಪಿಗೆ ಸೊಗಸಿನ ಪುಟಾಣಿ ಚಾರ್ವಿತ. ಪಿ.ಎ.ಎಂ. ಪುಟ್ಟರಾಜು, ಕೃಷ್ಣರವರಿಗೂ ಕೃತಜ್ಞನಾಗಿದ್ದೇನೆ.

ತಮ್ಮ ಜೀವನದ ಅನೇಕ ಸೋಲುಗಳ ನಡುವೆಯೂ ಗೆಲ್ಲುವ ಭರವಸೆ ತುಂಬುತ್ತಾ ನನ್ನನ್ನು ಅಧ್ಯಯನಕ್ಕೆ ಉತ್ತೇಜಿಸಿದ ನನ್ನ ತಂದೆ ತಿಪ್ಪೇಶಪ್ಪ, ಶ್ರೀಮತಿ ಶಾರದಮ್ಮ, ಸಹೋದರ ಕೊಟ್ರೇಶ್ ಅವರಿಗೂ ಹಾಗೂ ನನ್ನ ಕುಟುಂಬದ ಸದಸ್ಯರಿಗೂ ನನ್ನ ಪ್ರೀತಿಯ ಕೃತಜ್ಞತೆಗಳು ಸಲ್ಲುತ್ತವೆ.

# ಮಳೆ ಕಥನ : ಜನಪದ ಪರಂಪರೆಯನ್ನು ಅನುಲಕ್ಷಿಸಿ

ಅಧ್ಯಾಯ. ಒಂದು

# ಅಧ್ಯಯನದ ಹಿನ್ನೆಲೆ, ಮಹತ್ವ, ವ್ಯಾಪ್ತಿ, ವಿಧಾನ.

'ಮಳೆರಾಯನ ಕರುಣೆಗೆ ಕರ್ಮೆಲ್ಲಾ ಬಯಲಾಗಿ
ಸಣದು ಸಂದಿಗೆ ಸಮಸುಖ । ಮಳೆರಾಜ
ಜಗಕೆಲ್ಲಾ ದಾರಿ ಸುಖವಾಗೆ'[೧]

ಅನುಭವ ಸಾಹಿತ್ಯವಾಗುತ್ತದೋ, ಸಾಹಿತ್ಯವು ಅನುಭವವನ್ನು ರೂಪಿಸುತ್ತದೋ ಇವೆರಡೂ ಸಹ ಜನಪದಪ್ರಜ್ಞೆಗೆ ಅರಿವಿಗೆ ನಿಲುಕಿದ ನಿಲುಕಿದಂತೆಯೇ ಮುಂದುವರಿದ ಪ್ರಕ್ರಿಯೆಗಳಾಗಿವೆ. ಸಾಹಿತ್ಯ ಒಂದು ಸಾಮಾಜಿಕ ಸೃಷ್ಟಿಯಾಗಿದೆ. ಮನುಷ್ಯ ತಾನು ಅನುಭವಿಸಿದ ಜೀವನಾನುಭವಗಳನ್ನು ಆಲೋಚನೆ ಮತ್ತು ಅಭಿಪ್ರಾಯಗಳನ್ನು ಭಾಷೆಯ ಮೂಲಕ ವ್ಯಕ್ತಪಡಿಸಲು ಕಂಡುಕೊಂಡಾಗ ಭಾಷೆ ಒಂದು ಸಂಪರ್ಕ ಮಾಧ್ಯಮವಾಗಿ ಸಮಾಜದಲ್ಲಿ ಸ್ಥಾನ ಪಡೆಯಿತು. ಸಮಾಜದಲ್ಲಿನ ಎಲ್ಲ ಜನಗಳನ್ನು ಒಂದೆಡೆ ಸೇರಿಸುವ ಪರಸ್ಪರ ಸಂಪರ್ಕ ಬೆಳೆಸುವ ಮತ್ತು ಅವರ ಹಿತವನ್ನು ಕಾಪಾಡುವ ನಿಟ್ಟಿನಲ್ಲೂ ಭಾಷೆ ಸಾಮಾಜಿಕ ಜವಾಬ್ದಾರಿಗಳನ್ನು ನಿರ್ವಹಿಸಿತು. ಇಲ್ಲಿಂದ ಮುಂದೆ ಭಾಷೆ ಇತರ ಸಾಧ್ಯತೆಗಳನ್ನು ನಿರ್ವಹಿಸುವಲ್ಲಿ ಹೆಜ್ಜೆ ಇರಿಸಿತು. ಅಂದರೆ ಮಾನವ ತನ್ನ ವಿಶಿಷ್ಟ ಅನುಭವಗಳನ್ನು ಭಾಷೆಯ ಮೂಲಕ ವ್ಯಕ್ತಪಡಿಸಲು ಕಲಿತುಕೊಂಡ ಮೇಲೆ ಈ ಅನುಭವಗಳೇ ಕಥೆಗಳಾಗಿ, ಹಾಡುಗಳಾಗಿ ಪ್ರಸಾರ ಹೊಂದಿದವು.

ಈ ಹಿನ್ನೆಲೆಯಲ್ಲಿ ಯಾವುದೇ ಭಾಷೆಯ ಸಾಹಿತ್ಯಕ್ಕೆ ಸಾಮಾಜಿಕ ಹೊಣೆಗಾರಿಕೆ ಇರುವುದನ್ನು ಕಂಡುಕೊಳ್ಳಬಹುದಾಗಿದೆ. ಭಾಷೆಗೆ ಲಿಪಿಯನ್ನು ಕಂಡುಕೊಳ್ಳುವ ಪೂರ್ವದಲ್ಲಿ ಈ ಸಾಹಿತ್ಯವೆಲ್ಲ ಮೌಖಿಕ ನೆಲೆಯಲ್ಲಿಯೇ ರೂಪುಗೊಂಡಿತು. ಮೌಖಿಕವಾಗಿಯೇ ಪ್ರಸಾರಗೊಳ್ಳುತ್ತಿತ್ತು. ಈ ಸಾಹಿತ್ಯದ ಒಡಲಲ್ಲಿ ಸಮಾಜದ ಎಲ್ಲ ಜನಗಳನ್ನೂ ಭಾವನಾತ್ಮಕವಾಗಿ ಒಂದುಗೂಡಿಸುವ, ಸಹಬಾಳ್ವೆ ನಡೆಸಲು ನೆರವಾಗುವ ಸಾಮಾಜಿಕ ಇಲ್ಲವೇ ಸಾಂಸ್ಕೃತಿಕ ಮೌಲ್ಯಗಳು ಅಡಕವಾಗಿದ್ದವು. ಭಾರತೀಯ ವಾಙ್ಮಯ ಪ್ರಕಾರಗಳಲ್ಲಿ ಜನಪದಕ್ಕೆ ಒಂದು ವಿಶೇಷ ಸ್ಥಾನಮಾನವಿದೆ. ಅದೇ ಒಂದು ಸಾಗರ. ಜನಪದ ಸಾಹಿತ್ಯವೆಂಬ ಅಪಾರರಾಶಿಯಲ್ಲಿ ಮುತ್ತು ಹವಳಗಳಂತಹ ಅನರ್ಘ್ಯರತ್ನಗಳು ಅಡಗಿವೆ. ಜನಜೀವನದ ವಿವಿಧ ಮುಖಗಳು ಆ ಸಾಗರದ ಜೀವವೈವಿಧ್ಯವಾಗಿ ಮೆರೆದಿವೆ. ಜನಪದ ಅಧ್ಯಯನವೇ ಅನೇಕ

ವಿದ್ವಾಂಸರ ಕಾರ್ಯಕ್ಷೇತ್ರವಾಗಿರುವುದು ಆ ವಾಙ್ಮಯ ಪ್ರಕಾರವು ಅತ್ಯಂತ ಸಾರವತ್ತಾಗಿರುವುದರ ದ್ಯೋತಕವಾಗಿದೆ.

ಜೀವನಮೌಲ್ಯಗಳ ಸಾರಸರ್ವಸ್ವವನ್ನು ಹಿನ್ನೆಲೆಯಾಗಿ ಹೊಂದಿ, ನಮ್ಮ ಜನಪದರು ಬಾಳಿ ಬದುಕುವ ಮೂಲಕ ಅಂಥವೇ ಮೌಲ್ಯಗಳನ್ನುಳ್ಳ ಜನಪದಸಂಸ್ಕೃತಿ ನಮ್ಮಲ್ಲಿ ಮೈದಾಳಿದೆ. ಜನಪದರು ಮುಗ್ಧರೆಂದು ಭಾವಿಸಲಾಗುತ್ತದೆ. ಆ ಮುಗ್ಧತೆಯಲ್ಲೇ ಅವರು ಜೀವನದ ಸರ್ವಮುಖಗಳನ್ನು ಯಶಸ್ವಿಯಾಗಿ ಅನುಭವಿಸುತ್ತಾರೆ. ಮಾನವನಿಗೆ ಮೊದಲಿನಿಂದಲೂ ನಿಗೂಢವೂ, ವಿಸ್ಮಯಕರವೂ ಕುತೂಹಲಪೂರ್ಣವೂ, ಅನ್ವೇಷಣಶಕ್ತಿಜನಕವೂ, ಆರಾಧನೀಯವೂ, ಸವಾಲು ಆಗಿರುವುದೆಂದರೆ ಪ್ರಾಕೃತಿಕಲೋಕ, ಅದು ತನ್ನ ಮೇಲೆ ಬೀರುವ ನಿರಂತರ ಪ್ರಭಾವ ಮತ್ತು ಪರಿಣಾಮಗಳ ರಹಸ್ಯವನ್ನು ಬಿಡಿಸಲು ಆತ ಹಿಂದಿನಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಪ್ರಯತ್ನಿಸುತ್ತಲೇ ಬಂದಿದ್ದಾನೆ. 'ವಾಕ್‌ಪರಂಪರೆಯಲ್ಲಿ ಧ್ವನಿ, ಶಬ್ಧ, ಉಚ್ಚಾರಣೆ ಇಲ್ಲದೆ ಅಥವಾ ಅನ್ಯರಿಗೆ ಕೇಳಿಸದ ರೀತಿ ತನ್ನಲ್ಲೆ ಮೌಖಿಕಸಂವಹನ ನಡೆಯುವುದಿದೆ. ಅಂದರೆ ಬಾಯಿ ತೆರೆದು ಮಾತಾಡದೆ ಈ ಕ್ರಿಯೆ ನಡೆಯಬಹುದು'[೨]. ಪ್ರತಿಯೊಂದು ಜೀವರಾಶಿಯ ಬದುಕಿನ ಮೂಲಸೆಲೆ ನೀರು ಸಂಸ್ಕೃತದಲ್ಲಿ ಜೀವನ ಶಬ್ದಕ್ಕೆ ನೀರು ಎಂಬ ಅರ್ಥವೂ ಉಂಟು. ನೀರಿನ ಮೂಲತಾಣ ಮಳೆ ಆದ್ದರಿಂದಲೇ ಎಲ್ಲ ಸಂಸ್ಕೃತಿಗಳಲ್ಲೂ ಮಳೆಯನ್ನು ವರದಾಯಕವೆಂದು ಕರೆಯಲಾಗಿದೆ.

ಪ್ರಾಚೀನಕಾಲದ ಮಾನವ ಪ್ರಕೃತಿಯಲ್ಲಿನ ಗಿಡ, ಮರ, ಬಳ್ಳಿ, ಪ್ರಾಣಿಗಳೊಂದಿಗೆ ತನ್ನ ಗೆಳೆತನವನ್ನು ಬೆಳೆಸಿಕೊಂಡಿದ್ದ. ಪ್ರಕೃತಿದತ್ತವಾದ, ಕೌಟುಂಬಿಕವಾದ ಇಂತಹ ಹೊಂದಾಣಿಕೆ, ಆರಂಭದಲ್ಲಿ ಮಾನವನಿಗೆ ಸಾಧ್ಯವಾಯಿತು. ಇಲ್ಲದಿದ್ದರೆ ಆಗಿನ ಮನುಷ್ಯ ಆದಿಮಾನವನಾಗಿಯೇ ಉಳಿಯುತ್ತಿದ್ದ. ಪರಿಸರಪ್ರಜ್ಞೆಯಿಲ್ಲದೆ, ಬುದ್ದಿವಿಕಾಸವಿಲ್ಲದ ಆದಿಮಾನವ ಇಂದಿನ ಮನುಷ್ಯಮಟ್ಟವನ್ನು ಮುಟ್ಟಲು ಕಷ್ಟವಾಗುತ್ತಿತ್ತು. ತನ್ನ ಸುತ್ತಮುತ್ತ ಸಂಚರಿಸುವ ಪ್ರಾಣಿಗಳ, ಹಾರಾಡುವ ಕೂಗುವ ಪಕ್ಷಿಗಳ ವರ್ತನೆಗಳು ಆದಿಮಾನವನಿಗೆ ಆಶ್ಚರ್ಯಕರವಾಗಿ ಕಂಡವು. ಇವನ ಬುದ್ದಿವಿಕಾಸದ ಕಸರತ್ತಿಗೆ ಅವು ಕಾರಣವಾದವು. ಹೀಗೆ ಪ್ರಪಂಚದ ಅನೇಕ ವಿಷಯಗಳು ಅವನಿಗೆ ಆಶ್ಚರ್ಯವನ್ನು ತಂದೊಡ್ಡಿದವು. ಸೂರ್ಯ, ಚಂದ್ರ, ಗ್ರಹ, ನಕ್ಷತ್ರ, ಮೋಡ, ಮಳೆ, ಗಾಳಿ, ಕಾಮನಬಿಲ್ಲು ಮೊದಲಾದವುಗಳ ಬಗೆಗೆ ತನ್ನ ಕುತೂಹಲ ವ್ಯಕ್ತಪಡಿಸುತ್ತ ಬಂದ. ಇವುಗಳನ್ನು ಕಂಡ ಮೇಲೆ ತನ್ನಲ್ಲಿ ಉದ್ಭವವಾದ ಒಂದು ನಮೂನೆಯ ಚೇತನದಿಂದ ಅವುಗಳಿಗೂ ತನಗೂ ಯಾವುದೋ ಸಂಬಂಧವಿರಬೇಕು ಎಂದು ಭಾವಿಸಿಬಿಟ್ಟ. ಜೊತೆಗೆ ಅವುಗಳಿಂದ ತನಗೇನೋ ಪ್ರಯೋಜನವಿದೆ ಎಂದೂ ನಂಬಿಬಿಟ್ಟ, ಇಂಥ ವಿಷಯಗಳಲ್ಲಿ ಲೀನವಾದ ಮಾನವ ತನ್ನದೇ ಆದ ರೀತಿಯಲ್ಲಿ ಅವುಗಳನ್ನು ಅರಿತುಕೊಳ್ಳಲು

ಯತ್ನಿಸಿದ. ಹೀಗೆ ಅರಿತುಕೊಳ್ಳಲು ಯತ್ನಿಸಿದ ವಿಷಯಗಳಲ್ಲಿ ಮಳೆಯೂ ಒಂದು. ಈ ನೆಲದ ಮೇಲೆ ವ್ಯವಸಾಯ ಎನ್ನುವುದು ಆರಂಭವಾಗಿ ಹತ್ತು ಸಾವಿರ ವರ್ಷವಾಯಿತು ಎನ್ನುತ್ತಾರೆ. ಹಾಗಿದ್ದರೆ ಮಳೆಯನ್ನು ಕುರಿತ ಆಚರಣೆಗಳು, ನಂಬಿಕೆಗಳು, ಶಕುನ ಕೇಳುವುದು ಇತ್ಯಾದಿಗಳೆಲ್ಲಾ ಏಳೆಂಟು ಸಾವಿರ ವರುಷಗಳಷ್ಟು ಹಿಂದೆಯೇ ಆರಂಭವಾಗಿರಬೇಕು. ಮರುಭೂಮಿ ಪ್ರದೇಶದಲ್ಲಿಯಂತೂ ಇದು ಇನ್ನೂ ಹಿಂದೆಯೇ ಆರಂಭವಾಗಿರಬೇಕು. ಭಾಷೆಯೇ ಸರಿಯಾಗಿ ರೂಪುಗೊಂಡಿರದಿದ್ದ ವಾದ್ಯಗಳನ್ನು ಬಹುಮಟ್ಟಿಗೆ ರೂಪಿಸಿರದಿದ್ದ ಆ ದಿನಗಳಲ್ಲಿ ಈ ಅತ್ಯಂತ ತುರ್ತಿನ ಆಚರಣೆಗಳು ಹೇಗಿದ್ದಿರಬಹುದೆಂಬುದನ್ನು ಊಹಿಸಿಕೊಳ್ಳುವುದೇ ರೋಮಾಂಚನಕಾರಿ. ಅದೊಂದು ಥರ ಹೆಚ್.ಜಿ.ವೇಲ್ಸ್‌ನ ಕಾಲಯಂತ್ರದಲ್ಲಿ ಕುಳಿತು ಹೋದ ಹಾಗೆ. ಅದನ್ನು ಬರಿದೇ ಕಲ್ಪಿಸಿಕೊಳ್ಳಬೇಕಷ್ಟೆ. ಮಳೆ ವರುಣದೇವನಾಗಿ, ಮೋಡಗಳು ಮೇಘರಾಜನಾಗಿ ಕಾಮಲಬಿಲ್ಲು ಇಂದ್ರಚಾಪವಾಗಿಯೋ, ಮಳೆದೇವನ ಮಗನಾಗಿಯೋ ರೂಪುಗೊಳ್ಳುವುದಕ್ಕಿಂತ ಎಷ್ಟೋ ವರುಷಗಳ ಹಿಂದೆಯೇ ಇವನ್ನು ಕುರಿತು ಪ್ರಾಕೃತ ಆಚರಣೆಗಳು ಚಾಲ್ತಿಗೆ ಬಂದವು. ಇಂದಿಗೂ ಪ್ರಪಂಚದ ಹಲವೆಡೆ ತೀರಾ ಸರಳ ರೀತಿಯಿಂದ ಹಿಡಿದು ಸಂಕೀರ್ಣಸ್ವರೂಪದ ಆಚರಣೆಗಳನ್ನು, ನಂಬಿಕೆಗಳನ್ನು ಗಮನಿಸಬಹುದು. ಇವುಗಳ ಅಧ್ಯಯನ ಮಾನವನ ಸಾಂಸ್ಕೃತಿಕವಿಕಾಸವನ್ನು ಅರ್ಥಮಾಡಿಕೊಳ್ಳುವುದರಲ್ಲಿ ಮಹತ್ವದ ಪಾತ್ರ ವಹಿಸಬಲ್ಲದು.

ಭಾರತ ದೇಶವು ಹಳ್ಳಿಗಳಿಂದ ಕೂಡಿದ ನಾಡು. ಇಲ್ಲಿಯ ಜನರ ಮೂಲಭೂತ ಕಸಬು ವ್ಯವಸಾಯ. ವ್ಯವಸಾಯವು ಬಹುಪಾಲು ಮಳೆಯನ್ನು ಅವಲಂಬಿಸಿದೆ. ಅದರಲ್ಲೂ ಮಾನ್ಸೂನ್ (ಮಳೆಮಾರುತ) ಮಾರುತದ ಪಾತ್ರ ಪ್ರಧಾನವಾಗಿದೆ. ಈ ಹಿನ್ನೆಲೆಯಲ್ಲಿ ಭಾರತದ ವ್ಯವಸಾಯವನ್ನು "Indian Agriculture is a Gambling with mansoon" ಎಂದು ವರ್ಣಿಸಲಾಗಿದೆ. ಮಳೆಯ ಬಗ್ಗೆ ನಮ್ಮ ಗ್ರಾಮೀಣ ಜನತೆಯಲ್ಲಿರುವ ಕಲ್ಪನೆಯನ್ನು ಅಂದರೆ 'ಜನಪದದ ಹಿನ್ನೆಲೆಯಲ್ಲಿ ಮಳೆಯ' ಬಗ್ಗೆ ಇರುವ ಕಲ್ಪನೆ, ನಂಬಿಕೆಗಳನ್ನು ತಿಳಿಸುವುದೇ ಪ್ರಸ್ತುತ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ. 'ಆಕಾಶ ಮತ್ತು ಭೂಮಿಯನ್ನು ಒಂದುಗೂಡಿಸುವ ಶಕ್ತಿ ಇರುವುದು ಮಳೆಗೆ ಇಳೆಯಿಂದ ಆಕಾಶಕ್ಕೇರುವ ನೀರು ಮತ್ತೆ ಮಳೆಯಾಗಿ ಭೂಮಿಗೇ ಹಿಂತಿರುಗುತ್ತದೆ. ಈ ಅರ್ಥದಲ್ಲಿ ನೀರು ಆಕಾಶ ಮತ್ತು ಭೂಮಿಗೆ ಸಮಾನವಾಗಿದೆ. ಭೂಮಿಯಲ್ಲಿ ಬೆಳೆಯುವ ಆಹಾರಕ್ಕೆ ಮತ್ತು ಮಾನವನ ಉಳಿವಿಗೆ ನೀರು ಅಗತ್ಯವಾಗಿರುವುದರಿಂದ ಅದಕ್ಕೆ ಪಾತಿವ್ರತ್ಯ ಆವರಣ ಪ್ರಾಪ್ತವಾಗಿದೆ'[೩].

ಯಾ ಆಪೋ ದಿವ್ಯಾ ಉತಾ ವಾ ಸ್ರವಂತಿ

ಖನಿತ್ರಿ ಮಾ ಉತ ವಾ ಯಃ ಸ್ವಯಂ ಜಾಃ

ಸಮುದ್ರರ್ಥಾ ಯಃ ಶುಚಯಃ ಪಾವಕಾಸ್ತಾ

ಆಪೋ ದೇವೀಃ ಇಹಮಾಮ್ ಅವಂತು

ಈ ಜಗತ್ತಿನ ಎಲ್ಲಾ ನೀರಿನ ಮೂಲಾಧಾರವೂ ಮಳೆಯೆ ಎಂಬುದು ಬಹುಮುಖ್ಯ, ನೆಲದೊಳಗೆ ಬಹುಕಾಲದಿಂದ ಅಡಗಿ ಕುಳಿತ ಅಂತರ್ಜಲಕ್ಕೂ ಇದೇ ಮಳೆಯೇ ಮೂಲ. 'ಮಳೆಯೆಂಬುದು ಒಮ್ಮೊಮ್ಮೆ ಅಮ್ಮನ ಜೋಗುಳ. ಅಣ್ಣನೊಂದಿಗಿನ ಜಗಳ, ಅಕ್ಕನ ಜತೆಯಾಟದ ಕೇಕೆ. ಅಪ್ಪನ ಆಪ್ತತೆ. ಪ್ರಿಯತಮೆಯ ತೆಕ್ಕೆಯಲಿ ಉಸುರುವ ಪಿಸುಮಾತು. ಮಳೆಯಲ್ಲೊಮ್ಮೆ ಮಿಂದು ನೋಡಿ ಅದರಲ್ಲಿ ಅವಳ ಪ್ರೀತಿ ಇದೆ, ಅವನ ಆಸೆಯಿದೆ, ಇವಳ ಹುಸಿ ಮುನಿಸಿದೆ. ಅವನ ಸಹನೆಯಿದೆ. ಇವಳೆದೆಯ ರಾಗಕ್ಕೆ ಅವನ ತಾಳದ ಸಾಥ್ ಇದೆ. ಬದುಕಿನೆಲ್ಲಾ ಸಂತಸದ ರಾಗ ತಾಳಗಳಿಗೆ ಮಳೆಯೆಂಬುದೇ ಪಲ್ಲವಿ. ಅಲ್ಲಿಯೇ ಶೃತಿ ತಪ್ಪಿದರೆ ಮುಂದಿನದಾವುದು ಸುಶ್ರಾವ್ಯವಾಗಲು ಸಾದ್ಯವೇ ಇಲ್ಲ. ಇದೇ ಕ್ಷಣದಲ್ಲೆ ಮಳೆಯ ಚಿಟಪಟಕ್ಕೆ ನೀವೂ ಸ್ವರ ಸೇರಿಸಿ ಹಾಡಿಕೊಳ್ಳಲಾರಂಬಿಸಿ ನಿಮ್ಮೊಳಗೊಬ್ಬ ಕವಿ ಮೂಡಿ ಬರಬಹುದು ಗಾಯಕ ಜಾಗೃತನಾಗಬಹುದು ಯಾರಿಲ್ಲದಿದ್ದರೂ ಮುಗ್ಧ ಮನದ ಮಾನವೀಯ ತಂತುವೊಂದು ಮೊಳೆಯುವುದಂತು ನಿಚ್ಚಿತ'' .

ಬಹುಸಂಸ್ಕೃತಿ ನೆಲೆಯಾದ ಭಾರತದಲ್ಲಿ ಯಾವುದೇ ವಸ್ತು/ದೈವದ ಕುರಿತ ನಂಬಿಕೆಗಳು ಅನಂತವಾದವು. ಆಂಶಿಕತ್ವನೆಲೆಯ ಅಥವಾ ತಮ್ಮ ಒಡನಾಡಿದ ಹಾಗೂ ಒಡನಾಡಿಸುವ ಯಾವುದೇ ವ್ಯಕ್ತಿಯನ್ನು ಆಪ್ತತೆಯ ನೆಲೆಯಲ್ಲಿ ಪರಿಭಾವಿಸುವಿಕೆ ಕಂಡುಬರುತ್ತದೆ. ಈ ನೆಲೆಗಳಿಗೆ ಸಿಗುವ ಗಾಳಿ, ಮರ ಬೆಟ್ಟ-ಗುಡ್ಡ ಮೂರ್ತ ರೂಪಗಳಂತೆಯೇ ಅಮೂರ್ತಸ್ವರೂಪದ ಕೆಲವು ಅಂಶಗಳಿಗೂ ಸೇರಿಕೊಂಡಿದೆ ಎಂಬುದು ಸ್ಪಷ್ಟ. ಮಾನವವಿಕಾಸದ ಹಂತಗಳನ್ನು ಅವಲೋಕಿಸುತ್ತಾ ಬಂದರೆ ಮಾನವ ಇತಿಹಾಸದ ವಿರಾಟಸ್ವರೂಪವು ದರ್ಶನವಾಗುತ್ತದೆ. ಆದರೆ ಈ ಇತಿಹಾಸದ ಅವಲೋಕನಕ್ರಮಗಳು ಮಾತ್ರ ಭಿನ್ನನೆಲೆಗಳಲ್ಲಿ ದೃಗ್ಗೋಚರವಾಗುತ್ತವೆ. ಇತಿಹಾಸದ ರಚನಾ ದೃಷ್ಟಿಕೋನದಲ್ಲಿ ಗ್ರಹಿಕೆಗಿಂತ ಮುಟ್ಟಿಸಬೇಕಾದ ಮಾರ್ಗಗಳು ಹಾಗೂ ಭಿನ್ನಮತಗಳ ಸ್ವಾರ್ಥಹಿತಾಸಕ್ತಿಗಳು ಈ ತಂತ್ರಗಳಲ್ಲಿ ಕಾರ್ಯನಿರ್ವಹಿಸಿರುವುದನ್ನು ನಾವು ಈಗ ರಹಸ್ಯದ ಹಂತದಿಂದ ಹೊರತೆಗೆದಿದ್ದೇವೆ. ಈ ಹಿನ್ನೆಲೆಯಲ್ಲಿ ದಾಖಲು ಸ್ಥಾಪಿತಚರಿತ್ರೆಯು ಜನರ ಮನಸ್ಸಲ್ಲಿ ಬೇರೂರಿದಾಗ ಅಥವಾ ಬಲವಂತ ಪ್ರಕ್ರಿಯೆಯಲ್ಲಿ ಒಪ್ಪಿಸಿದಾಗ ಅದಕ್ಕೆ ತದ್ವಿರುದ್ಧವಾದ ಇತಿಹಾಸ ರಚನಾಕ್ರಮವನ್ನು ಜನಪದಸಾಹಿತ್ಯದಿಂದ ಅಥವಾ ಜನಪದಸಾಹಿತ್ಯದ ಸಂಗ್ರಹಣೆ ಹಾಗೂ ಸಂಶೋಧನೆಯಿಂದ ಹೊರಗೆಳೆದ ಜನಪದ ವಿದ್ವಾಂಸರು ವಾಸ್ತವಅಂಶಗಳನ್ನು ಜನಪದ ವಕ್ತೃಗಳಿಂದ ಸಂಗ್ರಹಿಸಿದ ಸಾಹಿತ್ಯದಲ್ಲಿ ಆಧಾರಗಳನುಸಾರ 'ಅವ್ಯಕ್ತ ಚರಿತ್ರೆಯನ್ನು' ಕಟ್ಟಲಾರಂಭಿಸಿದ್ದಾರೆ. ಕೋಮು

ಚರಿತ್ರೆಗಿಂತ ಹಾಗೂ ಕ್ರೌರ್ಯಯುಕ್ತ ಮಾರ್ಕ್ಸ್‌ವಾದಿ ಚರಿತ್ರೆಕ್ರಮಗಳಿಗಿಂತ ಹಾಗೂ ಬರಿ ಆಶಾವಾದದ ಅಸ್ಥಿರತೆಯ ಮೇಲೆ ನಿಲ್ಲಬಹುದಾದ ಸಮಾಜವಾದದ ಚರಿತ್ರೆಗಿಂತ ಜನಸಾಮಾನ್ಯರು ತಾವು ಅನುಭವಿಸಿ ತಾವೇ ಅಭಿವ್ಯಕ್ತಿಸಿದ ಅನುಭವಗಳ ಆಧಾರದ ಮೇಲೆ ಚರಿತ್ರೆ ಬರೆಯಲು ಆರಂಭಿಸಿದ್ದರು. ಕಾಕತಾಳೀಯವೆಂದರೆ ಭಾರತೀಯ ಚರಿತ್ರೆಯೊಳಗಡೆ ಆದಿಮಚರಿತ್ರೆ ಅಥವಾ ಅವ್ಯಕ್ತಚರಿತ್ರೆಯೊಳಗೆ ಪ್ರಾಚೀನ ಆಧ್ಯಾತ್ಮ ಹಾಗೂ ಭೌತವಾದಿತತ್ವಶಾಸ್ತ್ರವು ಸೇರಿ ನಂಬಲಾರ್ಹವಾದ ಯಾವುದೇ ಕೋಮುವಾದಿ ದೃಷ್ಟಿಕೋನವಿಲ್ಲದ ಸಮಷ್ಟಿಪ್ರಜ್ಞೆಯ ಇತಿಹಾಸವು ಜನಪದ ಆಕರಗಳಿಂದ ಸಾಧ್ಯವಾಗಿತ್ತು. ಈ ಹಿನ್ನೆಲೆಯಲ್ಲಿ ಚರಿತ್ರೆಯ ಜೊತೆಜೊತೆಯಲ್ಲಿಯೇ ಸಂಸ್ಕೃತಿಯ ಚಿಂತನೆಗಳು ಆರಂಭವಾಗಿ ಸಂಸ್ಕೃತಿಯ ಭಿನ್ನ ಭಿನ್ನ ಆಯಾಮಗಳ ಚರ್ಚೆಯೂ ಮಾನವನ ಚಿಂತನಾಗ್ರಹಿಕೆಯಲ್ಲಿ ವಿಕಾಸಶೀಲತೆಯೂ ಕಂಡುಬರುತ್ತದೆ.

'ನೀರೆಂದರೆ ಬರೀ ನೀರಲ್ಲ; ಅದೊಂದು ಜಾಗ್ರತಪ್ರಜ್ಞೆಯ ಪ್ರತೀಕ. ಅದು ಜೀವಂತಿಕೆಯ ಲಕ್ಷಣ ಸಾಮುದಾಯಿಕ ಸಂಕೇತ ಚಲನಶೀಲತೆಗೆ ಸಾಕ್ಷಿ. ಕರ್ತಾರನ ಕಸುವಿನಲ್ಲಿ ಅತ್ಯಂತ ಕ್ರಿಯಾಶೀಲ ಭಾಗವೊಂದಿದ್ದರೆ ಅದು ನೀರು. ಅದು ಮಹಾಪ್ರಳಯದ ಸಮಯ ಆಗಸಕ್ಕೆ ಆಗಸವೇ ಮೋಡಗಳಿಂದ ಆವೃತ್ತವಾಗಿ ಕಾರ್ಗತ್ತಲು ತುಂಬಿಕೊಡಿತು. ಎಲ್ಲೆಲ್ಲೂ ಗಾಢಾಂದಕಾರ. ಕಲ್ಲವಿಲ್ಲಗೊಂಡ ಮನಸಿನ ಹೊಯ್ದಾಟದ ಮಾದರಿಯಲ್ಲೆ ಬಾರಿ ಏರುಪೇರು ಪ್ರಕೃತಿಯಲ್ಲಿ ಬೀಸುವ ಗಾಳಿಗೆ ಎದುರಾಗಿ ನಿಲ್ಲುವುದು ಸಾದ್ಯವೇ? ಅದೇ ಆದದ್ದು ಎಲ್ಲೂ ನಿಲ್ಲಲಿಲ್ಲ. ಎಲ್ಲವೂ ತೂರಿಕೊಡು ಹೋಗುತ್ತಿದೆ ಎನ್ನುವಾಗಲೇ ಭಾರೀ ವಿಸ್ಫೋಟಕ ಶಬ್ದ. ಫಳಾರನೆ ಬಡಿದ ಸಿಡಿಲೊಂದು ಈ ಭೂಮಿಯನ್ನೇ ಸೀಳಿಕೊಂಡು ಹೋಗುತ್ತದೆ. ಇಡೀ ಭೂಮಂಡಲವೆ ಕಾದು ಕೆಂಡವಾಗಿರುವಾಗಲೇ ಆಗಸದಿಂದ ತೊಪತೊಪನೆ ಸುರಿಯಲಾರಂಬಿಸಿದವು ದೈತ್ಯಹನಿಗಳು. ಅದಾದರೂ ಎಂಥದ್ದು? ಒಂದೊಂದು ಹನಿಯಲ್ಲೂ ಇಡೀ ಭೂಮಿಯನ್ನೇ ಕೊಚ್ಚಿಕೊಂಡು ಹೋಗಬೇಕೆಂಬ ಕೆಚ್ಚಿದ್ದಂತಿತ್ತು. ಗಾತ್ರ ರಭಸ ಸಾಮರ್ಥ್ಯಗಳಾವುದರಲ್ಲೂ ಸಾಟಿ ಇನ್ನೊಂದಿಲ್ಲ. ಹಾಗೆ ಸುರಿಯಲಾರಂಬಿಸಿದ್ದು ನಿಲ್ಲಲೇ ಇಲ್ಲ. ಒಂದು ದಿನವಲ್ಲ ವಾರವಲ್ಲ ತಿಂಗಳು ವರ್ಷಗಳಲ್ಲ. ಸಾವಿರಾರು ವರ್ಷಗಳವರಗೆ ಆಕಾಶಕ್ಕೂ ಭೂಮಿಗೂ ಮಧ್ಯೆ ಎರಡಿಲ್ಲವೇ ಇಲ್ಲ. ಅದೇ ಭೂಮಿ ಮೇಲೆ ಬಿದ್ದ ಮೊದಲ ಮಳೆ, ಮಹಾಮಳೆ'[೫]

ಸಂಸ್ಕೃತಿಯ ಚರ್ಚೆಯೂ ಮುಖ್ಯವಾಗಿ ಗುರುತಿಸಿಕೊಂಡಿದ್ದು ತಾತ್ವಿಕತೆಗಿಂತಲೂ ಹೆಚ್ಚಾಗಿ ಗಮನಹರಿಸಿದ್ದು ಚಿಂತನೆಯ ಅಂಶಗಳತ್ತ. ಸಂಸ್ಕೃತಿಯ ಭಿನ್ನತೆಯ ಅಂಶಗಳ ಜೊತೆ ಜೊತೆಯಲ್ಲಿಯೇ ವಿದ್ವಾಂಸರು ಗಮನಕೊಟ್ಟಿದ್ದು, ತಮ್ಮ ಅಧ್ಯಯನದ ಅಸ್ತಿತ್ವದ ಕಡೆಗೆ. ಈ ನಿಟ್ಟಿನಲ್ಲಿ ಕೆಲವರು ಯಶಸ್ವಿಯಾಗಿದ್ದಾರೆ ಕೂಡ. ಈ ಕಾರಣಕ್ಕಾಗಿಯೇ ಪ್ರಧಾನಸಂಸ್ಕೃತಿ, ಅದಿಮಸಂಸ್ಕೃತಿ, ಉಪಸಂಸ್ಕೃತಿಗಳೆಂಬ ಮಾತುಗಳು ಕೇಳಿಬಂದವು. ಒಂದು ದೃಷ್ಟಿಯಲ್ಲಿ ಇದು ಜನಾಂಗಗಳ

ಗುರುತಿಸುವಿಕೆಗೆ ಅವಕಾಶ ಮಾಡಿಕೊಡುತ್ತಾದರೂ ಮೇಲುಕೀಳು ಎಂಬ ಪರಿಕಲ್ಪನೆಗೆ ಅವಕಾಶ ಮಾಡಿಕೊಡುತ್ತದೆ. ನಿಜವೆಂದರೆ ಸಾಂಸ್ಕೃತಿಕ ವೈಶಿಷ್ಟ್ಯತೆಗಳು ಭಿನ್ನತೆಯಲ್ಲಿಯೇ ಅಸ್ತಿತ್ವವನ್ನು ಕಾಪಾಡಿಕೊಂಡಿರುತ್ತವೆ ವಿನಃ ಮೇಲುಕೀಳು ಎಂಬ ಸಂಕುಚಿತ ದೃಷ್ಟಕೋನದಲ್ಲಲ್ಲ. ಸಾಂಸ್ಕೃತಿಕ ಕೀಳುರಿಮೆಗಳು ಸಾಧ್ಯಾಂತವಾಗಿ ಗ್ರಹಿಸಲ್ಪಟ್ಟದ್ದು, ವೈದಿಕ ದೃಷ್ಟಿಕೋನದಲ್ಲಿ ಎಂಬುದು ಸ್ಪಷ್ಟ. ಅದು ಪುರೋಹಿತ ನಿರ್ವಚಿತ ದೃಷ್ಟಿಕೋನಕ್ಕೆ ತಕ್ಕುದಾಗಿತ್ತು ಸಹ. ಇತಿಹಾಸವಲ್ಲದೇ ಸಂಸ್ಕೃತಿಯ ನಿರ್ವಚನ ದೃಷ್ಟಿಕೋನದಲ್ಲೂ ಈ ಮೂಲ ಭೌತವಾದಿ ಸಂಪ್ರದಾಯಗಳು ಬೆಳೆದು ಬಂದವು. ಕರ್ನಾಟಕದ ನೆಲದಲ್ಲಿ ಮೊದಮೊದಲು ಈ ನಿಟ್ಟಿನಲ್ಲಿಯೇ ಸಂಸ್ಕೃತಿಯ ಚಿಂತನೆಗಳು ಚರ್ಚೆಯಾಗಿವೆ. ಪಾಶ್ಚಾತ್ಯರ ಪ್ರಭಾವವು ಇದರಲ್ಲಿ ಇಲ್ಲವೆಂದಿಲ್ಲ. ನಂತರದ ಚರ್ಚೆಗಳಲ್ಲಿ ಈ ಚರ್ಚೆಯೂ ಭಿನ್ನ ಆಯಾಮಗಳನ್ನು ಪಡೆದಿದ್ದು ಗಮನಾರ್ಹವೇ. ಇವೆರಡು ಚರ್ಚಾಮಾರ್ಗಗಳಲ್ಲಿ ಆದಿಮಸಂಸ್ಕೃತಿಯ ಉಗಮ ವಿಕಾಸದ ಜೊತೆಜೊತೆಯಲ್ಲಿಯೇ ಅನನ್ಯತೆಯ ಬಗೆಯೂ ಎಚ್ಚರವಹಿಸಲಾಗಿತ್ತು. ಸಂಸ್ಕೃತಿಯ ಚಿಂತನೆಗಳಲ್ಲಿ ಭಿನ್ನ ಆಯಾಮಗಳ ಜೊತೆಜೊತೆಗೆ ವಾಸ್ತವ ಹಾಗೂ ಮೂಲಸಂಸ್ಕೃತಿಯ ಶೋಧಗಳು ನಡೆಯಲಾರಂಭಿಸಿ ಭಾರತೀಯ ಸಂಸ್ಕೃತಿಯ ಮೂಲಸ್ವರೂಪ ಹಾಗೂ ಭಿನ್ನ ಸ್ವರೂಪಗಳ ಬಗ್ಗೆ ಆಳವಾದ ಅಧ್ಯಯನಗಳು ನಡೆದಿವೆ. 'ವರದಾಯಕ ಎಂದು ಕರೆಸಿಕೊಂಡ 'ಮಳೆ' ಪ್ರತಿಯೊಂದು ಜೀವರಾಶಿಗೂ ಅತ್ಯಗತ್ಯವಾಗಿ ಬೇಕಾದಂಥದ್ದು. ಮಳೆರಾಯ ಪ್ರಪಂಚದಾದ್ಯಂತ ಹಲವಾರು ಸಂಸ್ಕೃತಿಗಳಲ್ಲಿ ವಿವಿಧ ರೂಪಗಳಲ್ಲಿ ಕಾಣಿಸಿಕೊಂಡಿದ್ದಾನೆ. ದೇವಾದಿದೇವತೆಗಳ ರಾಜಾದಿರಾಜನಾಗಿಯೂ ಮೆರೆದಿದ್ದಾನೆ. ಭಾರತೀಯ ವೈದಿಕ ಸಂಸ್ಕೃತಿಯಲ್ಲಿ ಸಾಕ್ಷಾತ್ ದೇವೇಂದ್ರನೇ ಮಳೆರಾಯನೆನ್ನಿಸಿಕೊಂಡಿದ್ದಾನೆ. ರೋಮನ್ನರ ಜ್ಯೂಸ್ ದೇವತೆಯನ್ನೂ ಮಳೆರಾಯನೆಂದೇ ಕರೆಯುವರು. ಆಕಾಶದಲ್ಲಿ ಕಟ್ಟಿದ ಮೋಡ ಕರಗಿ ಭೂಮಿಗೆ ಬೀಳುವ ಹನಿಯನ್ನು 'ಮಳೆ' ಎಂದು ಕರೆಯುವೆವು. ಇದನ್ನು ವೃಷ್ಟಿ ಎಂತಲು ಕರೆಯುವರು. ಮಳೆಯಲ್ಲಿ ನೆನೆಮಳೆ, ಜಡಿಮಳೆ, ಹನಕಲುಮಳೆ, ಸಿನಕಲುಮಳೆ, ಉಬ್ಬಲುಮಳೆ (ಉಬ್ಬಲು ಎರಚಿದಂತೆ ನಿಧಾನವಾಗಿ ತುಂತುರು ತುಂತುರಾಗಿ ಬೇಳುವ ಮಳೆ) ಕುಟಗಲುಮಳೆ, ದೋಮಳೆ, ಆಲಿಕಲ್ಲುಮಳೆ ಮುಂತಾದ ಬಗೆಗಳಿವೆ. 'ಮಳೆ' ಎಂದರೆ ಮಳೆ ಅಷ್ಟೇ. ಅದು ಭೂಮಿಗೆ ಬೀಳುವಾಗ, ಗಾಳಿ ಹಾಗೂ ಬೇರೆ ಬೇರೆ ನೈಸರ್ಗಿಕ ಕಾರಣಗಳಿಂದ, ತುಂತರಾಗಿ, ಸಿನಿಕಲಾಗಿ, ಹನಕಲಾಗಿ, ಬೀಳುತ್ತದೆ. ಅದಕ್ಕೆ ಜನಪದರು ಬೇರೆ ಬೇರೆ ಹೆಸರುಗಳನ್ನು ಕೊಟ್ಟಿದ್ದಾರಷ್ಟೆ[೬].

ಅಧ್ಯಯನಕ್ಕೆ ಮೊದಲನೆಯದಾಗಿ ಎದುರಾಗುವ ಸಮಸ್ಯೆಗಳೆಂದರೆ, ನೀರು ಮಳೆಯಿಂದಲೇ ಬರುತ್ತದೆ. ಆದರೂ ಮಳೆ ಒಂದೇ ನೀರಿನ ಮೂಲವಲ್ಲವೆಂಬುದು. ಮಳೆಯು ಮೇಲಿನಿಂದ ಬರುತ್ತದೆ ಎನ್ನುವ ಕಾರಣಕ್ಕೆ ಅದನ್ನು ವೈದಿಕರು 'ವರುಣ' ಎಂದು ಪುರುಷ ದೈವವಾಗಿಸಿದೆ. ಸ್ವರ್ಗೀಯ ಕಲ್ಪನೆಯಾಗಿಯೇ ತಂದು ಅದನ್ನು ಮಾತೃಮೂಲೀಯ ಸಂಸ್ಕೃತಿಯಿಂದ ಪಿತೃಮೂಲೀಯ ಸಂಸ್ಕೃತಿಗೆ

ಪರಿವರ್ತಿಸಲು ಸಾಹಿತ್ಯಿಕ ತಂತ್ರಗಳನ್ನು ಹೂಡಿ ಸಾರ್ವತ್ರಿಕಗೊಳಿಸಿದ್ದಾರೆ. ಮೂಲತಃ ಮಳೆಯೂ ಮಾತೃ [ನಿಸರ್ಗ] ದೇವತೆಯ ಮೂಲಸ್ವರೂಪವಾಗಿದ್ದು, ನಂತರದ ಕಾಲಮಾನದಲ್ಲಿ ಪರಿವರ್ತಿತವಾಗಿದೆ. ಸಾಮಾನ್ಯವಾಗಿ ಈಗ ಇರುವ ಆಚರಣಾ ಪದ್ಧತಿ ಹಾಗೂ ಪೂಜಿಸಲ್ಪಡುವ ದೇವತೆಗಳೆಲ್ಲವೂ ಮೂಲತಃ ಮಾತೃ ಮೂಲವುಗಳಾಗಿದೆ. ಮತ್ತು ಮಳೆಗೆ ಸಂಬಂಧಿಸಿದ ಇತರ ರೂಪಗಳಾಗಿವೆ.

ಎರಡನೆಯದಾಗಿ ನೀರು ಆಕಾಶದಿಂದ ಬರುವ ಮಳೆಯಿಂದ ಅಲ್ಲದೇ ಕೆಳಗೆ ಭೂಮಿಯಿಂದಲೂ ಬರುತ್ತದೆ ಎನ್ನುವುದು. ಇದನ್ನು 'ಚಿಲುಮೆ' ಎಂದು ಕರೆಯಲಾಗುತ್ತದೆ. ಸುರಿಯುವಿಕೆ ಮತ್ತು ಉಕ್ಕುವಿಕೆ ಎರಡು ಪ್ರಕ್ರಿಯೆಗಳು ನೀರಿಗೆ ಸಂಬಂಧಿಸಿದವೇ ಆದರೂ ಉಕ್ಕುವಿಕೆ ಮಳೆಯ ಇನ್ನೊಂದು ಲಕ್ಷಣವೆಂಬುದನ್ನು ನಾವು ಇದುವರೆಗೂ ಒಪ್ಪಿಕೊಂಡಿಲ್ಲ. ಮೇಲಿನಿಂದ ಬಂದರೆ ಮಾತ್ರ ನಾವು ಅದನ್ನು ಮಳೆ ಎಂದು ಕರೆದುಕೊಂಡಿದ್ದೇವೆ. ಈ ಉಕ್ಕುವಿಕೆಯೂ ಮಳೆಯ ಪ್ರಕ್ರಿಯೆಯೇ ಅಲ್ಲವೇ ಎಂಬುದನ್ನು ನಾವು ಅಧ್ಯಯನದ ಸಮಸ್ಯೆಯಲ್ಲಿ ಚರ್ಚಿಸಬೇಕಾಗುತ್ತದೆ. ನಿಂತನೀರು ಹಾವಿಯಾಗುವುದರ ಮೂಲಕ ಮಳೆಗೆ ಮೂಲವಾದ ಮೋಡದ ಸಂರಚನೆಗೆ ಕಾರಣವಾಗುತ್ತದೆ. ಆ ಕಾರಣಕ್ಕೆ ಭೂಮಿ ಮತ್ತು ಆಕಾಶದ ಬಾಂಧವ್ಯವನ್ನು ಬೆಸೆಯುವ ಕ್ರಿಯೆಯೂ ಅಂತಿಮವಾಗಿ ಮಳೆಯಿಂದಲೇ ಸಾಧ್ಯವಾಗುವಂತಾಗಿದೆ. ಇದು ಒಂದು ರೀತಿಯಲ್ಲಿ ಸಂಸ್ಕೃತಿ ಮೇಲ್ಮುಖ ಹಾಗೂ ಕೆಳಮುಖ ಚಿಂತನೆಯ ಕ್ರಮವಾಗಿಯೂ ಭಾವಿಸಬಹುದಾಗಿದೆ. ಅಧ್ಯಯನದ ಉದ್ದೇಶಗಳಲ್ಲಿ ಇದು ಒಂದು.

ಮಾನವನನ್ನು ಹೊರತುಪಡಿಸಿಯೂ ಜೀವಸಂಕುಲವು ಆಧಾರಿತವಾಗಿರುವುದು ನೀರು ಅಥವಾ ಮಳೆಯ ಮೇಲೆ ಆಧುನಿಕ ಅರ್ಥಶಾಸ್ತ್ರಜ್ಞರ ವ್ಯಾಖ್ಯಾನದಂತೆಯೇ ಕೃಷಿ ಮಳೆಯೊಡನೆ ಆಡುವ ಜೂಜಾಟವಾಗಿದೆ. ಕೃಷಿ ಎಂದಾಕ್ಷಣ ಅದನ್ನು ಬರಿ ವೃತ್ತಿಯಾಗೇ ಪರಿಭಾವಿಸುವುದಕ್ಕಿಂತ ಮಾನವನ ಜೀವವಿಕಾಸದ ಹಂತದ ಅನ್ವೇಷಣೆಯ ಭೌತಿಕ ಸಾಧನೆಯಾಗಿ ಅಧ್ಯಯನಕ್ಕೆ ಒಳಪಡಿಸಲಾಗುತ್ತದೆ. ಅಂದಾಗ ಮಳೆಯೂ ಜನಜೀವನವನ್ನು ಪ್ರತ್ಯೇಕ್ಷ ಹಾಗೂ ಪರೋಕ್ಷವಾಗಿ ನಿಯಂತ್ರಿಸುತ್ತದೆ ಎಂದಾಯಿತು. ಭಾರತೀಯ ಪುರಾಣಗಳಲ್ಲದೇ ಪಾಶ್ಚಾತ್ಯ ಪುರಾಣಗಳಲ್ಲಿಯೂ ಮಳೆಯ ಕುರಿತಾದ ಉಲ್ಲೇಖಗಳು ಕಾಣಸಿಗುತ್ತವೆ. ಭಗೀರಥ ಪ್ರಯತ್ನವಂತೂ ಪುರಾಣ ಹಾಗೂ ಇತಿಹಾಸ ಪ್ರಸಿದ್ಧ. ಋಗ್ವೇದದಲ್ಲಿ ಉಲ್ಲೇಖವಾಗಿರುವ ಜನರ ಅಭಿಲಾಷೆಯ ಕುರಿತಾದ ಕೋರಿಕೆಗಳಲ್ಲಿ ಮಳೆಯ ಆಗಮನವು ಒಂದು. ಮಳೆಯೇ ಭಾರತೀಯ ಜನಾಂಗಕ್ಕೆ ಅದಿದೇವವಾಗಿದೆ ಜನರ ಮನಸ್ಸಿನಲ್ಲಿ ಅದರ ಸ್ಥಾನಮಾನವು ಅಚ್ಚಳಿಯದೇ ಕುಳಿತಿದೆ. ಆ ಕಾರಣಕ್ಕೆ ನಂತರ ವೈದಿಕರು ಅದಕ್ಕೆ ಪ್ರಮುಖ ಸ್ಥಾನವನ್ನು ನೀಡಿದ್ದಾರೆ. ನೀಡಲೇಬೇಕಾಗಿತ್ತು. ಆಕ್ರಮಣದ ನಂತರ ವೈದಿಕರು ಏನೇ

ಆಕ್ರಮಣಕಾರಿ ವಿಧ್ವಂಸಕ ಕೃತ್ಯಗಳನ್ನೆಸಗಿದರೂ ದ್ರಾವಿಡರ ಅನೇಕ ಆಚರಣೆ ನಂಬಿಕೆಗಳನ್ನು ಸ್ವೀಕರಿಸಲೇಬೇಕಾಗಿತ್ತು. ಅಥವಾ ಅವುಗಳನ್ನು ಎದುರಿಸುವುದು ಸಾಧ್ಯವಾಗಲಿಲ್ಲವೆನ್ನಬಹುದು.

ಪ್ರಕೃತಿಯಲ್ಲಿ ಪ್ರಕೃತಿಯ ಒಂದಂಶವಾಗಿಯೇ ಬದುಕಿದ ಮಾನವನ ಕುತೂಹಲ ಕ್ಷೇತ್ರ ವಿಂಗಡಣೆಯಲ್ಲಿ ಚದುರಿದೆ. ಆರಂಭದ ಮನುಷ್ಯ ಈಗೀನ ಮನುಷ್ಯನಗಿಂತಲೂ ಆಶ್ಚರ್ಯಕರ ರೀತಿಯಲ್ಲಿಯೇ ಪ್ರಕೃತಿಯ ಸಮಸ್ತವನ್ನು ಕಂಡಿರಲು ಸಾಧ್ಯ. ಬದಲಾಗುತ್ತಿರುವ ತಾಪಮಾನ ಪ್ರಾಕೃತಿಕ ವೈಚಿತ್ರ್ಯಗಳು ಇರಳು ಬೆಳಗುಗಳು, ಚಂದ್ರ ತಾರೆಗಳು ಮುಂತಾದವುಗಳು ಆತನ ಆಶ್ಚರ್ಯದ ಪರಧಿಯನ್ನು ವಿಸ್ತರಿಸಿರಬಹುದು. ಪ್ರಾಣಿ ಪಕ್ಷಿಗಳಂತೋ ಆತನಿಗೆ ಪರಮಾಶ್ಚರ್ಯ ಮೂಡಿಸಿರಬಹುದು. ಹರಿಯುವ ನದಿ, ಸರೋವರಗಳು, ಮೂಡುವ ಕಾಮನಬಿಲ್ಲುಗಳು ಸಹ. ಒಂದಡೆ ಮನಸ್ಸಿಗೆ ಮುದ ನೀಡುವ ಅಂಶಗಳಂತೆಯೇ ಇನ್ನೊಂದೆಡೆ ತನ್ನ ಕಣ್ಣಿಗೆ ಕಾಣಿಸದೇ ಇರುವ ಗುಡುಗು ಸಿಡಿಲು ಮಳೆಗಳ ಅಸ್ತಿತ್ವ ಆತನಿಗೆ ಚೋದ್ಯವೇ ಸರಿ. ಅಂತಲ್ಲಿ ಆತನ ಭೌದ್ಧಿಕವಿಕಾಸದಂತೆ ಅದರ ಮೂಲಗಳನ್ನು ತಿಳಿಯುವಲ್ಲಿ ಆತನ ಆಸಕ್ತಿ ಬೆಳೆದಿದೆ. ಮತ್ತು ತನಗೆ ಅತೀತವಾದ ಹಲವು ಶಕ್ತಿಗಳು ಈ ಪರಿಸರದಲ್ಲಿರುವುದು ಆತನಿಗೆ ತಿಳಿದಿದೆ. ಇವುಗಳನ್ನು ಅರಿಯಲು ಹಾಗೂ ತನ್ನ ವಶಮಾಡಿಕೊಳ್ಳಲು ಆತ ಎರಡು ಮಾರ್ಗಗಳನ್ನು ಅನುಸರಿಸಿದಂತೆ ಕಂಡುಬರುತ್ತದೆ. ಮೊದಲನೆದಾಗಿ ಶಕ್ತಿಯನ್ನು ಆ ಶಕ್ತಿಯನ್ನು ವಶಪಡಿಸಿಕೊಳ್ಳುವುದು. ಎರಡನೆದಾಗಿ ತನ್ನ ಶಕ್ತಿ ವಿಫಲವಾದಾಗ ಶರಣಾಗತನಾಗಿ ಒಲಿಸಿಕೊಳ್ಳುವುದು. ಇಂತಹ ಪ್ರಯತ್ನಗಳಲ್ಲಿ ಮಳೆಯೂ ಕೂಡ ಒಂದು. ಮನುಷ್ಯನ ವಶವಾಗದ ಶಕ್ತಿಯಾಗಿಯೇ ಉಳಿದ ಕಾರಣಕ್ಕೆ ಇದಕ್ಕೆ ಸಂಬಂಧಿಸಿದ ಆಚರಣೆಗಳನ್ನು ಮನುಷ್ಯ ಮೊದಲು ಮಾಡಿಕೊಂಡನು. ಅದಕ್ಕೆ ನೇರವಾದ ಕಾರಣವೆಂದರೆ ಮಾನವನ ಇಡೀ ಬದುಕು ಮಳೆಯ ನಿಯಂತ್ರಣದಲ್ಲಿರುವುದು. ಈ ನೆಲದ ಮೂಲನಿವಾಸಿಗಳಿಗೆ ಮಳೆಯ ಬಗ್ಗೆ ಭಕ್ತಿಭಾವವಿದೆಯೇ ವಿನಃ ಅದರ ಹುಟ್ಟಿನ ಬಗ್ಗೆ ತಲೆ ಕೆಡಿಸಿಕೊಂಡವರಲ್ಲ. ಆದರೆ ಆರ್ಯರ ಆಕ್ರಮಣದ ತರುವಾಯ ಸ್ತ್ರೀದೇವತೆಯೆಂದು ಪರಿಗಣಿತವಾಗಿದ್ದ ಮಳೆಯೂ ಕಾಲಾನುಸಾರ ಪುರುಷದೇವರಾಗಿ ಪರಿವರ್ತಿತವಾಗುತ್ತಾ ಬಂದಿದೆ ಎಂಬುದನ್ನು ಅಳೆಗಳೆಯುವಂತಿಲ್ಲ. ವೈದಿಕ ಸಾಹಿತ್ಯದಲ್ಲೂ ಸಹ ಒಂದು ಕಥೆಯ ಪ್ರಕಾರ ಮಳೆಯು ಸ್ತ್ರೀದೇವತೆಯೇ ಆಗಿದ್ದಾಳೆ. ಅದಕ್ಕೆ ಸಂಬಂದಿಸಿದಂತೆ ಇರುವ ಮಿಥ್ ಪ್ರಸಿದ್ಧಿಯಾಗಿದೆ ಕೂಡ. ಅದೆಂದರೆ......

ದಕ್ಷಬ್ರಹ್ಮ-ವೇದಾವತಿ ದಂಪತಿಗಳಿಗೆ ಬಹುಕಾಲದಿಂದ ಮಕ್ಕಳಿರಲಿಲ್ಲ. ಇವರು ಶಿವನ ಬಳಿಗೆ ಹೋಗಿ ಮಕ್ಕಳ ವರವನ್ನು ಬೇಡುತ್ತಾರೆ. ಅದರ ಫಲವಾಗಿ ಇವರಿಗೆ ೨೭ ಜನ ಹೆಣ್ಣುಮಕ್ಕಳು ಜನಿಸುತ್ತಾರೆ. ಅವರು ಪ್ರಾಯಕ್ಕೆ ಬರಲು ದಕ್ಷಬ್ರಹ್ಮ ಅವರಿಗೆ ವಿವಾಹ ಮಾಡಲು ಮುಂದಾಗುತ್ತಾನೆ. ಆ ಸಂದರ್ಭದಲ್ಲಿ ಅವನು ಶಿವನ ವರಪ್ರಸಾದದಿಂದ ಮಕ್ಕಳಾದ ಕಾರಣ ಶಿವನಿಗೆ ತನ್ನ ಒಬ್ಬ ಮಗಳನ್ನು

ಕೊಡಲು ತೀರ್ಮಾನಿಸುತ್ತಾನೆ. ಶಿವನು ಕೂಡ ಇದಕ್ಕೆ ಒಪ್ಪಿ ಗೌರಿಯನ್ನು ವಿವಾಹವಾಗುತ್ತಾನೆ. ಉಳಿದ ೨೬ ಜನ ಹೆಣ್ಣುಮಕ್ಕಳಲ್ಲಿ ೫ ಜನರನ್ನು ಇತರ ದೇವಮಾನವರಾದಿಯಾದ ಗಂಧರ್ವರಿಗೆ ಕೊಟ್ಟು ವಿವಾಹ ಮಾಡುತ್ತಾನೆ. ಅನಂತರ ಚಂದ್ರಮನು ಉಳಿದ ಆ ೨೧ ಜನರಲ್ಲಿ ಅತ್ಯಂತ ರೂಪವತಿಯಾದ ರೋಹಿಣಿಯ ಮೇಲಿನ ಪ್ರೇಮದಿಂದ ವಿವಾಹವಾಗಲು ಮುಂದಾಗುತ್ತಾನೆ. ಈ ಸಂದರ್ಭದಲ್ಲಿ ದಕ್ಷಬ್ರಹ್ಮನು ಚಂದ್ರನಿಗೆ ಒಂದು ಷರತ್ತನ್ನು ಹಾಕುತ್ತಾನೆ. ಅದೇನೆಂದರೆ, ರೋಹಿಣಿಯ ಜೊತೆಗೆ ತನ್ನ ಉಳಿದ ಹೆಣ್ಣುಮಕ್ಕಳನ್ನು ಸಮಾನವಾಗಿ ಸುಖ ಸಂತೋಷದಿಂದ ನೋಡಿಕೊಳ್ಳುವುದಾದರೆ ಮದುವೆಗೆ ಒಪ್ಪುವುದಾಗಿ ನುಡಿಯುತ್ತಾನೆ. ಇದಕ್ಕೆ ಚಂದ್ರಮನು ಒಪ್ಪಿ ರೋಹಿಣಿಯಾದಿಯಾಗಿ ಎಲ್ಲರನ್ನು ವಿವಾಹವಾಗುತ್ತಾನೆ. ಹೀಗಿರಲು ಒಂದು ದಿನ ದಕ್ಷಬ್ರಹ್ಮ ತನ್ನ ಹೆಣ್ಣುಮಕ್ಕಳನ್ನು ನೋಡಲು ಅಳಿಯನಾದ ಚಂದ್ರಮನ ಬಳಿಗೆ ಹೋಗುತ್ತಾನೆ. ಚಂದ್ರಮ ಮತ್ತು ರೋಹಿಣಿ ಸಂತೋಷದಿಂದ ಸಮಯ ಕಳೆಯುತ್ತಿರುತ್ತಾರೆ. ಇದನ್ನು ಕಂಡು ದಕ್ಷಬ್ರಹ್ಮನು ಸಂತೋಷಗೊಂಡು ರೋಹಿಣಿಯ ಯೋಗಕ್ಷೇಮವನ್ನು ವಿಚಾರಿಸಿ ಸ್ವಲ್ಪ ಸಮಯ ಕಳೆಯುತ್ತಾನೆ. ಅನಂತರದಲ್ಲಿ ದಕ್ಷಬ್ರಹ್ಮನಿಗೆ ತನ್ನ ಉಳಿದ ಮಕ್ಕಳ ನೆನಪಾಗಿ ಚಂದ್ರನನ್ನು ಕೇಳಲು ಅವರ ಉದಾಸೀನತೆಯಿಂದ ಅವರೆಲ್ಲೋ ಇದ್ದಾರೆ ಎನ್ನಲು ರೋಹಿಣಿಯು ತಂದೆಗೆ ನಿಜ ಸಂಗತಿಯನ್ನು ತಿಳಿಸುತ್ತಾಳೆ. ಅವರೆಲ್ಲರನ್ನು ಒಂದು ಕೋಣೆಯಲ್ಲಿ ಕೂಡಿಹಾಕಿರುವುದಾಗಿ ತಿಳಿಸುತ್ತಾಳೆ. ಇದರಿಂದ ಕೋಪಗೊಂಡ ದಕ್ಷಬ್ರಹ್ಮನು ಅಳಿಯನಾದ ಚಂದ್ರನಿಗೆ ಕುರುಡನಾಗುವಂತೆ ಶಾಪ ಕೊಟ್ಟು ಹೊರಟು ಹೋಗುತ್ತಾನೆ. ಇದರಿಂದ ಅತೀವವಾಗಿ ನೊಂದ ಚಂದ್ರನು ಶಿವನ ಬಳಿ ಬಂದು ತನ್ನ ತಪ್ಪನ್ನು ನಿವೇದಿಸಿಕೊಳ್ಳುತ್ತಾನೆ. ಶಿವನು ಅವನ ಶಾಪವನ್ನು ವಿಮೋಚನೆಗೊಳಿಸಲು ಭೂಮಿಯನ್ನು ಬೆಳಗುವಂತೆ ಹೇಳುತ್ತಾನೆ. ಅದರಂತೆ ಚಂದ್ರನು ಭೂಮಿಯನ್ನು ಬೆಳಗುವುದಾಗಿ ಹೇಳಿ ಹೊರಟು ಹೋಗುತ್ತಾನೆ. ಈ ವಿಷಯವನ್ನು ತಿಳಿದ ಅವನ ಮಡದಿಯರು ಮೇಘರಾಜನ ಬಳಿಗೆ ಹೋಗಿ ಮಳೆಗಳಾಗಿ ಜನ್ಮವೆತ್ತುತಾರೆ. ಇವರು ಮೂರು ದಿವಸಕ್ಕೆ ಅಥವಾ ನಾಲ್ಕು ದಿವಸಕ್ಕೆ ಒಂದು ಪಾದದಂತೆ ಕಾಣಿಸಿಕೊಳ್ಳುತ್ತಾರೆ. ಮಳೆ ನಕ್ಷತ್ರದಲ್ಲಿ ಪ್ರತಿ ಮಳೆಗೂ ನಾಲ್ಕು ನಾಲ್ಕು ಪಾದಗಳನ್ನು ಹೇಳಿರುವುದು ಇಲ್ಲಿ ಗಮನಾರ್ಹ.

ಸಾಮಾನ್ಯ ಅರ್ಥವಂತಿಕೆಗಳಿಗಿಂದ ಸ್ವಲ್ಪ ಗಂಭೀರ ಚಿಂತನೆಗೆ ತೊಡಗಿದರೆ ಮಳೆಯ ಕುರಿತಾದ ನಮ್ಮ ಆಲೋಚನೆ ಆದಿಮಸ್ಥಿತಿಗೆ ಹೋಗುತ್ತದೆ. ಭಾರತೀಯ ಸಂಸ್ಕೃತಿಯ ಚಿಂತನೆಯ ನೆಲೆಗಳಲ್ಲಿ ಮತ್ತು ಜನಪದ ಸಾಹಿತ್ಯದಲ್ಲಿ ಮಳೆಯನ್ನು ದ್ವಂದ್ವನೆಲೆಗಳಲ್ಲಿಯೇ ನಿರೂಪಿಸಲಾಗಿರುತ್ತದೆ. ವೈದಿಕಸಂಸ್ಕೃತಿಯ ನಿರ್ವಚನದಂತೆ ಮಳೆಯನ್ನು ವರುಣ ಎಂದು ನಿರೂಪಿಸಿದರೆ ಆರ್ಯಪೂರ್ವಕಾಲದಲ್ಲಿ ಮತ್ತು ನಂತರದಲ್ಲೂ ಮಳೆಯೂ ಸ್ತ್ರೀಯಾಗಿಯೇ ನಿರೂಪಿತವಾಗಿದೆ. ನಂತರ ಆರ್ಯೀಕರಣದ ಪ್ರಭಾವದಿಂದ ಜನಪದರು ಮಳೆಗೆ ಪುರುಷತ್ವವನ್ನು ಆರೋಪಿಸಿದ್ದಾರೆ. ಈ

ಸ್ಥಿತ್ಯಂತರವನ್ನು ಗಮನಿಸಿದರೆ ಆದಿಮ ಸಂಸ್ಕೃತಿಯ ಮೇಲೆ ಆದ ಆಕ್ರಮಣಕಾರಿ ಚರಿತ್ರೆಯೇ ಬಿಚ್ಚಿಕೊಳ್ಳುತ್ತದೆ.

ಅನೇಕ ಪುರಾಣಗಳಲ್ಲಿ, ಜನರು ನಿರೂಪಿಸಿರುವಂತೆ ಕಾಮನಬಿಲ್ಲು ಆಕಾಶ ಮತ್ತು ಭೂಮಿಯ ನಡುವಣ ಸೇತುವೆ. ಇಂದ್ರ ತನ್ನ ಇರುವಿಕೆಯನ್ನು ಸೂಚಿಸುವುದಕ್ಕಾಗಿ ಕಾಮನ ಬಿಲ್ಲನ್ನು ಆಕಾಶದಲ್ಲಿರಿಸಿದ್ದಾನೆ ಎಂದು ನಮ್ಮ ಪುರಾಣಗಳು ಹೇಳುತ್ತವೆ. ಮಳೆಗೆ ಸಂಬಂಧಿಸಿದಂತೆ ಕಾಮನಬಿಲ್ಲಿನಿಂದ ಜನಪದರು ಅನೇಕ ಸೂಚನೆಗಳನ್ನು ಕಂಡುಕೊಳ್ಳುತ್ತಾರೆ ಎಂಬ ಅಂಶವನ್ನು ಹಿಂದಿನ ಪುಟಗಳಲ್ಲಿ ನಿರೂಪಿಸಲಾಗಿದೆ. ಜನಪದರ ಜೀವನದಲ್ಲಿ ಮಳೆ ಹಾಗು ಅದರ ಸಂಬಂಧಿತ ವಿದ್ಯಮಾನಗಳು ಮುಖ್ಯ ಸ್ಥಾನ ಪಡೆದಿವೆ. ಮಳೆ ತನ್ನ ಸರ್ವತಂತ್ರ ಸ್ವತಂತ್ರ ಸ್ವಭಾವದಿಂದಾಗಿ ಹಾಗೂ ಅನುಗ್ರಹಶಾಲಿ ಗುಣದಿಂದಾಗಿ ಆರಾಧ್ಯ ದೈವದ ಸ್ಥಾನ ಗಳಿಸಿದೆ. ರೈತರ ಮನೋವ್ಯಾಪರಗಳೆಲ್ಲದರ ಚಿಂತನೆಯ ಮುಖ್ಯ ವಸ್ತು ಮಳೆಯೇ. ಅಪರೂಪಕ್ಕೆ ಭೇಟಿಯಾದವರು. ನಮ್ಮಲ್ಲಿ ಮೊದಲು ಕೇಳುವ ಪ್ರಶ್ನೆ ನಿಮ್ಮಲ್ಲಿ ಮಳೆ ಬೆಳೆ ಹೇಗೆ ಎಂಬುದೇ ಆಗಿದೆ. ಧರ್ಮ ಮಾರ್ಗದಲ್ಲಿ ನಡೆದರೆ ಮಾತ್ರ ಕಾಲಕ್ಕೆ ಸರಿಯಾಗಿ ಮಳೆಯಾಗುತ್ತದೆ ಎಂಬುದೇ ನಮ್ಮ ಹಳ್ಳಿಯ ಜನಗಳ ವೇದಾಂತ ಕರ್ನಾಟಕದಲ್ಲಿ ಮಲೆನಾಡಿಗಿಂತ ಬಯಲು ಸೀಮೆಯ ಕಡೆ ಮಳೆಗೆ ಸಂಬಂಧಿಸಿದ ಜಾನಪದ ವಿಫುಲವಾಗಿದೆ. ನಮ್ಮಲ್ಲಿ ಯಾವುದಕ್ಕೆ ಕೊರತೆಯಿದೆಯೋ ಅದಕ್ಕೆ ಹೆಚ್ಚು ಮಹತ್ವವನ್ನು ಕೊಡಲಾಗುತ್ತದೆ ಎಂಬ ಅಂಶದ ಹಿನ್ನೆಲೆಯಲ್ಲಿ ಈ ವಿಷಯವನ್ನು ನೋಡಬಹುದು. ವಿಜ್ಞಾನ ಎಷ್ಟೇ ಮುಂದುವರೆದಿದ್ದರೂ ಸಹ ಮಳೆಯ ವಿಷಯದಲ್ಲಿ ಮಾನವ ಅಸಹಾಯಕನಾಗಿಯೇ ಇದ್ದಾನೆ. ಈಗಲೂ ದೀರ್ಘಕಾಲದವರೆಗೆ ಮಳೆ ಬಾರದಿದ್ದರೆ ಈ ಜಾನಪದವೆಲ್ಲ ಪುನಃ ಗರಿಗೆದರುತ್ತದೆ. ಕಪ್ಪೆಯನ್ನೋ, ಕತ್ತೆಯನ್ನೋ ಮಳೆರಾಯ ಎಂದು ಭಾವಿಸಿ ಪೂಜಿಸುವುದರಿಂದ ಹಿಡಿದು ಲಕ್ಷಾಂತರ ರೂಪಾಯಿ ಖರ್ಚು ಮಾಡಿ ಯಜ್ಞಯಾಗಾದಿಗಳ ಮೂಲಕ ಮಳೆ ತುಂಬಿದ ಮೋಡಗಳನ್ನು ಭೂಮಿಗಿಳಿಸುವ ದುಬಾರಿ ಆಚರಣೆಗಳೂ ಇತ್ತೀಚೆಗೆ ನಡೆಯುತ್ತಿವೆ. ಅನಾವೃಷ್ಟಿಯ ಸಂದರ್ಭದಲ್ಲಿ ಸರ್ಕಾರವೂ ಸಹ ವಿಶೇಷ ಪೂಜೆ ಪುನಸ್ಕಾರಗಳನ್ನು ಏರ್ಪಡಿಸುವುದು ಮಳೆಯ ವಿಷಯದಲ್ಲಿ ನಮ್ಮ ಅಸಹಾಯಕತೆ. ಅಜ್ಞಾನಗಳೆರಡನ್ನೂ ಸೂಚಿಸುತ್ತಿರಬಹುದು. ಮಳೆಯ ಬಗ್ಗೆ ಜನಪದರಲ್ಲಿ ಪ್ರಚಲಿತವಿರುವ ಅಪಾರ ಜ್ಞಾನಸಂಪತ್ತನ್ನು ವಿಜ್ಞಾನಿಗಳು ಖಂಡಿತವಾಗಿಯೂ ಬಳಸಿಕೊಳ್ಳಬಹುದು. ಹವಾಮಾನ, ಪರಿಸರಗಳ ಅಧ್ಯಯನಕ್ಕೆ ಈ ಜಾನಪದ ಮಹತ್ವದ ಕೊಡುಗೆಯನ್ನು ಕೊಡುತ್ತದೆ ಎಂಬುದರಲ್ಲಿ ಸಂದೇಹವಿಲ್ಲ.

ನಮ್ಮ ಜಾನಪದದಲ್ಲಿ ಮಳೆ ನೀರು ಬಳಕೆ ಎಂಬುದು ಹಾಸುಹೊಕ್ಕಾಗಿದೆ. ನಮ್ಮ ಎಲ್ಲ ಕುಡುಯುವ ನೀರಿನ ಆಸರೆಗಳ ಮೂಲ ಮಳೆ ನೀರೇ ಆಗಿತ್ತು. ಮಳೆಯೆಂಬುದು ನಮ್ಮ ಆರಾಧನೆಯ ಸ್ತೋತ್ರವಾಗಿತ್ತು. ಅದಕ್ಕೊಂದು ದೈವತ್ವ ಕಲ್ಪಿಸಿ ಪೂಜಿಸಿದವರು ನಾವು. ನಮ್ಮ ನಂಬಿಕೆಯ ಸೆಲೆಗಳು

ಜೀವ ಪಡೆದದೆ ಮಳೆಯಿಂದ. ಹೀಗಾಗಿ ಮಳೆಯನ್ನು ಅಷ್ಟದಿಕ್ಪಾಲಕರಲ್ಲಿ ಒಂದಾದ ವರುಣನ ಹೆಸರುನಲ್ಲಿ ಆರೋಪಿಸಿ, ಸಕಲ ದೇವಾನುದೇವತೆಗಳನ್ನು ಅದರ ಮೂಲಕವೇ ಆವಾಹಿಸುವ ಸಂಪ್ರದಾಯವನ್ನು ಅನುಸರಿಸಿಕೊಂಡು ಬಂದಿದ್ದೇವೆ. ನಮ್ಮ ಆಚರಣೆ, ವ್ರತ, ಪೂಜೆಗಳೆಲ್ಲವೂ ಆರಂಭಗೊಳ್ಳವುದೇ ಕಳಶಸ್ಯ ಮುಖೇ.... ವಿಷ್ಣುಃಕಂಠೇ... ಎಂಬ ವರುಣಾರಾಧನೆಯಿಂದ. ಅಷ್ಟೇಕೆ ಮಳೆಗೊಂದು ಮಂತ್ರ ಸೃಷ್ಟಿಸಿ, ಅದರ ಅಧಿದೇವತೆಯನ್ನು ಆವಾಹಿಸಿ 'ಪರ್ಜನ್ಯ' ಕೈಗೊಂಡವರು ನಾವು. ವೇದಪದ್ಧತಿಯಲ್ಲಿ ಇಂದಿಗೂ ರುದ್ರನಮಕದೊಂದಿಗಿನ ಪರ್ಜನ್ಯ ಪರ್ವ ವರ್ಷಧಾರೆಯನ್ನುತರಿಸಿಯೇ ತೀರುತ್ತದೆಂಬ ಪ್ರತೀತಿ ಇದೆ.

ಹಳ್ಳಗಳಲ್ಲಿ ಮನೆಯ ಹೊಸ ಮಜ್ಜಿಗೆ ಅಗುವುದೇ ಮಳೆಯಿಂದ ಎಂಬುದು ಗೊತ್ತಿರಬಹುದು. ಸ್ವಾತಿ ಮಳೆಯ ಹಿಡಿದಿಟ್ಟು ಹೊಸ ಹೆಪ್ಪು ಹಾಕಿ, ಹೈನುಗಾರಿಕೆಯ ವರ್ಷ ಆರಂಭಿಸುವುದು ರೂಢಿ. ಭಾರತೀಯ ವೈದ್ಯ ಪದ್ಧತಿಯಲ್ಲಿ ಪರಿಕ್ರಮ ಆರಂಭವಾಗುವುದೇ ಮೃಗಶಿರಾ ಮಳೆಯಿಂದ. ಇನ್ನು ಪ್ರತಿ ಮಳೆಗು ನಮ್ಮಲ್ಲಿ ಒಂದೊಂದು ಗಾದೆಯಿದೆ. ಒಂದೊಂದೆ ನಂಬಿಕೆಯಿದೆ. ಮಘಾ ಮಳೆ ಬಂದಷ್ಟು ಒಳ್ಳೇದು, ಮನೆ ಮಗ ಉಂಡಷ್ಟು ಒಳ್ಳೇದು. ಆಶ್ಲೇಷಮಳೆ, ಈಸಲಾರದ, ಹೊಳೆ. ಹುಬ್ಬೆಮಳೆಲಿ ಹುಬ್ಬೆತಕ್ಕೂ ಆಗಲ್ಲ. ಅಣ್ಣ ಹುಸಿಯಾದರೂ ತಮ್ಮ ತಂಪು ತರದೇ ಹೋಗಲ್ಲ(ಪೂರ್ವಾಷಾಢ-ಉತ್ತರಾಷಾಢ ಮಳೆಗಳು ಹಳ್ಳಿಗರ ಕಲ್ಪನೆಯಲ್ಲಿ ಅಣ್ಣ ತಮ್ಮ ). ಆರಿದ್ರಾಮಳೆ ಆರದೇ ಹುಯ್ಯುತ್ತೆ. ಅಮ್ಮನ ಮನಸ್ಸು ಬೆಲ್ಲದ ಹಾಗೆ, ಆರಿದ್ರಾ ಹನಿ ಕಲ್ಲಿನ ಹಾಗೆ- ಹೀಗೆ ನಾವು ಮಳೆಯನ್ನು ಅದರ ಗುಣ ವಿಶೇಷಗಳೊಂದಿಗೆ ಗುರುತಿಸಿದ್ದೇವೆ.

ಇನ್ನು ಮಳೆಯ ಬಗೆಗಿನ ಜಾನಪದ ನಂಬಿಕೆಗಳು ಹೀಗಿವೆ- ಹಸ್ತ ಹಣಕಿ, ಚಿತ್ತ ಕಾದು, ಸ್ವಾತಿ ಮಳೆ ಸುರಿದ್ರೆ ಮುತ್ತು ಬೆಳೆಯುತ್ತೆ. ಅಕ್ಕ ಅಕ್ಕಿ ತಿಂದ್ರೆ , ಮದುವೆ ದಿನ ಮಳೆ ಬರುತ್ತೆ. ಸಂಜೆ ಬಂದ ಮಳೆ, ನೆಂಟ ಇಬ್ರೂ ಹೋಗಲ್ಲ(ಬೆಳಗ್ಗಿನವರೆಗು). ಮಳೆಗಾಲದ ಮಳೆ ನಂಬಲಾಗದು, ಮನೆ ಹೆಂಡ್ತಿ ನಗೆ ನಂಬಲಾಗದು. ತುಂತುರು ಮಳೆಯಿಂದ ತೂಬು ಒಡೆದೀತೆ ? ಎಂಬೆಲ್ಲ ಗಾದೆಗಳನ್ನು ಕೇಳಿದ್ದೇವೆ. ಅದೇ ರೀತಿ 'ಈ ವರ್ಷ ಮಳೆಗಾಲ ಬಾಳ , ಮನೆ ಗಂಡ ಕುಂತಲ್ಲಿಂದ ಏಳ, ಸಾಲಕೊಟ್ಟವರೆಲ್ಲ ಬನ್ನಿ..' ಎಂಬ ಹಾಡು ಸಮೃದ್ಧಿಯ ಸಂಕೇತ. 'ಮಳೆ ನೀರು ಬಿಟ್ಟು ಮಂಜಿಗೆ ಕೈ ಒಡ್ಡಬೇಡ' ಎಂಬುದು ಕಿವಿ ಮಾತು. ಒಟ್ಟಾರೆ ಮಳೆಯ ಮಹತ್ವ ಭಾರತೀಯರಿಗೆ ಅರಿಯದ್ದೇನಲ್ಲ. ಆದರೆ ಅದು ಮರೆತಿದ್ದು, ತುಸು ನೆನಪಿಸಿಕೊಂಡು ಮಳೆಯಾರಾಧನೆಗೆ ಮನಸ್ಸು ಮಾಡಬೇಕಷ್ಟೆ[೭].

**ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ**

ಪ್ರಸ್ತುತ ಪ್ರಬಂದದ ವಿಷಯವಾಪ್ತಿಯನ್ನು ಅನುಲಕ್ಷಿಸಿ ಸುಮಾರು ಒಂಭತ್ತು ಅಧ್ಯಾಯಗಳಾಗಿ ವರ್ಗಿಕರಿಸಿಕೊಂಡಿದ್ದು, ಅಧ್ಯಯನದ ವಸ್ತುನಿಷ್ಠತೆಗೆ ಒತ್ತು ನೀಡಲಾಗಿದೆ. ಅನುಕ್ರಮವಾಗಿ;

ಮೊದಲ ಅಧ್ಯಾಯವು ವಿಷಯ ಪ್ರವೇಶವಾಗಿದ್ದು, ಆದಿಮ ಸಂಸ್ಕೃತಿಯನ್ನು ನಿಯಂತ್ರಿಸುವ ನೀರಿನ ಮೂಲ ರೂಪವಾದ ಮಳೆಯ ಬಗ್ಗೆ ವಿವರ ಮತ್ತು ವಿಶ್ಲೇಷಣೆ ನೀಡಲಾಗಿದ್ದು, ವೇದಗಳಲ್ಲಿಯೂ ಮಳೆಯನ್ನು ಕಾಣಿಸಿರುವ ಪ್ರಸ್ತಾವದೊಂದಿಗೆ ಮಳೆಯು ಜನಜೀವನದ ನಿಯಂತ್ರಕ, ನಿರ್ಣಾಯಕ ಶಕ್ತಿಯಾಗಿ ಹೇಗೆ ನಿರ್ವಹಿಸಲ್ಪಟ್ಟಿದೆ ಎಂಬುದು ಹಾಗೂ ಅಧ್ಯಯನ ಉದ್ದೇಶ, ಸ್ವರೂಪ, ವ್ಯಾಪ್ತಿ, ಮಳೆ ಕುರಿತ ಇದುವರೆಗಿನ ಅಧ್ಯಯನ ಸಮೀಕ್ಷೆಯನ್ನು ಗಮನಿಸಲಾಗಿದೆ.

ಎರಡನೆ ಅಧ್ಯಾಯ 'ಜನಪದ ಪರಂಪರೆಯ ಮಳೆಸಂಸ್ಕೃತಿಯ ತಾತ್ವಿಕತೆ' ಯಲ್ಲಿ ಇಡೀ ಸಂಶೋಧನೆಯ ತಾತ್ವಿಕ ಸ್ವರೂಪವನ್ನು ನಿರ್ಧರಿಸಿಕೊಳ್ಳುವಲ್ಲಿ ಪ್ರಯತ್ನಿಸಲಾಗಿದೆ. ತಳ ಸಮುದಾಯಗಳ ಅಮೂರ್ತ ಶಕ್ತಿಯು ಪರಂಪರೆ ಅಥವಾ ವೈದಿಕ ಶಕ್ತಿಗಳನ್ನು ಅವ್ಯಕ್ತ ಸಾಹಿತ್ಯದಲ್ಲಿ ಹೇಗೆ ಪ್ರತಿಭಟಿಸಿದೆ ಎಂಬುದನ್ನು ನಿರೂಪಿಸಿದೆ. ಜನಪದ ಸಮುದಾಯವು ಲೌಕಿಕ- ಅಲೌಕಿಕ ಶಕ್ತಿಗಳಿಗೆ ತೋರಿದ ಅವ್ಯಕ್ತತೆಯನ್ನು ಆದಿಮ ಪ್ರಜ್ಞೆಯ ಶಾರೀರಿಕ ಅಂಶಗಳತ್ತ ಗಮನಹರಿಸಲಾಗಿದೆ. ಈ ಹಿನ್ನಲೆಯಲ್ಲಿ ಆದಿಮ ಸಾಂಸ್ಕೃತಿಕ ತಳವರ್ಗಗಳ ಪ್ರತಿಭಟನಾ ಚರಿತ್ರಾತ್ಮಕ ಮೂಲದತ್ತ ಗಮನ ಹರಿಸಲಾಗಿದೆ.

ಮೂರನೇ ಅಧ್ಯಾಯ 'ಜನಪದ ಪರಂಪರೆಯ ಮಳೆಕಥನಗಳು' ದಲ್ಲಿ ಪರಂಪರೆಯ ಮಳೆಯ ಬಗ್ಗೆ ಇರಿಸಿಕೊಂಡ ನಂಬಿಕೆ, ಆಚರಣೆಗಳನ್ನು, ಪರಂಪರೆಯನ್ನು ಮಳೆಕಥನಗಳ ತಾತ್ವಿಕ ಆಯಾಮಗಳ ಬಗ್ಗೆ, ವಿಶೇಷವಾಗಿ ಜೋಕುಮಾರನ ಪ್ರತಿಭಟನಾತ್ಮಕ ಪ್ರತಿಕ್ರಿಯೆಗೆ ಒಳಗಾದ ಮಳೆದೇವತೆಯಾದ ಪರಂಪರೆ ನಿರ್ವಚಿಸಿಕೊಂಡಿರುವ ೨೭ ಮಳೆ ನಕ್ಷತ್ರಗಳನ್ನು ಗಾದೆ ಒಡಪು, ಜನಪದ ಸಾಹಿತ್ಯ ಕ್ಷೇತ್ರಕಾರ್ಯದಲ್ಲಿ ವಕ್ತೃ ನೀಡಿದ ಮಾಹಿತಿಯನ್ನು ಆಧರಿಸಿ ವಿಶ್ಲೇಷಿಸಲಾಗಿದೆ. ಹಾಗೆಯೇ ಜನಪದ ಸಾಹಿತ್ಯದಲ್ಲಿ ಮಳೆಗಳ ಬಗ್ಗೆ ಇರುವ ಸಾಹಿತ್ಯವನ್ನು ಉಲ್ಲೇಖಿಸುವ ಮೂಲಕ ಮಳೆನಕ್ಷತ್ರಗಳನ್ನು ವ್ಯಕ್ತಿತ್ವಗಳ ಹಿನ್ನಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ನಾಲ್ಕನೇ 'ಒಕ್ಕಲುತನ ಮತ್ತು ಮಳೆಯಕಥನಗಳು' ಅಧ್ಯಾಯದಲ್ಲಿ ಒಕ್ಕಲುತನವನ್ನು ಕುರಿತಾಗಿ ಜನಪದ ಸಾಹಿತ್ಯದ ವಿಶ್ಲೇಷಣೆಯೊಂದಿಗೆ ಒಕ್ಕಲುತನದ ಅರ್ಥ, ಮೂಲ ಅಥವಾ ಅದರ ಪ್ರಕ್ರಿಯಾತ್ಮಕ ಆಚರಣೆಗಳನ್ನು, ಜನಪದರು ಒಕ್ಕಲುತನವನ್ನು ಪರಿಭವಿಸಿಕೊಂಡ ಬಗೆ ಸಾಹಿತ್ಯದಲ್ಲಿ ರೂಪಿಸಿಕೊಂಡ ಸಂದರ್ಭ ಕೃಷಿಯು ಅರ್ಯಮೂಲವೋ, ದ್ರಾವಿಡಮೂಲವೋ ಗಂಡಸಿನ ಹಕ್ಕುದಾರಿಕೆಯೋ, ಸಂಶೋಧನೆಯೋ, ನಂತರದ ಕಾಲಘಟ್ಟದಲ್ಲಿ ಅದು ಹೇಗೆ ಪುರುಷವಶವಾಯಿತು ಎನ್ನುವುದನ್ನು ಸಾಂಸ್ಕೃತಿಕ ಸಂಶೋಧನೆಯನ್ನು ಆಧರಿಸಿ ಜನಪದಸಾಹಿತ್ಯದಲ್ಲಿ ಸಿಗುವ ಆಧಾರಗಳನ್ನು ಬಳಸಿಕೊಂಡು ವಿವರಿಸಲಾಗಿದೆ. ನಾಗರಿಕತೆಗಳ ವಿಕಾಸ ಮತ್ತು ಸ್ಥಿತ್ಯಂತರಗಳನ್ನು ಸಹ ಗುರುತಿಸಲಾಗಿದೆ. ತಳವರ್ಗದ ಸಾಂಸ್ಕೃತಿಕ ಅನನ್ಯತೆಯನ್ನು ಭೂಮಿತತ್ವದ ಹಿನ್ನಲೆಯಲ್ಲಿ ಕಂಡುಕೊಳ್ಳಲಾಗಿದೆ. ಬಹುಮುಖಿಯಾಗಿ

ಒಕ್ಕಲುತನದ ಸಂಕೇತವೊಂದರ ಬಗ್ಗೆ ವಿಶೇಷವಾಗಿ ಗಮನ ಒಕ್ಕಲುತನ ಮತ್ತು ಕಥನಗಳ ಸಂಬಂಧ ತಾತ್ವಿಕತೆಯನ್ನು ವಿಶ್ಲೇಷಿಸಲಾಗಿದೆ.

ಐದನೇ 'ಜನಪದ ಆಚರಣೆಗಳು ಮತ್ತು ಮಳೆಕಥನಗಳು' ಅಧ್ಯಾಯದಲ್ಲಿ ಮಳೆಯ ಆಚರಣೆಗಳ ಸವಿಸ್ತಾರ ವಿವರಣೆಯೊಂದಿಗೆ ಆಚರಣೆಯಲ್ಲಿ ಅಡಗಿರುವ ಆದಿಮಪ್ರಜ್ಞೆಯನ್ನು ಗುರುತಿಸಲಾಗಿದೆ. ಮಳೆ ಮತ್ತು ಆಚರಣೆಗಳು ಜಾನಪದ ಕ್ಷೇತ್ರವಿವಕ್ಷೆಯನ್ನು ಆಚರಣೆಯು ಒಳಗೊಳ್ಳುವ ಆಯಾಮಗಳ ಬಗ್ಗೆ ನಿರೂಪಿಸಲಾಗಿದೆ. ಆಚರಣಾ ತಾತ್ವಿಕತೆ, ಈ ಅಧ್ಯಾಯವನ್ನು ಸಂಗ್ರಹಗೊಂಡ ವಿವರಣೆಗಳಿಗಿಂತ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದ ವಿವರವನ್ನು ಬಳಸಲಾಗಿದೆ. ದಾಖಲು ಬರಹದೊಂದಿಗೆ ತೌಲನಿಕವಾಗಿ ನೋಡಿ ಆಯಾ ಭಾಗದ ಆಚರಣೆಗಳ ಭಿನ್ನತೆಯನ್ನು ಅರ್ಥಕ್ಕೆ ಒದಗಿ ಬಂದ ಸಂದರ್ಭ ಕಾರಣಗಳನ್ನು ಗುರುತಿಸಿ ಜನಪದ ಜೀವನದ ಸೃಜನಶೀಲ ಕ್ರಿಯಾತ್ಮಕತೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಆರನೇ 'ಜನಪದ ಸಾಹಿತ್ಯ ಮತ್ತು ಮಳೆಕಥನಗಳು' ಅಧ್ಯಾಯದಲ್ಲಿ ಜನಪದರು ಮಳೆಯನ್ನು ಪರಿಭಾವಿಸಿ ಮಳೆಯನ್ನು ಕುರಿತಾಗಿ ಕಟ್ಟಿಕೊಂಡ ಬಹುಮುಖಿ ಸಾಹಿತ್ಯವನ್ನು ವಿಶ್ಲೇಷಣೆ ಮಾಡಲಾಗಿದೆ. ಈ ಹಿನ್ನಲೆಯಲ್ಲಿ ಮಳೆಯ ವಿರಾಟ್‌ಸ್ವರೂಪವನ್ನು ಮಳೆ ಕಥನಗಳ ತಾತ್ವಿಕ ಸ್ವರೂಪವನ್ನು ಅವುಗಳ ಲೌಕಿಕಪ್ರಜ್ಞೆಯನ್ನು ಕಟ್ಟಿಕೊಂಡ ಮಾದರಿ ಬದುಕಿನ ತಳಸಮುದಾಯದ ಏಳುಬೀಳುಗಳನ್ನು ಬಳಸಿ ಕಥನಗಳಲ್ಲಿ ಪಡಿಮೂಡಿಸಿದ ಪ್ರತಿಭಾನೆಲೆಗಳನ್ನು ಕಥನ ಭೂಮಿಕೆಯಾಗಿರುವ ಅವ್ಯಕ್ತ ಮೌಖಿಕ ಚರಿತ್ರಾತ್ಮಕ ಸುಪ್ತಸಂಗತಿಗಳನ್ನು ಕಥನಗಳು ಹೊರಚೆಲ್ಲುವ ಸಮನಾಂತರ ಅಥವಾ ಭಿನ್ನ ಮೂಲಗಳು, ಕಥನಗಳು ಚಿತ್ರಿಸಹೊರಟ ಸಮನ್ವಯತೆ, ಕೆಳವರ್ಗಗಳು ಮುಖ್ಯವಾಹಿನಿಯತ್ತ ಮುಖಮಾಡಿದ ಊರ್ಧ್ವಮುಖಚಲನೆಯ ಹಿನ್ನಲೆಯಲ್ಲಿ ಕಥನಗಳಿಗೆ ತಳಮಟ್ಟದ ಸೈದ್ಧಾಂತಿಕ ತಾತ್ವಿಕನೆಲೆಯನ್ನು ಕಟ್ಟಿಕೊಳ್ಳಲು ಯತ್ನಿಸಲಾಗಿದೆ.

ಏಳನೇ 'ಲಿಂಗಸಂಬಂಧಗಳು ಮತ್ತು ಮಳೆಕಥನಗಳು' ಅಧ್ಯಾಯದಲ್ಲಿ ಜನಪದ ಪರಂಪರೆಯು ಸುಪ್ತಪ್ರಜ್ಞೆಯನ್ನು ಮೂಲ ವಿವರಗಳಲ್ಲಿ ನಿರ್ವಚಿಸಿಕೊಂಡಿರುವ ಸಂಗತಿಗಳು ಅಥವಾ ಜನಪದ ಸಾಹಿತ್ಯದಲ್ಲಿ ಪ್ರಸ್ತಾಪಿಸಲಾಗಿರುವ ಮಳೆಕಥನಗಳ ಸ್ತ್ರೀಸಂಬಂಧಿ, ಪುರುಷಸಂಬಂಧಿ ನೆಲೆಗಳಲ್ಲಿ ಬರುವ ಕಥನಾತ್ಮಕ ಅಂಶಗಳನ್ನು ವರ್ಗೀಕರಿಸಿಕೊಂಡು ಕಥಾನಕಗಳನ್ನು ಆ ಭೂಮಿಕೆಗಳಲ್ಲಿಯೇ ವಿಶ್ಲೇಷಿಸಿಕೊಳ್ಳಲಾಗಿದೆ. ಸ್ತ್ರೀಲಿಂಗಸಂಬಂಧಿ ಕಥನಗಳು ಹೇಗೆ ಪುರುಷಲಿಂಗ ಕಥನಗೊಂಡಿವೆ ಎಂಬ ಬಗ್ಗೆಯೂ ಮತ್ತು ಅವುಗಳ ಹಿಂದಿರುವ ಆಶಯ, ರೂಪ, ವೈವಿದ್ಯತೆಯ ಸ್ವರೂಪವನ್ನು ಗುರುತಿಸಲು ಯತ್ನಿಸಲಾಗಿದೆ. ವಿಭಾಗಕ್ಕೆ ಸ್ತ್ರೀತತ್ವದ ಸಂಕೇತ ಮತ್ತು ಪುರುಷತತ್ವ ಸಂಕೇತವೆಂದು ಕರೆಯಲಾಗಿದೆ.

ಹಾಗೆಯೇ ಬಂಧುತ್ವದ ನೆಲೆಗಳನ್ನು ಭಿನ್ನ ಮಾದರಿಗೊಳಿಸಿ ನಿರೂಪಿಸಿರುವುದು ವಿರಾಟ್‌ಸ್ವರೂಪವನ್ನು ಗುರುತಿಸಲು ಯತ್ನಿಸಲಾಗಿದೆ. ಹೆಣ್ಣಿಗಾದ ಅನ್ಯಾಯವನ್ನು ಸಮಾನ ಲಿಂಗಿಗಳಾದ ಮಳೆಗಳು ಪ್ರತಿಭಟಿಸಿದ್ದು, ಜೀವ ವಿರೋಧಿನೆಲೆಗಳನ್ನು ಜೀವಕೇಂದ್ರಿತ ನೆಲೆಗಳಿಂದ ಸಮನ್ವಯಗೊಳಿಸಿದ ಬಗ್ಗೆ ಅನ್ಯಾಯದ ಪ್ರತಿಫಲವು ಅನುಭವದ ಮೂಲಕ ಪ್ರಾಯಶ್ಚಿತ್ತಕ್ಕೊಳಗಾದ ಬಗೆಯನ್ನು ಶೋಷಣೆ ಮಾರ್ಗಗಳನ್ನು ಕಥನಗಳ ಕ್ರಮದಲ್ಲಿಯೇ ಗುರುತಿಸಲು ಯತ್ನಿಸಿದೆ.

ಎಂಟನೇ 'ಬದಲಾಗುತ್ತಿರುವ ಪರಿಸರಪ್ರಜ್ಞೆ ಮತ್ತು ಮಳೆಯ ಪರಿಸ್ಥಿತಿಗಳು' ಅಧ್ಯಾಯದಲ್ಲಿ ಮನುಷ್ಯನ ಅನ್ವೇಷಣಾ ಪ್ರವೃತ್ತಿಯಿಂದ ಬದಲಾದ ಜೀವನಕ್ರಮ ಮತ್ತು ಪರಿಕ್ರಮನ್ನು ಆತನ ನೋಡುವ ದೃಷ್ಟಿಕೋನದಲ್ಲಿ ಆದ ಬದಲಾವಣೆಗಳನ್ನು ಕಥನಗಳ ಹಿನ್ನಲೆಯಲ್ಲಿ ಗ್ರಹಿಸಲು ಯತ್ನಿಸಿದೆ. ಹಳೆಯ ಜನಪದ ಪರಂಪರೆ ಹೊಸದಾದ ಯುಗಕ್ಕೆ ಜನಪಥ್ಯಗಳು, ಮುಖಾಮುಖಿಗೊಂಡ ಬಗ್ಗೆ ಅಂತೆಯೇ ಮಳೆಯನ್ನು ಆಧುನಿಕಯುಗ ನೋಡುವ ಹೊಸ ಕ್ರಮ ಅನುಸಂಧಾನ ಮಾಡುವ ಬಗ್ಗೆ ಬದಲಾದ ಪರಿಸರಪ್ರಜ್ಞೆಯಲ್ಲಿ ಕಥನಗಳು ತನ್ನ ಅನನ್ಯತೆಯನ್ನು ಹೇಗೆ ಉಳಿಸಿಕೊಳ್ಳುತ್ತವೆ ಜಾಗತೀಕರಣವು ಎಷ್ಟೇ ಪರಿಣಾಮಕಾರಿಯಾದರೂ ತಳವರ್ಗವನ್ನು ಅದಿಮಕೃಷಿವರ್ಗ ಸೃಷ್ಟಿಸಿದ ಕಥಾನಕಗಳು ಹೇಗೆ ಅಮೂರ್ತಸ್ಥಿತಿಯಲ್ಲಿ ತನ್ನ ಆದಿಮಪ್ರಜ್ಞೆಯನ್ನು ಉಳಿಸಿಕೊಂಡಿದೆ ಎಂಬುದನ್ನು ಕಂಡುಕೊಳ್ಳಲು ಯತ್ನಿಸಿದೆ. ಅಚರಣೆಗಳಲ್ಲಿಯೇ ಈ ಪ್ರಜ್ಞೆಯನ್ನು ಸ್ಪಷ್ಟವಾಗಿ ಗುರುತಿಸಲಾಗಿದೆ.

ಒಂಬತ್ತನೆಯ 'ಅಧ್ಯಯನದ ಫಲಿತಗಳು ಮತ್ತು ಸಾದ್ಯತೆಗಳು' ಅಧ್ಯಾಯದಲ್ಲಿ ಮಳೆ ಕಥನವನ್ನು ಕುರಿತ ಈ ಸಂಶೋಧನೆಯು ತನ್ನ ತಾತ್ವಿಕತೆಯನ್ನಾಗಿ ಮಾಡಿಕೊಂಡ ಅಧ್ಯಾಯನವು ಕೈಗೊಂಡಿರುವ ನೆಲೆಗಳನ್ನು, ಮಿತಿಗಳನ್ನು ಹೇಳಿದ್ದು ಮುಂದೆ ವಿಸ್ತೃತವಾದ ಅಧ್ಯಯನಗಳ ಅವಶ್ಯಕತೆಗಳನ್ನು ಕೈಗೊಳ್ಳಬೇಕಾದ ಅನಿವಾರ್ಯತೆಯನ್ನು ಹೇಳಲಾಗಿದೆ.

ಅಧ್ಯಯನ ಅವಶ್ಯಕವಾಗಿ ಸಂಶೋಧನಾಪ್ರಬಂಧದ ವ್ಯಾಪ್ತಿಯು ಅರೆಮಲೆನಾಡನ್ನು ವಿಶೇಷವಾಗಿ ಕೇಂದ್ರೀಕರಿಸಿ ಕರ್ನಾಟಕ ರಾಜ್ಯವನ್ನು ಒಳಗೊಂಡಿದ್ದು, ಅನುಷಂಗಿಕವಾಗಿ ಜಗತ್ತಿನ ಬೇರೆ ಕಡೆಗಳಲ್ಲಿ ಆಚರಣೆಯಲ್ಲಿರುವ ಮಾಹಿತಿಯನ್ನು ಬಳಸಲಾಗಿದೆ.

**ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ,**

ಮನುಷ್ಯನ ಜೀವನಾವರ್ತನದಲ್ಲಿ ಬಹುಮುಖ್ಯ ಲೌಕಿಕ, ಅಲೌಕಿಕ ಆಯಾಮಗಳನ್ನು ಹೊಂದಿರುವ ಮಳೆಯು ಜನಪದರನ್ನು ಕಾಡಿರುವಂತೆ ಮತ್ತ್ಯಾವುದೂ ಕಾಡಿರಲು ಸಾಧ್ಯವಿಲ್ಲ. ಅದರಿಂದಾಗಿ ನಿರ್ಲಕ್ಷಕ್ಕೊಳಗಾದ ಹಾಗೂ ಆಧುನಿಕತೆಯಿಂದಾಗಿ ಮಳೆಯು ಮನುಷ್ಯಪ್ರಜ್ಞೆಯಿಂದ.

ಭಾವುಕತೆಯಿಂದ ದೂರಾಗಿ ಬದುಕಿನಿಂದ ಪ್ರತ್ಯೇಕಗೊಳ್ಳುತ್ತದೆ. ಇಂತಹ ಮಳೆಯನ್ನೇ ಕುರಿತು ಜನಪದರು ಕಟ್ಟಿಕೊಂಡ ಸಾಹಿತ್ಯವನ್ನು ಸಂಗ್ರಹಿಸುವಲ್ಲಿಯೂ ಸರಿಯಾದ ಕಾಳಜಿ ವಹಿಸಿಲ್ಲ ನಾವು. ಆದರೂ ಕೆಲವು ಸಂಘಟನಾಕಾರರು ಮಳೆಸಾಹಿತ್ಯವನ್ನು ಸಂಗ್ರಹಿಸಿರುವುದು ಸೃಷ್ಟಿ ಮಳೆ ಆಚರಣೆಗಳನ್ನು ಕುರಿತು ಪದ್ಮಪ್ರಸಾದ್ 'ಮಳೆ ಒಂದು ಅಧ್ಯಯನ' ಕೃತಿಯನ್ನು ರಚಿಸಿದ್ದಾರೆ. ನೀರನ್ನು ಕುರಿತ ನಾರಾಯಣಸ್ವಾಮಿಯವರ ಸಂಶೋಧನಾ ಪ್ರಬಂಧದಲ್ಲಿ ನೀರಿನ ಮೂಲರೂಪವಾದ ಮಳೆಯನ್ನು ಸಂದರ್ಭಕ್ಕನುಗುಣವಾಗಿ ಅನುಷಂಗಿಕ ಚರ್ಚೆಬಂದಿದೆ. ಉಳಿದಂತೆ ಮಳೆ ಕುರಿತ ಒಂದು ಸಂಶೋಧನ ಪ್ರಬಂಧ ರಚನೆಯಾಗಿಲ್ಲ ಎನ್ನಿಸುತ್ತದೆ. ಈ ನಿಟ್ಟಿನಲ್ಲಿ ಪ್ರಸ್ತುತ ಪ್ರಬಂಧ ಆ ಕೊರತೆಯನ್ನು ನೀಗಿಸುವ ಉದ್ಧೇಶ ಹೊಂದಿದೆ. ಪರಿಸರಪ್ರಜ್ಞೆಯು ವೈಜ್ಞಾನಿಕ ದೃಷ್ಟಿಕೋನದಿಂದ ಸಾಗುತ್ತಾ ಇರುವ ಪ್ರಸ್ತುತ ಸಂದರ್ಭದಲ್ಲಿ ವೈಜ್ಞಾನಿಕತೆಗೆ ನಿಲುಕದ ಮಳೆಯ ಸಹಜ ಪ್ರಕೃತ್ತಿ ತತ್ವದ ನೆಲೆಯಲ್ಲಿ ನಿರೂಪಿಸಿ ಆದಿಮಸಂಸ್ಕೃತಿಯನ್ನು ಗುರುತಿಸಿ ಅಮೂರ್ತವಾದ ಅಂತರ್‌ಸತ್ವ ಗುರುತಿಸುವ ಉದ್ದೇಶ ಪ್ರಸ್ತುತ ಅಧ್ಯಯನಕ್ಕಿದೆ.

ತಳವರ್ಗಗಳು ಸೃಜಿಸಿಕೊಂಡಿರುವ ಮಳೆಕಥನಗಳ ಮೂಲಪ್ರಜ್ಞೆಯು ಪ್ರತಿಭಟನಾತ್ಮಕವಾದುದ್ದು. ಆ ಮೂಲಕ ಆ ವರ್ಗಗಳ ಆದಿಮಪ್ರಜ್ಞೆಯ ವಿರಾಟ್‌ಸ್ವರೂಪವನ್ನು ಗುರ್ತಿಸುವ, ಉದ್ದೇಶ ಪ್ರಸ್ತುತ ಅಧ್ಯಯನಕ್ಕಿದೆ. ಮಳೆ ಕುರಿತಾದ ನಂಬಿಕೆ ಆಚರಣೆಗಳು ಸಾಹಿತ್ಯದಲ್ಲಿ ಸುಪ್ತವಾಗಿ ಹರಿಯುತ್ತಿರುವ ಪ್ರಜ್ಞೆಗಳು ಜಗತ್ತಿನಾದ್ಯಂತ ಸಮನಾಂತರ ಹೋಲಿಕೆಯುಳ್ಳ ಆಶಯವಾಗಿದ್ದು, ಆ ಕಥನಗಳ ಮೂಲಕ ಮಾನವಶಾಸ್ತ್ರಗಳಲ್ಲಿ ಎಲ್ಲಾ ಜನಾಂಗಗಳಲ್ಲಿ ವರ್ಣಪ್ರಜ್ಞೆ ಆಶಯ ಸಾಮ್ಯತೆಗಳಿದ್ದು, ಮೂಲದಲ್ಲಿ ಇವೆಲ್ಲಾ ಜನಾಂಗಗಳಲ್ಲಿ ಏಕತೆ ಇರಬಹುದೆಂದು ಗುರುತಿಸುವ ಉದ್ದೇಶ ಹೊಂದಿದೆ. ಮಳೆ ಕುರಿತ ನಂಬಿಕೆ, ಅಚರಣೆ ಸಾಹಿತ್ಯವು ಕರ್ನಾಟಕ ಅರೆಮಲೆನಾಡಿನ ಭಾಗದಲ್ಲಿ ಸಂಗ್ರಹವಾಗಿದ್ದು, ಕಡಿಮೆ. ಅ ಭಾಗದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಅಲ್ಲಿನ ಸಾಹಿತ್ಯವನ್ನು ಸಂಗ್ರಹಿಸಿರುವುದಲ್ಲದೆ ಆ ಮಾಹಿತಿಗಳನ್ನು ಹೆಚ್ಚು ಬಳಸಿಕೊಂಡು ಅಧ್ಯಯನ ಕೈಗೊಂಡು ಮಾಹಿತಿಯನ್ನು ಸಂಗ್ರಹಿಸುವುದು. ಮಳೆಯನ್ನು ಕುರಿತು ಮಾಹಿತಿಸಂಗ್ರಹಣೆ, ಸಾಹಿತ್ಯಸಂಗ್ರಹಣೆಗಳ ಬಗ್ಗೆ ಕೇವಲ ಹಾಡುಗಳು, ಲೇಖನಗಳು ಮಾತ್ರ ಪ್ರಕಟವಾಗಿವೆ. ಮಳೆ ಕುರಿತು ಸಮಗ್ರ ಸಂಶೋಧನೆ ಅಗತ್ಯವಿದ್ದು ಆ ಕೊರತೆಯನ್ನು ನೀಗಿಸುವಲ್ಲಿ ಈ ಅಧ್ಯಯನವು ಮೊದಲ ಹಾಗೂ ಚಿಕ್ಕ ಪ್ರಯತ್ನವಾಗಿದೆ.

**ಇದುವರೆಗಿನ ಅಧ್ಯಯನಗಳು**

ಮಳೆಯ ಬಗ್ಗೆ ಕನ್ನಡ ಸಂಶೋಧನೆಯಲ್ಲಿ ಜನಪದೀಯವಾಗಿ ಅಧ್ಯಯನ ಮಾಡಿದ ಎಸ್.ಪಿ. ಪದ್ಮಪ್ರಸಾದ್‌ರ 'ಮಳೆ ಒಂದು ಜಾನಪದೀಯ ಅಧ್ಯಯನ' ಎನ್ನುವ ಸಂಶೋಧನಾ ಕೃತಿಯಲ್ಲಿ ಮಳೆ

ಕರೆಯುವ, ತಡೆಯುವ ಆಚರಿಸುವ ಪ್ರಪಂಚದ ನಾನಾ ಕಡೆ ಮಳೆಯ ಕುರಿತು ಇರುವ ನಂಬಿಕೆಗಳನ್ನು ಸವಿವರವಾಗಿ ತಿಳಿಸಿದ್ದಾರೆ. ಸಂಗ್ರಹಾತ್ಮಕ ರೂಪದ ಈ ಕೃತಿಯು ವಿವರವನ್ನು ಒಳಗೊಂಡು ಅಧ್ಯಯನ ಮಾಡುವವರಿಗೆ ಪ್ರಾಥಮಿಕ ಮಾಹಿತಿಯನ್ನು ಒದಗಿಸುತ್ತದೆ.

ಜಲ ಅಗ್ನಿಯನ್ನು ಕುರಿತು ತಾತ್ವಿಕಸಂಘರ್ಷದ ತೌಲನಿಕ ಆಚರಣೆಗಳನ್ನು ನೀಡಿದ ಸಂಶೋಧನಾ ಕೃತಿ ಕೆ.ವೈ. ನಾರಾಯಣಸ್ವಾಮಿಯವರ 'ನೀರದೀವಿಗೆ'. ಸಂಶೋಧನೆಯಿಂದ ಹೊರಬಂದ ಈ ಕೃತಿ ವೈದಿಕ ಮತ್ತು ಆದಿದ್ರಾವಿಡ ಸಂದರ್ಭದ ಪುರುಷ ಮತ್ತು ಸ್ತ್ರೀ ಯಜಮಾನಿಕೆಯ ಪರಿವರ್ತನಾ ಆಲೋಚನಗಳನ್ನು ತಿಳಿಸುವುದರ ಜೊತೆಗೆ ನೀರು, ಅದರ ಮೂಲ ಮಳೆಆಚರಣೆ, ನಂಬಿಕೆ ಗಾದೆ, ಹಾಡು ಇನ್ನು ಮುಂತಾದ ವಿಷಯಗಳ ಕೆಲವು ಒಳನೋಟಗಳನ್ನು ಒಳಗೊಂಡಿದೆ.

ಬಿ.ಎಸ್. ತಲ್ವಾಡಿಯವರ 'ಜಾನಪದ ಕಲರವ' ಎಂಬ ಕೃತಿಯಲ್ಲಿ ಮಳೆಯನ್ನು ಕುರಿತು ಒಂದು ಲೇಖನವು ಜನಪದದಲ್ಲಿರುವ ನಾನಾ ಹೆಸರುಗಳು ಕಾವ್ಯಭಾಗಗಳು, ಗಾದೆಗಳು, ಅಚರಣೆ ಅವುಗಳ ವಿವರಣೆ, ಮಳೆದೇವ ಜೋಕುಮಾರ ಕುರಿತಾದ ಜನಪದ ನಂಬಿಕೆಗಳ ಅಧ್ಯಯನವಿದೆ. ರಾಧಕೃಷ್ಣ ಭಡ್ತಿಯವರ 'ಮೇಘಮೇದಿನಿ' ಮಳೆಯ ಕುರಿತ ಸವಿವರಗಳನ್ನೊಳಗೊಂಡ ಕೃತಿ. ಜನಪದದ ಶಿಷ್ಟ ನೆಲೆಗಳನ್ನೊಳಗೊಂಡ ಹಾಗೂ ಭಾವನಾತ್ಮಕ ಕಥನಗಳನ್ನುಳ್ಳ ಕೃತಿ.

ಎಂ.ಜಿ. ಈಶ್ವರಪ್ಪನವರ ಸಂಶೋಧನಾ ಕೃತಿ ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ, ಜಾನಪದ ಇಬ್ಬನಿಗಳು ಕೃತಿಗಳಲ್ಲಿ ಮಳೆಆಚರಣೆ, ನಂಬಿಕೆ, ಸಂಪ್ರದಾಯ, ಕೃಷಿ ಮತ್ತು ಮಳೆ ಸಂಬಂಧಗಳ ಬಗ್ಗೆ ಆಧಾರಗಳನ್ನು ಪಡೆಯಬಹುದು. 'ಜಾನಪದ ಉತ್ಖನನ' ಎಂಬ ಕೃತಿಯಲ್ಲಿ ಮಂಜುನಾಥ ಬೇವಿನಕಟ್ಟಿಯವರು ಕೆಲವು ಮಳೆ ಸಂಬಂಧಿ ಆಚರಣೆಗಳು ಎಂಬ ಲೇಖನದಲ್ಲಿ ಮಳೆ ಆಚರಣೆಗಳ ಬಗ್ಗೆ ವಿವರಿಸಿದ್ದಾರೆ. 'ಕನ್ನಡ ಜಾನಪದ ಅಧ್ಯಯನ' ಎಂಬ ಲೇಖನಗಳ ಅಡಿ ಮಳೆ ಮತ್ತು ಜಾನಪದ ಬಗ್ಗೆ ಉತ್ತರದೇವಿ ಒಂದು ವಿವೇಚನೆ (ಬಿ.ಪಿ.ರಾಮಯ್ಯ) ಚರ್ಚಿಸಲಾಗಿದೆ.

ಸುವರ್ಣ ಜಾನಪದ ಕೃತಿಯಲ್ಲಿ (ಎಸ್.ಜೆ.ಲಕ್ಕಪ್ಪಗೌಡ) ಸಿದ್ದಲಿಂಗಯ್ಯರವರು ಕೆಲವು ಆರಾಧನೆಗಳು ಮತ್ತು ಆಚರಣೆಗಳು ಎಂಬ ಲೇಖನದಲ್ಲಿ ಕೃಷಿಗೆ ಸಂಬಂಧಿಸಿದ ಆಚರಣೆಗಳನ್ನು ವಿವರಿಸಿದ್ದಾರೆ. ವೀರಣ್ಣದಂಡೆ ಸಂಪಾದಿಸಿರುವ ಜನಪದಕಾವ್ಯ ಪ್ರಥಮವಿಮರ್ಶೆ ಎಂಬ ಕೃತಿಯಲ್ಲಿ ಪುರುಷೋತ್ತಮ ಬಿಳಿಮಲೆಯವರ ಮಳೀಹಾಡು ಪ್ರಥಮವಿಮರ್ಶೆ ಎಂಬ ಲೇಖನವು ಮಳೆಯ ವಿವರಣೆಯನ್ನು ನೀಡುತ್ತದೆ.

'ಜನಪದ ಲೇಖನಗಳು' ಎಂಬ ಮಲ್ಲಿಕಾರ್ಜುನಕಂಬಾರರ ಕೃತಿಯಲ್ಲಿ ಸ್ವಾತಿಮಳೆಯ ರೋಮಾಂಚನಕಾರಿ ಅನುಭವ ಎಂಬ ಲೇಖನದಲ್ಲಿ ಸ್ವಾತಿಮಳೆಯ ಜನಪದ ವಿವರಗಳನ್ನು ಅಧ್ಯಯನಗಳನ್ನು ವಿವರಿಸಿದ್ದಾರೆ. 'ಕೊಡಗಿನ ಸಾಂಸ್ಕೃತಿಕ ಜನಪದ ನೆಲೆಗಳು' ಕೃತಿಯಲ್ಲಿ ಎಂ.ಜಿ. ನಾಗರಾಜ್ ಮಳೆಗಾಲದ ಕೃಷಿಯಹಾಡು ಒಯ್ಯಕಾಕುವ ಲೇಖನದಲ್ಲಿ ಮಳೆಯ ಬಗ್ಗೆ ವಿವರಣೆ ಇದೆ. ಲಂಬಾಣಿಸಂಸ್ಕೃತಿ ಕೆಲವು ಅಧ್ಯಯನಗಳು ಎಂಬ ಕೃತಿಯಲ್ಲಿ ಮಳೆಗೆ ಸಂಬಂಧಿಸಿದ ಆಚರಣೆಗಳ ವಿಷಯಗಳನ್ನು ಗ್ರಹಿಸಬಹುದು.

ಎಂ.ಎನ್.ವಾಲಿಯವರ ಕೃಷಿ ಜಾನಪದ ಕೃತಿಯಲ್ಲಿ ಮಳೆ-ಗಾಳಿ ಎಂಬ ವಿಷಯಗಳ ಕುರಿತು ಚರ್ಚಿಸಲಾಗಿದೆ. ಜಿ.ಆರ್. ತಿಪ್ಪೇಸ್ವಾಮಿಯವರು ಮಳೆಸಂಬಂಧಿ ಅನೇಕ ಪದಗಳನ್ನು ಸಂಗ್ರಹಿಸಿದ್ದಾರೆ. ಕೆ.ಆರ್. ಸಂಧ್ಯಾರೆಡ್ಡಿಯವರು 'ಜನಪದ ಪರಿಶೀಲನಾ' ಕೃತಿಯಲ್ಲಿ ಮೋಡ ಗಾಳಿ ಎಂಬ ಲೇಖನ ಮಳೆಯನ್ನು ಕುರಿತ ಅಧ್ಯಯನವಾಗಿದೆ. ಸ.ಚಿ. ರಮೇಶರವರ 'ಕರಾವು' ಎಂಬ ಕೃತಿಯಲ್ಲಿ ಜಲ; ಪಾರಂಪರಿಕಸಜ್ಞಾನ ಎಂಬ ಲೇಖನದಲ್ಲಿ ಮಳೆ ಮತ್ತು ನೀರು ಸಂಬಂಧಿ ಆಚರಣೆಗಳು ಎಂಬ ವಿಷಯದ ಬಗ್ಗೆ ವಿವರಣೆಯಿದೆ. ಸುವರ್ಣಗ್ರಂಥಮಾಲೆ ಪ್ರಕಟಿಸಿರುವ ಸುವರ್ಣ ಜಾನಪದ ಕಾರ್ಯದಲ್ಲಿ ಮಳೆಗಳನ್ನು ಕುರಿತು ಜನಪದ ಕಾವ್ಯಗಳನ್ನು ಸಂಗ್ರಹಿಸಲಾಗಿದೆ. 'ಕನ್ನಡ ಜನಪದಕಥೆಗಳು' (ಜಿ.ಶಂ.ಪ) ಸಂಗ್ರಹಿಸಿರುವ ಕೃತಿಯಲ್ಲಿ ಮಳೆರಾಯನ ಮಡದಿ ಎಂಬ ಕಥೆಯಿದೆ.

ಮೂಲಗಿ ಆರ್.ಬಿ. ರವರು ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾದ ಸಂಶೋಧನಾ ಕೃತಿ 'ಧಾರವಾಡ ಜಿಲ್ಲೆಯ ಜನಪದ ಸಂಪ್ರದಾಯಗಳು' ಎಂಬ ಕೃತಿಯಲ್ಲಿ ಜಿಲ್ಲೆಗೆ ಸಂಬಂಧಪಟ್ಟ ಮಳೆ ಹಾಗೂ ಜೋಕುಮಾರನ ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳು ಅಧ್ಯಯನ ದೃಷ್ಟಿಯಿಂದ ಗಮನಿಸಬಹುದು. ಸೋಮಣ್ಣನವರ 'ವ್ಯವಸಾಯ ಸಂಬಂಧಿ ಆಚರಣೆಗಳು' ಎಂಬ ಕೃತಿಯಲ್ಲಿ ಜೋಕುಮಾರ ಉತ್ತರಕರ್ನಾಟಕದ ಆಚರಣೆಗಳು, ದಕ್ಷಿಣ ಕರ್ನಾಟಕದ ಆಚರಣೆಗಳು ಕುರಿತು ಲೇಖನ ಬರೆದಿದ್ದಾರೆ. ಜಾನಪದ ಸಾಹಿತ್ಯದರ್ಶನ ಕೃತಿಯ ಸಂಪಾದಕರಾದ ವೃಷಬೇಂದ್ರಸ್ವಾಮಿ ಬರೆದಿರುವ ಜೋಕುಮಾರನ ಕುರಿತ ವಿವರಗಳನ್ನು ಗಮನಿಸಬಹುದು. ಅಲ್ಲಲ್ಲಿ ಹಲವು ಕೃತಿಗಳಲ್ಲಿ ಚದುರಿದ ಲೇಖನಗಳನ್ನು ಬಿಟ್ಟರೆ ಮಳೆಯನ್ನು ಕುರಿತ ಸಮಗ್ರ ಅವಲೋಕನ ಸಿಗಲಾರದು.

ಯಾವುದೇ ಜೀವದ ಜೀವಸೆಲೆ ಮಳೆ ಎಂಬುದನ್ನು ಎಲ್ಲರೂ ಸಾಧ್ಯಾಂತವಾಗಿ ಒಪ್ಪಿಕೊಳ್ಳಬೇಕಾಗಿದೆ. ಈ ಅಧ್ಯಯನದ ರೂಪರೇಷೆಗಳು ನಿಂತಿರುವುದು ಸಂಸ್ಕೃತಿಯ ಚರ್ಚೆಯಲ್ಲಿ ಜನಮೂಲ ಸಂಸ್ಕೃತಿಯ ನಂಬಿಕೆ, ಆಚರಣಾ ತಾತ್ವಿಕತೆ, ಸಂಪ್ರದಾಯಗಳ ಬಗ್ಗೆ ವಿಸ್ತೃತ ಅಧ್ಯಯನ ನಡೆಸಲಾಗುತ್ತದೆ. ಜಲಸಂಸ್ಕೃತಿಯನ್ನು ಇಲ್ಲಿ ಮಾತೃಮೂಲಸಂಸ್ಕೃತಿ ಎಂತಲೂ ಅಗ್ನಿಸಂಸ್ಕೃತಿಯನ್ನು

ಪಿತೃಪ್ರಧಾನ ಸಂಸ್ಕೃತಿಗಳ ಮೂಲಮಾನಗಳನ್ನಾಗಿಸಿಕೊಂಡು ನಿರ್ವಚಿಸಲಾಗುತ್ತದೆ. ಜಲಸಂಸ್ಕೃತಿಯ ಅಥವಾ ಅವೈದಿಕ ಸಂಸ್ಕೃತಿಯ ಮೇಲಾದ ಆಕ್ರಮಣ ಎಂತಹುದು ಹಾಗೂ ಆಕ್ರಮಣದ ನಂತರ ಆ ಸಂಸ್ಕೃತಿ ಒಳಗಾದ ತಲ್ಲಣ ಹಾಗೂ ಬದಲಾವಣೆಗಳೇನು? ಮತ್ತೆ ಆ ಸಂಸ್ಕೃತಿಯ ಮುಖಾಮುಖಿ ಸಂಘರ್ಷದ ನೆಲೆಗಳೇನು? ಅದು ತನ್ನ ಅನನ್ಯತೆಯನ್ನು ಉಳಿಸಿ ಆರ್ಯಸಂಸ್ಕೃತಿಗೆ ಕೊಡಮಾಡಿದ ಕೊಡುಗೆಗಳೇನು? ಪಡೆದ ಕಾಣಿಕೆಗಳೇನು? ಎಂಬುದನ್ನು ಸಾದಾರವಾಗಿ ಅನ್ವೇಷಿಸಲಾಗುತ್ತದೆ. ಯಾವುದೇ ತಾತ್ವಿಕನೆಲೆಗಟ್ಟುಗಳು ಇಲ್ಲದೆಯೇ ಜನಪದರು ಆ ಸಂಸ್ಕೃತಿಯನ್ನು ಹೇಗೆ ಪೋಷಿಸಿಕೊಂಡು ಬಂದಿದ್ದಾರೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಲಾಗುತ್ತದೆ. ಮಳೆಯೂ ಸಹ ನೀರೇ ಆಗಿರುವುದರಿಂದ ಇಲ್ಲಿ ನೀರು ಮತ್ತು ಮಳೆ ಒಂದೇ ಅಸ್ತಿತ್ವದವುಗಳು ಎಂಬಂತೆ ಅಧ್ಯಯನ ಮಾಡಲಾಗುತ್ತದೆ.

**ಸಂಖ್ಯಾ ಟಿಪ್ಪಣಿಗಳು**

೧. ತಿಪ್ಪೇಸ್ವಾಮಿ. ಜಿ.ಆರ್. ಸಂ, ದಕ್ಷಿಣ ಕರ್ನಾಟಕದ ಬೇಸಾಯದ ಹಾಡುಗಳು. ಪುಟ,೭೫

೨. ಕುರುವ ಬಸವರಾಜ. ಜನಪದ ಮಹಾಕಾವ್ಯಗಳ ನಿರ್ಮಾಣ ಪ್ರತಿಭೆಯ ನೆಲೆಗಳು. ಪುಟ.೦೪

೩. ಪುರುಷೋತ್ತಮ ಬಿಳಿಮಲೆ. ಕೂಡುಕಟ್ಟು. ಪುಟ, ೬೫

೪. ರಾಧಾಕೃಷ್ಣ ಭಡ್ತಿ. ಎಸ್ 'ಮೇಘ ಮೇದಿನಿ' ಪುಟ.೧೯

೫. ಪುನರುಕ್ತ : ಪುಟ.೨೧-೨೨

೬. ತಲ್ವಾಡಿ. ಬಿ.ಎಸ್. ಜನಪದ ಕಲರವ. ಪುಟ, ೯೩

೭. ರಾಧಾಕೃಷ್ಣ ಭಡ್ತಿ. ಎಸ್ 'ಮೇಘ ಮೇದಿನಿ' ಪುಟ. ೬೮-೬೯

## ಅಧ್ಯಾಯ. ಎರಡು

# ಜನಪದ ಪರಂಪರೆಯ ಮಳೆ ಸಂಸ್ಕೃತಿಯ ತಾತ್ವಿಕತೆ

ಜನವರ್ಗ ಸೃಜಿಸಿಕೊಂಡ ಸಾಹಿತ್ಯದ ಮೂಲಕ ಜನಜೀವನವನ್ನು ಅರಿಯುವುದು ಹೆಚ್ಚು ಸೂಕ್ತವಾದುದು ಮತ್ತು ಅರ್ಥಪೂರ್ಣವಾದುದು. ಏಕೆಂದರೆ ಸಾಹಿತ್ಯ ಎನ್ನುವುದು ವಿವಿಧ ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡ ಬದುಕಿನ ವ್ಯಾಖ್ಯಾನವೇ ಆಗಿದೆ. ಜೊತೆಗೆ ಜನರು, ವಸ್ತುಗಳು, ಸಮಾಜಗಳು ಮತ್ತು ವಿಚಾರಗಳನ್ನು ಸಾಹಿತ್ಯ ಅನುಕರಿಸುತ್ತದೆ. 'ಚಿತ್ರಿಸುತ್ತದೆ', 'ಪ್ರತಿಧ್ವನಿಸುತ್ತದೆ', 'ಒಳಗೊಳ್ಳುತ್ತದೆ', 'ಪ್ರತಿಬಿಂಬಿಸುತ್ತದೆ' ಹಾಗಾಗಿ ಸಾಹಿತ್ಯಕ್ಕೂ ನಾವು ಬದುಕುವ ಪರಿಸರಕ್ಕೂ ಒಂದು ಬಗೆಯ ಸಂಬಂಧ ಇದ್ದೇ ಇರುತ್ತದೆ. ಸಾಹಿತ್ಯ ಸೃಷ್ಟಿಯ ಹಿಂದೆ ಅನೇಕ ಸಾಮಾಜಿಕ ಪ್ರೇರಣೆಗಳು ಇರುತ್ತವೆ. ಸಮಾಜದಲ್ಲಿ ಸಂಭವಿಸುವ ಘಟನೆಗಳೇ ಸಾಹಿತ್ಯದ ಮುಖ್ಯ ಆಕರ. ಸಾಹಿತ್ಯವು ಸಾಮಾಜಿಕ ಸಂಭವಗಳ ಅನುಕರಣೆ ಮಾತ್ರವಲ್ಲದೆ ಬೇರೇನೂ ಅಲ್ಲ. ಹಾಗಾಗಿ ಸಾಹಿತ್ಯವೆನ್ನುವುದು ಕೂಡಾ ಒಂದು ಸಾಮಾಜಿಕ ಸಂಸ್ಥೆ. ಅದು ಸಮಾಜದ ಚರಿತ್ರೆಯ ದಾಖಲೆ, ಸಾಹಿತ್ಯವು ಸಾಮಾಜಿಕ ಅಭಿವ್ಯಕ್ತಿ ಎಂಬುದು ಹಿರಿಯ ವಿದ್ವಾಂಸರ ಅಭಿಪ್ರಾಯವಾಗಿದ್ದು ಒಪ್ಪತಕ್ಕದಾಗಿದೆ.

ಯಾವುದೇ ಸಮುದಾಯದ ಸಮಷ್ಟೀ ಜೀವನವು ಬಹುನೆಲೆಗಳಲ್ಲಿ ತನ್ನ ವಿರಾಟ್‌ಸ್ವರೂಪವನ್ನು ಕಾಣಿಸಿಕೊಳ್ಳುತ್ತದೆ. ಆದಿಮನೆಲೆಯು ಎಷ್ಟೇ ಪ್ರಬಲ ಬೇರುಗಳನ್ನು ನೆಲೆಯೂರಿಸಿಕೊಂಡಿದ್ದರೂ ಕಾಲಚಲನೆಯ ಹಿನ್ನೆಲೆಯಲ್ಲಿ ತನಗೆ ಒದಗಿ ಬಂದ ಪ್ರಭಾವ ಮತ್ತು ಆಕ್ರಮಣಕಾರೀ ಅಂಶಗಳಿಗೆ ತನ್ನನ್ನು ತೆರೆದುಕೊಳ್ಳುತ್ತದೆ. ಈ ಕಾರಣದಿಂದಾಗಿ ನಂತರದ ವರ್ಗೀಕೃತ, ಶ್ರೇಣೀಕೃತ ಆಯಾಮಗಳು ಜನತೆದಲ್ಲಿ ಹಾಸುಹೊಕ್ಕಾದರೂ ತನ್ನ ಮೂಲಆಶಯಗಳನ್ನದು ಸಂಪೂರ್ಣವಾಗಿ ನೀಗಿಸಿಕೊಳ್ಳಲಾರದು. ಒಂದರ್ಥದಲ್ಲಿ ಜನಪದಸಾಹಿತ್ಯವೇ ಪೂರ್ಣಪ್ರಮಾಣದ ದಲಿತವರ್ಗಗಳ, ದಮನಿತವರ್ಗಗಳಿಂದ ರೂಪುಪಡೆದುಕೊಂಡಿರದಿದ್ದರೂ  ಮುಕ್ಕಾಲು ಭಾಗವೆಲ್ಲಾ ತಳಸಮುದಾಯದ ಕ್ರಮದ ಹಿನ್ನೆಲೆಯನ್ನು ಹೊಂದಿದೆ.

'ಜನಪದಸಾಹಿತ್ಯವೆಂದರೆ ಕೇವಲ ಹಾಡಲ್ಲ. ಅದರಲ್ಲಿ ದೇವರಧ್ಯಾನ ಭಕ್ತಿಚಿಂತನೆಯಷ್ಟೇ ಇರುವುದಿಲ್ಲ. ಧಾರ್ಮಿಕ ಆಚರಣೆ, ನಡೆ, ನುಡಿ, ಕಲೆ, ಸಾಹಿತ್ಯ, ಸಂಗೀತಗಳಲ್ಲದೆ ಅದು ಒಂದು ಜನಾಂಗದ ಸಮಗ್ರಜೀವನದ ಜೀವಂತಚಿತ್ರಣವಾಗಿದೆ. ಪ್ರತ್ಯೇಕ್ಷವಾಗಿ ಮನಸ್ಸಿಲ್ಲಿ ಮೂಡಿ ನಿಲ್ಲಬಲ್ಲ ಚಿತ್ರವಾಗಿದೆ. ಕರುಳತಂತಿಯನ್ನು ಮೀಟಬಲ್ಲ ನಾದಮಾಧುರ್ಯ ಅದರಲ್ಲಿ ಅಡಕವಾಗಿದೆ.

ಜನಸಾಮಾನ್ಯರ ಅಂತರಾಳದಿಂದ ಹೊರಹೊಮ್ಮಿದ ಸಹಜ ಅನುಭವವಾಗಿದೆ. ಒಂದು ನಾಡಿನ ಜನಾಂಗದ ಸಂಸ್ಕೃತಿಯ ಸಮಗ್ರ ಚಿತ್ರಣಕ್ಕೆ ಒಡಿದ ಕನ್ನಡಿಯಾಗಿದೆ'[1] ಎಂಬ ಮಾತು ಉಲ್ಲೇಖನೀಯ.

'ಜನಪದಸಂಸ್ಕೃತಿಯ ಅಭಿವ್ಯಕ್ತಿ ಪ್ರಕಾರಗಳಲ್ಲಿ ಜನಪದಸಾಹಿತ್ಯ ಬಹುಮುಖ್ಯವಾದದ್ದು. ಜಗತ್ತಿನ ಬಹುತೇಕ ಎಲ್ಲ ಅನಕ್ಷರಸ್ಥ ಜನ ಸಮುದಾಯಗಳ ಹಾಗೂ ಶೋಷಿತ ಜನರ ಅನಿಸಿಕೆಗಳನ್ನು ವ್ಯಕ್ತಪಡಿಸುವುದಕ್ಕೆ ಇರುವ ಏಕೈಕ ಮಾಧ್ಯಮವೆಂದರೆ ಕಂಠಸ್ಥ ಸ್ವರೂಪದಲ್ಲಿ ಹರಿದು ಬರುವ ಜನಪದ ಸಾಹಿತ್ಯವೇ ಆಗಿದೆ. ಈ ಸಾಹಿತ್ಯದಸೃಷ್ಟಿಯಲ್ಲಿ ಪುರುಷರಂತೆಯೇ ಸ್ತ್ರೀಯರೂ ಸಹ ತಲೆ ತಲೆಮಾರುಗಳಿಂದಲೂ ಸಮಾನವಾಗಿ ಭಾಗವಹಿಸುತ್ತಾ ಬಂದಿದ್ದಾರೆ. ಅನಕ್ಷರತೆ ಮತ್ತು ಪುರುಷಪ್ರಧಾನ ಸಮಾಜದ ಪ್ರಾಬಲ್ಯದ ಕಾರಣವಾಗಿ ಬಹುತೇಕ ಹಿನ್ನೆಲೆಯಲ್ಲಿಯೇ ಉಳಿದ ಸ್ತ್ರೀಸಂವೇದನೆಗಳನ್ನು ತಿಳಿದುಕೊಳ್ಳಲು ಜನಪದಸಾಹಿತ್ಯ ವಿಶ್ವಾಸಾರ್ಹ ಮಾಹಿತಿಯ ಆಕರ'[2] ಎನ್ನುವಂತೆ ಅದರ ಬಹುಮುಖಿತ್ವವನ್ನು ಕೆಳಸಮುದಾಯದ ಶ್ರಮತತ್ವಕ್ಕೆ ಆರೋಪಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ 'ಜಾನಪದಕ್ಕೂ ದಲಿತರಿಗೂ ಅವಿನಾಭಾವ ಸಂಬಂಧ. ದಲಿತರ ಬದುಕಿನಲ್ಲಿ ಹಾಸುಹೊಕ್ಕಾಗಿ ಬೆರೆತು ಹೋಗಿರುವ ಜಾನಪದ, ಭಾರತೀಯ ಶಿಷ್ಟರ ಬದುಕಿನಲ್ಲಿ ಅಷ್ಟಾಗಿ ಅರಳಲಿಲ್ಲ ಎಂಬ ಸತ್ಯ ನಿಜವಾದ ಜಾನಪದಾಸಕ್ತ ವಿದ್ವಾಂಸರಿಗೆ ತಿಳಿದೇ ಇದೆ. ಮಡಿವಂತಿಕೆಯ ಮಂದಿ ಈ ಮಾತನ್ನು ಒಪ್ಪುವುದಿಲ್ಲ ಆಳುವ ಜನ ಆಳಿಸಿಕೊಳ್ಳುವವರ ಅಹವಾಲನ್ನು ಇತಿಹಾಸದಲ್ಲಿ ಕೇಳಿಸಿ ಕೊಂಡಿರುವುದಿದಯೇ? ಹಾಗೆಂದು ಆಳಿಸಿಕೊಳ್ಳೂವವರು ತಮ್ಮ ಅಹವಾಲನ್ನು, ಅಳಲನ್ನು, ಅನಿಸಿಕೆಯುನ್ನು ಹಂಚಿಕೊಳ್ಳದೆ ಅಸಹಾಯಕರಾಗಿ ಕೈಕಟ್ಟಿ ಕುಳಿತುಕೊಳ್ಳಲಿಲ್ಲ. ಶಿಷ್ಟರ ಮನೆಯ ತೊತ್ತುಗಳಾಗಿ ದುಡಿಯುತ್ತ, ದುಡಿಮೆಯ ಶ್ರಮವನ್ನು ಮರೆಯಲು ಪ್ರತಿಭಟನೆಯ ಕಾವ್ಯಗಳನ್ನು ಕಟ್ಟಿಕೊಂಡರು'[3].

ಹೀಗೆ ಸಾಹಿತ್ಯ ಮತ್ತು ಸಮಾಜದ ಸಂಬಂಧ ಅವಿನಾಭಾವಿಯಾದದ್ದು. ಸಾಹಿತ್ಯ ಸಮಾಜದ ಪ್ರತಿನಿಧೀಕರಣದ ಕನ್ನಡಿಯಾಗಿದೆ. ಹಾಗಾಗಿ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಸಾಮಾಜಿಕ ಚಿತ್ರಣಕ್ಕೂ ಮತ್ತು ವಾಸ್ತವಿಕಸಮಾಜದ ಸ್ವರೂಪಕ್ಕೂ ಸಾಮ್ಯತೆಗಳಿರುವುದು ಕಂಡುಬರುತ್ತದೆ. ಕಾರಣ ಸಾಹಿತ್ಯ ಎಂಬುದು ಸಮಾಜವನ್ನು ಹೊರತುಪಡಿಸಿದ ಸಂಗತಿ ಏನಲ್ಲ. ಹಾಗಾಗಿ ಸಾಹಿತ್ಯದ ಮೂಲಕ ಸಾಮಾಜಿಕ ವಾಸ್ತವಿಕತೆಯನ್ನು ಅರಿಯುವ ಪ್ರಯತ್ನ ಸಮಂಜಸವೆನಿಸುತ್ತದೆ. ಸಾಹಿತ್ಯ ಕಾಲಾತೀತವಾದುದು (Not of an age...) ಅಥವಾ ಕೊನೆಯ ಪಕ್ಷ ಸಾಂಪ್ರದಾಯಿಕ ಮೌಲ್ಯಗಳ ಸಂರಕ್ಷಿಸಿ ಮುಂದಿನ ಕಾಲಕ್ಕೆ ಸಾಗಿಸುವ ಶಕ್ತಿಶಾಲಿ ಮಾಧ್ಯಮ ಎಂದು ಪರಿಗಣಿಸುವುದುಂಟು.... ಸಾಮಾನ್ಯವಾಗಿ ಸಾಹಿತ್ಯವು ಆಯ್ದ ಜನಗಳೊಡನೆ ಸಂಪರ್ಕ ಹೊಂದಿರುತ್ತದೆ ಹಾಗಾಗಿ ಜನರ

ಸಾಂಪ್ರದಾಯಿಕ ಮೌಲ್ಯಗಳನ್ನು ಕೊಂಡೊಯ್ಯುವ ವಾಹಕವಾದ ಸಾಹಿತ್ಯಿಕ ಆಕರಗಳ ಆಧಾರದ ಮೇಲೆಯೇ ಈ ಅಧ್ಯಾಯದಲ್ಲಿ ಕೆಲವು ವಿಚಾರಗಳನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಜನಪದಸಾಹಿತ್ಯವನ್ನು ಕುರಿತ ಅಧ್ಯಯನಗಳು ಬಹು ಆಶಾವಾದಿ ಹಾಗೂ ಭಾವನಾತ್ಮಕ ನೆಲೆಗಳಲ್ಲಿಯೇ ಸಾಗುತ್ತವೆ. ದಮನಿತವರ್ಗಗಳು ತಮ್ಮ ಪಾಡನ್ನು ವ್ಯಷ್ಟಿ ನೆಲೆಯಲ್ಲಿ ಕಾಣಿಸಿದ್ದರೂ ಅದು ಸಮಾಜದ ಆಸ್ತಿಯೆಂಬಂತೆ ಬಿಂಬಿಸಲಾಗುತ್ತದೆ. ನಿಜವಾಗಿಯೇ ಕಥನಗಳು ಎನ್ನುವ ಮೂಲಧಾತುವನ್ನು ತನ್ನ ಕೇಂದ್ರಪ್ರಜ್ಞೆಯಲ್ಲಿ ಸುತ್ತ ಅಮೂರ್ತವಾಗಿರಿಸಿಕೊಂಡಿತ್ತೋ ಅವನ್ನ ಸಂಭ್ರಮದ ಭೂಮಿಕೆಯನ್ನಾಗಿ ಮಾಡಿಕೊಂಡು ನಾವು ಅಧ್ಯಯನ ಮಾಡುತ್ತಿದ್ದೇನೆ. ಸಂಸ್ಕೃತಿ ಹಾಗೂ ಸಮುದಾಯಗಳಿಗೆ ಸಂಘರ್ಷಗಳು ಏರ್ಪಾಡುವುದು ಸಹಜವೇ. ಯಾವುದೇ ವೃತ್ತಿ ಸಮುದಾಯವೂ ತಮ್ಮನ್ನು ಹೊಲೆಯರು, ಅಸ್ಪೃಶ್ಯರು ಎಂಬುದನ್ನು ಸಾತ್ವಿಕವಾಗಿಯೇ ಸಹಿಸಲಾರದು ಅದನ್ನು ಅವರು ಭೌತವಾದಿ ನೆಲೆಗಳಲ್ಲಿ ಕಾಣಿಸಿಕೊಳ್ಳುತ್ತಾರೆಂಬುದು ಸ್ಪಷ್ಟ.

'ಜಾತಿಯೊಳು ಮಾದಾರನು ನೀತಿಯೊಳು ಶಿವಶರಣ

ಮಾತು ವಚನಗಳು ಚನ್ನಯ್ಯ । ಶಿವನುಂಡ

ಕೂತು ಎಡೆಯೊಳಗೆ ಅಂಬಲಿಯ'[೪]

ಮೌಖಿಕ ಆಕರಗಳ ಆಧಾರದ ಮೇಲೆಯೆ ರೂಪಪಡೆಯುತ್ತಿರುವ ಈ ಅಧ್ಯಾಯದಲ್ಲಿ ನೇರವಾಗಿ ಕ್ಷೇತ್ರದಲ್ಲಿ ಸಂಗ್ರಹಿಸಿರುವ ಸಾಹಿತ್ಯಕ್ಕಿಂತ ಹೆಚ್ಚಾಗಿ ಈಗಾಗಲೇ ಸಂಗ್ರಹಗೊಂಡ ಮೌಖಿಕ ಆಕರಗಳಲ್ಲಿ ಕೃಷಿ ಸಂಬಂಧಿ ಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಜಾನಪದ ಬದುಕಿನಿಂದ ದೂರವಾದುದಲ್ಲ, ಬೇರೆಯಾದುದೂ ಅಲ್ಲ. ಒಂದರೊಳಗೊಂದು ಬೆರೆತು ಒಂದು ವಿಶಿಷ್ಟ ಸ್ವರೂಪವನ್ನು ಪಡೆದುಕೊಂಡಿದೆ... ಮೌಖಿಕಸಾಹಿತ್ಯ ಅಥವಾ ಜನಪದಸಾಹಿತ್ಯ ಎಂದು ಕರೆಯಲ್ಪಡುವ ಸಾಹಿತ್ಯ ಜಾನಪದದ ಒಂದು ಪ್ರಕಾರ ಜನಪದರಿಂದ ಮೌಖಿಕರೂಪದಲ್ಲಿ ರಚನೆಗೊಂಡ ಪ್ರಕಟಿತ ಅಥವಾ ಅಪ್ರಕಟಿತ ರೂಪದಲ್ಲಿರುವ ಸಾಹಿತ್ಯವನ್ನು ಜನಪದಸಾಹಿತ್ಯ ಎಂದು ಕರೆಯಲಾಗುತ್ತದೆ. ಜನಪದಸಾಹಿತ್ಯ, ಕಥೆ, ಗಾದೆ, ಗೀತೆ, ಒಗಟು, ಒಡಪು, ಲಾವಣಿ, ಕಥನ ಕವನ, ಖಂಡಕಾವ್ಯ, ಮಹಾಕಾವ್ಯ, ಐತಿಹ್ಯ, ಪುರಾಣ ಹೀಗೆ ಮುಂತಾದ ರೂಪದಲ್ಲಿರುತ್ತದೆ. ಜನಪದಸಾಹಿತ್ಯ ಎಂಬುದು ಜನರ ನಿತ್ಯಜೀವನದ ನೋವು ನಲಿವಿನ ಸಂಗತಿಗಳನ್ನು ದಾಖಲಿಸಿಕೊಂಡ ಆಕರವೇ ಆಗಿದೆ. ಈ ಕುರಿತು ಅನೇಕರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವುದು ಕಂಡು ಬರುತ್ತದೆ.

'ಹರನೊಲಿದ ಜಾತಿಯೇ ವರ ಜಾತಿ ಜಗದೊಳಗೆ

ಮರಮಾತು ಏಕೆ ನಡೆಮೊದಲು । ಹೋಗೋಣ

ಹರನ ಬಳಿಯಿದನು ಅರಿಯುದಕೆ'[೫]

'ಜನಪದಸಾಹಿತ್ಯ ನಮ್ಮ ಬದುಕಿನ ಜೊತೆಗೆ ಹುಟ್ಟು ಪಡೆದಂತಹದ್ದು. ಬದುಕು ಬೇರೆ ಈ ಸಾಹಿತ್ಯ ಬೇರೆ ಅಲ್ಲ. ಬದುಕಿನ ಜೊತೆಗೆ ಸೃಷ್ಟಿಗೊಳ್ಳುವ ಮಾನವ ಬದುಕನ್ನೇ ದಾಖಲಿಸುವ ಕೆಲಸ ಈ ಸಾಹಿತ್ಯ ಮಾಡುತ್ತದೆ. ಹೀಗೆ ಬದುಕಿನ ಅಂಗವಾಗಿ ಬದುಕನ್ನು ದಾಖಲಿಸುವ ಕೆಲಸ ಮಾಡುವ ಇದು ಮಾನವ ಬದುಕಿನ ಬಹುದೊಡ್ಡ ಸಾಂಸ್ಕೃತಿಕ ಕೊಡುಗೆಯೇ ಆಗಿದೆ'[೬] ಎಂದಿರುವರು. ಅಲ್ಲದೆ, 'ಮಾನವ ಬದುಕಿನ ಬಹುಮುಖ್ಯ ಶೋಧಗಳಲ್ಲಿ ಒಂದಾಗಿರುವ ಜನಪದ ಸಾಹಿತ್ಯಕ್ಕೆ ಸಹಜವಾಗಿಯೇ ಒಂದು ಖಚಿತವಾದ ಸಾಂಸ್ಕೃತಿಕ ದೃಷ್ಟಿ ಇರಲು ಸಾಧ್ಯವಿದೆ. ಬದುಕಿನ ಜೊತೆಗೆ ಬೆರೆತುಕೊಂಡ ಈ ಸಾಹಿತ್ಯದ ದೃಷ್ಟಿಯನ್ನು ನಿಯಂತ್ರಿಸುವುದು ಸಹಜವಾಗಿಯೇ ಮಾನವ ಬದುಕೇ ಆಗಿರುತ್ತದೆ. ನಮ್ಮ ಬದುಕು ಏನಿದೆಯೋ, ಬದುಕು ಏನನ್ನು ಗ್ರಹಿಸಲು ಸಾಧ್ಯವೋ ಅದನ್ನೇ ಜನಪದಸಾಹಿತ್ಯ ಗ್ರಹಿಸಿಕೊಳ್ಳಲು ಸಾಧ್ಯ'[೭] ಈ ಕ್ರಮದಲ್ಲಿ ಅಧ್ಯಯನಗಳು ನಡೆಯಬೇಕಾದ ಅಗತ್ಯವೂ ಕೂಡ ಇದೆ.

'ಶಿಷ್ಟಸಾಹಿತ್ಯದಂತೆ ಜನಪದಸಾಹಿತ್ಯವು ಚಾರಿತ್ರಿಕ ಉತ್ಪಾದನೆಯಾಗಿದೆ. ಮಹಿಳಾ ಜನಪದಸಾಹಿತ್ಯವು ನಿರ್ದಿಷ್ಟವಲ್ಲದಿದ್ದರೂ ಸ್ಥೂಲವಾಗಿ ಚಾರಿತ್ರಿಕ ಸನ್ನಿವೇಶಗಳನ್ನು ಸಾಮಾಜಿಕ ನಂಬಿಕೆ, ಆಚರಣೆಗಳ ಮೂಲಕ ಕಟ್ಟಿಕೊಡುತ್ತದೆ. ಜನಪದಸಾಹಿತ್ಯಕ್ಕೆ ಸಂವಹನಾ ಸ್ವರೂಪವಿದೆ. ಹೀಗಾಗಿ ಅದು ತಾನು ರೂಪಗೊಂಡ ಹಾಗೂ ರೂಪಗೊಳ್ಳುತ್ತಿರುವ ಸಾಂಸ್ಕೃತಿಕ ಪರಿಸರವನ್ನು ವಿವರಿಸುತ್ತದೆ. ಜನಸಾಮಾನ್ಯರ ಸಂಸ್ಕೃತಿಯ ವಾಹನವಾದ ಜನಪದಸಾಹಿತ್ಯವು ಮಹಿಳೆಯರನ್ನು ಹಾಗೂ ಅವರ ಬದುಕನ್ನು ಹೇಗೆ ಪ್ರತಿನಿಧೀಕರಿಸಿದೆ ಎನ್ನುವುದನ್ನು ವಿಶ್ಲೇಷಿಸುವ ಜರೂರಿದೆ'[೮] ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟುವ ನೆಲೆಗಳು, ಬಳಸಬೇಕಾದ ಆಕರಗಳು ರಚನಾಶಿಸ್ತು ಆಕರಗಳ ಬಳಕೆಯನ್ನು ನಾವು ಜನಪದ ಕಥನಗಳಿಂದಲೇ ಹೆಕ್ಕಿ ತೆಗೆಯಬೇಕಾಗಿರುತ್ತದೆ. ಭಾವನಾತ್ಮಕ ಏಕಸ್ವರೂಪ ಆದರ್ಶವಾದದ ಚರಿತ್ರೆಯು ಕೋಮುವಾದದ ಕಾರ್ಯವನ್ನು ಹೊರತುಪಡಿಸಿ ವಿಶ್ವಾತ್ಮಕವಾಗಬಹುದಾದ ಸಮಾಜದ ಸಾಮಾನ್ಯ ವರ್ಗದವರನ್ನೂ ಒಳಗೊಳ್ಳುವ ಚರಿತ್ರೆಯೇ ರಚನೆಯಾಗಬೇಕೆಂಬುದೇ ಕಥಾನಕಗಳ ಹಿಂದಿರುವ ಒತ್ತಡವಾಗಿರುತ್ತದೆ.

ನಿಜ ಜನಪದಸಾಹಿತ್ಯ ಎಲ್ಲಿಂದಲೋ ದಿಢೀರನೆ ಉದ್ಭವಿಸಿದ್ದಲ್ಲ. ಜನಪದರು ತಮ್ಮ ಬದುಕಿನಲ್ಲಿ ಕಂಡುಂಡ ಅನುಭವವನ್ನು ಹಾಡಾಗಿಸಿದ್ದಾರೆ. ಕಥೆಯಾಗಿಸಿದ್ದಾರೆ. ಪುರಾಣವಾಗಿಸಿದಾರೆ ಇತ್ಯಾದಿ. ಹಾಗಾಗಿ ಜನ ಸಾಮಾನ್ಯರ ಅಭಿವ್ಯಕ್ತಿ ಪ್ರಕಾರಗಳಲ್ಲಿ ಜನಪದಸಾಹಿತ್ಯ ಪ್ರಮುಖವಾದದ್ದು. ಶಿಷ್ಟ

ಸಾಹಿತ್ಯಕ್ಕಿಂತಲೂ ಭಿನ್ನವಾಗಿದ್ದು ಈ ಮೌಖಿಕಸಾಹಿತ್ಯದಲ್ಲಿ ಧ್ವನಿ ಇಲ್ಲದವರ ದನಿಯ ಆಲಾಪನೆಗಳು ಕೇಳಿ ಬರುತ್ತದೆ. ಬಹುಪಾಲು ಅನಕ್ಷರಸ್ಥ ಜನರು, ದುಡಿಯುವ ಜನರು ಹೇಳಿಕೊಂಡ ಸಾಹಿತ್ಯವೇ ಮೌಖಿಕ ಸಾಹಿತ್ಯವಾಗಿದ್ದರಿಂದ ಅವರೇ ಹೇಳಿಕೊಂಡ ಈ ಸಾಹಿತ್ಯದಲ್ಲಿ ಅವರ ಬದುಕಿನ ಹಲವು ಹತ್ತು ಸಂಗತಿಗಳು ಹಾಸುಹೊಕ್ಕಾಗಿರುವುದರಿಂದ ಜನಸಾಮಾನ್ಯರ ಬದುಕಿನ ಬಗೆಗೆ ಅಧ್ಯಯನ ಮಾಡಬೇಕಾದ ಸಂದರ್ಭದಲ್ಲಿ ಮೌಖಿಕ ಆಕರಗಳು ಬಹುಮುಖ್ಯ ಪಾತ್ರವನ್ನು ವಹಿಸುತ್ತವೆ.

> 'ಹೊಲಸು ತಿಂಬುವ ಹೊಲಯ ಹೊಲಬಿಲ್ಲದವ ಹೊಲಯ
> 
> ನೆಲೆಸಲ್ಲುಸಿನುಡಿಯು ಎದೆಯೊಳಗೆ । ಹೊಲೆಯರಸ
> 
> ಹೊಲೆಯರೆನ್ನುವರೆ ಶರಣರ'[೯]

'ಶ್ರೇಣೀಕೃತ ಸಮಾಜದಲ್ಲಿ ಇಂದಿಗೂ ಸವರ್ಣೀಯರ ಶೋಷಣೆಗೆ ಒಳಗಾಗಿರುವ ಹಾಗೂ ಅವರಿಂದ ದೂರವಾಗಿಂಯೇ ಉಳಿದಿರುವ ಜೀವನ ನಡೆಸುತ್ತಿರುವ ಮಾದಾರರ ಅನುಭವ ಮೂಸೆಯಿಂದ ಮೂಡಿದ ಸಾಹಿತ್ಯ ವೈವಿಧ್ಯಮಯವಾದುದ ಹಾಗೂ ಸಮೃದ್ಧವಾದುದು. ಅನಕ್ಷರಸ್ಥರಾದ ಇವರು ತಮ್ಮ ಕಷ್ಟ ಸುಖ ಆಸೆ- ಆಕಾಂಕ್ಷೆ ಏರು ಪೇರು ಇತಿಮಿತಿ ಜೀವನದ ಎಲ್ಲಾ ಅನುಭವ ಅನಿಸಿಕೆಗಳನ್ನೂ ತಮ್ಮ ಹಾಡುಗಳಲ್ಲಿ ಅಭಿವ್ಯಕ್ತಿಸಿದ್ದಾರೆ'[೧೦].

ಪ್ರಸ್ತುತ ಅಧ್ಯಯನದ ತಾತ್ವಿಕತೆಯು ತಳಸಮುದಾಯಗಳು ಕಟ್ಟಿಕೊಂಡ ಕಥನಗಳ ಮುಖಾಂತರ ವಾಸ್ತವ ಬಹುಮುಖೀಯ ಮೌಲ್ಯಗಳನ್ನು ಪ್ರತಿಪಾದಿಸುತ್ತಾ ತಮ್ಮ ಚರಿತ್ರೆಗಳನ್ನು ಅಮೂರ್ತರೂಪದಲ್ಲಿ ನೆಲೆಯಾಗಿಸುತ್ತಲೇ ಮುಖ್ಯವಾಹಿನಿಗೆ ಕಾತರಿಸುತ್ತಲೇ ವಿರೋಧಿನೆಲೆಗಳನ್ನು ಪ್ರತಿಭಟಿಸುವ ಕ್ರಮಗಳ ಸೈದ್ಧಾಂತಿಕತೆಯಾಗಿದೆ. ಈ ಪ್ರಕ್ರಿಯೆಯು ಪ್ರಮುಖವಾಗಿ.....

- ಕಥನಗಳು ರೂಪಿಸಿರುವ ಗತದ ಸುಪ್ತಸಂಗತಿ ವರ್ತಮಾನ ಬದುಕಿನ ರೂಕ್ಷತೆ ಮತ್ತು ಭವಿಷ್ಯತ್ತಿನ ಮುಖ್ಯವಾಹಿನಿಯ ಆಶಯ.
- ವಕ್ತೃ ರೂಪಿಸುವ ಚಲನಾತ್ಮಕ ಹಾಗೂ ಸಂಚಲನಾತ್ಮಕ ಮೌಲ್ಯಾಶಯಗಳು ಸಮುದಾಯದ ಆದಿಮಪ್ರಜ್ಞೆಯನ್ನು ಮುಂಗಾಣಿಸುವ ಭವಿಷತ್ ದೂರದೃಷ್ಠಿತ್ವದ ಹೊಳಹುಗಳು.
- ಈ ತಳಸಮುದಾಯಗಳು ಅಮೂರ್ತತೆಯಲ್ಲಿಯೇ ಏಕೆ ಅನನ್ಯತೆಯನ್ನು ಕಾಪಾಡಿಕೊಂಡಿವೆ ಎನ್ನುವುದರ ಗುಪ್ತಗಾಮಿತ್ವ ಇದು ತನ್ನೆದುರಿನ ವಿರೋಧಿಯನ್ನು ಎದುರಿಸುತ್ತಲೇ ಮುಂಬರುವ ಶತ್ರುವನ್ನು ಗಮನದಲ್ಲಿಟ್ಟುಕೊಂಡು ಕಾರ್ಯತಂತ್ರ ರೂಪಿಸುತ್ತದೆ.

ದಲಿತಜಾನಪದವು ನಿರ್ಮಾಣಗೊಂಡಿದ್ದೇ ದ್ರಾವಿಡ ಪಶುಪಾಲಕರು ಮತ್ತು ಬೇಸಾಯಗಾರರು ಸಮೀಕರಣಗೊಂಡಿದ್ದರಿಂದ. ದ್ರಾವಿಡನಾಡುಗಳಿಗೆ ವಲಸೆ ಬಂದ ಕುರುಬ, ಗೌಡ, ಗೊಲ್ಲ, ಬೇಡ ಮೊದಲಾದ ಬೇಟೆಗಾರ ಪಶುಪಾಲಕ ಅರೆಕೃಷಿಕ ದ್ರಾವಿಡಜನ ವಿಭಾಗಗಳು ಇಲ್ಲಿಯ ಮೂಲ ಕೃಷಿಕರಿಂದ ಬೇಸಾಯವನ್ನು ಪಡೆದರು. 'ಪ್ರಕ್ರಿಯೆ ಒಂದೇ ಭಾರಿಗೆ ನಡೆಯದೆ ಹಂತ ಹಂತವಾಗಿ ಘಟಿಸಿರುವಂತಹದ್ದಾಗಿದೆ. ಅಖಿಲ ಭಾರತವನ್ನು ದಕ್ಷಿಣದ್ರಾವಿಡ ರಾಜ್ಯಗಳಲ್ಲಿರುವ ಅಮ್ಮನ ಆರಾಧನೆಯಿಂದಾಗಿ ಎರಡು ಘಟಕಗಳನ್ನಾಗಿ ವಿಂಗಡಿಸಬಹುದಾಗಿದೆ. ಒಂದು ಹೊಲೆಮಾದಿಗ ಕೃಷಿಮೂಲದ ಸಂಸ್ಕೃತಿ ಇನ್ನೊಂದು ಉಳಿದೆಲ್ಲ ದ್ರಾವಿಡಜಾತಿಗಳ ವಲಸೆಗಾರ ಕುಮ್ರಿ ಬೇಸಾಯಗಾರ ಪಶುಪಾಲಕ ಸಂಸ್ಕೃತಿ'[೧೧]. ಸಾಹಿತ್ಯವನ್ನು ಶಿಷ್ಟ ಮತ್ತು ಜನಪದ ಎಂದು ವಿಭಾಗಿಸಿ ನೋಡಿಕೊಂಡು ಬಂದ ಕ್ರಮ ನಮ್ಮಲ್ಲಿ ರೂಢಿಯಲ್ಲಿದೆ. ಈ ವಿಭಾಗೀಕರಣಗಳು ಏನೇ ಇದ್ದರೂ ಅಂತಿಮವಾಗಿ ಸಾಹಿತ್ಯ ಸಾಮಾಜಿಕ ರಚನೆಯೇ ಆಗಿದೆ. ಹಾಗಾಗಿ ಮೇಲೆ ಚರ್ಚಿಸಿದ ಸಂಗತಿಗಳೆಲ್ಲ ಶಿಷ್ಟ ಸಾಹಿತ್ಯಕ್ಕೂ, ಮೌಖಿಕ ಸಾಹಿತ್ಯಕ್ಕೂ ಅನ್ವಯಿಸುವಂತ ವಿಚಾರಗಳೇ ಆಗಿವೆ. ಆದರೆ ಈ ಅಧ್ಯಯನವನ್ನು ಜಾನಪದಕ್ಕೆ ಮಾತ್ರ ಸೀಮಿತಗೊಳಿಸಿಕೊಂಡಿರುವ ಕಾರಣ ಮೌಖಿಕಸಾಹಿತ್ಯದ ಕಡೆಗೆ ಮಾತ್ರ ಹೆಚ್ಚು ಗಮನಹರಿಸಲಾಗಿದೆ. ಜಾನಪದ ಅಧ್ಯಯನ ಕ್ಷೇತ್ರದಲ್ಲಿ ಜನಪದ ಸಂಗ್ರಹದ ಕೆಲಸ ಸಾಕಷ್ಟಾಗಿದೆ. ಆದರೆ ಆ ಸಂಗ್ರಹಿತ ಪಠ್ಯಗಳ ವಿಶ್ಲೇಷಿಸುವ ಮತ್ತು ನಿರ್ವಹಿಸುವ ಪ್ರಯತ್ನಗಳು ನಡೆದಿವೆಯಾದರೂ ತುಂಬಾ ವಿರಳ. ಅಕಾಡೆಮಿಕ್ ವಲಯದಲ್ಲಿ ಲಿಖಿತ ಆಕರಗಳಿಗೆ ದೊರೆತ ಆದ್ಯತೆ ಮತ್ತು ಮಾನ್ಯತೆಗಳು ಮೌಖಿಕ ಆಕರಗಳಿಗೆ ದೊರೆತಿಲ್ಲ. ಆದರೆ ಇತ್ತೀಚಿಗೆ ಮೌಖಿಕ ಆಕರಗಳು ಕೂಡಾ ಸಂಸ್ಕೃತಿಯ ದೊರೆತಿಲ್ಲ. ಆದರೆ ಇತ್ತೀಚಿಗೆ ಮೌಖಿಕ ಆಕರಗಳು ಕೂಡಾ ಸಂಸ್ಕೃತಿವಾಹಕಗಳು ಎಂಬ ಸತ್ಯವನ್ನು ಮನಗಂಡಿರುವುದ ರಿಂದ ಯಾವುದೇ ಸಮುದಾಯದ ಸಂಸ್ಕೃತಿಯ ವಿಸ್ತೃತಿಗಳನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಮೌಖಿಕ ಆಕರಗಳು ಮುಖ್ಯವೆನಿಸತೊಡಗಿವೆ.

ದಲಿತಜಾನಪದದ ವಿಷಯಗಳನ್ನು ಗಮನಿಸಿದಾಗ ಹೊಲೆಮಾದಿಗರೆ ಈ ನೆಲದ ಮೂಲ ಕೃಷಿಕರಾಗುವ ಮುನ್ನ ಅವರು ಬೇಟೆಗಾರರು ಕೃಷಿಕರಾಗಿರುವುದರಿಂದಲೇ ಅವರು ತಂತ್ರದ ಕಡೆ ವಾಲಿದರು. ಮೂಲತಃ ಶಾಕ್ತರಾಗಿರುವ ಇವರು ಯೋನಿ ಪೂಜಕರಾಗಿದ್ದರು. ಇವರಲ್ಲಿ ಮಾತೃಪ್ರಧಾನ ಕುಟುಂಬವ್ಯವಸ್ಥೆ ಇತ್ತು. ಎರಡನೆಯ ಹಂತದ ಪಶುಪಾಲಕರಾಗದ್ದ ದ್ರಾವಿಡರು ದಕ್ಷಿಣಕ್ಕೆ ವಲಸೆ ಬಂದರು. ಹಾಗೆ ವಲಸೆ ಬಂದ ನಂತರ ಕೃಷಿಕರಾಗಿ ಮಾರ್ಪಟ್ಟರು. ಹೊಲೆಮಾದಿಗರೊಂದಿಗೆ ಒಂದು ಬಗೆಯ ಸಮನ್ವಯವನ್ನು ಏರ್ಪಡಿಸಿಕೊಡರು. ಇವರು ಶಿಶ್ನಾರಾಧಕರು ಸಿದ್ಧಪರಂಪರೆಯವರು. ಮೂರನೆಯ ಹಂತದಲ್ಲಿ ವೈದಿಕರ ಪ್ರವೇಶ. ಪುರುಷಪ್ರಧಾನ ಚಿಂತಕರಾದ ಇವರ ಪ್ರವೇಶದಿಂದ ಜಾತಿವರ್ಗಗಳು ಕಾಣಿಸಿಕೊಂಡವು'[೧೨]. ಯಾವ ವರ್ಗಗಳ ಶ್ರೇಣೀಕೃತವ್ಯವಸ್ಥೆಯಲ್ಲಿ ನಿಯಂತ್ರಿತಜೀವನ

ಸಾಗಿಸುತ್ತಿದ್ದಾರೆಯೋ ಅಂತವು ಶ್ರಮಪತ್ರವನ್ನೇ ನೆಚ್ಚಿಕೊಂಡಿರುತ್ತದೆ. ಕಾಯಕ ಅದಕ್ಕೆ ಬೋಧನೆಯಿಂದ ಬಂದಿದ್ದಲ್ಲ. ಅವರಿಗದು ಬದುಕಾಗಿಯೇ ಒದಗಿ ಬರುತ್ತದೆ. ಸಾಹಿತ್ಯವೆನ್ನುವುದು ಆಗ ಶ್ರಮ ನಿವಾರಣೆಗೆ ಸಹಾಯಕವಾಗಿ ಒದಗಿ ಬರದೆ ತನ್ನ ನೋವಿನಧಾತುವನ್ನು ಹಾಡುಗಳಲ್ಲಿ ಸಮೀರಿಸಿಕೊಂಡು ಅದಕ್ಕೊಂದು ವ್ಯವಸ್ಥೆಯ ವಿರುದ್ದವಾದ ಪ್ರತಿಭಟನಾತ್ಮಕವಾದ ನಂಟನ್ನು ಅಂಟಿಸಿರುತ್ತಾರೆ.

ದುಡಿಮೆಯ ಹೊರತಾದ ಯಾವುದೇ ಪುಂಡಾಟಿಕೆಯನ್ನು ನಾಶಮಾಡುವ ಸಾಮಾಜಿಕ, ನೈತಿಕತೆಯನ್ನು ಧಿಕ್ಕರಿಸುವ ಮೊದಲು ಕ್ರಿಯೆಗಳ ಯಾವುದೇ ಪ್ರತೀತವನ್ನಾದರೂ ನಾಶಮಾಡುವ ದುರ್ಷ್ಯತೆಯನ್ನು ತೋರುತ್ತಾರೆ. ಮಳೆದೈವವಾದ ಜೋಕುಮಾರನನ್ನು ಈ ನೆಲೆಯಲ್ಲಿಯೇ ನಿರ್ವಚಿಸಬಹುದು. 'ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೊಂದಿದೆ. ಜೋಕುಮಾರ ಫಲ ಸಮೃದ್ಧಿಯ ದೇವತೆಯಾದ್ದರಿಂದ, ಸಮೃದ್ಧವಾದ ಫಲದ ಉತ್ಪನ್ನವುಳ್ಳ ಆಳುವ ವರ್ಗದ ಪರ ನಿಂತ ದೇವರು. ಆಳುವ ವರ್ಗದ ಪುಂಡಾಟಿಕೆಯಂತೆಯೇ ಈ ದೇವರೂ ಪುಂಡಾಟಿಕೆ ಆರಂಭಿಸಿ ಅತ್ಯಾಚಾರಕ್ಕಿಳಿದ. ಇದರಿಂದ ರೋಸಿಹೋದ ಜನ ಸಂಘಟಿತರಾಗಿ ವ್ಯವಸ್ಥೆಯ ವಿರುದ್ಧ ತಿರುಗಿಬಿದ್ದು ಮುಗಿಸಿದರು. ಇಲ್ಲಿ ಎರಡು ಕಾರಣಗಳು ಸ್ಪಷ್ಟವಾಗಿವೆ. ಪುಂಡಾಟಿಕೆ ಮತ್ತು ದುಡಿಮೆಯ ದಕ್ಕದ ಫಲ, ಇವೆರಡು ಅತಿಯಾದಾಗ ನಿಜವಾಗಲೂ ಪ್ರತಿಭಟನೆ ಶುರುವಾಗುತ್ತದೆ. ಬಹುಶಃ ಇಂಥ ಬಂಡಾಯ ಮನೋಭಾವ ಇಡೀ ಜನಪದ ಸಾಹಿತ್ಯದಲ್ಲೇ ಅಪರೂಪವಾದದ್ದು'[೧೩]

'ಭೀಕರ ಬರಗಾಲ ಬಂದಾಗ ರಚನೆಯಾಗಿರುವ ಮಳೆರಾಜನ ಹಾಡು ಕೂಡ ಸಶಕ್ತವಾಗಿ ಬಂಡಾಯ ಧೋರಣೆಯನ್ನು ಅಭಿವ್ಯಕ್ತಿಸುವ ಹಾಡು, ಜನಪದ ಗೀತೆಗಳಲ್ಲಿ ಸಾಮಾನ್ಯವಾಗಿ ಕಾಣುವ ವಿಧಿ, ಹಣೆಬರಹ, ಹಿಂದಿನ ಜನ್ಮದ ಪಾಪ ಮುಂತಾದ ನಿರಾಶವಾದ ಕಾಣದೆ ಹೊಸ ಸಮಾಜ ನಿರ್ಮಿತವಾಗಲಿ ಎಂಬ ಆಶಯ ಎದ್ದು ಕಾಣುತ್ತದೆ. ಭೀಕರ ಬರಗಾಲದಲ್ಲಿ ಜನ ಮಕ್ಕಳನ್ನು ಮಾರಿ, ರೊಕ್ಕ ಹಿಡಿದುಕೊಂಡು ಭತ್ತ, ಹುಡುಕಿಕೊಂಡು, ಅಲೆಯುವ ಪರಿಸ್ಥಿತಿಯಲ್ಲಿ ಸಿರಿವಂತವರ್ಗ ಬಡಜನತೆಯ ಆಹಾರದಲ್ಲಿ ಸುಣ್ಣ ವಿಷಗಳನ್ನು ಸೇರಿಸಿ ಸಾಯಿಸುತ್ತಾರೆ. ಹೀಗೆ ದೌರ್ಜನ್ಯವೆಸಗುತ್ತಿದ್ದಾಗ, 'ಅನ್ಯದ ದಿನ ಬಂದ ಮಳೆರಾಜನಿಂದ ಸಿರಿವಂತ ಬಣ್ಣದ ಗುಬ್ಬಿ (ಗುಂಡಿ)ಯವರು ಮಣ್ಣಾಗಿ ಹೋದರು ಎಂದು ಗೀತೆ ತಿಳಿಸುತ್ತದೆ. ಇಲ್ಲಿ ಮಳೆರಾಜ ಎಂಬುದನ್ನು ಸಂಕೇತವಾಗಿ ತೆಗೆದುಕೊಂಡರೆ ಎರಡೂ ಅರ್ಥಗಳಲ್ಲಿ ಇದು ಕ್ರಾಂತಿಗೀತೆಯಾಗುತ್ತದೆ. ಉಳ್ಳವರ ದಬ್ಬಾಳಿಕೆ ಅತಿಯಾದಾಗ ಕ್ರಾಂತಿ ಅವರು ನಿರೀಕ್ಷಿಸಿದ ಕಾಲ ಬಿಟ್ಟು ಬೇರೆ ಕಾಲದಲ್ಲಿ ಆಗಿ ಹಳ್ಳಕೊಳ್ಳದ ತುಂಬ ಹೆಣ ಹರಿದಾಡುವಂತಹ ಸ್ಥಿತಿಯನ್ನು ಉಂಟುಮಾಡುತ್ತದೆ. ಅಂದರೆ ಈ ಗೀತೆಯಲ್ಲಿ ತಮಗೆ ಆಗುವ ಅನ್ಯಾಯಕ್ಕೆ ಕಾರಣರಾದವರನ್ನು ನಾಶಪಡಿಸುವ ಮನೋಭಾವ ಎದ್ದು ಕಾಣುತ್ತದೆ. ಯಥಾಸ್ಥಿತಿಯನ್ನು

ಒಪ್ಪಿಕೊಳ್ಳುತ್ತಲೇ ತಮಗನುಕೂಲ ಸಮಯ ಸಿಕ್ಕಿದಾಗ ದೌರ್ಜನ್ಯದ ಪುಂಡಾಟಿಕೆಯನ್ನು ಅಳಿಸಬೇಕೆನ್ನುವ ಧೋರಣೆ ಅಶಿಕ್ಷಿತರಾದ ಜನಪದರಲ್ಲಿತ್ತು'[೧೪]

ಸಾಮಾನ್ಯವಾಗಿ ದುಡಿಯುವ ವರ್ಗ, ಶೋಷಿತ ವರ್ಗಗಳು ಆಳುವ ವರ್ಗದ ಸಂಸ್ಕೃತಿಯನ್ನು ತಿಳಿದೋ ತಿಳಿಯದೆಯೋ ಅನುಸರಿಸಲು ತೊಡಗುತ್ತಾರೆ. ಇದಕ್ಕೆ ಒತ್ತಾಯ ಕಾರಣವಾಗಿರುವ ಇಲ್ಲವೇ ಆಳುವವರ್ಗದ ಜೊತೆ ಘರ್ಷಣೆ ತಪ್ಪಿಸಲು ಆಳಿಸಿಕೊಳ್ಳುವವರು ಮಾಡಿಕೊಂಡಿರುವ ಹೊಂದಾಣಿಕೆ ಕಾರಣವಾಗಿರಬಹುದು. ಅಂಥ ಸಂದರ್ಭದಲ್ಲಿ ಆಳುವವರ ಪ್ರತಿಷ್ಠಿತಸಂಸ್ಕೃತಿಯನ್ನು ಪ್ರಧಾನ ಸಂಸ್ಕೃತಿಯೆಂದೂ ಉಳಿದ ಸಂಸ್ಕೃತಿಗಳನ್ನು ಅಧೀನಸಂಸ್ಕೃತಿಗಳೆಂದೂ ಕರೆಯಬಹುದು. ಈ ಪ್ರಧಾನ ಸಂಸ್ಕೃತಿಯ ಪ್ರಭಾವಗಳು ಉಳಿದ ಸಂಸ್ಕೃತಿಗಳ ಮೇಲೆ ಆದರೂ ಅದನ್ನು ಮೀರಿ ಅಧೀನಸಂಸ್ಕೃತಿಗಳ ಒಳಗೇ ಒಂದು ವಿರೋಧದನೆಲೆ ರೂಪುಗೊಳ್ಳುತ್ತಾ ಹೋಗುತ್ತದೆ. ಇದು ಪ್ರಧಾನಸಂಸ್ಕೃತಿಗೆ ಪ್ರತಿಯಾಗಿ ಹುಟ್ಟುವುದರಿಂದ ಇದನ್ನು ಪ್ರತಿಸಂಸ್ಕೃತಿಯೆಂದು ಕರೆಯಬಹುದು. ಇದು ಶತ್ರುತ್ವದ ಸಂಬಂಧವನ್ನು ಪಡೆದಿರಬಹುದು, ಇಲ್ಲವೆ ಸಹಚರ ಸಂಬಂಧವನ್ನಾದರೂ ಪಡೆದಿರಬಹುದು. ಒಟ್ಟಿನಲ್ಲಿ ಅರಿವಿಗೆ ಬರದ ರೀತಿಯ ಸಂಘರ್ಷಾತ್ಮಕ ಕ್ರಿಯೆಯೊಂದು ಅಧೀನಸಂಸ್ಕೃತಿಗಳಲ್ಲಿ ನಡೆಯುತ್ತಿರುತ್ತದೆ.

ಭಾರತೀಯ ಸಂದರ್ಭದಲ್ಲಿ ಜಾತಿಪದ್ಧತಿಯು ರೈತಸಮುದಾಯಗಳ ಐಡೆಂಟಿಟಿ ಮತ್ತು ಭಿನ್ನತೆಗಳನ್ನು ಗುರುತಿಸಲು ಸಹಾಯವಾಗಿದೆ. ಶ್ರೇಣೀಕೃತವ್ಯವಸ್ಥೆಯಲ್ಲಿ ಜಾತಿವ್ಯವಸ್ಥೆಯಿದ್ದರೂ, ಅವುಗಳಲ್ಲಿ ಭಿನ್ನತೆಗಳಿದ್ದರೂ ಅವುಗಳ ನಡುವೆ ಒಪ್ಪಿತಮೌಲ್ಯಗಳು ಸಾಮಾನ್ಯವಾಗಿದ್ದು, ಅವು ಪರಸ್ಪರರನ್ನು ಬೆಸೆದಿವೆ. 'ಅಕ್ಷರಸಂಸ್ಕೃತಿಯ ಸಾಹಿತ್ಯ, ಆ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡುವ ರಾಜಾಶ್ರಯ ಇವುಗಳು ತುಂಬ 'ಸಾಂಪ್ರದಾಯಿಕ ಮನೋಭಾವದಿಂದ ಜಾತಿವ್ಯವಸ್ಥೆಯನ್ನು ಪೋಷಿಸುವಂಥ ರೀತಿಯಲ್ಲಿ ವ್ಯವಹರಿಸುತ್ತಿರುವಾಗ; ಅದಕ್ಕೆ ವಿರುದ್ಧವಾದ ನೆಲೆಯಲ್ಲಿ ಜನಗಳಿಂದ ಅದೂ ಅನಕ್ಷರಸ್ಥ ದುಡಿಯುವ ಸಮಾಜದಿಂದ ರಚಿತವಾದ ಜನಪದಸಾಹಿತ್ಯದಲ್ಲಿ ಜಾತಿವ್ಯವಸ್ಥೆಗಾಗಲೀ ಅಸ್ಪೃಶ್ಯತೆಗಾಗಲೀ ತ್ರೀವ್ರವಾದ ಗಮನ ಕೊಟ್ಟಿಲ್ಲ. ಸಮಾಜದಲ್ಲಿ ಇವು ಇವೆ ಎಂಬ ಕಾರಣಕ್ಕಾಗಿ ಅವುಗಳ ಪ್ರಸ್ತಾಪ ಮಾಡುತ್ತಾರೆಯೇ ವಿನಾ ಅವುಗಳನ್ನು ಭದ್ರವಾಗಿ ನೆಲೆಗೊಳಿಸಬೇಕೆಂಬ ಉದ್ದೇಶವಾಗಲೀ ಆಶಯವಾಗಲೀ ಈ ಸಾಹಿತ್ಯದಲ್ಲಿಲ್ಲ'[೧೫].

ರೈತಸಮುದಾಯದ ಆಂತರಿಕ ಸಂರಚನೆಯನ್ನು ಅಭ್ಯಸಿಸಿದರೆ ಮುಖ್ಯವಾಗಿ ಬುಡಕಟ್ಟೇತರ ಜನಸಮುದಾಯಗಳಲ್ಲಿ ಸಮಾನತೆಯ ಅಂಶವನ್ನು ಪರಿಭಾವಿಸಿಕೊಂಡಿರುವುದು ಕಂಡುಬರುವುದಿಲ್ಲ. ಈ ಅಸಮಾನತೆಯ ಕಾರಣಗಳಿಂದಾಗಿ ಕೆಳಜಾತಿಗಳ ಭೂರಹಿತ ಸಮುದಾಯಗಳು ತಮ್ಮ ಹಕ್ಕಿಗಾಗಿ ಹೋರಾಡುವದನ್ನು ನಾವು ಗಮನಿಸಬಹುದು. ಈ ಸಂದರ್ಭದಲ್ಲಿ ಕೇವಲ ರೈತರು ಮತ್ತು ಅವರ ಶೋಷಕರ ನಡುವೆ ಮಾತ್ರ ಸಂಘರ್ಷವನ್ನು ಕಾಣದೆ ರೈತರ ಒಳಗೇ ಇರುವ ಸಂಘರ್ಷಗಳನ್ನು

ಸಬಾಲ್ಟರ್ನ್ ಅಧ್ಯಯನಕ್ರಮದಲ್ಲಿ ಗುರುತಿಸಲಾಗಿದೆ. ರೈತರ ನಡುವೆ ಅಸಮಾನತೆಯನ್ನು, ದೌರ್ಜನ್ಯವನ್ನು, ಆಂತರಿಕ ಕಲಹವನ್ನು ಮತ್ತು ಪ್ರತಿರೋಧಗಳನ್ನು ನಾವು ಗಮನಿಸಬಹುದಾಗಿದೆ. 'ಭಾರತದ ಬಹು ಬಗೆಯ ಸಾಮಾಜಿಕ ಸಂಕಥನಗಳಲಿ ಕಂಡುಬರುವ ಸಮುದಾಯಗಳ ಅಂತರ್ ಸಂಬಂಧಗಳು, ಅವುಗಳ ಬಹುತ್ವದ ವಿನ್ಯಾಸಗಳು, ಐಡೆಂಟಿಟಿ ಮತ್ತು ಭಿನ್ನತೆಗಳನ್ನು ರೂಪಿಸುವ ಸೈದ್ಧಾಂತಿಕತೆಗಳು, ಇನ್ನೂ ಜೀವಂತಿಕೆಯಿರುವ ಜನರ ನಂಬುಗೆ ಮತ್ತು ಆಚರಣೆಗಳ ಮೂಲಕ ವ್ಯಕ್ತವಾಗುತ್ತಿರುವ ಸಾಮಾಜಿಕ ಸಂಘರ್ಷಗಳ ವಿನ್ಯಾಸಗಳು'[೧೬] ಯಾವ ವ್ಯಕ್ತಿ ಅಥವಾ ಸಮುದಾಯವು ಚಲನಶೀಲತೆಯಿಂದ ಬೇರ್ಪಡೆಗೊಂಡರೋ ಅಥವಾ ಸಾಮಾಜಿಕವಾಗಿ 'ಹೊರಗುಳಿದರೊ' ಅಥವಾ ವಸಾಹತುಶಾಹಿಗಳ ಸಹಭಾಗಿಗಳು ಉತ್ಪಾದಿಸಿದ ಸಾಂಸ್ಕೃತಿಕ ಲೋಕದಿಂದ ಹೊರಗುಳಿದರೋ ಅವರು ಸಬಾಲ್ಟರ್ನ್‌ಗಳಾಗುತ್ತಾರೆನ್ನುವ ಪಾರ್ಥಚಟರ್ಜಿ ಅವರ ನಿಲುವನ್ನು ಗಾಯಿತ್ರಿ ಸ್ಪಿವಾಕ್ ಅವರು ಸಮರ್ಥಿಸಿದ್ದಾರೆ[೧೭] ಎನ್ನುವಲ್ಲಿ ಜನಪದಸಾಹಿತ್ಯದ ಸಂಘರ್ಷದ ನೆಲೆಗಳನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ.

ಯಾರು ಕೆಳವರ್ಗಗಳ ಚರಿತ್ರೆಯನ್ನು ಬರೆಯುವ ಪ್ರಕ್ರಿಯೆಯನ್ನು ಆರಂಭಿಸಿದ್ದರು ಎನ್ನುವ ಜಿಜ್ಞಾಸೆಗಳಿಗಿಂತ ಕೆಳವರ್ಗಗಳ ಚರಿತ್ರೆ ಬರವಣಿಗೆಯ ಆಶಯಗಳು ಇಂದಿನ ಅವಶ್ಯಕತೆಯಾಗಿದೆ. ಮೂಲೆಗೊತ್ತಲ್ಪಟ್ಟ ಸಮುದಾಯಗಳ/ವರ್ಗಗಳ ಚರಿತ್ರೆ ಮತ್ತು ಸಂಸ್ಕೃತಿಯ ಅಧ್ಯಯನಗಳಿಂದಾಗಿ ಇತಿಹಾಸದ ಇನ್ನೊಂದು ಮಗ್ಗುಲನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಈ ಮೂಲಕ ಭಾರತದ ಜನಸಂಖ್ಯೆಯ ಬಹುಸಂಖ್ಯಾತರ ಅಂದರೆ ಕೆಳಸಮುದಾಯ/ವರ್ಗಗಳ ಜನರು ಬೆರಳಣಿಕೆ ಸಂಖ್ಯೆಯಲ್ಲಿರುವ ಬಲಾಢ್ಯರು ರೂಪಿಸಿದ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕವ್ಯವಸ್ಥೆಗೆ ಚಾರಿತ್ರಿಕವಾಗಿ ನಲುಗಿ ಹೋಗಿರುವ ಪ್ರಕ್ರಿಯೆಯನ್ನು ಅರಿಯಬೇಕಾಗಿದೆ ಮತ್ತು ಅಭ್ಯಸಿಸಬೇಕಾಗಿದೆ. ಒಪ್ಪಿತವಾದ ಚರಿತ್ರೆಗೆ ಸವಾಲಾಗಿ ಇಂದಿನ ಸಂದರ್ಭದ ತಾತ್ವಿಕ/ಸೈದ್ಧಾಂತಿಕ ಅವಶ್ಯಕತೆಯಾಗಿ ಸಬಲ್ಟಾರ್ನ್ ಅಧ್ಯಯನ ಕ್ರಮವು ತನ್ನ ಅಂತರ್ಗತವಾಗಿರುವ ಮಿತಿಗಳೊಂದಿಗೆ ಚರಿತ್ರೆ ಬರವಣಿಗೆ ಪ್ರಕ್ರಿಯೆಗೆ ಒಂದು ಹೊಸನೋಟವನ್ನು ಪ್ರಭಾವಿಯಾಗಿ ನೀಡುತ್ತಿರುವುದು ಭಾರತೀಯ ಚರಿತ್ರೆ ಬರವಣಿಗೆ ಕ್ರಮದಲ್ಲಿ ಒಂದು ಮುಖ್ಯ ಆಯಾಮವಾಗಿದೆ.

'ಆಸ್ತಿತ್ವವಾದಿ ಪ್ರಲಾಪಗಳೆಲ್ಲ ಶಿಷ್ಟಚರಿತ್ರೆಗೆ ಕೇವಲ ಭಾವನಾತ್ಮಕವಾಗಿ ಕಾಣುತ್ತವೆ. ಗತವನ್ನು ವರ್ತಮಾನದಿಂದ ನೋಡುವ ಯಾರಿಗಾದರೂ ಚರಿತ್ರೆಯ ನಿಜವಾದ ಸಂವೇದನೆಯಾದ ಭಾವನಾತ್ಮಕ ನಂಟನ್ನು ನಿರಾಕರಿಸಲಾಗದು. 'ಮಾನವ ಸಂಬಂಧಗಳನ್ನು ಅರ್ಥಪೂರ್ಣವಾಗಿ ದಾಖಲಿಸುವ, ಅದರೊಂದಿಗೆ ಸಂವಾದಿಸುವ, ಬೆಳಸುವ, ಉಳಿಸುವ ಗುಣವಿದ್ದರೆ ಮಾತ್ರ ಚರಿತ್ರೆಯ ನಿರೂಪಣೆ ಚೈತ್ರನ್ಯಶೀಲವಾಗುವುದು. ಎಲ್ಲರ ಆಶಯಗಳು ಅಂತಿಮವಾಗಿ ಅರ್ಥಪೂರ್ಣ ಮಾನವ ವಿಕಾಸದ ಕಡೆಗೇ ಚಲಿಸಬೇಕು. ಚರಿತ್ರೆ ಅದರ ಬೇರಿನಿಂದಲೆ ತನ್ನ ವರ್ತಮಾನದ ಜೊತೆ ಸ್ಪಂದಿಸಬೇಕು'[೧೮].

ಇತಿಹಾಸವು ಮೂಲತಃ ಕಾಲದೇಶಗಳ ಪರಿಣಾಮ. ಪ್ರತಿಯೊಂದು ಸಮುದಾಯವು ತನಗೇ ಸೀಮಿತವಾದ ಕಾಲದೇಶವನ್ನು ನಿರ್ದಿಷ್ಟಪಡಿಸಿಕೊಂಡಿರುತ್ತದೆ. ಅದಕ್ಕೆ ತಕ್ಕಂತೆಯೇ ನಾಗರೀಕತೆಯ ಹಂತಗಳು ಸಾಗಿ ಬಂದಿರುತ್ತವೆ. ಸೀಮಿತ ಕಾಲ ದೇಶದ ಗಡಿಯ ಒಳಗೆ ಅಸ್ತಿತ್ವವನ್ನು ರೂಢಿಸಿಕೊಳ್ಳುವ ಒತ್ತಡದಲ್ಲಿ ಸಮುದಾಯಗಳು ತಮ್ಮ ತಮ್ಮ ಚಹರೆಗಾಗಿ ಒಳಸಂಘರ್ಷಗಳಿಗೆ ಇಳಿಯುತ್ತವೆ. ಅಂತಹ ಒಳಸಂಘಷದಲ್ಲಿ ತೊಡಗಿದ ಸಮುದಾಯಗಳು ಕಾಲದೇಶಗಳನ್ನು ತಮ್ಮ ಚಹರೆಗೆ ತಕ್ಕಂತೆ ವರ್ಗೀಕರಿಸಿಕೊಳ್ಳುತ್ತವೆ. ಹೀಗಾಗಿಯೇ ನಾಗರೀಕತೆಗಳು, ಸಮಾಜದ ಒಂದೊಂದು ಘಟಕಗಳು ವಿಭಿನ್ನ ವೃತ್ತಿ ಸಮುದಾಯಗಳನ್ನು ನಿಯಂತ್ರಿಸಿರುವುದು. ಈ ನಿಯಂತ್ರಣದಿಂದಲೇ ಕಾಲದೇಶಗಳ ಪರಿಣಾಮವಾದ ಇತಿಹಾಸವು ಆನೇಕ ಬಗೆಯ ಅವ್ಯಕ್ತಸಂಗತಿಗಳನ್ನು ಅಲಕ್ಷಿತವಾದ ಪ್ರತಿರೋಧ ಗಳನ್ನು ಮೌಖಿಕ ಪರಂಪರೆಗಳನ್ನು ರೂಢಿಸಿಕೊಂಡು ಬರುವುದು.

‘ನಿಸರ್ಗದ ಸಂಬಂಧ ಒಂದನ್ನೇ ನಂಬಿದ್ದ ಪಶುಪಾಲಕ ಸಮಾಜಗಳು ದಿಕ್ಕೆಟ್ಟಿದ್ದರಿಂದ ಅವುಗಳ ಒಳಗೆ ಜಾತಿಯು ಸುಲಭವಾಗಿ ಪ್ರವೇಶ ಪಡೆಯಿತು. ಜಾತಿಯು ಒಂದು ಚಹರೆಯಾಗಿ ಮೊದಲು ಅವರವರಿಗೆ ಕಂಡಿತ್ತು. ಚಹರೆಯ ವೇಷದಲ್ಲಿ ಬಂದ ಜಾತಿವ್ಯವಸ್ಥೆಯು ಮುಂದೆ ಭೂತವಾಗಿ ಸಮುದಾಯಗಳ ಮೈದುಂಬಿ ಸಾಮಾಜಿಕವಾಗಿ ತನ್ನ ಕರಿನೆರಳನ್ನು ಚಾಚಿತು. ಅಪ್ಪಟ ಬುಡಕಟ್ಟು ಸ್ವಭಾವಗಳನ್ನೇ ಮೈದುಂಬಿದ್ದ ಪಶುಪಾಲಕ ಸಮುದಾಯಗಳು ಬದಲಾಗುತ್ತಿದ್ದ ಪ್ರಾಚೀನ ಗ್ರಾಮ ನಾಗರೀಕತೆಯಲ್ಲಿ ಸದಸ್ಯತ್ವ ಪಡೆದು ಜಾತಿಯ ಕ್ರೂರ ಬಲೆಗೆ ಸಿಲುಕಿದವು. ಜಾತಿಯ ಸ್ವರೂಪ ಸಾಂಸ್ಥಿಕವಾಗಿ ಆಗುತ್ತಿದ್ದಂತೆ ಪಶುಪಾಲಕ ವೃತ್ತಿಯಲ್ಲೂ ಬದಾಲಾವಣೆಗಳು ಅವ್ಯಕ್ತವಾಗಿ ಘಟಿಸಿವೆ’[೧೯].

ಭೂಮಿ ಮತ್ತು ಆಕಾಶ, ಮಣ್ಣ ಮತ್ತು ನೀರಿನ ಫಲವಂತಿಕೆಯಿಂದಾದ ಬೆನವನನ್ನು ವಾಸ್ತವ ಶ್ರಮಿಕವರ್ಗ ಕಾಣುವುದು ಜನಪದ ಕೃಷಿಯ ಸಂಕೇತವಾಗಿಯೇ, ಬೌದ್ಧನೆಲೆಯಿಂದ ಗಮನಿಸಬಹುದು. ಬೆನವ ಮೂಲತಃ ಒಬ್ಬ “ಗಣಪತಿ” ಗಣಗಳಿಗೆ ಒಡೆಯ ಎಂಬುದು ಸ್ಪಷ್ಟವಾಗಿ ಗುರುತಿಸಲು ಆಧಾರಗಳಿವೆ. ಅಂತೆಯೇ ಬೆನವ ಹೇಗೆ ಕೃಷಿಸ್ವರೂಪಿ ಎಂಬುದು ಸಹ ಮುಂದಿನ ಅಧ್ಯಾಯದಲ್ಲಿ ಸ್ಪಷ್ಟಿಕರಿಸಲಾಗಿದೆ. ಮೂಲತಃ ಶ್ರಮಿಕವರ್ಗದ ಪ್ರತಿನಿಧಿಯಾದ ಬೆನವವನ್ನು ಆರ್ಯರು ಆರ್ಯೀಕರಣಗೊಳಿಸಿ ವಿರೂಪಗೊಳಿಸಿದ್ದು ಬಹುದೊಡ್ಡ ಸಾಂಸ್ಕೃತಿಕ ಸಂಘರ್ಷಣೆಯ ತಲಿನಗೊಳಿಸಬಹುದು. ಯಾವುದೇ ಸಂಸ್ಕೃತಿಯೊಳಗೆ ಇರುವ ಸಂಘರ್ಷಗಳ ಸ್ಪಷ್ಟತೆಯನ್ನು ಕಾಣಬೇಕಾದರೆ ಗಮನವಿಟ್ಟು ನೋಡುವ ಆಲಿಸುವ ಹೃದಯವಂತಿಕೆ ಮತ್ತು ಆ ವರ್ಷಗಳ ನೋವು ಅನುಭವ ಆಗಬೇಕಾಗುತ್ತದೆ.

ನೆಲಮೂಲೀಯಸಂಸ್ಕೃತಿಯ ಮಾತೃದೇವತಾರಾಧವನ್ನು ನೆಲೆ ಸಂಬಂಧಗಳ ವಾರಸುದಾರಾದ ದ್ರಾವಿಡರು ಕೃಷಿ ಮತ್ತು ಭೂಮಿಯ ಒಡೆಯರು ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ

ಚರ್ಚಿಸಲಾಗಿದೆ. ಕೃಷಿ ಜೀವನದ ಅನಿವಾರ್ಯ ಅವಿಭಾಜ್ಯ ಅಂಗವಾದಾಗ ಅವರಿಗೆ ಭೂಮಿಯ ನೇರವಾಗಿ ಸಂಬಂಧದ ತೆಕ್ಕೆಗೆ ಧಕ್ಕುತ್ತದೆ. ಭೂಮಿಯೊಂದಿಗೆ ಸಂಬಂಧ ಹೊಂದಿದ ಇವರಿಗೆ ಸಹಜವಾಗಿಯೇ ಮಳೆಯೊಂದಿಗೆ ಸಂಬಂಧ ಏರ್ಪಟ್ಟಿದೆ. ಆ ಕಾಲದಲ್ಲಿ (ಈಗಲೂ) ನೀರಿನ ಪ್ರಮುಖ ಮೂಲವು ಮಳೆಯೇ ಆಗಿದ್ದು ಇದನ್ನು ಇನ್ನಷ್ಟು ಗಟ್ಟಿಗೊಳಿಸಿರಲು ಸಾಧ್ಯ. ತಮಗೆ ಮಳೆ ನೀಡಿದ ಸಯೇಷ ಸಂಭ್ರಮ ಆಂತರಿಕ, ಭಯ, ಕೋಪ ಎಲ್ಲವೂ ಅವರಿಗೆ ಪರಿಚಯವಾಗಿದೆ. ಮಳೆಯ ವಿವಿಧ ಮುಖಗಳ ದರ್ಶನಕ್ಕನುಗುಣವಾಗಿಯೇ ಅವರಲ್ಲಿ ಹಾಡುಗಳ ಸಂಭ್ರಮದ ಅನುಭವದ ಅವ್ಯಕ್ತತೆಗೆ ಮೂರ್ತ ರೂಪ ಕೊಡುವುದೇ ಅದರ ಹಿಂದಿರುವ ಬಹುಮುಖ್ಯ ನೆಲೆಯಾದರೂ ಮಳೆಗಾಗಿ ವ್ಯಕ್ತಿತ್ವಕೊಡುವ ಮೂಲಕ ತಮ್ಮ ಮಧ್ಯಕ್ಕೆ ತರುವ ಕ್ರಮವಾಗಿದ್ದು ಮಳೆಗೆ ತಮ್ಮ ಮಧ್ಯೆ ಒಂದು ಬದುಕು ಸಂಸಾರವನ್ನು ಆರೋಪಿಸಿಕೊಳ್ಳುತ್ತಾರೆ. ಈ ನೆಲೆಯಲ್ಲಿದ್ದರೆ ಯಾವ ವರ್ಗ ಭೂಮಿಯನ್ನು ಅವಲಂಬಿಸಿ ಕೃಷಿಯಾಧಾರವಾಗಿ ಮಳೆಯನ್ನು ಅವಲಂಬಿಸಿರುವುದೋ ಅವರದೇ ದನಿಯಾದ ಮಳೆ ಜನಪದ ಸಾಹಿತ್ಯವು ಆ ವರ್ಗಗಳ ಸಾಂಸ್ಕೃತಿಕ ಚರಿತ್ರೆಯಾಗುತ್ತದೆ. ಇದು ದಾರಿಯ ಚರಿತ್ರೆಗೆ ಮುಖಾಮುಖಿಯಾಗುವ ಆ ವರ್ಗದ ಚರಿತ್ರೆ.

ಈ ಚರಿತ್ರೆಯ ಆಶಯವು ಅನೇಕ ಸೂಕ್ಷ್ಮತೆಗಳನ್ನು ಕಥನಗಳು ಅಮೂರ್ತಪ್ರಜ್ಞೆಯಲ್ಲಿ ಅಡಗಿಸಿಟ್ಟುಕೊಂಡಿರುತ್ತವೆ. ದಾಖಲು ಚರಿತ್ರೆಯ ಯಾವುದೇ ಒಂದು ಕಾಲ ಸಂದರ್ಭದಲ್ಲಿ ತನ್ನ ಕೇಂದ್ರೀಕರಿಸಿಕೊಂಡು ಪ್ರಭುತ್ವದ ನಿರೂಪಣಾಶೈಲಿಯಲ್ಲಿ ದಾಖಲಾತಿ ಅದು ತನ್ನ ಕಾಲದ ಸುತ್ತಲೆ ಗಿರಕಿಹೊಡೆಯುತ್ತಾ ಆ ಕಾಲದ ಪರಿಮಿತಿಯನ್ನು ದಾಟಲು ಯತ್ನಿಸದೇ ಹೋಗುವುದು. ಆ ಕಾರಣಕ್ಕೆಂದೇ ಜನಪದರು ಒಂದು ಘಟನೆಯನ್ನು ಕೇಂದ್ರೀಕರಣ ವ್ಯಕ್ತಿಯಾಗಿ ಗ್ರಹಿಸದೆ ವಿಶ್ವಾತ್ಮಕ ವ್ಯಕ್ತಿತ್ವವಾಗಿ ಗ್ರಹಿಸಲು ಯತ್ನಿಸುತ್ತದೆ. ಅದು ಪ್ರತಿಪಾದಿಸುವ ಮೌಲ್ಯಗಳು ಸಹ ಚರಿತ್ರೆಯ ಶಾಸ್ತ್ರ ಪಾಠಗಳಂತೆ ಆಧಿಕಾರ ಕೇಂದ್ರದ ಮಾತಾಗಿದೆ. ತಮಗೆ ಅರಿವಿಲ್ಲದಂತೆ ಆವರಿಸುವ ಮಾತೃತ್ವದ ಸವಿಯ ಮಡಿಲಂತೆ ಆವರಿಸಿಕೊಳ್ಳುತ್ತದೆ. ಇಂತಹ ಕಥನಕೇಂದ್ರಿತ ನೆಲೆಗಳು ಪಶುಪಾಲಕ, ಸಮುದಾಯದಲ್ಲಿ ಚರಿತ್ರೆಯ ಚಹರೆಯಾಗಿ ಕಂಡಿರಲು ಸಾಧ್ಯವಾಗಿದ್ದು ಇದು ವಿದೇಶಿಗರು ಹೇಳಲಾಗುವ ಭಾರತೀಯರಿಗೆ ಚರಿತ್ರೆಯ ಪ್ರಜ್ಞೆ ಇಲ್ಲವೆನ್ನುವ ಮಾತಿಗೆ ಶಾಂತವಾಗಿಯೇ ಕೊಟ್ಟ ಮಾರ್ಮಿಕ ಉತ್ತರದಂತಿದೆ. ಇದನ್ನು ಗುರ್ತಿಸದ ಹೈಟೆಕ್ ವಿದ್ವಾಂಸರು ಅದನ್ನು ಒಪ್ಪಿ ಕೋಟಿಗಟ್ಟಲೆ ಖರ್ಚುಮಾಡಿ ನೆಲವನ್ನು ಅಗೆದು ತೊಡುವರು. ಜನಪದರು ಭೂಮಿಯ ಒಡಲು ಎಂದು ಯಾವುದನ್ನು ಪರಿಭಾವಿಸಿತ್ತೋ ಅದನ್ನು ತೋಡಿ ಬರಿದಾಗಿಸಿ ಬೆಟ್ಟ ಅಗೆದು ಇಲಿ ಹಿಡಿದಂತೆ ದಶಕಗಳ ಕಾಲ ಕೋಟಿಗಟ್ಟಲೇ ವೆಚ್ಚಮಾಡಿ ಒಂದು ತೂತುಬಿಲ್ಲೆಯನ್ನು ತೆಗೆದು ತೋರಿಸಿ ಸಾಧಿಸಲಾಗದ್ದೇನನ್ನೋ ಸಾಧಿಸಿದ್ದೆವೆಂದು ಬೀಗುವರು. ತಮ್ಮ ನಡುವೆ ಪ್ರಚಲಿತವಿರುವ ಸತ್ಯಾಂಶಕ್ಕೆ ಕಿವುಡು ಕುರುಡಾಗುತ್ತಾರೆ.

## ಸಂಖ್ಯಾಟಿಪ್ಪಣಿಗಳು

೧. ಅರ್ಜುನ ಗೊಳಸಂಗಿ (ಸಂ.), ದಲಿತರ ಬದುಕು ಮತ್ತು ಸಂಸ್ಕೃತಿ. ಪುಟ. ೧೨
೨. ಉದ್ಧೃತ : ಕೃಷಿಜಾನಪದ ಮತ್ತು ಮಹಿಳೆ. ಪುಟ. ೧೦೩
೩. ಮಂಜುನಾಥ ಬೇವಿನಕಟ್ಟೆ. ಜಾನಪದ ಉತ್ಖನನ. ಪುಟ. ೪೯
೪. ವಾಲಿ. ಎಮ್.ಎನ್. ಕೃಷಿ ಜಾನಪದ. ಪುಟ. ೨೪
೫. ವಕ್ತೃ : ಸಿದ್ಲಿಂಗಪ್ಪ. ಕಂಚಿಕೆರೆ.
೬. ವೀರಣ್ಣ ದಂಡೆ, ದೇಸೀ ದೃಷ್ಟಿ, ಪುಟ. ೯೭
೭. ಪುನರುಕ್ತ : ಪುಟ. ೯೮
೮. ಉದ್ಧೃತ : ಕೃಷಿಜಾನಪದ ಮತ್ತು ಮಹಿಳೆ. ಪುಟ. ೧೦೩
೯. ವಾಲಿ. ಎಮ್.ಎನ್. ಕೃಷಿ ಜಾನಪದ. ಪುಟ.೨೪
೧೦. ರೇವಣ್ಣ ಮೈಲಳ್ಳಿ. ಮಾದಾರ ಸಂಸ್ಕೃತಿ ಮತ್ತು ಸಾಹಿತ್ಯ. ಪುಟ. ೨೪
೧೧. ಹಿರೇಮಠ್. ಎಸ್.ಎಸ್. ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ, ಜಾತ್ರೆಗಳು-೨
೧೨. ಮಂಜುನಾಥ ಬೇವಿನಕಟ್ಟೆ. ಜಾನಪದ ಉತ್ಖನನ. ಪುಟ. ೪೯-೫೫
೧೩. ರಂಗಾರೆಡ್ಡಿ ಕೊಂಡಿರಾಂಪುರ. ಬಂಡಾಯ ಜಾನಪದ, ಪುಟ ೧೪
೧೪. ಪುನರುಕ್ತ : ಪುಟ. ೧೫
೧೫. ಪುನರುಕ್ತ : ಪುಟ. ೭೨
೧೬. ಪುನರುಕ್ತ : ಪುಟ. ೭೩
೧೭. ವಿಜಯ ಪೂಣಚ್ಚ. ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ, ಪುಟ. ೭೯
೧೮. ಮೊಗಳ್ಳಿ ಗಣೇಶ್. ಅವ್ಯಕ್ತ ಚರಿತ್ರೆ, ಪುಟ. ೦೩
೧೯. ಮೊಗಳ್ಳಿ ಗಣೇಶ್. ಅವ್ಯಕ್ತ ಚರಿತ್ರೆ, ಪುಟ.೭೯

## ಅಧ್ಯಾಯ. ಮೂರು

# ಜನಪದ ಪರಂಪರೆಯ ಮಳೆಯ ಕಥನಗಳು.

**ಪರಂಪರೆ ಹಾಕಿಕೊಟ್ಟ ಪರಂಪರೆ.**

ಮಳೆಯನ್ನು ಜನಪದರು ಪರಿಭಾವಿಸಿಕೊಂಡಿರುವುದು ಪರಂಪರೆಯ ಹಾಗೂ ಅನುಭವನಿಚ್ಚಿತ ಅಂಶಗಳ ಮೂಲಕವೇ. ಅವ್ವಸಂಸ್ಕೃತಿಯ ಮೂಲಾಂಶಗಳು ಮಳೆಕಥನಗಳಲ್ಲಿ ಮುಂದುವರೆದಿರುವುದು ಸತ್ಯವಾಗಿದ್ದು ಅದನ್ನು ಪರಂಪರೆಯು ಮುಂದುವರಿಸಿಕೊಂಡು ಬಂದಿದೆ. ಅದನ್ನು ನಿರ್ವಚಿಸುವ ಜನಪದ ಮನಸುಗಳು ಹೊಸನೋಟದಲ್ಲಿ ಕಾಣಿಸುವುದು ವಿಶೇಷವಷ್ಟೇ. ಪ್ರಸ್ತುತ ಅಧ್ಯಾಯದಲ್ಲಿ ಪ್ರಮುಖವಾಗಿ ಜನಪದಪರಂಪರೆ ಮಳೆಯನ್ನು ಅನುಭವದಲ್ಲಿ ಕಾಣಿಸಿಕೊಂಡ ಅನನ್ಯತೆಯ ಮಗ್ಗುಲು ಗಳನ್ನು ಸಾದ್ಯಂತವಾಗಿ ವಿಶ್ಲೇಷಿಸಲಾಗುವುದು. ಶಿಷ್ಟಪರಂಪರೆಗಿಂತ ಭಿನ್ನವಾದ ಲೋಕದೃಷ್ಟಿಯು ಪರಂಪರೆಯಲ್ಲಿ ಹೇಗೆ ಸಾತತ್ಯವಾಗಿದೆಯೆಂಬುದನ್ನು ಇಲ್ಲಿ ಪರಿಶೀಲಿಸಲಾಗುವುದು.

ಮಳೆಗಾಲವನ್ನು ಸಾಮಾನ್ಯವಾಗಿ ಮುಂಗಾರು ಮತ್ತು ಹಿಂಗಾರು ಎಂದು ಎರಡು ಭಾಗ ಮಾಡಲಾಗಿದೆ. ಬೇಸಿಗೆ ಮುಗಿದ ಮೇಲೆ ಆರಂಭವಾಗುವ ಮಳೆಯನ್ನು ಸಾಮಾನ್ಯವಾಗಿ ಮುಂಗಾರು ಮಳೆಯೆನ್ನುವರು. ಕೊನೆಯ ಮಳೆಯನ್ನು ಹಿಂಗಾರುಮಳೆ ಎನ್ನುವರು. ಇದು ಮಳೆಗಾಲದ ಉತ್ತರಾರ್ಧವೆಂದು ಕರೆದುಕೊಂಡಿದ್ದಾರೆ. ಮುಂಗಾರು ಗುಡುಗು ಗುಡುಗುವುದು ಹಿಂಗಾರು ಮಿಂಚು ಮಿಂಚುವುದು. ಸಾಮಾನ್ಯವಾಗಿ ಮುಂಗಾರಿನಲ್ಲಿ ಗುಡುಗು ಹೆಚ್ಚಾಗಿರುತ್ತದೆ ಮತ್ತು ಹಿಂಗಾರಿನಲ್ಲಿ ಮಿಂಚು ಅತಿಯಾಗಿರುತ್ತದೆ. ಮುಂಗಾರು ಮಳೆಗಳು ಮೃಗಶಿರ, ಆರಿದ್ರ, ಪುನರ್ವಸು, ಪುಷ್ಯ ಮತ್ತು ಅಶ್ಲೇಷ. ಈ ಐದು ನಕ್ಷತ್ರಗಳ ಮಳೆಗಳ ಅವಧಿಗೆ ಮುಂಗಾರು ಹಂಗಾಮು ಎಂದು ಕರೆಯುತ್ತಾರೆ. ಹಿಂಗಾರು ಮಳೆಗಳೂ ಮಾಘ, ಹುಬ್ಬ, ಉತ್ತರ, ಹಸ್ತ ಮತ್ತು ಚಿತ್ತ ಈ ಐದು ನಕ್ಷತ್ರಗಳ ಮಳೆಗಳ ಅವಧಿಗೆ ಹಿಂಗಾರು ಹಂಗಾಮು ಎನ್ನುತ್ತಾರೆ. ಖಗೋಳಶಾಸ್ತ್ರದ ಪ್ರಕಾರ ಗ್ರಹಗಳ ಚಲನವಲನೆಯಿಂದ ಈ ನಿರ್ಧಿಷ್ಟ ನಕ್ಷತ್ರಗಳ ಮಳೆಗಳನ್ನು ನಿರ್ಧರಿಸಲಾಗುತ್ತದೆ. ಈ ಹಂಗಾಮುಗಳ ಅವಧಿಯಲ್ಲಿ ವಿಶಿಷ್ಟ ಹವಾಮಾನ ಉಂಟಾಗುತ್ತದೆ.

ಮಳೆಯ ಬಗ್ಗೆ ನಮ್ಮ ಜನಪದರ ಕಲ್ಪನೆಗಳು ವಿಶೇಷವಾದಂತಹವು, ವಿಭಿನ್ನ ತೆರನವು. ಆಯಾ ಭೌಗೋಳಿಕ ಪರಿಸರಕ್ಕೆ ತಕ್ಕ ಹಾಗೆ, ಸಾಂಸ್ಕೃತಿಕ ಹಿನ್ನೆಲೆಯೊಳಗೆ ಆಯಾ ವರ್ಷ ಉಂಟಾಗಬಹುದಾದ ಮಳೆಯ ಏರುಪೇರುಗಳನ್ನು ಕುರಿತು ಪ್ರಾಕೃತಿಕ ಪರಿಸರಗಳ ಸಾಧನದಿಂದ ಅರ್ಥೈಸುತ್ತಾರೆ. ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನಲ್ಲಿ ಆಯಾವರ್ಷ ಉಂಟಾಗಬಹುದಾದ ಮಳೆಯ ಲೆಕ್ಕಾಚಾರವನ್ನು ಮುತ್ತಗದ ಎಲೆತ ಕಾಯಿಯನ್ನು ಊರು ಮುಖಂಡರು ಕಿತ್ತು ತಂದು ನೆರೆದ

ಜನಸಮೂಹದ ಮಧ್ಯೆ ಅದನ್ನು ಪರೀಕ್ಷೆಗೊಡ್ಡುತ್ತಾರೆ. ಮುತ್ತಗದ ಕಾಯಿಯ ತುದಿ ಭಾಗದ ಬೀಜ ಚೆನ್ನಾಗಿ ಬಲಿತಿದ್ದು ಸಾಕಷ್ಟು ಗಟ್ಟಿಯಾಗಿದ್ದರೆ ಹಿಂಗಾರು ಮಳೆ ಅಧಿಕವೆಂದು ತಿಳಿಯುತ್ತಾರೆ. ಕಾಯಿ ಮುಂಭಾಗ ಎಂದರೆ ಕಾಂಡ ಭಾಗದ ಬೀಜ ಬಲಿತಿದ್ದು, ಗಟ್ಟಿಯಾಗಿದ್ದರೆ ಮುಂಗಾರು ಅಧಿಕವೆಂದು ಎಂದರೆ ಮುಂಗಾರು -ಹಿಂಗಾರು ಮಳೆ ಅಧಿಕವೆಂದು ತಿಳಿಯುತ್ತಾರೆ. ಕಾಯಿ ಮುಂಭಾಗ ಎಂದರೆ ಕಾಂಡ ಭಾಗದ ಬೀಜ ಬಲಿತಿದ್ದು, ಗಟ್ಟಿಯಾಗಿದ್ದರೆ ಮುಂಗಾರು ಅಧಿಕವೆಂದು ಎಂದರೆ ಮುಂಗಾರು - ಹಿಂಗಾರಿನ ಮಧ್ಯೆ ಮಳೆ ವಿಪುಲವಾಗಿ ಸುರಿಯುವುದೆಂದೂ ಲೆಕ್ಕಹಾಕಿ ಹೇಳುವರು. ಮುತ್ತುಗದ ಕಾಯಿಯ ಬೀಜ ಬೆಳೆಯದೆ ಸಂಪೂರ್ಣವಾಗಿ ನಿರ್ವೀರ್ಯವಾಗಿದ್ದರೆ ಆ ವರ್ಷ ಮಳೆ ಕಡಿಮೆ ಎಂದೂ ನಿರ್ಧರಿಸುವ ಪದ್ಧತಿ ಬಹಳ ಪುರಾತನ ಕಾಲದಿಂದಲೂ ರೂಢಿಯಲ್ಲಿರುವುದಾಗಿ ಕೊಲ್ಲಿಬೈಲಿನ ಶ್ರೀ ಕೆ. ವೆಂಕಟೇಶ್ ಅವರು ತಿಳಿಸುತ್ತಾರೆ.

ಮಳೆ ಬರಲು ಸಹಾಯಕವಾಗುವಂತೆ ಸೂರ್ಯನು ತನ್ನ ಸಂಚಾರಕ್ಕೆ ಬಂದು ಸೇರುವ ನಕ್ಷತ್ರ ಪ್ರದೇಶವನ್ನು ಮಳೆನಕ್ಷತ್ರ ಎನ್ನಲಾಗುತ್ತದೆ. ಮಳೆಯ ನಕ್ಷತ್ರಗಳು ಒಟ್ಟು ೨೭ ಇವನ್ನು ಜನ್ಮ ನಕ್ಷತ್ರಗಳಾಗಿಯೂ ಪರಿಗಣಿಸುತ್ತಾರೆ. ಆಕಾಶಕಾಯಗಳು ಅವು ಸಂಚರಿಸುವ ಪಥ, ಚಲಿಸುವ ಪಥ, ಬದಲಿಸುವ ಪಥ, ವಾತಾವರಣದಲ್ಲಿನ ಬದಲಾವಣೆಯ ಆಧಾರದ ಮೇಲೆ ಪರಿಗಣಿಸುತ್ತಾರೆ. ಇವು ಯಾವ ಕಾಲಕ್ಕೆ ಪರಿಚಯವಾದವು ಎಂಬುದರ ಬಗ್ಗೆ ಸಂಶೋಧನೆ ನಡೆಯಬೇಕಾಗಿದೆ. 'ಭಾರತೀಯ ಖಗೋಳಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ಸಂಪ್ರದಾಯ, ಸಾಮೂಹಿಕವಾಗಿ ಬದುಕುವ ಹಾಗೂ ಪ್ರಕೃತಿಯನ್ನು ತನ್ನದೇ ನೆಲೆಯಲ್ಲಿ ಅರ್ಥೈಯಿಸುವ ಕಲೆ ಇರುವ ಮನುಷ್ಯ ಇವತ್ತಿನ ವೈಜ್ಞಾನಿಕ ಯುಗದಲ್ಲಿಯೂ ಕೂಡ ಒಪ್ಪಿತವಾಗುವ ಮೌಲ್ಯಗಳನ್ನು ನೀಡಿದ್ದಾನೆ. ಈ ಮೌಲ್ಯಗಳು ಜನಪದರಲ್ಲಿ ಪ್ರಬಲವಾಗಿದ್ದು ಅವುಗಳನ್ನು ಕುರಿತಾದ ಹಾಡು, ಕಥೆ, ಗಾದೆ, ಒಗಟು, ಐತಿಹ್ಯಗಳನ್ನು ಕಟ್ಟಿಕೊಂಡಿದ್ದಾರೆ. ಪಂಚಾಂಗದ ಪ್ರಕಾರ ಚೈತ್ರಮಾಸ ಆರಂಭವಾಗಿ ಯುಗಾದಿಯ ನಂತರ ಅಮವಾಸ್ಯೆಯಿಂದ ಹುಣ್ಣಿಮೆಯವರೆಗೆ ಮತ್ತು ಹುಣ್ಣಿಮೆಯಿಂದ ಅಮಾವಾಸ್ಯೆಯವರೆಗೆ ೧೪ ದಿವಸಕ್ಕೊಂದರಂತೆ ಒಟ್ಟು ೨೭ ನಕ್ಷತ್ರಗಳು ಬರುತ್ತವೆ'[೧]. ಪರಂಪರೆಯು ಮಳೆಗಳನ್ನು ನಿರ್ವಚಿಸಿಕೊಂಡಿರುವಂತೆ ಅವು ಅಲೌಕಿಕ ಅಂಶಗಳ ಪ್ರಜಾಪತಿಯ ಹೆಣ್ಣುಮಕ್ಕಳನ್ನಾಗಿ ಕಾಣಿಸಲಾಗಿದೆ. ಅವು ಹೀಗಿವೆ;

"ಅಶ್ವಿನಿ, ಭರಣಿ, ಕೃತಿಕ, ರೋಹಿಣಿ, ಮೃಗಶಿರಾ, ಆರಿದ್ರ, ಪುನರ್ವಸು, ಪುಷ್ಯ, ಆಶ್ಲೇಷ, ಮುಖ, ಪುಬ್ಬ, ಉತ್ತರ, ಹಸ್ತ, ಚಿತ್ತ, ಸ್ವಾತಿ, ವಿಶಾಖ, ಅನುರಾಧ, ಜೇಷ್ಠ, ಮೂಲ, ಉತ್ತರಾಷಾಡ, ಪೂರ್ವಾಷಾಡ' ಶ್ರಾವಣ, ಧನಿಷ್ಠ, ಶತಭೀಷ, ಪೂರ್ವಭಾದ್ರ, ಉತ್ತರಭಾದ್ರ, ರೇವತಿ" ಪರಂಪರೆಯು ಮಳೆಗಳನ್ನು ನಿರ್ವಚಿಸಿಕೊಂಡಂತೆ ಅವು ಅಲೌಕಿಕ ಹಾಗೂ ಲೌಕಿಕ ಅಂಶಗಳ ನಿರೂಪಣೆಯೂ ಆಗಬಹುದು.

ಇವನ್ನೇ ರೈತನು ಮಳೆಗಳು ಅಥವಾ ಮಳೆ ನಕ್ಷತ್ರಗಳು ಎಂದು ಕರೆದುಕೊಳ್ಳುತ್ತಾನೆ. ಇವು ಮೂರು ದಿವಸಕ್ಕೆ ಅಥವಾ ನಾಲ್ಕು ದಿವಸಕ್ಕೆ ಒಂದು ಪಾದದಂತೆ ಪ್ರತಿಮಳೆಗೂ ನಾಲ್ಕು ನಾಲ್ಕು ಪಾತ್ರವಹಿಸಿವೆ. ಬೇರೆಯವು ಮಳೆಬಾರದವುಗಳು. ಬಂದರೂ ಅತಿಕಡಿಮೆ ಮತ್ತು ಬೆಳೆ ವ್ಯವಸಾಯದ ದೃಷ್ಟಿಯಿಂದ ಅನುಪಯುಕ್ತವಾದವುಗಳು. ಈಗಿನ ಕಾಲದ ರೈತರು ಹದಿನೇಳು ಮಳೆನಕ್ಷತ್ರಗಳು ಪ್ರಮುಖ ಎಂದರೆ ಸಿದ್ಧರಾಯಪ್ಪ ಕುನ್ನಾಳ ಅವರು ಹನ್ನೆರಡು ಮಳೆನಕ್ಷತ್ರಗಳು ಮುಖ್ಯ ಎನ್ನುತ್ತಾರೆ. "ಈ ಇಪ್ಪತ್ತೇಳು ಮಳೆ ನಕ್ಷತ್ರಗಳಲ್ಲಿ ಹನ್ನೆರಡು ನಕ್ಷತ್ರಗಳಿಗೆಯೇ ಕಾಲಮೇಘವೆನ್ನುತ್ತಾರೆ. ಉಳಿದ ಮೇಘಗಳಿಗೆ ಅಕಾಲ ಮೇಘವೆಂಬ ಹೆಸರು. ರೋಹಿಣ್ಯಾದಿ ಸ್ವಾತ್ಯಂತವಾಗಿ ಹನ್ನೆರಡು ಮಳೆಗಳು ಆಗದೆ ಹೋದರೆ ಅಕಾಲ ಮೇಘವೆಂಬ ಹೆಸರು. ರೋಹಿಣ್ಯಾದಿ ಸ್ವಾತ್ಯಂತವಾಗಿ ಹನ್ನೆರಡು ಮಳೆಗಳು ಆಗದೆ ಹೋದರೆ ಭೂಮಿಯಲ್ಲೆ ಯಾವ ಬೆಳೆಯೂ ಆಗುವುದಿಲ್ಲ" ಎಂದು ಜನಪದರು ಅಭಿಪ್ರಾಯಪಡುತ್ತಾರೆ. ಅಂದರೆ ಹತ್ತೊಂಬತ್ತನೇ ಶತಮಾನದಲ್ಲಿ ರೋಹಿಣಿಯಿಂದ ಸ್ವಾತಿಯವರೆಗೆ ಮಾತ್ರ ಪ್ರಮುಖ ಮಳೆಗಳೆಂದು ಪರಿಗಣಿಸಿದ್ದಂತೆ ತೋರುತ್ತದೆ. ಹಾಗೂ ಈ ಮಾತು ಉತ್ತರಕರ್ನಾಟಕಕ್ಕೆ ಅನ್ವಯವಾಗುತ್ತದೆ. ಅಶ್ವಿನಿಯಿಂದ ತೊಡಗಿ ಹುಬ್ಬ ಮಳೆಯವರೆಗೆ ಮುಂಗಾರು (ಖಾರಿಫ್)ಆದರೆ, ಉತ್ತರೆಯಿಂದ ಅನುರಾಧ ಮಳೆಯವರೆಗೆ ಹಿಂಗಾರು(ರಾಬಿ). ಈ ಕ್ರಮಕ್ಕೆ ಅನುಗುಣವಾಗಿಯೇ ಭೂಮಿಯ ಉಳುಮೆ, ಬಿತ್ತನೆ, ಅರೈಕೆ, ಕಟಾವು, ಒಕ್ಕಣೆ ಮುಂತಾದವುಗಳನ್ನು ಕ್ರಮಗೊಳಿಸಿಕೊಂಡಿದ್ದಾರೆ. ಒಂದೊಂದು ಮಾತಿನಲ್ಲಿ ಹಿಡಿದಿಟ್ಟಿದ್ದಾರೆ. ಜನಪದಪರಂಪರೆ ಅವಕ್ಕೊಂದು ವ್ಯಕ್ತಿತ್ವ ರೂಪಿಸಿದೆ.

ಒಂದು ನಿರ್ದಿಷ್ಟವಾದ ಪ್ರದೇಶದಲ್ಲಿ ವಾಸಮಾಡುವ ಜನಸಮುದಾಯವನ್ನು ಜನಪದ ಎಂದು ವಿದ್ವಾಂಸರು ಕರೆಯುತ್ತಾರೆ. ಜನಪದ ಎಂದರೆ ಗುಂಪು ಎಂದರ್ಥ. ಇಂಥ ಜನಪದ ಸಂಸ್ಕೃತಿಯಲ್ಲಿ ಸರಳತೆ ಮತ್ತು ಮುಗ್ಧತೆ ಪ್ರಮುಖ ಲಕ್ಷಣಗಳಾಗಿ ಕಂಡು ಬರುತ್ತದೆ. ಯಾವುದೇ ರೀತಿಯ ಮೋಸ, ಕಪಟ, ಸುಳ್ಳು, ತಟವಟ ಮುಂತಾದ ಆಧುನೀಕರಣದ ಫಲಗಳು ಇಲ್ಲಿರುವುದಿಲ್ಲ. ಹಣದ ದಾಹ ಕಾಣಿಸುವುದಿಲ್ಲ. ಮಾತು ಆಡಿದರೆ ಮುಗಿಯಿತು, ಮುತ್ತು ಒಡೆದರೆ ಹೋಯಿತು ಎಂಬ ಗಾದೆ ಮಾತಿನಂತೆ ಜನ ನಡವಳಿಕೆಯಲ್ಲಿ ನೈತಿಕತೆ ಉಳಿಸಿಕೊಳ್ಳಲು ಸೆಣಸಾಡುತ್ತಾರೆ. ಪ್ರಾಣ ಬೇಕಾದರೆ ಬಿಡುತ್ತಾರೆ ಆಡಿದ ಮಾತನ್ನು ತಪ್ಪಿಸುವುದಿಲ್ಲ. ಇಂಥ ಜೀವನ ಶುದ್ಧತೆ ಜನಪದ ಸಂಸ್ಕೃತಿಯ ಭಾಗವಾಗಿರುತ್ತದೆ.

ಜನಪದ ಸಂಸ್ಕೃತಿಯಲ್ಲಿ ಸಂಪ್ರದಾಯ, ನಿಷ್ಠೆ, ದೈವಭಕ್ತಿ, ನೆಲದ ಪ್ರೀತಿ, ಪ್ರಧಾನ ಲಕ್ಷಣಗಳಾಗಿ ಕಂಡುಬರುತ್ತದೆ. ವೇದ, ಉಪನಿಷತ್, ಪುರಾಣ ಮುಂತಾದ ಲಿಖಿತ ಪರಿಕರಗಳಿಲ್ಲದೆ ಆಚರಣೆಯಲ್ಲಿ ಉಳಿಸಿಕೊಂಡು ಬಂದಂತಹ ನಂಬಿಕೆ ಸಂಪ್ರದಾಯಗಳು ಜನಪದಸಂಸ್ಕೃತಿಯ ಬೇರುಗಳಾಗಿರುತ್ತವೆ.

ಇಂತಹ ಮುಗ್ಧ ಜೀವಗಳ ಕೆಲವು ಕಲ್ಪನೆಗಳು ವಾಸ್ತವಕ್ಕೆ ಹತ್ತಿರವೇನೋ ಎಂಬಂತೆ ಕಾಣುತ್ತವೆ. ಬೇಸಾಯ ಜನಪದರ ಒಂದು ಮುಖ್ಯ ಕಸುಬು. ಬೇಸಾಯಕ್ಕೆ ಅತಿ ಮುಖ್ಯವಾದದ್ದು ನೆಲ ಮತ್ತು ನೀರು. ಮಳೆ ಬರದಿದ್ದರೆ ಬಿತ್ತನೆ ಇಲ್ಲ. ಬಿತ್ತಿದ ಮೇಲೆ ಬೆಳೆ ಬರದಿದ್ದರೆ, ಪೈರು ಸೀದು ಹೋಗುತ್ತದೆ. ಕಾಲಕಾಲಕ್ಕೆ ಮಳೆ ಬಂದು ಕೈಗೆ ಬೆಳೆ ಬಂದಾಗ ದುಡಿಯುವಂಥ ಶ್ರಮಜೀವಿಗಳಿಗೆ ಹಬ್ಬ, ಹರಿದಿನಗಳು, ಮದುವೆ ಮುಂಜಿಗಳು, ಜಾತ್ರೆ ಸಡಗರಗಳು ಕಾಣಿಸಿಕೊಳ್ಳುತ್ತೇವೆ. ಸುತ್ತಮುತ್ತಲಿನ ಪ್ರಕೃತಿ ವ್ಯಾಪಾರದಿಂದ ಆತ ಮಳೆಯ ಭವಿಷ್ಯವನ್ನು ಈ ಮುಂದಿನಂತೆ ನುಡಿಯುತ್ತಾನೆ.

ಗುಡುಗುಡು ಗುಟ್ಟೀತು ನಡುಬಾಣ ಮಿಂಚೀತು

ಮೂಡಾದ್ರಿ ಅಂಬು ದಂಡಿನ – ಕುದುರೆ ಮೇಲೆ

ಚೆಂಡಾಡಿ ಹುಯ್ಯೋ ಮಳೆರಾಯ – ಮಳೆದೇವ

ಮಳಿಯಪ್ಪ ಮಳೆರಾಜ ಕರೆಯುತಾರೋ ನಿನ್ನ

ಮೊದಲು ಕೂರಿಗೆ ರೈತರು – ಹೊಲದಾಗ

ಫಲವೆದ್ದು ಕೈಯ ಮುಗಿದಾವ[2].

ನೆಲ ಮತ್ತು ನೀರುಗಳ ಬಗ್ಗೆ ಜನಪದರಿಗೆ ಇರುವ ಗೌರವ, ಶ್ರದ್ಧೆ ಎರಡೂ ಒಂದಾಗಿ ಬೆರೆತ, ಅಮೂರ್ತವನ್ನು ಮೂರ್ತವಾಗಿ ಗ್ರಹಿಸಿ ಮಾನವೀಕರಣಗೊಳಿಸುವ ತಾತ್ವಿಕತೆಯನ್ನು ಮೇಲೆ ಉದಾಹರಿಸಿದ ಪದ್ಯಗಳಲ್ಲಿ ಕಾಣಬಹುದು.

ಮಳೆಯ ಹುಟ್ಟಿನ ಬಗ್ಗೆಯೂ ಇದೇ ರೀತಿಯ ಭಾವನೆ ಜನಪದ ಸಂಸ್ಕೃತಿಯಲ್ಲಿದೆ. ಮಳೆಯನ್ನು ಪ್ರಾಕೃತಿಕವಾದ ಸಂಗತಿ ಎಂದು ಭಾವಿಸದೆ, ಮಳೆಯಪ್ಪ, ಮಳೆರಾಜ, ಸಾಲತರಲು ಹೋಗುವವನು ಎಂಬ ವ್ಯಕ್ತೀಕರಣ ಕಲ್ಪನೆಗಳು ಮುಗ್ಧ ಜನರ ಮನಸ್ಸಿನಲ್ಲಿ ನೆಲೆಯೂರಿವೆ. ಆತನಿಗೂ ಮನುಷ್ಯರಿಗಿರುವಂತೆಯೇ ಹೆಂಡತಿ ಮಕ್ಕಳು ಇದ್ದಾರೆ. ಕೋಪಬಂದಾಗ ಮುನಿಸಿಕೊಂಡು ದೂರಹೋಗುತ್ತಾನೆ. ಆಗ, ಆತನನ್ನು ಒಲಿಸಿಕೊಳ್ಳಲು ನಾನಾ ತರದ ಆಚರಣೆ ಮಾಡುತ್ತೇವೆ. ಇಂಥ ಮಳೆಯ ಹುಟ್ಟಿನ ಬಗ್ಗೆ ನಮ್ಮ ಜನಪದಸಂಸ್ಕೃತಿಯಲ್ಲಿ ವಿಶ್ಲೇಷಿಸುತ್ತಾ ಸಾಗಿದಂತೆ, ಮುಗ್ಧ ಜನಪದರಲ್ಲಿ ಮಳೆಯನ್ನು ಕುರಿತ ಒಂದು ಸ್ವಾರಸ್ಯಕರವಾದ ಕಲ್ಪನೆ ಇರುವುದನ್ನು ನಮ್ಮೂರಿನ ಹಿರಿಯರಾದ ನಿಂಗೇಗೌಡರು ತಿಳಿಸಿದಾಗ ಕುತೂಹಲ ಹಾಗೂ ಆಶ್ಚರ್ಯ, ಜೊತೆಗೆ ನಮ್ಮ ಜನಪದರಲ್ಲಿರುವ ಕಲ್ಪನಾ ಚಾತುರ್ಯ. ಕಥನ ಶೈಲಿಯನ್ನು ಕಂಡು ಬೆರಗಾದದ್ದು ಇದೆ. ಈ ಕಲ್ಪನೆ ಈ ಮುಂದಿನಂತಿದೆ.

ದಕ್ಷಬ್ರಹ್ಮ-ವೇದವತಿ ದಂಪತಿಗಳಿಗೆ ಬಹುಕಾಲದಿಂದ ಮಕ್ಕಳಿರಲಿಲ್ಲ. ಇವರು ಶಿವನ ಬಳಿಗೆ ಹೋಗಿ ಮಕ್ಕಳ ವರವನ್ನು ಬೇಡುತ್ತಾರೆ. ಅದರ ಫಲವಾಗಿ ಇವರಿಗೆ ೨೭ ಜನ ಹೆಣ್ಣು ಮಕ್ಕಳು ಜನಿಸುತ್ತಾರೆ. ಅವರು ಪ್ರಾಯಕ್ಕೆ ಬರಲು ದಕ್ಷಬ್ರಹ್ಮ ಅವರಿಗೆ ವಿವಾಹ ಮಾಡಲು ಮುಂದಾಗುತ್ತಾನೆ. ಆ ಸಂದರ್ಭದಲ್ಲಿ ಅವನು ಶಿವನ ವರ ಪ್ರಸಾದದಿಂದ ಮಕ್ಕಳಾದ ಕಾರಣ ಶಿವನಿಗೆ ತನ್ನ ಮಗಳನ್ನು ಕೊಡಲು ತೀರ್ಮಾನಿಸುತ್ತಾನೆ. ಶಿವನು ಕೂಡ ಇದಕ್ಕೆ ಒಪ್ಪಿ, ಗೌರಿಯನ್ನು ವಿವಾಹವಾಗುತ್ತಾನೆ. ಉಳಿದ ೨೬ ಜನ ಹೆಣ್ಣು ಮಕ್ಕಳಲ್ಲಿ ೫ ಜನರನ್ನು ಇತರ ದೇವಮಾನವರಾದಿಯಾದ ಗಂಧರ್ವರಿಗೆ ಕೊಟ್ಟು ವಿವಾಹ ಮಾಡುತ್ತಾನೆ. ಅನಂತರ ಚಂದ್ರಮನು ಉಳಿದ ೨೧ ಜನರಲ್ಲಿ ಅತ್ಯಂತ ರೂಪವತಿಯಾದ ರೋಹಿಣಿಯ ಮೇಲಿನ ಪ್ರೇಮದಿಂದ ವಿವಾಹವಾಗಲು ಮುಂದಾಗುತ್ತಾನೆ. ಈ ಸಂದರ್ಭದಲ್ಲಿ ದಕ್ಷಬ್ರಹ್ಮನು ಚಂದ್ರಮನಿಗೆ ಒಂದು ಷರತ್ತನ್ನು ಹಾಕುತ್ತಾನೆ. ಅದೇನೆಂದರೆ ರೋಹಿಣಿಯ ಜೊತೆಗೆ ತನ್ನ ಉಳಿದ ಹೆಣ್ಣು ಮಕ್ಕಳನ್ನು ಸಮಾನವಾಗಿ ಸುಖ-ಸಂತೋಷದಿಂದ ನೋಡಿಕೊಳ್ಳುವುದಾದರೆ ಮದುವೆಗೆ ಒಪ್ಪುವುದಾಗಿ ನುಡಿಯುತ್ತಾನೆ. ಇದಕ್ಕೆ ಚಂದ್ರಮನು ಒಪ್ಪಿ ರೋಹಿಣಿಯಾದಿಯಾಗಿ ಎಲ್ಲಾ ೨೦ ಜನರ ದಕ್ಷನ ಕನ್ಯಾಮಣಿಯರನ್ನು ವಿವಾಹವಾಗುತ್ತಾನೆ.

ಹೀಗಿರಲು ಒಂದು ದಿನ ದಕ್ಷಬ್ರಹ್ಮನು ತನ್ನ ಹೆಣ್ಣು ಮಕ್ಕಳನ್ನು ನೋಡಲು ಅಳಿಯನಾದ ಚಂದ್ರಮನ ಬಳಿಗೆ ಹೋಗುತ್ತಾನೆ. ಚಂದ್ರಮ ಮತ್ತು ರೋಹಿಣಿಯರು ಸಂತೋಷದಿಂದ ಸಮಯ ಕಳೆಯುತ್ತಿರುತ್ತಾರೆ. ಇದನ್ನು ಕಂಡು ದಕ್ಷಬ್ರಹ್ಮನು ಸಂತೋಷಗೊಳ್ಳುತ್ತಾ, ರೋಹಿಣಿಯ ಯೋಗಕ್ಷೇಮವನ್ನು ವಿಚಾರಿಸಿ ಸ್ವಲ್ಪ ಸಮಯ ಕಳೆಯುತ್ತಾನೆ. ಅನಂತರದಲ್ಲಿ ದಕ್ಷಬ್ರಹ್ಮನಿಗೆ ತನ್ನ ಉಳಿದ ಮಕ್ಕಳ ನೆನಪಾಗಿ ಚಂದ್ರಮನನ್ನು ಕೇಳಲು ಅವನು ಉದಾಸೀನತೆಯಿಂದ ಅವರೆಲ್ಲೋ ಇದ್ದಾರೆ ಎನ್ನಲು, ರೋಹಿಣಿಯು ತಂದೆಗೆ ನಿಜ ಸಂಗತಿಯನ್ನು ತಿಳಿಸುತ್ತಾಳೆ. ಅಪ್ಪಾಜಿ ನನ್ನ ತಂಗಿಯರು ಇಲ್ಲಿ ಸುಖವಾಗಿಲ್ಲ. ಚಂದ್ರಮನು ಅವರೆಲ್ಲರನ್ನು ಒಂದೊಂದು ಕೋಣೆಯಲ್ಲಿ ಕೂಡಿಹಾಕಿರುವುದಾಗಿ ತಿಳಿಸುತ್ತಾಳೆ. ಇದರಿಂದ ಕೋಪಗೊಂಡ ದಕ್ಷಬ್ರಹ್ಮನು ಅಳಿಯನಾದ ಚಂದ್ರಮನಿಗೆ ಅಂಧಕನಾಗುವಂತೆ ಶಾಪವನ್ನು ಕೊಟ್ಟು ಹೊರಟು ಹೋಗುತ್ತಾನೆ. ಇದರಿಂದ ಅತೀವವಾಗಿ ನೊಂದ ಚಂದ್ರಮನು ಶಿವನ ಬಳಿ ತನ್ನ ತಪ್ಪನ್ನು ನಿವೇದಿಸಿಕೊಳ್ಳುತ್ತಾನೆ. ಶಿವನು ಅವನ ಶಾಪವನ್ನು ವಿಮೋಚನೆಗೊಳಿಸಲು ಚಂದ್ರಮನನ್ನು ಭೂಮಿಯನ್ನು ಬೆಳಗುವಂತೆ ಹೇಳುತ್ತಾನೆ. ಅದರಂತೆ ಚಂದ್ರಮನು ಭೂಮಿಯನ್ನು ಬೆಳಗುವುದಾಗಿ ಹೇಳಿ ಹೊರಟು ಬರುತ್ತಾನೆ. ಈ ವಿಷಯವನ್ನು ತಿಳಿದ ಅವನ ಮಡದಿಯರು ಮೇಘರಾಜನ ಬಳಿ ಹೋಗಿ ಮಳೆಗಳಾಗಿ ಜನ್ಮವೆತ್ತುತ್ತಾರೆ. ಇವರು ಮೂರು ದಿವಸಕ್ಕೆ ಅಥವಾ ನಾಲ್ಕು ದಿವಸಕ್ಕೆ ಒಂದು ಪಾದದಂತೆ ಕಾಣಿಸಿಕೊಳ್ಳುತ್ತಾರೆ. ಮಳೆ ನಕ್ಷತ್ರದಲ್ಲಿ ಪ್ರತಿಮಳೆಗೂ ನಾಲ್ಕು ನಾಲ್ಕು

ಪಾದಗಳನ್ನು ಹೇಳಿರುವುದು ಇಲ್ಲಿ ಗಮನಾರ್ಹ. ಹೀಗೆ ಮಳೆಯ ಹುಟ್ಟಿನ ಬಗ್ಗೆ ನಮ್ಮ ಜನಪದರಲ್ಲಿರಬಹುದಾದ ಬಹಳ ಸ್ವಾರಸ್ಯಪೂರ್ಣ ಕಥಾನಕ ಕಲ್ಪನೆ ಇದಾಗಿದೆ.

ಸರ್ವಜ್ಞ ವೇದಾಂತವಾಗಲೀ, ವೈದ್ಯವಾಗಲೀ ಅದನ್ನು ಶಾಸ್ತ್ರಾನುಸಾರವಾಗಿ, ಶಾಸ್ತ್ರೀಯವಾದ ರೀತಿಯಲ್ಲಿ ಪಂಡಿತರು ಮೆಚ್ಚುವಂತೆ ಬೋಧಿಸುವುದಕ್ಕೆ ಹೋಗುವುದಿಲ್ಲ. ಅವನು ಹೇಳಿರುವುದು ಸಾಮಾನ್ಯವಾಗಿ ಅನುಭವದಿಂದ ಬಂದು ಎಲ್ಲರಲ್ಲಿಯೂ ಪ್ರಚಾರದಲ್ಲಿದ್ದು ಎಲ್ಲರಿಗೂ ಅರ್ಥವಾಗುತ್ತಿದ್ದುದು ಆಗಿದೆ. ಹೀಗೆ ಅವನು ಜ್ಯೋತಿಷ್ಯದ ಗಣಿತ, ಫಲಶಕುನ ಮುಂತಾದವುಗಳ ಮೇಲೂ ಕೆಲವು ಪದ್ಯಗಳನ್ನು ಬರೆದಿದ್ದಾನೆ. ಇವುಗಳ ಜೊತೆಗೆ ಇವನು ಮಳೆ ಬರುವ ಲಕ್ಷಣ, ಗುರು, ಶನಿ ಮುಂತಾದ ಗ್ರಹಗಳ ವಿಚಾರದಿಂದ ಒದಗುವ ಫಲ ಮುಂತಾದ ಅಂಶಗಳನ್ನು ತಿಳಿಸಿರುವುದನ್ನು ಕಾಣಬಹುದು. ಮಳೆಯ ಲಕ್ಷಣವನ್ನು ತಿಳಿಸುವುದರ ಜೊತೆಗೆ ಹುಟ್ಟಿನ ಸ್ವರೂಪವನ್ನು ತಿಳಿಸುತ್ತದೆ. ಆದ್ದರಿಂದಲೇ ಸರ್ವಜ್ಞನನ್ನು ಆಡುಮುಟ್ಟದ ಸೊಪ್ಪಿಲ್ಲ, ಸರ್ವಜ್ಞ ಕೈಯ್ಯಾಡಿಸದ ಕ್ಷೇತ್ರವಿಲ್ಲ ಎಂದು ನಮ್ಮ ವಿದ್ವತ್ ಸಮೂಹವು ಹೇಳಿರುವ ಮಾತು ನಿಜವೆನಿಸುತ್ತದೆ.

ಉತ್ತರಕರ್ನಾಟಕದಲ್ಲಿ ಯುಗಾದಿಯ ಮಾರನೆಯ ದಿನ ಸಂಜೆ ಚಂದ್ರನನ್ನು ನೋಡುವ ಪದ್ಧತಿಯೊಂದಿದೆ. ಅಂದು ಸಂಜೆ ಚಂದ್ರನನ್ನು ನೋಡಿ, ಹಿರಿಯರಿಗೆ ನಮಸ್ಕರಿಸಿ ಆಶೀರ್ವಾದ ಪಡೆಯುವ ರೂಢಿ ಇದೆ. ಚಂದ್ರನು ಯಾವ ಕಡೆ ವಾಲಿದ್ದಾನೆ ಎಂಬುದನ್ನು ಗುರುತಿಸಿ ಆ ವರ್ಷದ ಮಳೆ, ಬೆಳೆಗಳ ಬಗೆಗೆ ನಿರ್ಧರಿಸುವ ರೂಢಿಯಿದೆ. ಇದೂ ಕೂಡಾ ಮಳೆಯ ಹುಟ್ಟು, ಸ್ವರೂಪ, ಅದರಿಂದಾಗುವ ಲಾಭ, ನಷ್ಟಗಳ ಬಗೆಗೆ ನೇರವಾಗಿ ಹೇಳದಿದ್ದರೂ ಪರೋಕ್ಷವಾಗಿ ಆ ವಿಚಾರಗಳನ್ನು ತಿಳಿಸುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ.

ಮಳೆರಾಯ ಪ್ರಪಂಚದ ಹಲವಾರು ಸಂಸ್ಕೃತಿಗಳಲ್ಲಿ ಬೇರೆ ಬೇರೆ ರೂಪಗಳಲ್ಲಿ ಹಲವಾರು ದೇವತೆಗಳ ರಾಜನಾಗಿದ್ದಾನೆ. ವೈದಿಕಸಂಸ್ಕೃತಿಯಲ್ಲಿ ಬರುವ ದೇವೇಂದ್ರ, ರೋಮನ್ನರ ಜ್ಯೂಸ್ ದೇವತೆ ಮಳೆರಾಯನೇ ಆಗಿದ್ದಾನೆ. ಮಾನವನಲ್ಲಿ ವರುಣದೇವನ ಕಲ್ಪನೆ ಬಂದದ್ದೂ ವಿಶಿಷ್ಟ ರೀತಿಯಲ್ಲಿ ಮತ್ತು ಹಿನ್ನೆಲೆಯಲ್ಲಿ. ಕಾಡುಮೇಡುಗಳಲ್ಲಿ ಅಲೆದು ಜೀವನ ಸಾಗಿಸುತ್ತಿದ್ದ ಆದಿಜನಾಂಗಕ್ಕೆ ತಮ್ಮ ಇರುವಿಕೆಯ ಬಗೆಗೂ ಕಲ್ಪನೆ ಇರಲಿಲ್ಲವೆಂದರೆ ಆಶ್ಚರ್ಯಪಡಬೇಕಾಗಿಲ್ಲ. ಮಾನವನ ಬುದ್ಧಿ ವಿಕಾಸವಾದಂತೆ ತನ್ನ ಪರಿಸರದ ಅರಿವು ಅವನಿಗೆ ಆಗಿರಲಿಕ್ಕೆ ಸಾಕು. ತನ್ನ ಜನ್ಮಕ್ಕೆ ಕಾರಣವಾದ ತಾಯಿತಂದೆಗಳನ್ನು ದೇವರೆಂದು ಬಗೆದು ಲಿಂಗರೂಪದಲ್ಲಿ ಪೂಜಿಸತೊಡಗಿದ. ಹುಟ್ಟಿನಿಂದ ಸಾವಿನವರೆಗೆ ಅವನ ಇರುವಿಕೆಯ ಅವಧಿಯಲ್ಲಿ ಬದುಕುಳಿಯುವುದಕ್ಕಾಗಿ ಆಹಾರದ ಅವಶ್ಯಕತೆ ಕಂಡುಬಂತು. ಆಹಾರ ಬೆಳೆಗಳ ಬೆಳವಣಿಗೆಗೆ ಮತ್ತು ತನ್ನ ನಿತ್ಯೋಪಯೋಗಕ್ಕೆ ನೀರು ಸರಬರಾಜು ಮಾಡುವ ಮಳೆರಾಯನಿಗೆ

ಕೃತಜ್ಞತೆಯನ್ನು ಸಲ್ಲಿಸಬೇಕಾಗಿ ಬಂದಾಗ ಇಳೆಗೆ ಮಳೆ ತರಿಸುವ ಸೃಷ್ಟಿಯ ಅವ್ಯಕ್ತ ಶಕ್ತಿಯನ್ನೇ ದೇವರು ಎಂದು ಕರೆದು ವರುಣದೇವನ ಪೂಜೆ ಮಡತೊಡಗಿರಬೇಕು. ಎಲ್ಲ ದೇವತೆಗಳು ನೀರಿನೊಳಗಿಂದಲೇ ಉಗಮಿಸಿರುವುದನ್ನೂ ವೇದಗಳು (ಋಗ್ವೇದ) ಸಾರುತ್ತವೆ. ದೇವತೆಗಳ ಜನಕನೇ ನೀರು ಎಂದಾಗ ನೀರಿಗೆ ಕಾರಣವಾದ ಮಳೆಯನ್ನೇ ಮಹತ್ವದ ದೇವರೆಂದು ಪೂಜಿಸುವ ಪರಿಪಾಠ ಬಂದಿರಬೇಕು. ಈ ಪ್ರಕಾರವಾಗಿ ನಮ್ಮ ಜನಪದರಲ್ಲಿ ಮಳೆಯ ಹುಟ್ಟಿನ ಕಲ್ಪನೆ ಬೆಳೆದು ಬಂದಿದೆ.

ಪುರಾಣನಾಮಚೂಡಾಮಣಿ ಈ ೨೭ ನಕ್ಷತ್ರಗಳನ್ನು ದಕ್ಷನ ಹೆಣ್ಣುಮಕ್ಕಳೆಂದು ಅವರನ್ನು ಚಂದ್ರನೋರ್ವನಿಗೆ ಕೊಟ್ಟು ವಿವಾಹ ಮಾಡಲಾಗಿತ್ತು ಎಂದು ಹೇಳುತ್ತದೆ. ಆದರೆ ನಾವು ಇವುಗಳನ್ನು ಮಳೆ ನಕ್ಷತ್ರಗಳೆಂದು ಪರಿಗಣಿಸುತ್ತವೆ. ಇವುಗಳಲ್ಲಿ ಪ್ರಮುಖವಾಗಿ ಗುರುತಿಸುವ ಮಳೆಗಳ ಸಂಖ್ಯೆಯೇ ಬೇರೆಯಾಗಿದೆ. ಮುಂಗಾರು, ಹಿಂಗಾರು ಎಂಬುದಾಗಿ ಜನಪದರು ವಿಭಾಗಿಸುತ್ತಾರೆ. ಹೊಸಮಳೆಗಳು ಹಳೆ ಮಳೆಗಳು ಅಡ್ಡಮಳೆಗಳು ಎಂಬ ವಿಂಗಡನೆಯೂ ಉಂಟು. ಭವಿಷ್ಯ ಅನುಕ್ರಮವಾಗಿ ಅಶ್ವಿನಿ ಮಳೆಯನ್ನು ಹೊಸಮಳೆಯೆಂದು ಕರೆದಿದ್ದಾರೆ. ಉತ್ತರ ಭಾದ್ರ, ರೇವತಿ ಮಳೆಗಳು ಹಳೆಮಳೆಗಳೆಂದು ಕರೆಯಲ್ಪಡುತ್ತವೆ. ಹಾಗೆಯೇ ಪ್ರತಿಯೊಂದು ಮಳೆಯನ್ನು ತಮ್ಮದೇ ಅರ್ಥದಲ್ಲಿ ಅರ್ಥೈಸುವುದುಂಟು. ಮೃಗಶಿರಾ–ಮಿರುಗ, ಆದ್ರಾ–ಆದ್ರಿ, ಆಶ್ಲೇಷ–ಅಸಲಿ, ಮುಖ–ಮಗಿ, ಪುಬ್ಬ–ಉಬ್ಬ, ಚಿತ್ತ–ಚಿತ್ತಿ, ವಿಶಾಖ–ವಿಸಾತಿ ಇದರ ಜೊತೆಜೊತೆಗೆ ಒಂದೊಂದು ಮಳೆಗೂ ವಿಭಿನ್ನ ಕಾಲಮಾನಗಳನ್ನು ಕಂಡಿರುವ ಜನಪದರು ಹಲವಾರು ನಂಬಿಕೆಗಳನ್ನು ಬೆಳೆಸಿಕೊಂಡು ಬಂದಿದ್ದಾರೆ. ಸಾಮಾನ್ಯವಾಗಿ ಅಶ್ವಿನಿ ಮಳೆ (ಏಪ್ರಿಲ್ ತಿಂಗಳಲ್ಲಿ ಕಂಡು ಬರುವ ಮಳೆ) ಮಳೆ ಬಂದರೆ ಮುಂದಿನ ಏಳು ಮಳೆಗಳನ್ನು ಕಳೆಯುತ್ತೆ ಎಂಬ ನಂಬಿಕೆ ಇದೆ. ಈ ಮಳೆ ಬರಲೇಬಾರದು ಎಂಬ ನಂಬಿಕೆ ಜನಪದರದ್ದು. ಪ್ರಕೃತಿಯಲ್ಲಿ ನಡೆಯುವ ಕ್ರಿಯೆಗೂ ಮನುಷ್ಯನಿಗೂ ಅವಿನಭಾವ ಸಂಬಂಧವಿದೆ. ಯಾವುದೇ ಜೀವಿಯ ನಿಯಂತ್ರಣಕ್ಕೆ ಒಳಪಡದ ಪ್ರಕೃತಿ ತನ್ನದೇ ನೆಲೆಯಲ್ಲಿ ನಿರಂತರವಾಗಿ ಕಾರ್ಯಪ್ರವೃತ್ತವಾಗಿರುತ್ತದೆ. ಅದಕ್ಕೊಂದು ಅರ್ಥವನ್ನು ಕಲ್ಪಿಸುವ ಅರ್ಥೈಸುವ ಸಾಮಾನ್ಯ ಕೆಲಸಗಳನ್ನು ಮಾಡಿಕೊಂಡು ಬಂದಿರಬಹುದು ಅಷ್ಟೇ ಹೊರತು ಯಾವ ಯಾರ ನಿಯಂತ್ರಣಕ್ಕೂ ಒಳಪಡದ, ಬದಲಾಯಿಸಲು ಸಾಧ್ಯವಾಗದಿರುವ ಮೂಲ ಒಂದು ಅಡಗಿದೆ ಎನ್ನಬಹುದು. ಆ ಮೂಲದ ಹತ್ತಿರವು ಸುಳಿಯಲು ಸಾಧ್ಯವಾಗುವುದಿಲ್ಲವೇನೊ ಅನ್ನಿಸುವುದೇ ಇದರ ಅರ್ಥ. ಪ್ರಕೃತಿಯನ್ನು ಇಡಿಯಾಗಿ ಅರ್ಥೈಸಿಕೊಳ್ಳಲು ಸಾಧ್ಯವಿಲ್ಲ. ಆದರೆ ಜನಪದರ ನಂಬಿಕೆ ವಿಶಿಷ್ಟವಾದದು. ಏಕೆಂದರೆ ಅವರು ಮಳೆಗಾಲವಲ್ಲದಿರುವ ಸಂದರ್ಭಕ್ಕೆ ಒಣ ಮೋಡವಾದರೆ ಮಳೆ ಬೀಜಗಟ್ಟುತ್ತಿದೆ ಎಂದು ಅರ್ಥೈಸುತ್ತಾರೆ. ಎಂದೋ ಬೆಳಕಾಗುವ ಒಂದು ಮೋಡ, ಮಿಂಚು, ಗುಡುಗು ಅಚ್ಚರಿಕಯ ಪ್ರತೀಕವಾಗಿ ಕಾಣುವುದಿಲ್ಲ. ಅದನ್ನು ಅವರು ಮಳೆ ಬೀಜಗಟ್ಟುವ ಸಂಕೇತವಾಗಿ ಅರ್ಥೈಸುತ್ತಾರೆ. ಅವು ಸಾಹಿತ್ಯ ಮಾತ್ರವಾಗಿರದೇ ಜನಪದರ

ಜೀವನ ವಿಧಾನಗಳಾಗಿವೆ. ಅವುಗಳಿಗೆ ಜನಪದರು ಗುಣಗಳನ್ನು ಆರೋಪಿಸಿರುವುದನ್ನು ಕಂಡರೆ ಆ ಕಥನಗಳು ಅವರ ಸಂಪ್ರದಾಯಗಳಿಗೆ ಕಥನಗಳ ಸ್ವರೂಪ ಬಂದಿದೆ ಎಂಬುದರಲ್ಲಿ ಯಾವುದೇ ಅನುಮಾನವಿರಲಾರದು.

ಜನಪದರ ಪ್ರಕ್ರಿಯಾತ್ಮಕ ಕಾವ್ಯಕಲ್ಪನೆಯು ಮಳೆಗಳಿಗೆ ವ್ಯಕ್ತಿತ್ವ ಗುಣಗಳನ್ನು ಆರೋಪಿಸುತ್ತಲೇ ತಮ್ಮೊಳಗೆ ಒಂದು ಮಾಡಿಕೊಳ್ಳುವಲ್ಲಿ ಯಶಸ್ವಿಯಾಗುತ್ತಾರೆ. ಅಂದಲ್ಲಿ ಯಾವುದೇ ಅಂಶಗಳು ಜನಪದರಲ್ಲಿ ಲೌಕಿಕವ್ಯಕ್ತಿತ್ವದಲ್ಲಿ ಪರ್ಯಾವಸಾನವಾಗುತ್ತವೆ. ಯಾಕೆಂದರೆ, 'ಒಂದೊಂದು ಮಳೆಯದ್ದು ಒಂದೊಂದು ಪರಿ. ಆರಂಭದಲ್ಲೇ ಕಣ್ಣಾಮುಚ್ಚಾಲೆ ಆಡಿಸುವ ಅಶ್ವಿನಿಯದು ತುಂಟತನ. ಕಾದು ಕುಳಿತ ಧರಣಿಯನ್ನು ತಣಿಸು'ವ ಧಾವಂತ ಭರಣಿಯದು. ಕೃಷಿ ಕೃತ್ಯಗಳಿಗೆ ಅನುವು ಮಾಡಿಕೊಡುವವಳು ಕೃತ್ತಿಕೆ. ರೋಹಿಣಿ ಒಮ್ಮೊಮ್ಮೆ ರೆಚ್ಚೆ ಹಿಡಿದು ಕೂರುವ ಮಗನಂತೆ ಹಿಡಿದಳೆಂದರೆ ರಾಚಿ ಹೋಗಿಬಿಡುತ್ತಾಳೆ. ಮೃಗಶಿರ ಹೆಸರಿಗೆ ತಕ್ಕಂತೆ ಎಲ್ಲಾ ಜೀವಸಂಕುಲದ ನೆತ್ತಿ ತಣಿಸದಿರಳು. ಧೋಗುಡುತ್ತಾ ಆಗಸದಿಂದ ದುಮ್ಮಿಕ್ಕಿ ಬರುವ ಅಬ್ಬರದ ಆರಿದ್ರೆಯದೊಂದು ಪರಿ. ಅದು ಪಕ್ಕಾ ಹಟಮಾರಿ ಹೆಣ್ಣು. ಉದುಗುದುಗಿ ಸುರಿದು ಈ ಇಳೆಯೊಳಗಿನ ಎಲ್ಲಾ ಕಲ್ಮಷಗಳನ್ನು ಉಡುಗಿಸಿ ಹೋಗಿಬಿಡುತ್ತದೆ. ಪುನರ್ವಸು ಪುಷ್ಯಯರದ್ದು ಯಾವತ್ತೂ ಜೊತೆಯಾಟ. ಗ್ರಾಮೀಣ ಭಾಗದಲ್ಲಿ ಅದರಲ್ಲೂ ಮಲೆನಾಡಿನಲ್ಲಿ ಅಣ್ಣ ತಮ್ಮನ ಮಳೆಯೆಂದೇ ಗುರುತಿಸುವ ಇವೆರಡು ಮುನಿಸಿಕೊಂಡು ಕುಳಿತವೆಂದರೆ ಆ ವರ್ಷ ಅರೆ ಹೊಟ್ಟೆಯೇ ಗತಿ. ಆಶ್ಲೇಷ ಆಧರಿಸುವಳಾದರೆ ಮಘಾ ಮೊಗೆಮೊಗೆದು ಸುರಿಯುತ್ತಾಳೆ. ಪುಬ್ಬಾ ಉಬ್ಬುಬ್ಬಿ ಉಕ್ಕುವಳು ಉತ್ತರೆ ನಮ್ಮ ಬದುಕಿಗೆ ಉತ್ತರದಾಯಿ. ಹಸ್ತೆಯದು ಯಾವಾಗಲೂ ಅಭಯ ಹಸ್ತ. ಚಿತ್ತ ಚಿತ್ತೈಸಿದರೆ ಇನ್ನು ಚಿಂತೆಯಿಲ್ಲ. ಸ್ವಾತಿಯ ಆಗಮನದ ಹೊತ್ತಿಗೆ ಹೊಸಚೈತನ್ಯ ಮೊಳೆಯಲಾರಂಭಿಸುತ್ತದೆ. ಅಷ್ಟರಲ್ಲಿ ಇಳಾದೇವಿ ಹೊಸ' ಹೆಣ್ಣು ಮೈ ಕೈ ತುಂಬಿಕೊಂಡಂತೆ ಬಾಸವಾಗುತ್ತಾಳೆ. ಹೀಗೆ ಒಂದೊಂದು ಮಳೆ ಮಹಾನಕ್ಷತ್ರಗಳು ಒಂದೊಂದು ವೈಶಿಷ್ಟ್ಯದೊಂದಿಗೆ ಗಮನಸೆಳೆಯುತ್ತವೆ'[೩].

**ಭೂಮಿತತ್ವದ ಕೇಂದ್ರೀಯ ನಿಲುವು.**

ಮೊದಲು ಭೂಮಿಯ ಸೃಷ್ಟಿಯ ಬಗೆಗೆ ಹೇಳುವುದಾದರೆ, ಪ್ರಚಲಿತ ಪ್ರತಿಪಾದನೆಯಂತೆ ಈ ಭೂಮಿ ಸೂರ್ಯನಿಂದ ಸಿಡಿದು ಬಂದ ಕೆಂಡದುಂಡೆ. ನಮ್ಮ ನಭೋಮಂಡಲದ ಅತ್ಯಂತ ದೊಡ್ಡ ನಕ್ಷತ್ರವಾಗಿರುವ ಸೂರ್ಯನ ಜ್ಯೋತಿರ್ವರ್ಷದಲ್ಲಿ ಆದ ಮಹಾನ್ ವಿಘಟನೆಯೊಂದು ಭೂಮಿಯ ಹುಟ್ಟಿಗೆ ಕಾರಣವಾಯಿತೆನ್ನುತ್ತದೆ ವಿಜ್ಞಾನ. ಭಯಂಕರ ಬಿಸಿಯ ದ್ರವಗೋಲವೊಂದು ಸೂರ್ಯನಿಂದ ಸಿಡಿದು ದೂರ ಬಂತು. ಸೂರ್ಯನಪಥದಲ್ಲಿ ಅದು ಸುತ್ತುತ್ತಾ ಬಂದಂತೆಲ್ಲಾ ತಣ್ಣಗಾಗಿ ಘನರೂಪಕ್ಕೆ

ತಿರುಗಿತು. ಮೇಲ್ಭಾಗ ಬೇಗನೆ ತಣ್ಣಗಾಗಿಬಿಟ್ಟದ್ದರಿಂದ ಒಳಭಾಗಕ್ಕೆ ತಣಿವ ಅವಕಾಶವೇ ಉಳಿಯಲ್ಲಿಲ್ಲ. ಈಗಾಗಿ ಭೂಮಿಯ ಕೇಂದ್ರಭಾಗ ಇಂದಿಗೂ ಕುದಿಯುತ್ತಲೇ ಇದೆಯಂತೆ.

ತಣ್ಣಗಾದ ಹೊರಭಾಗ ಗೋಲವಾಗಿ ಪರಿವರ್ತನೆಯಾಗುವಾಗ ಒಂದಷ್ಟು ಬೆಟ್ಟಗುಡ್ಡಗಳು ತಗ್ಗು ಹಳ್ಳಗಳು ನಿರ್ಮಾಣವಾದವು. ಈ ಹಂತದಲ್ಲೆ ಭೂಮಂಡಲದ ಸುತ್ತಾ ತೇವಾಂಶ ಘನೀಭವಿಸುತ್ತಾ ಹೋಯಿತು. ಕುದಿಯುವ ಭೂಗೋಳ ತಣಿಯುವ ಪ್ರಕ್ರಿಯೆಯಲ್ಲಿ ಆವಿ ಮೇಲೆದ್ದು ಸುತ್ತಲೂ ಮೋಡವನ್ನೂ ತಟ್ಟಿತು. ಮೋಡಮಳೆಯಾಗಿ ಪರಿವರ್ತನೆಗೊಂಡಿತು. ಅದು ಆಗಸದಿಂದ ಸುರಿಯಲಾರಂಭಿಸಿತು. ಇಲ್ಲೂ ನಿರಂತರ ವರ್ಷಧಾರೆ. ಹೀಗೆ ಸುರಿದ ನೀರಧಾರೆ ಭೂಮಿಯ ಸೃಷ್ಟಿಕಾಲದಲ್ಲಿ ನಿರ್ಮಾಣಗೊಂಡಿದ್ದ ತಗ್ಗುಗಳನ್ನು ಶೇಖರಗೊಂಡಿತು. ಅವೇ ಇಂದಿನ ಸಮುದ್ರ. ಸಮುದ್ರ ಸೇರುವ ಮುನ್ನ ಅಲ್ಲಲ್ಲಿ ಪುಟ್ಟ ತಗ್ಗುಗಳಲ್ಲಿ ನಿಂತ ನೀರು ಭೂಮಿಯೊಳಕ್ಕೂ ಇಳಿಯಿತು. ಅಂತರ್ಜಲ ನಿರ್ಮಾಣವಾಯಿತು. ಅಂತರ್ಜಲದಿಂದ ನದಿ, ಕೆರೆಗಳು ಜೀವ ಪಡೆದವು. ಹೀಗೆ ಭೂಮಿಯ ಬಹುಪಾಲು ಜಲಾವೃತಗೊಂಡಿತು.

ಭೂಮಿಯ ಸೃಷ್ಟಿಯ ಬಗ್ಗೆ ಇರುವ ಇನ್ನೊಂದು ಪ್ರತಿಪಾದನೆಯೆಂದರೆ ವಾತಾವರಣದಲ್ಲಿನ ಧೂಳಿನ ಕಣಗಳಿಂದ ಭೂಮಿ ರಚನೆಯಾಗಿದೆ. ಅದು ಇನ್ನೂ ಸಾಬೀತಾಗಿಲ್ಲ ಬಿಡಿ. ಹಾಗೆಯೇ ನೀರಿನ ಸೃಷ್ಟಿಯ ಬಗೆಗೂ ಚರ್ಚೆಯಲ್ಲಿರುವ ಇನ್ನೊಂದು ಸಂಗತಿಯೆಂದರೆ ಅದು ಭೂಮಿಯ ಸೃಷ್ಟಿಯ ಜತೆಜತೆಗೇ ಆದದ್ದೆಂಬುದು. ಭೂಮಿ ತಂಪಾಗುವ ಸಂದರ್ಭದಲ್ಲಿ ಘನೀಭವನಗೊಳ್ಳುತ್ತಿದ್ದ ಕಲ್ಲುಗಳು ತೇವಾಂಶವನ್ನು ವಿಸರ್ಜಿಸಿವೆಯಂತೆ. ಅಂಥ ತೇವಾಂಶ ಹನಿಗಳ ರೂಪ ಪಡೆದು, ಹನಿಗಳು ಹರಿವಾಗಿ, ಹರಿವು ಹಳ್ಳ, ಕೊಳ್ಳ ನದಿ, ತೊರೆಗಳಾಗಿ ಸಮುದ್ರ ರಚನೆಯಾಗಿದೆ. 'ಹೇಗೂ ಇರಲಿ, ನೀರು ಈ ಪ್ರಕೃತಿಯ ಅತ್ಯದ್ಭುತ ಸೃಷ್ಟಿ ಎನ್ನುವುದಂತೂ ಸತ್ಯ. ಆ ನೀರಿನಿಂದಲೇ ಇಡೀ ಜೀವರಾಶಿಯ ಜನನವಾಗಿದೆ ಎಂಬುದೂ ನಿಜ. ಇದರಲ್ಲಿ ಭಿನ್ನಮತವೇ ಇಲ್ಲ. ಇಂಥ ನೀರನ್ನು ಮತ್ತೆ ಸೃಷ್ಟಿ ಮಾಡಲಂತೂ ನಮ್ಮಿಂದ ಸಾಧ್ಯವೇ ಇಲ್ಲದ ಮಾತು. ಅದನ್ನು ಹಂಚಿಕೊಂಡು ವ್ಯವಸ್ಥಿತವಾಗಿ ಅಗತ್ಯಕ್ಕನುಗುಣ ಬಳಸುವುದರಲ್ಲಷ್ಟೇ ಜಾಣ್ಮೆ ತೋರಬೇಕು. ಆಗಲೇ ನೀರಿನ ಸೌಂದರ್ಯ ಕಂಡೀತು'[೪]. ಪರಂಪರೆಯು ಮಳೆ ಮತ್ತು ಭೂಮಿಯನ್ನು ಕೇಂದ್ರತತ್ವದಲ್ಲಿಯೇ ನಿರ್ವಚಿಸಿಕೊಡಿದೆ. ಅವನ್ನು ದಕ್ಷಪ್ರಜಾಪತಿಯ ಹೆಣ್ಣುಮಕ್ಕಳೆಂದೇ ಈಗಲೂ ಕರೆಯಲ್ಪಟ್ಟಿವೆ. ವ್ಯಕ್ತಿಭಿನ್ನತೆಯಂತೆ ಅವುಗಳಿಗೂ ವಿಚಿತ್ರ, ಭಿನ್ನವ್ಯಕ್ತಿತ್ವಗಳನ್ನು ಆರೋಪಿಸಿದ್ದಾರೆ. 'ಮಳೆ ಹನಿಯೆಂದರೇ ಹಾಗೆ; ಒಂದೊಂದೂ ಮುತ್ತು, ರತ್ನ, ಪಚ್ಚೆ, ಹವಳಗಳಿಗೆ ಸಾಟಿಯಾಗಬಲ್ಲಷ್ಟು ಅಮೂಲ್ಯವಾದವು. ಅಶ್ವಿನಿ, ಭರಣಿ, ಕೃತ್ತಿಕಾ, ರೋಹಿಣಿ... ಹೀಗೆ ಮೊದಲ್ಗೊಂಡು ರೇವತಿಯವರೆಗಿನ ೨೭ ಮಳೆ ಮಹಾನಕ್ಷತ್ರಗಳಲ್ಲಿ ಒಂದೊಂದಕ್ಕೂ ಒಂದೊಂದು ವೈಶಿಷ್ಟ್ಯ, ಒಂದೊಂದು ಹಿರಿಮೆ, ಗರಿಮೆ. ಭಾರತೀಯರ ಬದುಕಿನಲ್ಲಿ ಎಲ್ಲ

ನಿರ್ಧಾರಗಳೂ ರೂಪುಗೊಳ್ಳುವುದು ಈ ಮಳೆ ನಕ್ಷತ್ರಗಳ ಮೇಲೆಯೇ[೫]. ಹಾಗಾಗಿಯೇ ಮಳೆಯೆಂಬುದು ಮಾನವನ ಜೀವನಾವರ್ತನಾಕ್ರಿಯೆಗಳ ಅವಿಭಾಜ್ಯ ಅಂಗವಾಗಿದೆಯೆಂಬುದನ್ನು ಮಾನವ ಸಂಕುಲ ಪರಿಗಣಿಸುತ್ತಿರುವುದು.

**ಅಶ್ವಿನಿ ಮಳೆ**

ಪ್ರತಿ ವರುಷ ಯುಗಾದಿಯ ದಿವಸದಿಂದ ಮಳೆ ನಕ್ಷತ್ರಗಳ ಲೆಕ್ಕ ಆರಂಭವಾಗುತ್ತದೆ. ಇದು ವರುಷದ ಮೊದಲ ಮಳೆ. ಈ ಮಳೆ ಬರಬಾರದು. ಯಾಕೆಂದರೆ 'ಅಶ್ವಿನಿ ಬಂದರೆ ಹಸುವಿನ ಬಾಯಿಗೆ ಹುಲ್ಲಿಲ್ಲ'. ಅಕಸ್ಮಾತ್ ಬಂದರೆ ಮುಂದಿನ ಫಸಲು ಹಾಳಾಗುತ್ತದೆ. 'ಅಶ್ವಿನಿಮಳೆ ಬಂದರೆ ಅಳೋ ಮಕ್ಕಳಿಗೆ ಹಾಲಿಲ್ಲ' ಮಕ್ಕಳಿಗೂ ಆಹಾರವಿಲ್ಲದಂತೆ ಮಾಡುತ್ತದೆ. ಈ ಹೊತ್ತಿಗೆ ಆಗಲೆ ಭೂಮಿಯೆಲ್ಲ ಹರಗಿ ಬಿತ್ತನೆ ಮುಂತಾದುವಕ್ಕೆ ಸಿದ್ಧವಾಗಬೇಕು. ಅಶ್ವಿನಿಮಳೆಯು ಗುಡುಗು ಸಿಡಿಲುಗಳ ಸಮೇತ ಜೋರಾಗಿ ಬರುವುದರಿಂದ ಭೂಮಿಯು ಗಟ್ಟಿಯಾಗುತ್ತದೆ. ಇಲ್ಲವೇ ಭೂಮಿಯು ಮೇಲು ಪದರ ಕೊಚ್ಚಿಹೋಗಿ ಫಲವತ್ತತೆ ಕಡಿಮೆಯಾಗುತ್ತದೆ. ಇದೇ ಸಮಯದಲ್ಲಿ ತೋಟದಲ್ಲಿ ತೆಂಗು ಅಡಿಕೆಗಳು ಹಸಿ ಹೊಡೆದಿರುತ್ತವೆ. ಆಗ 'ಅಶ್ವಿನಿ ಬಂದರೆ ಅಡಿಕೆ ತೆಂಗು ಹುಸಿಯಾಕ್ಕವೆ. ಎಂಬುದನ್ನು ಸ್ವಾನುಭವದಿಂದ ಕಂಡುಕೊಂಡ ಜನಪದರು ಆ ನೆಲೆಗಳಲ್ಲಿಯೇ ಜನಪದ ಸಾಹಿತ್ಯಕ್ಕೆ ತಾತ್ವಿಕನೆಲೆಗಟ್ಟನ್ನು ನಿರ್ಮಿಸಿಕೊಳ್ಳುತ್ತಾರೆ.

ಇದು ಬೇಸಿಗೆಯ ಧಗೆ ಕಳೆವ ಮೊದಲಮಳೆ. ನೆಲ ತಂಪಿಗಾಗಿ ಬಾಯಿಬಿಡುವ ಸಂದರ್ಭದಲ್ಲಿ ಚೆದುರಿದಂತೆ ಈ ಮಳೆ ಬೀಳುತ್ತದೆ. ಆದರೆ, ಇದರಿಂದ ನೆಲ ಸ್ವಲ್ಪ ತಂಪಾಗುವುದಲ್ಲದೆ ಬೇಸಾಯಕ್ಕೆ ಹೆಚ್ಚಿನ ರಕ್ಕಸನಂತೆ ಹೀರಿಕೊಂಡುಬಿಡುತ್ತದೆ. ಆ ನೀರು ನೆಲದ ಒಡಲಾಳಕ್ಕೆ ಇಳಿಯುತ್ತದೆ. ಮೇಲ್ಮೈನಲ್ಲಿ ಏನೂ ಉಳಿಯುವುದಿಲ್ಲ. ಆದ್ದರಿಂದಲೇ ಅಸೂನಿ ಮಳಿರೂಢಿಯಲ್ಲಿದೆ. ದಕ್ಷಿಣ ಕರ್ನಾಟಕದಲ್ಲಿ ಈ ಗಾದೆ ಚಾಲ್ತಿಯಲ್ಲಿಲ್ಲ. ಹೆಚ್ಚು ಒಣಭೂಮಿಯಿಂದ ಕೂಡಿರುವ ಉತ್ತರಕರ್ನಾಟಕದಲ್ಲಿ ತುಸುಹೊತ್ತು ಸ್ಯಾಂಪಲ್‌ಗಾದರೂ ಈ ನೀರು ಕೆಲ ತಾಸು ನಿಂತೀತು, ಉತ್ತರದಲ್ಲಿ ಅಲ್ಲ. ಆದ್ದರಿಂದಲೇ ಬಹುಶಃ ದಕ್ಷಿಣ ಕರ್ನಾಟಕದಲ್ಲಿ ಈ ಗಾದೆ ಬಳಕೆಯಲ್ಲಿ ಇಲ್ಲದಿರಬಹುದು. ಇಷ್ಟೆಲ್ಲ ಕಾರಣ ಆದರೂ ಅಶ್ವಿನಿ ಮಳೆ ಬರಲೇಬೇಕೆಂದೂ ಜನ ಬಯಸುತ್ತಾರೆ. 'ಅಶ್ವಿನಿ ಬಿದ್ದು ಹೊದ್ರೆ ಆ ಮೇಲಿನ ಮಳೆಗಳೂ ಇಲ್ಲ' ಎಂಬುದು ದಕ್ಷಿಣ ಕನ್ನಡದ ಜನರ ನಂಬಿಕೆ. ಆದರೆ ಈ ಮಳೆ ಬರಲು 'ಹಸನಾಗಿ ಬೆಳೆಯದೀ ಜಗವು, ಹಸಿವಿಗೆ ತೃಣವಿಲ್ಲ. ಪ್ರಜರಿಗೆ ಲೇಸಿಲ್ಲ. ಜಗದೊಳು ಸುಖ-ದುಃಖ ಮಿಶ್ರಫಲವು' ಎಂದು 'ರಟ್ಟ ಮತ' ಹೇಳುತ್ತದೆ.

**ಭರಣಿ ಮಳೆ**

'ಅಯ್ಯ ಭರಣಿ ಮಳೆಹೂದು
ಧರಣಿಯ ಮ್ಯಾಲೆಲ್ಲ
ನೀರು ಉಳ್ಳಾಡಿ ಹರ್ದು
ಉಳುಮೆಗೆ ಹದುವಾಯ್ತು'[೬]

೧. ಭರಣೀ ಮಳೆ ಧರಣಿಗೊಳ್ಳೆದು
೨. ಭರಣಿ ಬಂಗಾರದ ಕರಣಿ
೩. ಭರಣಿಮಳೆ ಬಂದು ಧರಣಿ ತಂಪಾಯ್ತು
೪. ಭರಣಿ ಸುರಿದು ಧರಣಿ ಬದುಕಿತು
೫. ಭರಣಿ ಮಳೆ ಧರಗೆ ಗಂಡ
೬. ಭರಣಿ ಬಂದರೆ ಧರೆಗೆಲ್ಲಾ ಬೆಳೆ

ಭರಣಿ ಬಂದರೆ ಬಹಳ ಒಳ್ಳೆಯದು. ಭೂಮಿಯಲ್ಲ ಸಮೃದ್ಧವಾಗುತ್ತದೆ. 'ಭರಣಿ ಬಂದರೆ ಬರ ಇಲ್ಲ' 'ಭರಣಿ ಬಂದರೆ ಧರಣಿಯೆಲ್ಲ ಸಮೃದ್ಧಿ' 'ಭರಣಿ ಬಂದರೆ ಧರಣಿಯಲ್ಲ ಜೋಳ' 'ಭರಣಿ ಬಂದರೆ ಧರಣಿಯೆಲ್ಲ ಫಸಲು' 'ಭರಣಿ ಬಂದರೆ ಬಂಗಾರ'. ಇವು ರೈತ ಅನುಭವದಿಂದ ಕಂಡುಕೊಂಡಿರುವ ಮಾತುಗಳು. ಭರಣಿಯಲ್ಲಿ ಭತ್ತದ ಬಿತ್ತನೆ ಶ್ರೇಷ್ಠ ಎಂದು ಅವರ ತಿಳುವಳಿಕೆ. ಅದಕ್ಕೇ ಭರಣೀ ಬಂದರೆ ಭತ್ತ ಎಂದು ಕಂಡುಕೊಂಡಿದ್ದಾರೆ. ಭರಣಿಯ ಮಳೆಯಲ್ಲಿ ಭರಣಿ ಹುಳುಗಳು (?) ಹುಟ್ಟಿ ಮುಂದಿನ ಫಸಲಿಗೆ ಕಾಡುವ ಕ್ರಿಮಿಕೀಟಗಳನ್ನು ತಿನ್ನುತ್ತವೆ ಎನ್ನುವುದು ಕೆಲವರ ನಂಬಿಕೆ. ಈ ಮಳೆಯಲ್ಲಿ ಜೋಳ, ಎಳ್ಳು, ಕೊತ್ತುಂಬರಿ, ಮೆಂತ್ಯ ಮುಂತಾದುವುಗಳ ಬಿತ್ತನೆ ಮಾಡುತ್ತಾರೆ.

ಜಾನಪದದಿಂದಲೂ, ಜ್ಯೋತಿಷ್ಯದಿಂದಲೂ, ಮುಕ್ತಕಂಠದಿಂದ ಮೆಚ್ಚಿಕೆಗೊಳಗಾಗಿರುವ ಮಳೆ ಭರಣಿ, ಈ ಮಳೆ ಜಗತ್ತನ್ನು ಬಂಗಾರದ ಕರಂಡವನ್ನಾಗಿ ಮಾಡುವುದೆಂದು ನಮ್ಮ ಜನ ಭಾವಿಸಿದ್ದಾರೆ. ಎಲ್ಲಾ ವಿಧದ ಬೆಳೆಗಳಿಗೂ ಇದು ಒಳಿತೆಂದು ಭಾವಿಸಲಾಗಿದೆ. ವಾಸ್ತವವಾಗಿ ಈ ಮಳೆ ಭೂಮಿಯನ್ನು ಕೃಷಿಕಾರ್ಯಕ್ಕೆ ಹದಗೊಳಿಸುವುದಕ್ಕಷ್ಟೇ ಉಪಯುಕ್ತವಿರುವಂತೆ ಕಾಣುತ್ತದೆ. ಯಾಕೆಂದರೆ 'ಮೃಗ ಪಂಚಕ'ದ ಎರಡನೆಯ ಮಳೆಯಾದ ಈ ಮಳೆ ಬೀಳಬೇಕಾದದ್ದು ಏಪ್ರಿಲ್ ಕೊನೆಯ ದಿನಗಳು ಅಥವಾ ಮೇ ಮೊದಲವಾರ. ಈ ದಿನಗಳಲ್ಲಿ ಜಮೀನು ಬರಿದಾಗಿರುತ್ತದೆ. ಅಥವಾ ಬೇಸಿಗೆಯ ಬೆಳೆ ತನ್ನ ಕೊನೆಯ ಹಂತದಲ್ಲಿರುತ್ತದೆ. ಆ ದಿನಗಳಲ್ಲಿ ಮಳೆ ಬಂದರೆ ನೆಲವನ್ನು ಹಸನುಗೊಳಿಸಲು ಸಾಧ್ಯ. ಬೇಸಿಗೆ ಬೆಳೆ ಇರುವೆಡೆಗಳಲ್ಲಿ ಈ ಮಳೆ ಬಾರದಿದ್ದರೆ ಬೆಳೆ ವಿಫಲಗೊಳ್ಳುವುದೂ ಸಾಧ್ಯ.

**ಕೃತಿಕಾ**

೧. ಕರ್ತಿಕಾ ಮಳೆನಾ ಕೇಳುವವರೇ ಇಲ್ಲ.

೨. ಕೃತ್ತಿಕೆ ಬೀಳದಿದ್ದರೆ ಬಾಯಿಗೆ ಮೃತ್ತಿಕೆ

೩. ಕೃತ್ತಿಕೆಗೆ ಕುರುಹು ಗಾಳಿ

ಈ ಮಳೆ ಕುರಿತಂತೆ ಮಹತ್ವದ ಗಾದೆಗಳು ದೊರೆತಿಲ್ಲ. ಕೃತಿಕೆಗೆ ನೆಲ ಕೆದರಬಾರದು. ಬೀಜ ಬಿತ್ತಬಾರದು ಮತ್ತು ಕಿರ್ಕೆ ಮಳೆಯಲ್ಲಿ ಬ್ಯಾಸಾಯ ಹೂಡಬಾರದು ಎನ್ನುವ ಅವರ ಎರಡು ಮಾತುಗಳು ಯಾಕೆಂಬುದರ ಬಗ್ಗೆ ಅವರಲ್ಲಿ ಸರಿಯಾದ ಉತ್ತರಗಳು ಸಿಗುತ್ತಿಲ್ಲ. ಹದ ಮಳೆಯಲ್ಲ, ಬೆದೆ ಮಳೆಯಲ್ಲವೆಂಬುದು ಕೆಲವರ ಸಮಜಾಯಿಷಿ. ಆದರೆ ಈ ಮಳೆಯಲ್ಲಿ ನವಣೆ, ಜೋಳ, ತೊಗರಿ, ಎಳ್ಳು, ಪುಂಡಿ, ಮೆಂತ್ಯ, ಮುಂತಾದ ದವಸಗಳ ಬಿತ್ತನೆ ಮಾಡುತ್ತಾರೆ. ಪ್ರಾಯಶಃ ಹಿಂದಿನ ಮಾತುಗಳು ಈಗ ಅನ್ವಯವಾಗದಿದ್ದರೂ ಹಾಗೆಯೇ ಉಳಿದುಕೊಂಡು ಬಂದಿರುವಂತೆ ಕಾಣುತ್ತದೆ. ಆದರೆ ರಟ್ಟಮತದ ಪ್ರಕಾರ ಈ ಮಳೆಯೂ ಎಲ್ಲ ಧಾನ್ಯಗಳಿಗೂ ಒಳ್ಳೆಯದು ಹಾಗೂ ಕಾಡಿನಲ್ಲಿ ಹುಲ್ಲು ಸಮೃದ್ದವಾಗಿ ಬೆಳೆದು ಪಶುಗಳಿಗೂ ಒಳಿತನ್ನುಂಟುಮಾಡುವ ಮಳೆ ಇದಾಗಿದೆ.

**ರೋಹಿಣಿ**

'ರೋಣಿ ಮಿರಗನ ಮಳಿಯ ಆದಾವೋ ಭೂಮೀಗೆ
ಬೀಗಿ ಬೆಳೆಯ ಕಂಡಾವೋ – ಒಕ್ಕಲು ಮಗನ
ಬಾಗಿ ಕುಡುಗೋಲು ಹಾಕ್ಯಾನೋ'[೭]

೧. ರೋಹಿಣಿ ಮಳೇಲಿ ದೋಣಿ ಹಾಕೋದು

೨. ರೋಹಿಣಿಮಳೇಗೆ ಓಣಿಎಲ್ಲ ಜ್ವಾಳ

೩. ರೋಹಿಣಿ ಮಳೇಗೆ ಊರೆಲ್ಲಾ ಕೆಸರು

೪. ರೋಣಿ ಮಳೇಲಿ ಬಿತ್ತಿದ್ರೆ ರೋಗ ಇಲ್ಲ.

ನಿಜವಾದ ಮಳೆಗಾಲ ಆರಂಭ ಶುರುವಾಗುವುದು ಈ ಮಳೆಯಿಂದ. ರೋಹಿಣಿಯಿಂದ ಬಿತ್ತನೆ ವೇಗವಾಗಿ ಸಾಗುತ್ತದೆ. ತೊಗರಿ, ಎಳ್ಳು, ನವಣೆ, ಸಾಸವೆ, ಪುಂಡಿ, ಕಬ್ಬು ನಾಟ, ಮೆಕ್ಕೆ ಜೋಳ, ಶೇಂಗಾ ಮುಂತಾದವುಗಳ ಬಿತ್ತನೆ ಈ ಮಳೆಯಲ್ಲೇ ನಡೆಯುವುದು. 'ರೋಣಿಲಿ ಬಿತ್ತಿದರೆ ಓಣಿ ತುಂಬ

ಜೋಳ' 'ರೋಹಿಣಿ ಬಂದರೆ ಓಣೆಲ್ಲ ಜ್ವಾಳ' ಎನ್ನುವ ಮಾತುಗಳು ಜೋಳದ ಬೆಳೆಗೆ ಈ ಮಳೆಯ ಅವಶ್ಯಕತೆಯನ್ನು ಮನಗಾಣಿಸುತ್ತವೆ.

'ರೋಣಿ ಮಿರುಗದ ಮಳೆಯು ಬಿದ್ದೀತೋ ಭೂಮಿ ಮ್ಯಾಲ

ಎದ್ದಾನ ಒಕ್ಕಲಿಗ ಬೆಳೆತನ । ಕೂರಿಗಿ ತಾಳ

ಬಿದ್ದಾವ ಬಡಿಗ್ಯಾನ ಅರಮನಿಗಿ'[೮]

ಸಾಮಾನ್ಯವಾಗಿ ಮೇ ಕೊನೆ ವಾರದಲ್ಲಿ ಬರುವ ಮಳೆ ಇದು. ಸಾಕಷ್ಟು ಪ್ರಮಾಣದಲ್ಲಿ ಬೀಳುವ, ಬೀಳಲೇಬೇಕಾದ ಮಳೆ. ಎಲ್ಲೆಡೆ ಬಿತ್ತನೆಗೆ ಸಿದ್ಧಮಾಡಿಕೊಂಡಿರುವ ಕಾಲವಿದು. ಈ ಮಳೆಯಾಗದಿದ್ರೆ ಬಿತ್ತನೆಗೆ ತಡೆ. ಸರಿಯಾಗಿ ಆಯ್ತೆಂದ್ರೆ ಫಸಲು ಚನ್ನವೆಂದು ಜನರ ವಿಶ್ವಾಸ. ಗೌರಿಬಿದನೂರು ತಾಲ್ಲೂಕಿನಲ್ಲಿ ಈ ದಿನಗಳಲ್ಲಿ ಬಿತ್ತಿದರೆ ರೋಗವಿಲ್ಲೆಂದು ನಂಬಿಕೆ ಪ್ರಚಲಿತವಾಗಿದೆ. ರಟ್ಟಮತವು ಈ ಮಳೆ ಏಕದಳ ದ್ವಿದಳ ಧಾನ್ಯಗಳಿಗೆ ಒಳಿತೆಂದೂ ಆದರೆ, ಜನರಲ್ಲಿ ಮನಃಶಾಂತಿ ಒಂದೇ ಮಟ್ಟದಲ್ಲಿ ಉಳಿಯದೆಂದೂ, ಪಶು-ಪಕ್ಷಿಗಳಿಗೆ ರೋಗಭಯವೆಂದೂ ಅಭಿಪ್ರಾಯಪಡುತ್ತದೆ. ಇಲ್ಲಿಯವರೆಗೂ ಹೊಳೆಗಳಲ್ಲಿ ನೀರು ಹೆಚ್ಚಿನ ಪ್ರಮಾಣದಲ್ಲಲ್ಲದೆ ಇದ್ದು ಈಗ ದೋಣಿ ಹಾಕುವುದು ಅಗತ್ಯವಾಗುವದೆಂದೂ ಉತ್ತರ ಕನ್ನಡ ಜಿಲ್ಲೆಯ ನಂಬಿಕೆ.

**ಮೃಗಶಿರಾ**

'ಆಗಿ ಹುಣ್ಣಿಮೆ ಹೋದ , ಮಿಗೆ ಮೂರು ದಿವಸಕ್ಕೆ

ಮೃಗಧರನ ಕಡೆ ಮೃಗವಿರಲು ಮಳೆಗಾಲ

ಜಗದಣೆಯಲಿಕ್ಕು ಸರ್ವಜ್ಞ'[೯]

೧. ಮೃಗಶಿರಾ ಮಳೇಲಿ ಮಿಸುಗಾಡದೇ ಹೊಳೆಬಂತು

೨. ಮೃಗಶಿರಾಮಳೆ ಮೃಗಗಳಿಗೆ ಸೆರೆ

೩. ಮಿಕ್ಕೆಳ್ಳು ಮೃಗಶಿರದಲ್ಲಿ ಬಿತ್ತು

೪. ಭತ್ತದ ನೆಲವನ್ನು ಮೃಗಶಿರದಲ್ಲಿ ಬಿತ್ತು

ಒಕ್ಕಲಿಗನ ಲೆಕ್ಕದಲ್ಲಿ ಇದು ಅಮೃತ ಮಳೆ. ಈ ಮಳೆ ಬಂದರೆ ಮುಂದಿನ ನಾಲ್ಕು ಮಳೆಗಳು ಖಚಿತವಾಗಿ ಬರುತ್ತವೆ. ಆದರೆ ಬರುವಾಗ ಮಿಂಚಬಾರದು. 'ಮಿರುಗ ಮಿಂಚಿದರೆ ಮೂರು ಮಳೆ, ಆರಿದ್ರ ಗುಡುಗಿದರೆ ಆರು ಮಳೆ ಕಳಿತವೆ' ಮುಂದಿನ ಮಳೆಗಳು ಬರಬೇಕಾದರೆ ಈ ಮಳೆಯಲ್ಲಿ ಮಿಂಚು ಇರಬಾರದು. ಈ ಹೊತ್ತಿಗಾಗಲೇ ಮಳೆ ಹಿಡಿದುಕೊಂಡು ಗುಡುಗು ಮಿಂಚು ಆರ್ಭಟಗಳು

ಕಡಿಮೆಯಾಗಿರಬೇಕು. ಮಳೆ ಹಿಡಿದುಕೊಳ್ಳುವುದರಿಂದ ಅಲ್ಪಸ್ವಲ್ಪ ಚಳಿಯೂ ಶುರುವಾಗಿರುತ್ತದೆ. ಅದಕ್ಕಾಗಿಯೇ ಮಿರುಗ ಹಲ್ಲುಗಿರುಗ ಎಂಬ ಮಾತು ಹುಟ್ಟಿಕೊಂಡಿದೆ. ಆಗುತ್ತಿರುವ ಮಳೆಗಳ ಲಕ್ಷಣಗಳಿಂದಲೇ ಮುಂದಿನ ಮಳೆಗಳ ಭವಿಷ್ಯವನ್ನು ಹೇಳುತ್ತಾರೆ. ಹಾಗಾಗಿ ಈ ಮಳೆ ಮಿಂಚಬಾರದು, ಆರಿದ್ರ ಗುಡುಗಬಾರದು. ಈ ಹೊತ್ತಿಗೆ ಬಿತ್ತನೆಯ ಕೆಲಸ ಪೂರ್ಣಪ್ರಮಾಣದಲ್ಲಿ ನಡೆಯುತ್ತಿರುತ್ತದೆ. ಅವಧಿಯಲ್ಲಿ ಮುಂಗಾರು ಹಂಗಾಮಿಗಿಂತ ಮುಂಚಿತವಾಗಿ ದೊಡ್ಡ ಅಡ್ಡಮಳೆಗಳು ರಭಸದಿಂದ ಬೀಳುತ್ತವೆ. ಆಗಿ ಹುಣ್ಣಿಮೆ (ವೈಶಾಖ ಶುದ್ಧ)ಯು ಹೋದ ಮೂರನೇ ದಿವಸಕ್ಕೆ ಮೃಗ ನಕ್ಷತ್ರವು ಚಂದ್ರನೊಡನೆ ಕೂಡಿದರೆ ಜಗತ್ತಿನಲ್ಲಿ ಸಾಕಷ್ಟು ಮಳೆಯಾಗುವುದೆಂದು ಸರ್ವಜ್ಞ ಹೇಳುತ್ತಾನೆ. ವಾಯುವ್ಯ ದಿಕ್ಕಿನಿಂದ ಗಾಳಿ ಬೀಸಿದರೆ ಅತಿ ಬೇಗನೆ ಮಳೆಯಾಗುತ್ತದೆಂದು ಸರ್ವಜ್ಞ ತಿಳಿಸುತ್ತಾನೆ . ಆದರೆ ಅದೇ ಗಾಳಿ ನೈರುತ್ಯ ದಿಕ್ಕಿನಿಂದ ಬೀಸಿದರೆ ಮಳೆಯಾಗದೆ ಬರಿ ಗಾಳಿಯು ಬೀಸಿ ಮಳೆಯು ಮಾಯವಾಗುತ್ತದೆ.

ಈ ಮಳೆ ಎಳ್ಳು, ಭತ್ತಗಳಿಗೆ ಒಳ್ಳೆಯದೆಂದು ನಂಬಿಕೆ. ತುಸು ಹೆಚ್ಚಾಗಿ ಬರುವುದೆಂದೂ ಗಾದೆಮಾತು ಹುಟ್ಟಿದೆ. ಈ ದಿನಗಳಲ್ಲಿ ಪೈರನ್ನು ದನಗಳು ಮೇಯ್ದರೆ ನಷ್ಟವೇನಿಲ್ಲವೆಂದು ಉತ್ತರ ಕನ್ನಡ ಜಿಲ್ಲೆಯ ನಂಬಿಕೆ. ಈ ಜಿಲ್ಲೆಯಲ್ಲಿ ಈ ಮಳೆಗಿಡಗಳ ಬೆಳವಣಿಗೆಗೆ ಉತ್ತಮವೆಂಬ ನಂಬಿಕೆ ಇದ್ದು, ಹೊಸ ಹೂ ಗಿಡಗಳನ್ನು ನೆಡಲು, ಇರುವ ಹೂ ಗಿಡಗಳ ಟೊಂಗೆಗಳನ್ನು ಕತ್ತರಿಸಲು ಈ ದಿನಗಳನ್ನಾಯ್ದುಕೊಳ್ಳುತ್ತಾರೆ.

ಮೃಗಶಿರಾ ಮಳೆಯ ಒಂದು ಮತ್ತು ನಾಲ್ಕನೆಯ ಚರಣಗಳಲ್ಲಿ ಮಿಂಚು ಕಾಣಿಸಿದರೆ, ಮುಂದಿನ ಮಳೆಗಳೆಲ್ಲವು ಸುಸೂತ್ರವಾಗುವುದಂತೆ, ಆದರೆ. ಒಂದನೆಯ ಚರಣದಲ್ಲಿ ಮಾತ್ರ ಮಿಂಚಿ, ನಾಲ್ಕನೆಯ ಚರಣದಲ್ಲಿ ಮಿಂಚದೆ ಇದ್ದರೆ ಮುಂದಿನ ಮೂರು ಮಳೆಗಳು (ಆರಿದ್ರಾ, ಪುನರ್ವಸು, ಪುಷ್ಯ) ಹುಸಿಯಾಗುತ್ತದೆ. ಎರಡು, ಮೂರನೆಯ ಚರಣಗಳೆರಡರಲ್ಲೂ ಕಾಣಿಸಿದರೆ ತೊಂದರೆ ಇಲ್ಲ. ಆದರೆ ಎರಡನೆಯದರಲ್ಲಿ ಮಿಂಚಿ, ಮೂರನೆಯ ಚರಣದಲ್ಲಿ ಮಿಂಚದೆ ಮುಂದೆ ನಾಲ್ಕನೆಯದರಲ್ಲಿ ಮಿಂಚಿದರೆ ಆರಿದ್ರಾ. ಪುನರ್ವಸು ಮಳೆಗಳು ಬಾರವು. ಮೂರನೇ ಚರಣದಲ್ಲಿ ಮಿಂಚಿ ನಾಲ್ಕನೆಯದರಲ್ಲಿ ಮಿಂಚದೆ ಇದ್ದರೆ ಒಂದು ತಿಂಗಳು ಮಳೆಯಾಗದಂತೆ. ೩ ಮತ್ತು ೪ನೆಯ ಚರಣದಲ್ಲಿ ಮಾತ್ರ ಮಿಂಚಿದರೆ ಮುಂದಿನ ಮಳೆಗಳೆಲ್ಲ ತುಂಡು ತುಂಡು. ಈ ಮಳೆಯ ಅವಧಿಯ ಮಿಂಚುವಿಕೆಯ ಫಲ ಕುರಿತು ರಟ್ಟಮತಗ್ರಂಥ ಹೇಳುವ ಮಾತು.

**ಆರಿದ್ರಾ ಮಳೆ**

'ಅಶ್ವಿನಿ ಮಳೆಗಾಗಿ ಆರಿದ್ರ ಮಳೆಹೋಗಿ
ಆಷಾಡಕ್ಕೆ ಹೊಳೆ ಬಾರದಿರೆ ದೇಶಕ್ಕೆ
ಘಾಸಿಯಾಯ್ತು ಸರ್ವಜ್ಞ'[೧೦]

೧. ಆರಿದ್ರ ಮಳೆಗೆ ಆದೋನೇ ಗಂಡ
೨. ಆದರೆ ಆರರಿದ್ರಾ ಆಗದಿದ್ರೆ ದರಿದ್ರ
೩, ಆದ್ರೆ ಹಾಂಗೆ ಮುಂದಿನ ಆರು ನಕ್ಷತ್ರ
೪. ಆದ್ರೆ ಮಳೆ ಹೂದರೆ ಬೆಳೆ
೫ ಆದ್ರಿ ಮಳೆ ಲೋಕಕ್ಕೆ ಆರಂಭ
೬. ಆರಿದ್ರ ಮಳೆ ಗುಡಗಿದರೆ ಮುಂದಿ ನ ಆರು ಮಳೆ ಹೋಯಯ್ತು
೭. ಆರಿದ್ರ ಮೃಗಶಿರ ಹಂಗಾದ್ರೆ ನಾನೂ ನಾಲ್ಕರಂತ ಆರಂಭಗಾರ

ಇದು ಬೆದೆ ಮಳೆ, ಮುಂಗಾರಿ ಫಸಲಿನ ಎಲ್ಲ ದವಸ ಧಾನ್ಯಗಳನ್ನು ಈ ಮಳೆಯಲ್ಲಿ ಅಥವಾ ಈ ಮಳೆಯೊಳಗೆ ಬಿತ್ತಿಬಿಡಬೇಕು. ರಾಗಿ, ಕುರಸಾನಿ, ಪುಂಡಿ, ಅವರೆ, ಹಲಸಂದಿ, ಹೆಸರು, ಉದ್ದು, ಕೆಂಜೋಳ, ಸಣ್ಣ ಹತ್ತಿ, ಶೇಂಗಾ ಇವುಗಳ ಬಿತ್ತನೆ ಈಗ ನಡೆಯುತ್ತದೆ. ಈ ಮಳೆಯಲ್ಲಿ ಮೆಣಸಿನ ಗಿಡ ಹಚ್ಚುವುದಂತೂ ಶ್ರೇಯಸ್ಕರ. ಹಾಗಾಗಿಯೇ 'ಆದ್ರಿ ಮಳೆಗೆ ಆರು ಕಾಯಿ ಹೆಚ್ಚು' ಎಂಬ ಮಾತು ಪ್ರಚಲಿತವಾಗಿದೆ. ಇದು ಬೆದೆ ಮಳೆಯಾಗಿ ಎಲ್ಲ ದವಸಧಾನ್ಯಗಳ ಬಿತ್ತನೆಯಾಗುವುದರಿಂದ 'ಆರಿದ್ರ ಮಳೆ ಬಂದರೆ ದರಿದ್ರ ಪರಿಹಾರ' ಎಂದು ಹೇಳುತ್ತಾರೆ. ಈ ಮಳೆಯಲ್ಲಿಯೇ ಕಬ್ಬು ನಾಟಿಯನ್ನು ಮಾಡಬಹುದು ಹಾಗೂ ಎಲೆಕಡ್ಡಿ ನೆಡಬಹುದು ಅಥವಾ ಮುರೆ ಮಾಡಲು ಶ್ರೇಯಸ್ಕರ. ಅದ್ರಿಮಳೆಯಲ್ಲಿ ನೆಟ್ಟ ಎಲೆಬಳ್ಳಿ ಮುಂದೆ ಸಮೃದ್ಧ ಫಸಲನ್ನು ನೀಡುತ್ತದೆ. ಮಳೆ ಬರುವಾಗ ಮಾತ್ರ ಗುಡುಗಬಾರದು. ಯಾಕೆಂದರೆ ಆರಿದ್ರಮಳೆ ಗುಡುಗಿದರೆ ಆರು ಮಳೆಗರ್ಭ ಕರಗುತ್ತೆ ಎನ್ನುವ ನಂಬಿಕೆಗಳಿವೆ.

ಇದು ಮದುವೆ ಋತುವಿನ ಕೊನೆಯ ಮಳೆ. ಈ ಮಳೆಯ ನಂತರ ಪುನಃ ದೀಪಾವಳಿವರೆಗೆ ಮದುವೆ ಮುಹೂರ್ತಗಳು ಇರುವುದಿಲ್ಲ. ಆದ್ದರಿಂದಲೇ 'ಆದ್ರಾಮಳೆಗೆ ಅದೋನೇ ಗಂಡ' ಎಂಬ ಗಾದೆ ಚಾಲ್ತಿಗೆ ಬಂದಿದೆ. ಈ ಮಳೆಯಂತೆ ಮುಂದಿನ ಆರೂ ಮಳೆಗಳೂ ಬರುತ್ತವೆ. ಎಂಬುದು ಉತ್ತರ ಕನ್ನಡದ ನಂಬಿಕೆ. ಬೆಳಗಾಂ ಜಿಲ್ಲೆಯ ಗಡಿಭಾಗದಲ್ಲಿ ಈ ಮಳೆಯ ಆರಂಭದಲ್ಲಿ ಗುಡುಗು ಮಿಂಚುಗಳ

ಶಬ್ದವಾದರೆ ಮುಂದಿನ ಆರೂ ಮಳೆಗಳು ಕೈಕೊಡುತ್ತವೆಂದೂ ನಂಬಿಕೆ ಇದೆ. ಮಲೆನಾಡಿನ ಭಾಗದಲ್ಲಿ ಈ ಮಳೆಯಿಂದ ಬಿರುಸಾದ ಮಳೆಗಾಲ ಆರಂಭ. ಅದಕ್ಕೆ ಸ್ವಾಗತ ಕೋರುವ 'ಮಳೆಹಬ್ಬ'ದ ಆಚರಣೆಯೊಂದು ಸಾಗರ ತಾಲ್ಲೂಕಿನ (ಶಿವಮೊಗ್ಗ ಜಿಲ್ಲೆ) ಹಾಗೂ ಅದರ ಮಗ್ಗುಲಿನ ಸಿದ್ದಾಪುರ ತಾಲ್ಲೂಕಿನಲ್ಲಿ (ಉತ್ತರ ಕನ್ನಡ ಜಿಲ್ಲೆ) ದೀವರುಗಳು ಆಚರಿಸುತ್ತಾರೆ.

ಆರಿದ್ರಾಮಳೆ ಬರುವ ಸಂದರ್ಭದಲ್ಲಿ ಬೀಸುವ ಗಾಳಿಯನ್ನು 'ಆದಿಗಾಳಿ' ಎಂದು ಕರೆಯುತ್ತೇವೆ. ಇದು ತುಂಬಾ ಶೀತದಿಂದ ಕೂಡಿರುವ ಗಾಳಿ. ಎಂಥ ಗಡಸುತನವನ್ನು ನಡುಗಿಸುವ ಗಾಳಿ. ಅದಕ್ಕಾಗಿಯೇ 'ಆದಿಗಾಳಿ ಬೀಸಿ ಅಳ್ಳಳ್ಳಿ ಮೇಲೆ ಹೆಚ್ಚುವಾಗ ಬಹಾಳ್ ನನ್ ಜೀವ ಹೆಣ್ಣಾಗಾದ್ರೂ ಹುಟ್ಟಬಾರದಿತ್ತೆ' ಎಂಬ ಗಾದೆಯೊಂದು ಗಂಡಸರವಲಯದಲ್ಲಿ ಹುಟ್ಟಿಕೊಂಡಿದೆ. ಇದೇ ಗಾದೆಯ ಪಾಠಾಂತರಗಳು ಹುಬ್ಬಳ್ಳಿ, ಬಿಜಾಪುರ ಭಾಗಗಳಲ್ಲೂ ಸಿಕ್ಕುತ್ತವೆ. ಒಟ್ಟಾರೆ ಆರಿದ್ರಾಮಳೆ ವ್ಯವಸಾಯದ ಯಶಸ್ಸಿಗೆ ಮುಖ್ಯವಾದುದು ಇದನ್ನು ಕುರಿತ ಎಲ್ಲ ಗಾದೆಗಳೂ ಜನಶ್ರುತಿಗಳೂ ಈ ಅಂಶವನ್ನೇ ಸಮರ್ಥಿಸುತ್ತವೆ.

ಮಳೆನಾಡಿನ ದೀವರು ಒಂದು ಬುಡಕಟ್ಟು ಜನಾಂಗ. ಈ ಜನ ಸಾಮಾನ್ಯವಾಗಿ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಆಸುಪಾಸಿನಲ್ಲಿ ಹೆಚ್ಚಾಗಿದ್ದಾರೆ. ಇವರಲ್ಲಿ 'ಆರಿದ್ರಮಳೆಹಬ್ಬ'ವನ್ನು ಆಚರಿಸುವ ಸಂಪ್ರದಾಯವಿದೆ. ಈ ಹಬ್ಬವನ್ನು ದೀವರು ಬಹಳ ಸಂಭ್ರಮದಿಂದ ಆಚರಿಸುತ್ತಾರೆ. ಭೂಮಿಗೆ ಅಗಳ ಹೊಡೆಯುವುದಕ್ಕಿಂತ ಮುಂಚೆ ಆರಿದ್ರಹಬ್ಬ ಬರುತ್ತದೆ. ಸಾಮಾನ್ಯವಾಗಿ ಹಬ್ಬದ ಹಿಂದಿನ ದಿನವೇ ಹೆಣ್ಣು ಮಕ್ಕಳು ತೌರುಮನೆಗೆ ಬರುತ್ತಾರೆ. ಅವರ ಜೊತೆಯಲ್ಲಿ ಅವರ ಗಂಡಂದಿರೂ ಮಕ್ಕಳು ಮರಿಗಳೂ ಆಗಮಿಸಿ ಮನೆತುಂಬ ನೆಂಟರು ಇಷ್ಟರು ಬಂದು ತುಂಬಿಕೊಳ್ಳುತ್ತಾರೆ. ಹಬ್ಬದ ಆಚೀಚಿನ ದಿನಗಳಲ್ಲಿ ಬರುವ ಸಂತೆಯಿಂದ ಹಬ್ಬಕ್ಕೆ ಬೇಕಾದ ಸಾಮಾನುಗಳನ್ನು ತಂದು ಸಿದ್ಧತೆಮಾಡಿಕೊಳ್ಳುತ್ತಾರೆ. ಆಕಾಶಾದಲ್ಲೆಲ್ಲಾ ಕಾರ್ಮೋಡ ಆವರಿಸಿ ಆರಿದ್ರಮಳೆ ಧೋ ಎಂದು ಬೀಳುತ್ತಿರುವಂತೆ ಹಬ್ಬವೂ ಆರಂಭವಾಗುತ್ತದೆ. ಕುಮಾರರಾಮ ದೀವರ ಆರಾಧ್ಯದೈವ. ಆದ್ದರಿಂದ ಇವರ ಎಲ್ಲಾ ಹಬ್ಬಗಳೂ ಕುಮಾರರಾಮನ ಪೂಜೆಯೊಂದಿಗೇ ಆರಂಭವಾಗಬೇಕು. ವಿಜಯನಗರಕಾಲದ ಸಂದರ್ಭದಲ್ಲಿ ಬರುವ ಕುಮಾರರಾಮ ಕಂಪಿಲರಾಜ ಹಾಗೂ ಹಿರಿಯಾಳ ದೇವಿಯರ ಮಗ. ವೀರನೂ ಸಾಹಸಿಯೂ ಆದ ಈತ ದೀವರ ಆರಾಧ್ಯ ದೈವವಾದದ್ದೇ ಒಂದು ಕತೆ.

ಆರಿದ್ರಮಳೆ ಹಬ್ಬದಲ್ಲಿ ಕೆಂಪಗೆ ಕೆಂಡದಂತೆ ಹೊಳೆಯುವ ರೌದ್ರ ಕಳೆಹೊತ್ತ ಕುಮಾರರಾಮನ ಮುಖವಾಡದ ಜೊತೆಗೆ ಗ್ರಾಮದೇವರ ಮುಖವಾಡವನ್ನು ಹೊತ್ತು ಊರೆಲ್ಲಾ ಮೆರವಣಿಗೆ ಮಾಡುತ್ತಾರೆ. ದೇವರ ಮೆರವಣಿಗೆಯ ಸಂದರ್ಭದಲ್ಲಿ ಹುಲಿದೇವರು, ಕುದುರೆದೇವರು ಹೀಗೆ

ಅನೇಕಾನೇಕ ದೇವತೆಗಳ ಮೆರವಣಿಗೆಯೂ ಆಗುತ್ತದೆ. ಮನೆಯ ಮುಂದೆ ಬಂದ ಮೆರವಣಿಗೆಯ ದೈವಗಳಿಗೆ ಹೆಣ್ಣು ಮಕ್ಕಳು ಆರತಿ ಬೆಳಗಿ ಗಂಧಾಕ್ಷತೆ ಹಾಕುತ್ತಾ ಜನಪದಗೀತೆಗಳನ್ನು ಹಾಡಿ ತಮ್ಮ ಕಂಠಸಿರಿಯನ್ನು ಮೆರೆಯುವರು. ಗಂಡಸರೋ ರೊಯ್ಯನೆ ಸುರಿಯುವ ಮಳೆಯಲ್ಲೂ ಡೊಳ್ಳುಕಟ್ಟಿ ಆವೇಶದಿಂದ ಕುಣಿಯುತ್ತಾರೆ. ಇದನ್ನು ನೋಡಿಯೇ ಆನಂದಿಸಬೇಕು. ದೇವರನ್ನು ಊರಿನ ಸುತ್ತ ಮೆರವಣಿಗೆ ಮಾಡಿ ಬಂದ ಮೇಲೆ ಅವನ್ನು ದೇವಸ್ಥಾನದಲ್ಲಿ ಪೂಜಿಸುತ್ತಾರೆ.

ಭಕ್ತರು ಮುಗಿಬಿದ್ದು ಬೇಡಿಕೊಂಡು ತಮ್ಮ ಹರಕೆಗಳನ್ನು ಪೂರೈಸಿಕೊಳ್ಳುತ್ತಾರೆ. ಮದುಮಕ್ಕಳೊ ತಾವು ಹೊಸದಾಗಿ ಮದುವೆಯಾದ ಸವಿನೆನಪಿಗೇನೋ ಹಣತೆ ದೀಪ ಉರಿಸಿ ದೇವರಿಗೆ ಆರತಿ ಬೆಳಗುತ್ತಾರೆ. ಹಲವರು ಒಂದೆಡೆ ಕುಳಿತು ತಮ್ಮ ನೆನಪಿನ ಬುತ್ತಿಯನ್ನು ಬಿಚ್ಚಿ ಹಾಡುತ್ತಾ ಮೈ ಮರೆಯುತ್ತಾರೆ. ದೇವರಿಗೆ ವಿಶೇಷವಾದ ದೀಪಾರತಿಯ ವ್ಯವಸ್ಥೆ ಇರುತ್ತದೆ. ದೇವರ ಇಕ್ಕೆಲಗಳಲ್ಲಿ ದೀಪದಲ್ಲಿಯರು ದೀಪ ಹಿಡಿದು ನಿಲ್ಲುವ ದೃಶ್ಯ ನಯನಮನೋಹರ. ದೇವರನ್ನು ಸಂತೃಪ್ತಿಗೊಳಿಸಲು ಇದರಲ್ಲಿ ಕೆಲವರು ಕೋಳಿ ಕುರಿಯನ್ನು ಬಲಿಕೊಡುವುದೂ ಇದೆ. ಹಬ್ಬದ ಸಂಜೆ ನಿಗಿನಿಗಿ ಕೊಂಡದ ಕೆಂಡವನ್ನು ಕೆಲವರು ಹಾಯುತ್ತಾರೆ. ಇದಕ್ಕೆ 'ಬಂಗಿ' ಎಂದು ಕರೆಯುವರು. ಡೊಳ್ಳು ಬಡಿಯುತ್ತ ಆವೇಶದಿಂದ ವಾಲಾಡುತ್ತ ಕೊಂಡಹಾಯುವುದು ರುದ್ರ ರಮಣೀಯ ದೃಶ್ಯ. ಆರಿದ್ರಮಳೆಯ ಹಬ್ಬವನ್ನು ದೀವರು ಎಷ್ಟೇ ಕಷ್ಟವಿರಲಿ ಆಚರಿಸಿಯೇ ಅಚರಿಸುತ್ತಾರೆ.

ಆ ಸಂದರ್ಭದಲ್ಲಿ ಹಬ್ಬವನ್ನು ಆಚರಿಸಲಾಗದವರು ಮೃಗಶಿರಮಳೆಯಲ್ಲಿ, 'ಮಿರಿಗಿ ಮಳೆ ಹಬ್ಬ' ಎಂದು ಆಚರಿಸುತ್ತಾರೆ. ಒಟ್ಟಾರೆ ಮಲೆನಾಡಿನ ದೀವರುಮಳೆ ಹಬ್ಬವನ್ನು ಕಡ್ಡಾಯವಾಗಿ ಆಚರಿಸಿಯೇ ತೀರುತ್ತಾರೆ.

**ಪುಷ್ಯ**

೧ಪುನರ್ವಸು ಪುಣ್ಯ ಇದ್ದಷ್ಟೇ ಮಳೆ

೨. ಪುನರ್ವಸುನಲ್ಲಿ ಹೆಣಾ ಹೊರಗಿಡೋದಕ್ಕೂ ಬಿಡೋದಿಲ್ಲ

೩.ಪುಷ್ಯದ ಮೆಳೆ ಹುಸಿಯದ ಮಳೆ

೪,ಪುಷ್ಯ ಮಳೆ ಹೆಚ್ಚು ಹೆವ್ವು ಬಂದ್ರೆ ಹುಳು ಬೀಳುತ್ತೆ

ಈ ಎರಡು ಮಳೆಗಳೂ ಅಣ್ಣತಮ್ಮಂದಿರಂತೆ. ಅದಕ್ಕಾಗಿ ಒಕ್ಕಲಿಗ ಈ ಎರಡೂ ಮಳೆಗಳನ್ನು ಕುರಿತು ಒಟ್ಟೊಟ್ಟಿಗೆ ಮಾತನಾಡುತ್ತಾನೆ. ಇವು ಒಕ್ಕಲುಮಗನಿಗೆ ಬಂದೇ ಬರುತ್ತೇವೆಂದು ಭಾಷೆ ಕೊಟ್ಟ ಮುಂಗಾರು ಮಳೆಗಳು. ಎರಡರಲ್ಲಿ ಯಾವುದಾದರೂ ಒಂದು ಮಳೆ ಆಗೇ ಆಗುತ್ತದೆ. 'ನೀನಾರೆ ಬಾ.

ಇಲ್ಲ ನಾನರೆ ಬರ್ತೀನಿ' ಅಂತ ಇಬ್ಬರೂ ಮಾತನಾಡಿಕೊಂಡು ಬರುತ್ತಾರಂತೆ. ಈ ಮಳೆಗಳಲ್ಲಿ ಸಜ್ಜೆ, ಸಣ್ಣ ಹತ್ತಿಯ ಬಿತ್ತನೆ ಮಾಡುತ್ತಾರೆ. ದಕ್ಷಿಣ ಹಾಗೂ ಉತ್ತರಕನ್ನಡ ಜಿಲ್ಲೆಗಳಲ್ಲಿ ಇದರ ಹಾವಳಿ ವಿಪರೀತವಿದ್ದಿರಬೇಕು. ಆದ್ದರಿಂದಲೇ 'ಪುನರ್ವಸುವಿನಲ್ಲಿ ಹೆಣ ಹೊರಗಿಡೋದಕ್ಕೂ ಬಿಡೋದಿಲ್ಲ' ಎಂಬ ಗಾದೆ ಉತ್ತರಕನ್ನಡದಲ್ಲಿ ಇದೆ. ಈ ಮಾತು ಬಹುಶಃ ಉಳಿದ ಮಲೆನಾಡು ಭಾಗಕ್ಕೂ ನಿಜವಿರಬೇಕು. ಈ ಮಳೆಯನ್ನು ಇದರ ನಂತರದ ಪುಷ್ಯ ಮಳೆಯನ್ನು ಜೋಡಿಸಿ, 'ಸಣ್ಣ ಪುಂಡ – ದೊಡ್ಡ ಪುಂಡ' ಎಂದು ಕರೆಯುತ್ತಾರೆ. ಉತ್ತರಕನ್ನಡ ಜಿಲ್ಲೆಯಲ್ಲಿ. ಈ ಎರಡೂ ಮಳೆಗಳೂ ಒಂದಕ್ಕಿಂತ ಒಂದು ಬಿರುಸಾಗಿ ಬರುತ್ತಿದ್ದವು – ಹಿಂದೆ ಪ್ರಕೃತಿ 'ನೀ ನೇಗಿಲ ನೊಗಾ ತಂದ್ರೆ ನಾ ಎತ್ತು ಹೊಟ್ಟು ತಗಬರ್ತಿ. ಹೀಗೆಂದು ಪುಷ್ಯ ಪುನರ್ವಸುವಿಗೆ ಹೇಳುತ್ತದಂತೆ. ಒಂದರ ಹಿಂದೊಂದು ಬರುತ್ತದೆಂದೂ ಒಂದಕ್ಕಿಂತ ಒಂದು ಬಿರುಸಾಗಿ (ಆಯಾ ಕೆಲಸಗಳನ್ನು ಅಗತ್ಯವಾಗಿಸುವಂತೆ ) ಬರುತ್ತವೆಂದೂ ಇದರರ್ಥ. ಇದನ್ನು ಕುರಿತು ವಿಶೇಷ ನಂಬಿಕೆಗಳೇನೂ ಇದ್ದಂತಿಲ್ಲ. ಮೇಲೆ ಪ್ರಸ್ತಾಪಿಸಿರುವದರ ವಿನಃ ಈ ಮಳೆ ಕುರಿತ ಗಾದೆಗಳೆಲ್ಲವೂ ಇದನ್ನೇ ಸಮರ್ಥಿಸುತ್ತವೆ.

**ಆಶ್ಲೇಷಾ:**

೧. ಅಸ್ಲ ಮಳೆಗೆ ಅಸ್ಲು ಬಡ್ಡಿ ಕೂಡ ಬರ್‍ತಾವೆ

೨. ಅಸ್ಲಿ ಮಳೆಗೆ ತಸ್ಲಿ ಬೆಟ್ಟ ಏರ್‍ತು

೩. ಅಸ್ಲು ಮಳೆ ನಶೇಷ ಕೊಳೆ

೪. ಅಶ್ಲೇಷಮಳೆಗಿಂತ ಬಿಸಿಲು ಲೇಸು

೫. ಅಸಲೆಮಳೆ ಬಿದ್ರೆ ಭೂಮಿಯೆಲೆಲ್ಲಾ ಹಸುರು

೬. ಅಸಲಿಮಳೆ ಕೈ ಕೊಟ್ಟು ಮೀಸಲಾಯ್ತು ಬೆಳೆ

೭. ಅಸಲಿಮಳೆಲಿ ಬಿತ್ತಿದ್ರೆ ಎಸಳು ಎಸಳು ಕಾಯಿ

೮. ಅಸಲೆಮಳೆಗೆ ನೆಲವೆಲ್ಲಾ ಹಸಲೆ

೯. ಅಶ್ಲೇಷಮಳೆ ಬಂದು ಹೋಯ್ತು ಕೆಳವರ್ಗದವರು ಮೇಲೇರಿಬಿಟ್ರ

ಇಲ್ಲಿಂದ ಮುಂದೆ ಮಳೆಯಪ್ರಮಾಣ ಕಡಿಮೆ ಆಗುತ್ತ ಬರುತ್ತದೆ. ಮೋಡ ಯಾವಾಗಲೂ ಕವಿದುಕೊಂಡಿರುತ್ತದೆ. ಬಿಸಿಲು ಬಿದ್ದರೆ ಮಳೆ ಹೋಯಿತು ಎಂದೇ ಅರ್ಥ. ಅದಕ್ಕೇ 'ಅಸಲೆಮಳೆ ಬಿಸಲಗೆ ಹೋತು' ಮಗೆಮಳೆ ಹೊಗೆಯಗೆ ಹೋತು ಎನ್ನುತ್ತಾರೆ. ಇಲ್ಲಿಯತನಕ ಬಂದ ಮಳೆಯಿಂದಾಗಿ ಹಾಕಿದ ಬೆಳೆಯಿಂದಾಗಿ ಭೂಮಿಯೆಲ್ಲ ಹಸಿರಿನಿಂದ ಆವೃತವಾಗಿರುತ್ತದೆ. 'ಅಸಲೆ ಬಂದರೆ ಭೂಮಿಯೆಲ್ಲ ಹಚ್ಚಗೆ' ನೆಲ ಖಾಲಿಯಿರುವವರು ಈ ಮಳೆಗೆ ಸಾವೆ ಬಿತ್ತುತ್ತಾರೆ. ರಾಗಿ, ನವಣೆ

ಮಧ್ಯಭಾಗದಲ್ಲಿ ಹುರುಳಿ ಬಿತ್ತನೆ ಮಾಡುತ್ತಾರೆ. ಇದು ಫಸಲಿಗೆ ವಿಫಲತೆಯನ್ನು ತಂದುಕೊಡುವ ಮಳೆ ಎಂದೂ ಈ ಮಳೆ ದಿನಗಳಲ್ಲಿ ಥಂಡಿ ಹೆಚ್ಚು, ಎಂದು ಜನಪದರ ನಂಬಿಕೆ. ಈ ಮಳೆ ಕುರಿತ ಗಾದೆಗಳೆಲ್ಲವೂ ಇದನ್ನೇ ಸಮರ್ಥಿಸುತ್ತವೆ.

**ಮಘ**

೧. ಮಘಮಳೆ ಬಂದ್ರೆ ಕೇಡಲ್ಲ ಮನೆ ಮಗ ಉಂಡ್ರೆ ಕೇಡಲ್ಲ

೨. ಮಗಾಮಳೆ ಬಿದ್ರೆ ಮುಗಿಲೇ ನೀರು ಸುರಿದಮಗೆ

೩. ಹೂದರೆ ಮಘೆ ಹೋದರೆ ಹೊಗೆ

೪. ಮಘೆ ಗುಡುಗು ಮಠದ ಮೇಲೆ ಕೇಳು

೫. ಮಗೇಯ ಮಳೆ ಮೊಗೆ ಮೊಗೆದು ತುಂಬಬೇಕು

೬. ಮಘೆ ನೀರನ್ನು ಮೊಗೇಲಿಡು

೭. ಮಘಮಳೆ ಮಗನಿಗೂ ಬಿಡದು

೮. ಮಗೆಮಳೆ ಹೋಯ್ದರೆ ಮಗೆ ಗಾತ್ರದ ತೆನೆ

ಬಂದರೆ ಭಾರೀ ಬರುವ, ಹೋದರೆ ಹೋಗಿಯೇ ಬಿಡುವ ಅನಿಶ್ಚಿತ ಮಳೆಯಿಂಬುದು ಒಕ್ಕಲಿಗನ ಅನುಭವ. ಅದಕ್ಕೇ 'ಬಂದರೆ ಮಗೆ ಹೋದರೆ ಹೊಗೆ' ಇಲ್ಲವಾದರೆ 'ಮುಗಿ ಹೊತ್ತಗಂಡು, ಉಬ್ಬೆ ಮೆಟ್ಟಗೆಂಡು ಬರ್ತಾಳೇ' ಎಂದುಕೊಂಡಿದ್ದಾನೆ. ಈ ಮಳೆಗಾಗಲೇ ಮೆಣಸಿನ ಗಿಡಗಳು ತೆಗುವಾಗಿ ಬೆಳದು ಹೂವು ಬಿಡಲು ಆರಂಭವಾಗಿರುತ್ತವೆ. ಈ ಸಂದರ್ಭದಲ್ಲಿ ಕಳೆ ತೆಗೆಯಲು ಹೋದರೆ ಹೂವು ಉದುರಿ ಕಾಯಿ ಕಚ್ಚುವುದು ಕಡಿಮೆಯಾಗುತ್ತದೆ. ಅದಕ್ಕೇ "ಮಗೆ ಮಳೆಯಲ್ಲಿ ಮಣಸಿನ ಗಿಡದ ಕಳೆ ತೆಗೆಯಬಾರದು' ಎಂದು ನಿಷೇಧ ಮಾಡಿದ್ದಾರೆ. ಈ ಮಳೆಯ ತನಕವೂ ಯಾವ ಮಳೆಯೂ ಬಾರದಿದ್ದರೆ ಚಿತ್ರದುರ್ಗ ಜಿಲ್ಲೆಯ ಅಪರೂಪದ ಬೆಳೆಯಾದ ಕೊರ್ಲೆ (ನವಣೆ)ಯನ್ನು ನೆಲ ಕೆದರಿ ಚಲ್ಲುತ್ತಾರೆ. ತುಂಬ ಸುಪುಷ್ಟವಾಗಿ ಅದು ಬೆಳೆದುಕೊಳ್ಳುತ್ತದೆ. ಮಳೆಯ ಅಭಾವವನ್ನು ನಿರಂತರವಾಗಿ ಎದುರಿಸುವ ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಬೆಳೆಯುತ್ತಾರೆ.

ಇದರಲ್ಲದೆ ಕೆರೆ ಒಕ್ಕಲಿಗ ಕೆಲವು ಕಡೆ ಮಾಘಾಮಳೆಯ ಸಂದರ್ಭದಲ್ಲಿ 'ಬೆಚ್ಚಿನ ಸಂಕ್ರಾತಿ' ಎಂಬ ವಿಶಿಷ್ಟ ಆಚರಣೆಯನ್ನು ನಡೆಸುತ್ತಾರೆ. ಇದೂ ಸಹ ಒಂದು ರೀತಿಯಲ್ಲಿ ಮಳೆರಾಯನನ್ನು ಸಂತುಷ್ಟ ಪಡಿಸುವುದೇ ಆಗಿದೆ. ಮಘಾ ಮಳೆಯ ಸಂಕ್ರಾಂತಿಯ ದಿನ, ಮುಂಡಿಗೆ ಎಂಬ ಜೊಂಡಿನ ಜಾತಿಯ ಗಿಡವನ್ನು ಕತ್ತರಿಸಿ ಅದರ ಎಲೆಗಳ ಸಹಿತವಾಗಿ ಅವನ್ನು ಹೊಲದಲ್ಲಿ ನಿಲ್ಲಿಸುತ್ತಾರೆ. ಇದು ಒಂದು ಬಗೆಯ ಬೆಚ್ಚು ನಿಲ್ಲಿಸುವುದೇ ಆಗಿದೆ. ಅವರೇ ಹೇಳುವಂತೆ ಹೊಲ್ದಲ್ಲಿ ಮುಂಡಿಗೆ ಗಿಡ

ನಿಲ್ಲಿಸುವುದೆಂದರೆ ಮಳೆರಾಯನ ಬರುಪಿಕೆಗೆ ತೋರಣ ಕಟ್ಟಿ ಸಿಂಗರಿಸುವುದೇ ಆಗಿದೆ. ಮಳೆಯ ನಕ್ಷತ್ರಗಳಲ್ಲೇ ಮಘಾಮಳೆ ಚೆನ್ನಾಗಿ ಸುರಿಸುತ್ತದೆ. ಆತನನ್ನು ಹೀಗೆ ಕೀರ್ತಿಬಾವುಟ ಕಟ್ಟಿ ಸ್ವಾಗತಿಸುವ ವಿಧಾನ ಸ್ವಾರಸ್ಯಕರ. ಇನ್ನು ಒಕ್ಕಲುತನಕ್ಕೆ ಭರಪೂರ ಮಳೆಬರದೆ ಇರುತ್ತದೆಯೆ? ಈ ಮಳೆಯ ಬಗೆಗೂ ರೈತರಿಗೆ ತುಂಬ ಪ್ರೀತಿ. ಇದು ಎಷ್ಟು ಹೊಯ್ದರೂ ಒಳ್ಳೆಯದೇ ಎಂಬ ನಂಬಿಕೆ ನಾಡಿನ ಎಲ್ಲ ಭಾಗದಲ್ಲಿರುವಂತೆ ಕಾಣುತ್ತದೆ.

**ಹುಬ್ಬೆ**

೧. ಹುಬ್ಬಮಳೆ ಅಬ್ಬೆ ಹಾಲು ಕುಡಿದಂಗೆ
೨. ಹುಬ್ಬೆಮಳೆಗೆ ಗುಬ್ಬಿ ತಲೆಯು ನೆನೆಯದು
೩. ಹುಬ್ಬೆಮಳೆ ಚಂದ ತಬ್ಬಲಿ ಮಕ್ಕಳು ಚಂದ
೪. ಉಬ್ಬೆಮಳೆಲಿ ಬಿತ್ತಿದರೆ ಹುಲ್ಲು ಕಾಳು ಇಲ್ಲ
೫. ಹುಬ್ಬಿ ಹತ್ತಿದರೆ ಗುಬ್ಬಿಗಳಿಗೆಲ್ಲಾ ಸಾವು
೬. ತಂದೆ ತನ್ನ ಹೊಲದ ನೀರನ್ನು ಮಗನಿಗೂ ಬಿಡೋದಿಲ್ಲ ಮಗ ತನ್ನ ಹೊಲದ ನೀರನ್ನು ತಂದೆಗೂ ಬಿಡೋದಲ್ಲ.
೭. ಹುಬ್ಬೆಮಳೆ ಹೊಯಯ್ಯುವಾಗ ಶೆಟ್ಟಿಯ ಹೊಟ್ಟೆಯಷ್ಟೇ ನೆನೆಯುತ್ತದೆಯೇ ವಿನಾಃ ಕೆಳಗೆ ನೆನೆಯೊದೇ ಇಲ್ಲ
೮. ಹುಬ್ಬೆಮಳೆ ಗೌರಮ್ಮ ಉಬ್ಬೆಹೊದ್ದು ಬಂದ್ಲು



ಇದೊಂದು ತುಂತುರು ತುಂತುರಾಗಿ ಬರುವ ಮಳೆ, ಉಬ್ಬೆಮಳೆ ತುಂತುರು ಹಾಗೆ ಬಂದು ಹೀಗೆ ಹೋಗುವ, ಬಂತು ಬಂತು ಎನ್ನುವಷ್ಟರಲ್ಲಿ ಹಾರಿಯೇ ಬಿಡುವ ಮಳೆ – ಉಬ್ಬೆಮಳೆ ಹಂಗೆ ಹೂಬ್ಬು ಹಾರಿಸಿಗತ ಹೋಕ್ಕತೆ ಗುಬ್ಬಿಯ ಪುಕ್ಕವೂ ತೋಯದಷ್ಟು ಮಳೆ ಬರುವುದಂತೆ, ಉಬ್ಬೆಮಳೆ ಬಂದರೆ ಗುಬ್ಬಿ ಪುಚ್ಚ ತೋಯ್ಯಲ್ಲ, ಅಕಸ್ಮಾತ್ ಅಪ್ಪಿ ತಪ್ಪಿ ಜಡಿದರೆ ಉಬ್ಬೆಮಳೆ ಬಂದರೆ ಆನೆ ಉಬ್ಬೆ ತಂಕ ಬರೆತೆ, ಇಲ್ಲುದ್ರೆ ಗುಬ್ಬಿ ಪುಚ್ಚ ತೋಯಲ್ಲ. ಕರ್ನಾಟಕದ ವಿವಿಧ ಕನ್ನಡ ಭಾಗದಲ್ಲಿ ಇದನ್ನು ಕುರಿತ ನಂಬಿಕೆಗಳು ಭಿನ್ನ ರೀತಿಯವು. ಉತ್ತರ ದಕ್ಷಿಣ ಜಿಲ್ಲೆಗಳಲ್ಲಿ ಈ ಮಳೆ ಬೆಳೆಗಳಿಗೆ ಒಳ್ಳೆಯದೆಂಬ ಅರ್ಥದ ಗಾದೆಗಳಿವೆ. ಈ ಮಳೆ ಕೋಲಾರಜಿಲ್ಲೆಯ ಬಾಗೇಪಲ್ಲಿ, ಗೌರೀಬಿದನೂರು ಪ್ರದೇಶದಲ್ಲಿ ಗುಬ್ಬಿ ತಲೆಯೂ ನೆನೆಯುದಷ್ಟು ಪ್ರಮಾಣದಲ್ಲಿ ಬರುವುದೆಂಬರ್ಥದ ಗಾದೆಗಳಿವೆ. ಈ ಮಳೆಯಿಂದ ಗುಬ್ಬಿಗಳು ಸಾಯುವುದೆಂಬ ನಂಬಿಕೆ ಇನ್ನು ಕೆಲವು ಭಾಗಗಳಲ್ಲಿದೆ.

**ಉತ್ತರೆ ಮಳೆ – ಉತ್ತರೆ ಪ್ರತೀಕಾರದ ಸಂಕೇತ**

'ಉತ್ತರಿಮಳೆಯಾದಿ ಉತ್ತಮರಿಗೆ ತಿಳಿಯಾಗಿ
ಉತ್ತತ್ತಿ ಫಲವು ಘನವಾಗಿ– ಕಣದಾಗೆ
ಉತ್ರಾಣಿ ಶಳ್ಳ ಮೇಲಾಗಿ'[೧೧]

'ಉತ್ತರಿಯು ಹೋದಾರೆ ಹೆತ್ತಮ್ಮ ಮುನಿದರೆ
ಸತ್ಯವಂತರು ಮಾರ್ಗತಪ್ಪಿ ನಡೆದರೆ ಲೋಕ
ವಿನ್ನೆತ್ತ ಬದುಕುವುದು ಸರ್ವಜ್ಞ'[೧೨]

೧. ಉತ್ತರಮಳೆಗೆ ಎತ್ತುಗಳು ಬಾಯಿ ಬಿಡುತ್ತವೆ
೨. ಉತ್ತರಮಳೆಗೆ ಪೈರು ಹುತ್ತಬೆಳೆದಾಂಗೆ ಬೆಳಿತ್ತಾವೆ
೩. ಆದರೆ ಹುತ್ತರಿ ಆಗದಿದ್ದರೆ ಕತ್ತರಿ
೪. ಹೊನ್ನುತ್ರ ಹೊಳ್ಳುತ್ರ
೫. ಉತ್ತರೆಮಳೆ ಬಂದ್ರೆ ಕೂತಲ್ಲಿ ಕೂಳು
೬. ಉತ್ತರಮಳೇಲಿ ಉತ್ತ ಎತ್ತು ನೀರಿಗೆ ಬಿತ್ತು
೭. ಉತ್ತರೆ ಬೀಳದಿದ್ರೆ ಹೆತ್ತವ್ವ ತೊರೆದಾಂಗೆ
೮. ಉತ್ತರೆ ಮರೆತರೆ ಹೆತ್ತಮ್ಮ ತೊರೆದರೆ ಮುತ್ತು ಮಣ್ಣಾದರೆ ಲೋಕ ಬೆಳಗು ಬೈಗು ಆಗೋದು ಹ್ಯಾಗೆ
೯. ಉತ್ತರೆ ಮಳೆ ಹೊತ್ತಿಗೆ ಒತ್ತರೆ ಆಗಿರುತ್ತೆ
೧೦. ಉತ್ತರೆಮಳೆ ಆಗದಿದ್ರೆ ಎತ್ಕೊಂಡು ಹೋಗು
೧೧. 'ಆದರ ಉತ್ತರಿ, ಆಗದಿದ್ರ ಕತ್ತರಿ
೧೨. 'ಉತ್ತರೆ ಬೀಳದಿದ್ರೆ ಹೆತ್ತವ್ವ ತೊರೆದಾಂಗೆ'
೧೩. 'ಉತ್ತರೆಮಳೆ ಆಗದಿದ್ರೆ ಎತ್ಗೊಂಡ್ ಹೋಗು'

'ಉತ್ತರೆಮಳೆಗೆ ಎತ್ತು ಬಾಯ್ಬಿಡುತ್ತದೆ' ಎಂಬುದು ಉತ್ತರಕರ್ನಾಟಕದ ಕಡೆಯ ಒಂದು ಗಾದೆ. ಗಣೇಶ ಚೌತಿಯ ಒಂದೆರಡು ಮಳೆ ಇರುತ್ತದೆ. ಈ ಮಳೆ ಆರಂಭ ಸುಮಾರು ಹದಿನಾಲ್ಕು ದಿನಗಳ ಕಾಲ ಈ

ಉತ್ತರಕರ್ನಾಟಕದ ಗ್ರಾಮಸ್ಥರ ಅನುಭವ. ಮಳೆಗಾಲದ ಎಂದರೆ ಎಲ್ಲ ನೋವನ್ನು ತಡೆದುಕೊಳ್ಳುವ ಎತ್ತುಗಳೂ ಸಹ ಬಾಯಾರಿಕೆ ತಡೆಯಲಾರದೆ ಬಾಯಿ ಬಿಡುತ್ತವೆ ಎಂಬುದು ಈ ಗಾದೆಯ ಆಶಯ. ಆದರೆ ವಾಸ್ತವವಾಗಿ ಕಲ್ಬುರ್ಗಿ ಜಿಲ್ಲೆ ಹೊರತು, ಉಳಿದ ಉತ್ತರಕರ್ನಾಟಕದ ಜಿಲ್ಲೆಗಳಲ್ಲಿ ಈ ದಿನಗಳಲ್ಲಿ ಅಂಥ ಬಿಸಿಲೇನೂ ಇರುವುದಿಲ್ಲ. ಹೀಗಾಗಿ ಈ ಗಾದೆಯ ಹಿಂದಿನ ನಂಬಿಕೆ ಬೇರೇನೋ ಇದ್ದಿರಬೇಕು.

ಈ ದಿನಗಳ ಬಿಸಿಲಿನ ಬಗೆಗೆ ಇನ್ನೂ ಒಂದು ನಂಬಿಕೆ ಈ ಭಾಗದಲ್ಲಿದೆ. ಅದೆಂದರೆ – ಹಳೆಯ ಸೀರೆ, ಬಟ್ಟೆ ಇತ್ಯಾದಿಗಳನ್ನು ಈ ಬಿಸಿಲಲ್ಲಿ ಒಣಗಿಸಿದರೆ ಅದಕ್ಕೆ ಬಹುಕಾಲ ಹುಳುಹಿಡಿಯುವುದಿಲ್ಲ ಎಂಬುದು. ಈ ಮಳೆ ಪೈರಿಗೆ ಒಳ್ಳೆಯದೆಂಬ ಭಾವನೆ ಕರ್ನಾಟಕದ ಎಲ್ಲೆಡೆಯ ರೈತರಲ್ಲಿರುವಂತೆ ಕಾಣುತ್ತಿದೆ. 'ಉತ್ತರೆ ಜಿಲ್ಲೆಯ ಜನರ ನಂಕೆ ಆದರೆ ಅದು ಭತ್ತ ಹೂ ತಳೆಯುವ ಕಾಲಕ್ಕೆ ಬರಹೊನ್ನಾಗಿಸುವ 'ಹೊನ್ನುತ್ರೆ' (ಹೊನ್ನಿನ ಉತ್ತರೆ). ಹಾಗಲ್ಲದೆ ಅನಂತರ ಬಂದರೆ ಕಾಲನ್ನು ಜೊಳ್ಳಾಗಿಸುತ್ತೆ. 'ಹೂಳ್ಳುತ್ರೆ' ಎಂಬ ಗಾದೆ ಮಾತೂ ಉತ್ತರ ಕನ್ನಡಜಿಲ್ಲೆಯಲ್ಲೇ ಇದೆ. ಉತ್ತರಕನ್ನಡದ ಕರಾವಳಿ ಭಾಗಕ್ಕೆ ಇದು ಹೊಳ್ಳುತ್ರೆಯಾದರೆ, ಉಳಿದೆಡೆಗೆ 'ಹೊನ್ನುತ್ರೆ'ಯಾಗುವುದಂತೆ. ಉತ್ತರಕರ್ನಾಟಕದಲ್ಲೂ ಈ ಮಳೆ ಅನಿವಾರ್ಯ ಮಳೆಗಳಲ್ಲೊಂದ ಎಂಬ ಅನುಭವ ಇದೆಯಾದರೂ ಇದನ್ನು ನಂಬಲಿಕ್ಕಾಗೋದಿಲ್ಲ. ಎಂಬ ಎಚ್ಚರವೂ ಕೆಲ ಭಾಗಗಳಲ್ಲಿದೆ. ಆದ್ದರಿಂದಲೇ ಉತ್ತರಿಕಾರ್ತಿ ಅತ್ತಳಕೊಳ, ಹಸ್ತಕಾರ್ತಿ ಅಸ್ತವ್ಯಸ್ತ ಎಂಬ ಗಾದೆ ಅಪರೂಪವಾಗಿ ದಾವಣಗೆರೆ ಕಡೆ ಕೇಳಿಬರುತ್ತದೆ.

ಉತ್ತರದೇವಿ ಎಂಬ ಗೌರವಸ್ಥ ಹೆಣ್ಣುಮಗಳು ಗಂಡ, ತಂದೆಯರಿಂದ ತಿರಸ್ಕೃತಳಾಗಿ, ನೊಂದು, ಶಿವನನ್ನು ಕುರಿತು ತಪಸ್ಸು ಮಾಡಿ ಉತ್ತರೆಮಳೆಯಾಗಿ ಹರಿದಳೆಂಬ ನಂಬಿಕೆ ವಿಶೇಷವಾಗಿ ದಕ್ಷಿಣ ಕರ್ನಾಟಕದ ಮಲೆನಾಡಿನ ಜಾನಪದರಲ್ಲಿದೆ. ಈ ಕಥೆಯನ್ನು ನಿರೂಪಿಸುವ "ಉತ್ತರದೇವಿ" ಹಾಡುಗಳು ಕರ್ನಾಟಕದಲ್ಲಿ ಹೇರಳವಾಗಿ ದೊರೆಯುತ್ತವೆ.

'ಉತ್ರೆಮಳೆ ಬಂದು ಸುತ್ತ ಕಾವುಸಿ ಬೆಳೆದು
ಎತ್ತಾಲ ವಲಬು ತಿಳಿಯಾವು ಕಲ್ಲಣ್ಣ
ಅಪ್ಪ ರಳ್ಳಾದ ನೆಲೆಯೇಲೊ'[೧೩]

ಎಂಬುದು ಉತ್ತರೆಮಳೆಯ ಸಮೃದ್ಧತೆಯನ್ನು ಹೇಳುತ್ತದೆ. ಮುಂಗಾರಿ ಮತ್ತು ಹಿಂಗಾರಿಗೆ ಮಧ್ಯವರ್ತಿಯಾದ ಮಳೆ ಉತ್ತರೆ. ಮುಂಗಾರು ಸಂದರ್ಭದಲ್ಲಿ ಮೃಗಶಿರಾ ಮಳೆಯಿದ್ದಂತೆ, ಹಿಂಗಾರಿಗೆ ಉತ್ತರಾ ಮಳೆ. ಈ ಮಳೆಗೆ ಸಂಬಂಧಿಸಿದಂತೆ ಸಿಗುವ ಗಾದೆ ಮಾತುಗಳು ಮತ್ತು ಬಿಡಿ ಮುತ್ತುಗಳು ಬೇರೆ ಯಾವ ಮಳೆಗೂ ಸಿಕ್ಕುವುದಿಲ್ಲ. ಮೊದಲ ಮಳೆಗಳು ಕಳೆದು ನಿರಾಶರಾಗಿ ಹಿಂಗಾರಿಯಾದರೂ

ಆರಂಭವಾಗುವುದೇನೋ ಎಂಬ ಹಂಬಲದಿಂದ ಕಾಯುವಾಗ ಬರುವ ಮಳೆಯೇ ಉತ್ತರಾ. ಅದಕ್ಕಾಗಿ ಈ ಮಳೆಯನ್ನು ತಾಯಿಗೆ ಹೋಲಿಸಿದ್ದಾರೆ. 'ಉತ್ತರೆ ಕಳಿತು ಅಂದರೆ ಹೆತ್ತ ತಾಯಿ ಕಳೆದ್ಹಂಗೆ' 'ಉತ್ತರೆ ಬಾರದಿರೆ ಹೆತ್ತಮ್ಮ ತೊರೆದರೆ ಮತ್ತಾರಿಗೆ ದೂರಲಿ' 'ಉತ್ತರ ಸ್ವಾತಿಮಳೆ ಮೇಲ ಅಣ್ಣಯ್ಯನೀ ಮೇಲ ನಮ್ಮ ಬಳಗಕ' ಮುಂತಾಗಿ ತಮ್ಮ ಮನದ ಸಂವೇದನೆಗೆ ಅಭಿವ್ಯಕ್ತಿ ನೀಡಿದ್ದಾರೆ. 'ಉತ್ತರಾ ಪೋತೆ ಎತ್ತರ ಗಂಪ' (ಉತ್ತರೆ ಬರಲಿಲ್ಲ ಎಂದರೆ ಎತ್ತು ಗಂಟು ಮೂಟೆ) ಎಂಬ ತೆಲುಗು ಗಾದೆಯೂ ವ್ಯಾಪಾಕವಾಗಿ ಬಳಕೆಯಲ್ಲಿದೆ.

ಉತ್ತರಾ, ಹಸ್ತ, ಚಿತ್ತ ಒಕ್ಕಲು ಮಗನಿಗೆ ಭಾಷೆ ಕೊಟ್ಟ ಮಳೆಗಳೆಂದು ನಂಬುತ್ತಾರೆ. ಈ ಮಳೆ ಬಂದರೆ ಅವನ ನೆಲ ಜಲ ಬದುಕು ಸಮೃದ್ಧವಾದಂತೆ. 'ಉತ್ತರೆ ಮಳೆ ಬಿತ್ತಿದ್ದೆಲ್ಲ ಫಲ' ಇಡೀ ಭೂಮಿಯೇ ನಳನಳಿಸುವಂತೆ ಮಾಡುತ್ತದೆ. ಈ ಮಳೆಗಳನ್ನು ದೊಡ್ಡ ಮಳೆಗಳೆಂದು ಕರೆಯುತ್ತಾರೆ. ಕೆರೆಕುಂಟೆಗಳಲ್ಲಿ ತುಂಬಿ ಬೇಸಿಗೆಯ ನೀರು ಸಂಗ್ರಹವಾಗುವುದು ಈ ಮಳೆಗಳಿಂದಲೇ. ಮಧ್ಯಾಹ್ನದ ಹೊತ್ತು ಬಿಸಿಲು ಚೆನ್ನಾಗಿ ಕಾದು ಸಂಜೆಮಳೆ ಹೊಡೆಯುತ್ತದೆ. ಉತ್ತರೆ ಗಮ್ಮಕ್ಕೆ ಎತ್ತು ಮಡ ಬಿತ್ತು ಈ ಮಳೆ ಸರಿಯಾಗಿ ಬಂದುಬಿಟ್ಟರೆ ರೈತ ಚಿಂತೆ ಮಾಡುವುದೇ ಬೇಕಿಲ್ಲ. ಉತ್ತರೆ ಮಳೆಯಾದ ಮ್ಯಾಲೆ ಇನ್ಯಾತರ ಮಳೆ ಎಂಬ ನಿರ್ಧಾರಕ್ಕೂ ಬರುತ್ತಾನೆ. ಈ ಮಳೆಯಲ್ಲಿ ಹಿಂಗಾರಿ ಜೋಳ ಬಿತ್ತನೆ ಬಲು ಪ್ರಚಲಿತವಾಗಿದೆ. ನವಣೆ, ಕುಸುಬೆಯನ್ನೂ ಈ ಸಮಯದಲ್ಲಿ ಬಿತ್ತುತ್ತಾರೆ.

ಬೇರೆ ಮಳೆಯ ನಕ್ಷತ್ರಗಳಿಗಿಲ್ಲದಿರುವ ಒಂದು ವಿಶೇಷತೆ ಈ ಮಳೆಗಿದೆ. ಕರ್ನಾಟಕದಾದ್ಯಂತ ಪ್ರಚಲಿತವಿರುವ ಉತ್ತರದೇವಿಯ ಹಾಡಿಗೂ ಮತ್ತು ಈ ಮಳೆಗೂ ಇರುವ ಸಂಬಂಧವೇ ಆ ವಿಶೇಷ. ಉತ್ತರದೇವಿಯ ಹಾಡು ಕರ್ನಾಟಕದ ಉದ್ದಗಲಗಳಲ್ಲಿ ತುಂಬ ವ್ಯಾಪಕವಾಗಿ ಪ್ರಚಲಿತವಾಗಿರುವ ಪ್ರಸಿದ್ಧ ಲಾವಣಿ. ಅಲ್ಲಿ ಉತ್ತರದೇವಿಯ ಪಾತ್ರವೇ ಪ್ರಧಾನ. ಕತೆ ಸಂಕ್ಷಿಪ್ತವಾಗಿ ಹೀಗಿದೆ; ಸೊಸೆಯಾದ ಉತ್ತರದೇವಿಗೂ ಅತ್ತೆಗೂ ನ್ಯಾಯವಾಗುತ್ತದೆ. ಹೊಲದಿಂದ ಬಂದ ಮಗನಿಗೆ ತಾಯಿಯು ಉಣನೀಡಿ 'ಉತ್ತರಕ್ಕೆ ಉತ್ತರ ಕೊಡುವ ಉತ್ತರೆ ಬ್ಯಾಡ್'ಅವಳನ್ನು ತವರು ಮನೆಗೆ ಕಳಿಸಿ ಬೇಕಾದಂಥ ಹೆಣ್ಣು ತರುತ್ತೇನೆನ್ನುತ್ತಾಳೆ. ಮಗ ಚೆನ್ನಯ್ಯನಿಗೆ ಉಭಯ ಸಂಕಟ. ಒಂದೆಡೆ ಪ್ರೀತಿಯ ಹೆಂಡತಿ ಮತ್ತೊಂದೆಡೆ ಹೆತ್ತ ತಾಯಿ. ಗಂಡ ಸುಮ್ಮನಿದ್ದುದನ್ನು ಕಂಡು ತನ್ನ ಮೂರು ಮಾಕ್ಕಳೊಂದಿಗೆ ತವರು ಮನೆಗೆ ಹೊರಡುತ್ತಾಳೆ. ಮಾವ, ಮೈದುನರು, ನೆರೆಹೊರೆಯವರು, ಪ್ರಾಣಿಪಕ್ಷಿಗಳು, ಗಿಡಮರಗಳು ಅಸಹಾಯಕರಾಗಿ ಮರುಗುತ್ತಾರೆ. ತನ್ನ ಅತ್ತೆ 'ಹಾವನ್ನು ಹಿಡಿದು ಸಿಂಬೆ ಸುತ್ತಿ, ಸಣ್ಣೆಯಲ್ಲಿ ನೀರು ತರುವಂತಹ' ಕಷ್ಟಗಳನ್ನು ಕೊಟ್ಟಳೆಂದು ಅನ್ಯರ ಹತ್ತಿರ ಹೇಳಿಕೊಳ್ಳುತ್ತಾಳೆ. ಕೆಲವು ಪಾಠಗಳಲ್ಲಿ ಅತ್ತೆ ಸೊಸೆಯುಶೀಲವನ್ನು ಶಂಕಿಸಿದ್ದೂ ಇದೆ. ತವರು ಮನೆಯ ದಾರಿಯಲ್ಲಿ ಅವಳನ್ನು ವರಿಸಲು ಎರಡು ಮೂರು ಊರಗೌಡರು ಮುಂದೆ ಬರುತ್ತಾರೆ. ಅವರನ್ನು ತಿರಸ್ಕರಿಸಿ ಆಕೆ ತವರು ಮನೆಗೆ ಬಂದರೆ

ಒಳಗೆ ಕರೆದುಕೊಳ್ಳಲು ಅಪ್ಪ, ಅಣ್ಣ, ತಮ್ಮಂದಿರು ತಮ್ಮತಮ್ಮ ಹೆಂಡಂದಿರ ನೆವಹೇಳಿ ನಿರಾಕರಿಸುತ್ತಾರೆ. ಅವ್ವನ ಮನೆಗೆ ಹೋಗಲು ಹೇಳುತ್ತಾರೆ. ಅವ್ವನ ಮನೆಗೆ ಬರುತ್ತಾಳೆ:

ಅವ್ವನೆ ಕದ ತಗಿಯೇ ಅವ್ವಣ್ಣಿ ಕದ ತಗಿಯೇ

ನಮ್ಮವ್ವ ನನಿಗೆ ಕದ ತಗಿಯೇ ಸುವ್ವಿ

ಅವ್ವನಿಗೆ ಮಗಳ ಸ್ಥಿತಿ ಕಂಡು ಬಲು ಸಂಕಟವಾಗುತ್ತದೆ. 'ತನ್ನ ಹಾಡು ತನ್ನ ಮಗಳಿಗೂ ಬಂತೆಂದೂ' ನಿಟ್ಟುಸಿರು ಬಿಟ್ಟು ಮಗಳನ್ನು ಮನೆಗೆ ಕರೆದುಕೊಳ್ಳುತ್ತಾಳೆ.

ಇತ್ತ ಚೆನ್ನಯ್ಯನಿಗೆ ತನ್ನ ಬದುಕು ಅಸಹನೀಯವಾಗುತ್ತದೆ. ತನ್ನ ತಾಯಿಯ ಒತ್ತಾಯದಂತೆ ಇನ್ನೊಂದು ಹೆಣ್ಣನ್ನು ಮದುವೆಯಾಗುವುದಿಲ್ಲ. ಹೆಂಡತಿ ಮನೆಬಿಟ್ಟು ಹೊರಡುವಾಗ ಸುಮ್ಮನಿದ್ದುದರ ತಪ್ಪು ಅರಿವಾಗಿ ಕರೆತರಲು ಹೊರಡುತ್ತಾನೆ. ಉತ್ತರದೇವಿಯ ಊರ ಹೊರಗಿನ ದನಗಾಹಿಗಳನ್ನು 'ನಿಮ್ಮಕ್ಕೈದಾಳ ಚನ್ನಿ ಮನಿಯಾಗೆ' ಎಂದು ಕೇಳಿದ್ದಕ್ಕೆ ಅವರು 'ಅವಳು ಬೇರೆಯವರ ತೋಳಲ್ಲಿ ಒರಗಿದ್ದಾಳೆ' ಎಂದು ಸುಳ್ಳು ಹೇಳುತ್ತಾರೆ. ವಿವೇಕರಹಿತನಾದ ಚೆನ್ನಯಾ ಕೂಡಲೇ ಅಲ್ಲಿಯೇ ಕತ್ತಿಯಿಂದ ಇರಿದುಕೊಂಡು ಸಾಯುತ್ತಾನೆ. ತಿಳಿದ ಉತ್ತರದೇವಿ ಓಡೋಡಿ ಬರುತ್ತಾಳೆ, ಹಲುಬಿ ಹಂಬಲಿಸುತ್ತಾಳೆ. ನಂತರ ಯಾರು ಎಷ್ಟು ಹೇಳಿದರೂ ಕೇಳದೆ 'ಕೊಂಡ ತೆಗೆಸಿ ಕೆಂಡ ಮಾಡಿಸಿ ಚಿತೆಯೇರುತ್ತಾಳೆ. ಉತ್ತರಮಳೆಯಾಗಿ ಹರಿಯುತ್ತಾಳೆ.

ಈ ಲಾವಣಿಯ ಹಲವು ಹತ್ತು ಪಾಠಾಂತರಗಳು ನಮಗೆ ದೊರೆಯುತ್ತವೆ. ಈ ಬಗ್ಗೆ ಪ್ರಪ್ರಥಮವಾಗಿ ಪ್ರೊ.ದೇಜಗೌ ಅವರು 'ಜನಪದಸಾಹಿತ್ಯದಲ್ಲಿ ಉತ್ತರದೇವಿಯ ಪ್ರಸಂಗ ಎಂಬ ಲೇಖನ ಬರೆದು ಅಲ್ಲಿ ಸುದೀರ್ಘವಾಗಿ ಚರ್ಚಿಸಿದ್ದಾರೆ. 'ಇದು ಅತ್ಯಂತ ಶ್ರೇಷ್ಠವಾದ ಕಥನಕವನ ಇದರ ವಸ್ತು ಸರಳ, ಕಥಾನಿರೂಪಣೆ ನೇರ, ಘಟನಾವಳಿಗೂ ಐದೋ ಆರೋ. ಅವುಗಳ ಜೋಡಣೆಯಲ್ಲಿ ಸಿಕ್ಕಲ್ಲ, ಗೋಜಲಿಲ್ಲ. ಒಂದಕ್ಕೊಂದು ಸಾವಯುವ ಸಂಬಂಧವಿದೆ. ಅನಾವಶ್ಯಕವಾದ ವರ್ಣನೆಯಿಲ್ಲ; ಅಬ್ಬಿಯಂತೆ ಕ್ರಿಯೆ ರಭಸವಾಗಿ ಸಾಗುತ್ತದೆ. ಮುಖ್ಯ ಪಾತ್ರಗಳು ಮೂರೇ ಮೂರು; ಉತ್ತರದೇವಿ, ಗಂಡ ಚಿನ್ನಯ್ಯ, ಅತ್ತೆ. ಅತ್ತೆ ಮನೆಯಿಂದ ತವರು ಮನೆಗೆ ಹೊರಟಿರುವ, ಗಂಡಹೆಂಡತಿಯರು ಸಾವನ್ನಪ್ಪುವ ಸನ್ನಿವೇಶಗಳು ಮನವನ್ನು ಕರಗಿಸಿತ್ತವೆ. ಅತ್ತೆಯ ಅಟ್ಟಹಾಸ ಸೊಸೆಯ ಗೋಳು ಜನಪದಸಾಹಿತ್ಯದಲ್ಲಿ ಸಾಕಷ್ಟು ಮೂಡಿದ್ದರೂ, ಎಲ್ಲ ಸೊಸೆಯರಿಗೆ ಪ್ರಾತಿನಿಧಿಕವೆಂಬಂತೆ ಉತ್ತರದೇವಿಯ ಕತೆ ಮಾತ್ರ ಕರ್ನಾಟಕದಲ್ಲೆಲ್ಲ ಪ್ರಚಲಿತವಾಗಿದೆ. ಹಾಡಿನಲ್ಲಿ ಬರುವ ನೀನುತ್ತರೆ ಮಳೆಯಾಗಿ ಹೊರಡವ್ವ ಎಂಬ ತಾಯಿಯ ಮಾತನ್ನು ಗಮನಿಸಿರುವ ಪ್ರೊ ದೇ. ಜ.ಗೌ ಅವರು "ಅವಳು ಉತ್ತರೆಮಳೆಯಾಗಿ ಹರಿದು ಹೋಗುವ ಕಲ್ಪನೆ ತೀರ ಹೊಸದು" ಎಂದು ಅಭಿಪ್ರಾಯ ಪಡುತ್ತಾರೆ.

ಖ್ಯಾತ ಜಾನಪದವಿದ್ವಾಂಸರಾದ ಡಾ. ಜಿ. ಶಂ. ಪರಮಶಿವಯ್ಯ ಅವರು ಪ್ರಕಟಿತ ಮತ್ತು ಅಪ್ರಕಟಿತವಾದ ಸುಮಾರು ೧೯ ಉತ್ತರದೇವಿಯ ಹಾಡುಗಳ ಪಾಠ ಪರಿಷ್ಕರಣ, ವಿಶ್ಲೇಷಣ ಮಾಡಿ ಆ ಹಾಡನ್ನು ವಾಸ್ತವಿಕಕಾವ್ಯದ ಪಟ್ಟಿಗೆ ಸೇರಿದ್ದಾರೆ. ಅದರಲ್ಲಿನ ಒಂದೆರೆಡು ಪಾಠಗಳು ಉತ್ತರದೇವಿಯ ಅಂತ್ಯಕ್ಕೂ ಉತ್ತರೆಮಳೆಗೂ ಸಂಬಂಧವನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಶ್ರೀಯುತರು ಆ ಬಗ್ಗೆ ವಿವೇಚಿಸುತ್ತಾ ಎಂ.ಜಿ. ಈಶ್ವರಪ್ಪನವರು ಸಂಗ್ರಹಿಸಿರುವ ಹೊನ್ನಾಳಿ ಸುತ್ತಿನ ಉತ್ತರದೇವಿಯ ಕಥೆ ಮಲೆನಾಡು ಬಯಲುನಾಡುಗಳ ಸೆರಗಿನಲ್ಲಿ ದೊರೆತ ಒಂದು ಮಹತ್ವದ ಪಾಠವಾಗಿದೆ. ಉತ್ತರದೇವಿಯ ಕಥೆಯ ಬೆಳವಣಿಗೆ ಹಾಗೂ ಅಂತ್ಯದ ಬಗ್ಗೆ ಈ ಪಾಠ ಮಲೆನಾಡು ಮತ್ತು ಬಯಲುನಾಡುಗಳೆರಡರ ಒಂದು ಸಾಮರಸ್ಯವನ್ನು ಸಾಧಿಸಿದಂತಿದೆ... ಉಳಿದ ಪಾಠಗಳಿಗಿಂತ ಅತ್ಯಂತ ಶಕ್ತಿವತ್ತಾಗಿ, ಪರಿಣಾಮಕಾರಿಯಾಗಿ ಗಂಡ –ಹೆಂಡಿರ ಗಾಢಪ್ರೇಮವನ್ನು ಈ ಕಥೆ ಚಿತ್ರಿಸುತ್ತದೆ. ಉತ್ತರೆಮಳೆಗೂ, ಉತ್ತರೆಯ ಅಂತ್ಯಕ್ಕೂ ಇರುವ ಸಂಬಂಧದ ಮೇಲೆ ಸ್ವಲ್ಪಮಟ್ಟಿಗೆ ಈ ಕಥೆ ಬೆಳಕು ಚೆಲ್ಲುತ್ತದೆ. 'ಪತಿಪತ್ನಿ'ಯರು ಕೊಂಡವಾದ ಸಂದರ್ಭದಲ್ಲಿ ಉತ್ತರೆಮಳೆ ಹೂದೂ ಹೊಳೆಯಾಗಿ ಹರಿಯಿತು ಎಂಬ ಮಾತು ಅರ್ಥವತ್ತಾಗಿ, ಧ್ವನಿಪೂರ್ಣವಾಗಿ ಬಂದಿದೆ. ಉತ್ತರದೇವಿಯ, ಅವಳ ಪತಿಯ ಕಡುದುಃಖವೇ ಕಡಲಾಗಿ ಹರಿಯಿತೋ ಎಂಬಂತೆ ಈ ಮಳೆ ಸುರಿದು ಭೂಮಿಯನ್ನು ಶಾಂತಗೊಳಿಸಿತು. ಉತ್ತರದೇವಿಯ ಅವಳ ಪತಿಯ ನಿಟ್ಟುಸಿರಿನಿಂದ ಕಾದಲೋಕದಲ್ಲಿ ತಂಪನ್ನು ಬಿತ್ತಿತು ಎಂಬ ಸಾಂಕೇತಿಕ ಅರ್ಥ ಇಲ್ಲಿ ಸ್ಫುರಿಸುತ್ತದೆ.

ಪ್ರೊ. ದೇ.ಜ.ಗೌ ಅವರು ತಾವು ಬರೆದ ಲೇಖನ ಪ್ರಕಟವಾಗಿರುವ ಉತ್ತರದೇವಿಯ ಸಂಗ್ರಹಗಳನ್ನು ಪರೀಕ್ಷಿಸಿ ಉತ್ತರ ಕರ್ನಾಟಕದ ಸಂಪ್ರದಾಯ, ಮಲೆನಾಡಿನ ಮಧ್ಯ ಸಂಪ್ರದಾಯ ಹಾಸನ, ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ರೂಢಿಯಲ್ಲಿರುವ ದಕ್ಷಿಣ ಸಂಪ್ರದಾಯ ಎಂದು ವಿಭಾಗಿಸಿ ದಕ್ಷಿಣ ಸಂಪ್ರದಾಯದ ಸಂಗ್ರಹದ ಗುಂಪಿಗೆ ಬರುವ ಡಾ.ಜಿ.ಶಂ.ಪ ಅವರ 'ಜಾನಪದ ಖಂಡ ಕಾವ್ಯಗಳು' ಗ್ರಂಥದಲ್ಲಿರುವ ಉತ್ತರದೇವಿ ಹಾಡಿನ ನೀನುತ್ತರೆ ಮಳೆಯಾಗಿ ಹೊರಡವ್ವ ಎಂಬ ಮಾತನ್ನು ಉಲ್ಲೇಖಿಸಿದ್ದಾರೆ. ಈ ಮಾತನ್ನು ತಾಯಿ ಉತ್ತರೆಗೆ ಹೇಳುತ್ತಾಳೆ. ಈ ತಾಯಿಯ ಮಾತು ನಿರ್ದಾಕ್ಷಿಣ್ಯವಾಗಿದ್ದು ಅದನ್ನು ಚಾಲಿಸುವ ಭಾವನೆಗಳು ಒರಟಾಗಿವೆಯೆಂದೇ ಹೇಳಬೇಕು ಹಾಗೂ ದುರಂತಕತೆಯಲ್ಲಿರಬೇಕಾದ ಮನಃಕ್ಷಾಲನಶಕ್ತಿ ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಡಾ. ಜಿ. ಶಂ.ಪ. ಅವರು ತಮ್ಮ ಅಧ್ಯಯನದಲ್ಲಿ ಉತ್ತರದೇವಿ ಹಾಡಿನ ಪ್ರಕಟಿತ ಮತ್ತು ಅಪ್ರಕಟಿತವಾದ ೨೯ ಪಾಠಾಂತರಗಳನ್ನೂ ವಿವರವಾಗಿ ವಿವರಿಸಿ ಮತ್ತು ವಿಶ್ಲೇಷಿಸಿ ಎರಡು ಪಾಠಾಂತರಗ'ಳಲ್ಲಿ ಆಕೆ ಉತ್ತರೆಮಳೆಯಾಗಿ ಹೋದುದನ್ನು ಗುರುತಿಸಿದ್ದಾರೆ. ಅವುಗಳಲ್ಲಿ ಒಂದು ಹಾಸನ ಜಿಲ್ಲೆಯದು, ಮತ್ತೊಂದು ಶಿವಮೊಗ್ಗ ಜಿಲ್ಲೆಯದು.

ಈ ಇಬ್ಬರು ವಿದ್ವಾಂಸರ ಅಧ್ಯಯನದ ನಂತರ ಓರಿಯಣ್ಣ ಅವರು ೧೯೭೬ರಲ್ಲಿ ಒಂದು ಪಾಠಾಂತರವನ್ನು ಪ್ರಕಟಿಸಿದ್ದಾರೆ. ಪ್ರಸ್ತುತ ಪಾಠಾಂತರವು ಉತ್ತರದೇವಿಗೂ ಉತ್ತರೆಮಳೆಗೂ ಇರುವ ಸಂಬಂಧವನ್ನು ನಿಕಟವಾಗಿ ಮತ್ತು ಸ್ಪಷ್ಟವಾಗಿ ಗುರುತಿಸಿದೆ. ಗಂಡನ ಮನೆಯಿಂದ ತ್ಯಾಜ್ಯಳಾದ ಉತ್ತರದೇವಿಯು ತವರು ಮನೆಗೆ ಹೊರಟು ನಿಂತು ಗಿಡ ಮರಗಳಿಗೆ ವಿದಾಯ ಹೇಳುತ್ತಿರುತ್ತಾಳೆ. ಆಗ ಅವು 'ನೀನು ಹೋದರೆ ನಮಗೆ ನೀರು ಹಾಕುವವರು, ಸಾಕುವವರು ಯಾರು? ನಮ್ಮ ಬೇರುಗಳು ಉರುದಾವು' ಎಂದು ಗೋಳಿಡುತ್ತವೆ. ಆಗ ಉತ್ತರೆ.

ನೀರಿಲ್ದೆ ಬೇರೆ ಉರುದಾರೆ ಗಿಡಗಳಿರಾ

ಆಕಾಸುದ ನೀರಾ ತರಾಸೀನು

ಎನ್ನುತ್ತ ಸಮಾಧಾನ ಮಾಡುತ್ತಾಳೆ. ಗಿಡ ಮರಗಳಿಗೆ ತಾನು ಮುಂದೆ ಮಳೆಯ ರೂಪದಲ್ಲಾದರೂ ಬಂದು ನೀರುಣಿಸುತ್ತೇನೆಂದು ಸೂಚನೆ ಕೊಡುವಂತೆ ಕಾಣುತ್ತದೆ. ತವರು ಮನೆಗೆ ಹೋದ ಉತ್ತರದೇವಿಗೆ ತಾಯಿಯಿಂದ ಮಾತ್ರ ಸ್ವಾಗತ ದೊರೆಯುತ್ತದೆ. ತನ್ನ ಸ್ಥಿತಿಯೇ ತನ್ನ ಮಗಳಿಗೂ ಬಂತೆಂದು ತಾಯಿ ಮರುಗುತ್ತಾಳೆ. ತಾಯಿಯ ಜೊತೆಗೆ ಗಂಗೆಯ ಹತ್ತಿರ ಬಂದು ಗಂಗೆಗೆ ತನ್ನನ್ನು ಎಳೆದುಕೊಳ್ಳುವಂತೆ ಹೇಳುತ್ತಾಳೆ. ಆನಂತರ:

ತಾವರೆ ಎಲೆ ಮೇಲೆ ತಾನಾಗಿ ಕೂತುಕೊಂಡು

ತಪ್ಪು ಮಾಡ್ಯಳೆ ಶಿವನೀಗೆ ಉತ್ತರುದೇವಿ

ನಾಡಾ ಮೇಲೆ ಉತ್ತರೆ ಮಳಿಯಾಗಿ ಹರಿದಾಳ.

ತನ್ನ ಅತ್ತೆಯಿಂದ ತಾನು ಪಡಬಾರದ ಸಂಕಟ, ಕಷ್ಟ, ನೋವು ಅನುಭವಿಸಿದರೂ, ಭೂಮಿಗೆ ಹಿತವಾಗಬೇಕೆಂಬ ದೃಷ್ಟಿಯಿಂದ ಆಕೆ ತಾವರೆಯ ಎಲೆ ಮೇಲೆ ಕೂತು ತಪಸ್ಸು ಮಾಡಿ ಉತ್ತರದೇವಿ ಉತ್ತರೆ ಮಳೆಯಾಗಿ ಹರಿಯುತ್ತಾಳೆ. ಪ್ರಸ್ತುತ ಲಾವಣಿಯ ಅತ್ಯಂತದಲ್ಲಿ ಉತ್ತರದೇವಿ ದೈವಿಶಕ್ತಿಯಂತೆ ಕಾಣುತ್ತಾಳೆ, ದೈವಿವ್ಯಕ್ತಿತ್ವ ಪಡೆಯುತ್ತಾಳೆ.

ಈಗಾಗಲೇ ಜನಪದ ವಿದ್ವಾಂಸರು ಉತ್ತರದೇವಿಯನ್ನು ಉತ್ತರೆಮಳೆಗೆ ಸಮೀಕರಿಸಿಯೇ ಗಮನಿಸಲು ತೊಡಗಿದ್ದಾರೆ. ಡಾ.ಹಿ.ಶಿ. ರಾಮಚಂದ್ರೇಗೌಡರು 'ಜನಪದ ನಂಬಿಕೆಗಳು ಮತ್ತು ಆಚರಣೆಗಳು ಸಾಹಿತ್ಯದ ಸಂದರ್ಭದಲ್ಲಿ' ಎಂಬ ತಮ್ಮ ಲೇಖನದಲ್ಲಿ ಜನಪದ ಬದುಕನ್ನು ಸಾಮಾಜಿಕ ಕಳಕಳಿಯ ಚಿಂತನೆಗೆ ತೊಡಗಿಸಿ "ಮಳೆಯಾಗಿ ಹೋಗುವ ಕಾರಣಕ್ಕಾಗಿ ಅರ್ಥಾತ್ ಜನಗಳ ಬೆಳೆ ಆಹಾರ ಮತ್ತು ಮುಂದುವರಿಕೆಯ ಕಾರಣವಾಗಿ ಉತ್ತರದೇವಿ ಬಲಿಯಾಗಬೇಕಿದೆ" ಎಂದು ಅಭಿಪ್ರಾಯ ಪಡುತ್ತಾರೆ. ಆಕೆ ಮಳೆಯಾಗಿ ಹೋಗುವುದರ ಮುಖಾಂತರ' ಜನರ ಬೆಳೆ –ಆಹಾರದ ಮುಂದುವರಿಕೆಗೆ ಕಾರಣಳಾಗುವ ಆಶಯವನ್ನು ಗುರುತಿಸಿದ್ದಾರೆ.

ನಮ್ಮ ಜನಪದರಲ್ಲಿ ಉತ್ತಮರು, ಶ್ರಮಜೀವಿಗಳು, ಶೀಲವಂತರು, ಸಾಹಸಿಗಳು, ಮುಗ್ಧರು ಬಾಳಿ ಬದುಕಿ ಅಂತ್ಯದಲ್ಲಿ ತಾರೆಗಳಾಗುತ್ತಾರೆ, ದೇವತೆಗಳಾಗುತ್ತಾರೆ. ಅಂತೆಯೇ ಉತ್ತರೆಯು ತಾರೆಯಾಗಿರಬಹುದು ಅಥವಾ ಒಕ್ಕಲಿಗನ ಜೀವ ಮಳೆಯಾದ ಉತ್ತರಾ ನಕ್ಷತ್ರವು ಉತ್ತಮ ಬದುಕಿನ ಮಹಾಜೀವವೊಂದರ ಜೊತೆಗೆ ಸಮೀಕರಣಗೊಂಡು ವರ್ಣಿತವಾಗಿರುವಂತೆ ತೋರುತ್ತದೆ. ಅಪೂರ್ಣವೆನ್ನುವಂತೆ ತೋರುವ, ಉತ್ತರೆಗೂ ಉತ್ತರೆಮಳೆಗೂ ಯಾವ ಸಂಬಂಧವನ್ನೂ ಹೇಳದ, ಅಪಾರ ದುಃಖದ ಪ್ರತೀಕದಂತಿರುವ 'ಉತ್ತರದೇವಿ ಹಾಡು' ಚಿತ್ರದುರ್ಗ ಜಿಲ್ಲೆಯಲ್ಲಿಯೂ ದೊರಕುತ್ತದೆ.

**ಹಸ್ತ ಮಳೆ**

> 'ಹಸ್ತದ ಮಳೆ ಹುಯ್ದು ಚಿತ್ತದ ಬಿಸಲು ಕಾದು
> ಮುತ್ತಿನ ಸ್ವಾತಿಯ ಮರೆಮಳೆ - ಹುಯ್ದರೆ
> ಬತ್ತಕೆ ಮತ್ತ ಕವಿದಾವೆ'[೧೪]

೧. ಆದರ ಹಸ್ತಾ, ಆಗದಿದ್ರೆ ಹಲ್ಲು ಕಿಸ್ತಾ
೨. ಅಸ್ತ ಆರ್ದ್ಕಾಳು, ಚಿತ್ತಿ ಮೂರ್ದ್ಕಾಳು
೩. ಹಸ್ತೆ ಹಣುಕ್ಬೇಕು, ಚಿತ್ತೆ ಬರಿಬೆಕು
೪. ಹಸ್ತದ ಮಳೆ ಹಂಗಾದರೆ ಹೆತ್ತತಾಯಿ ಹಿಟ್ಹಾಕೋದಿಲ್ಲ
೫. ಹಸ್ತೆಗೆ ಆರು ಕಾಯಿ ಚಿತ್ತೆಗೆ ಮೂರುಕಾಯಿ
೬. ಹಸ್ತ ಹನಿಕೀತು ಚಿತ್ತ ಬೆದಕೀತು.

ಇದು ರೈತರಿಗೆ ಭಾಷೆಕೊಟ್ಟ ಖಚಿತ ಮಳೆಯೆಂದೂ, ಈ ಮಳೆ ಸಕಾಲದಲ್ಲಿ ಆದರೆ ಫಸಲಿನ ಇಳುವರಿ ಹೆಚ್ಚಾಗಿರುವುದೆಂದೂ ರೈತರ ನಂಬಿಕೆ. ಇದನ್ನು ವ್ಯಕ್ತಪಡಿಸುವ ಗಾದೆಗಳು ಧಾರವಾಥ, ಬಿಜಾಪುರ, ಉತ್ತರ ಕನ್ನಡ ಜಿಲ್ಲೆಗಳಲ್ಲೂ, ಹಳೆಮೈಸೂರಿನ ಕೆಲ ಭಾಗಗಳಲ್ಲೂ ದೊರೆತಿವೆ. 'ಹಸ್ತದ ಮಳೇಲಿ ಆರಂಭ ಬೇಡ, ಚಿತ್ತದ ಮಳೇಲಿ ಹೋರಾಟ ಬೇಡ' ಎಂಬ ಗಾದೆಯೊಂದು ದೊರೆತಿದ್ದರೂ ಇದು ಬಹುಶಃ ಆ ದಿನಗಳಲ್ಲಿ ಹೊಸಬೆಳೆಯ ಕೆಲಸ ಆರಂಭಿಸೋದು ಬೇಡ ಎಂಬರ್ಥದಲ್ಲಿರಬೇಕು. ಆಯಾ ಪ್ರದೇಶದ ಬೆಳೆಗಳಿಗೆ ಈ ಮಳೆ ಒಳ್ಳೆಯದೆಂಬ ನಂಬಿಕೆ ಎಲ್ಲ ಕಡೆಯೂ ಇದ್ದಂತಿದೆ. 'ಹಸ್ತಿ, ಸ್ವಾತಿ ಮಳೆಗಳು ಭತ್ತಕ್ಕೆ ಒಳ್ಳೆಯದೆಂಬ ನಂಬಿಕೆ ಎಲ್ಲ ಕಡೆಯೂ ಇದ್ದಂತಿದೆ. 'ಹಸ್ತಿ, ಸ್ವಾತಿ ಮಳೆಗಳು ಭತ್ತಕ್ಕೆ ಒಳ್ಳೆಯದು' ಎಂದು ಹೊನ್ನಾವರ ತಾಲ್ಲೂಕಿನ ಜನ ಹೇಳುತ್ತಾರೆ. ಭತ್ತ ಬೆಳೆಯದ ಉತ್ತರಕರ್ನಾಟಕದಲ್ಲಿ

ಈ ಮಾದರಿಯ ಹೇಳಿಕೆ ದೊರೆಯಲಿಲ್ಲವಾದರೂ ಇಲ್ಲೂ ಈ ಮಳೆಯ ಬಗೆಗೆ ಒಲವು ತೋರುವ ಗಾದೆಗಳು ಸಿಕ್ಕಿರುವುದನ್ನು ನೋಡಿದರೆ, ಈ ಭಾಗದ ಜೋಳದ ಬೆಳೆಗೂ ಇದು ಒಳಿತೆಂಬ ನಂಬಿಕೆಯೇ ಇರುವಂತೆ ಕಾಣುತ್ತದೆ.

ಅತ್ಯವಶ್ಯಕವಾದ ಹಿಂಗಾರಿಮಳೆ, ಬರದೇ ಹೋದರೆ ಪೈರಿಗೆ ಧಕ್ಕೆಯೊದಗುತ್ತದೆ. 'ಹಸ್ತ ಬರಲುದ್ದರೆ ಹೆತ್ತವ್ವ ಹಿಟ್ಟಕ್ಕಳು' 'ಹಸ್ತ ಚಿತ್ತ ಬರದಿದ್ದರೆ ಹೆತ್ತ ತಾಯಿನೂ ಅನ್ನ ಹಾಕಲ್ಲ' ಅಷ್ಟೇ ಅಲ್ಲ 'ಹಸ್ತ ಇಲ್ಲ ಅಂದರೆ ರೈತ ಹಲ್ಲು ಕಿಸ್ತ.' ಅದಕ್ಕಾಗಿ ಜನಪದ ಮನಸ್ಸು ಹಾರೈಸಿಕೊಳ್ಳುತ್ತದೆ;

ಹಸ್ತದಮಳೆ ಬಂದು ಚಿತ್ತೆ ಬಿಸಿಲು ಕಾದು
ಅಕ್ಕ ಸ್ವಾತ್ಯಕ್ಕ ಜಡಿ ಮಳೆಯು ಹಿಡಿದಾರೆ
ಒಕ್ಕಲು ಮಗನು ಧನಿಕಾನು.

**ಚಿತ್ತೆ ಮಳೆ**

೧. ಚಿತ್ತಿಮಳೆ ಆದಂಗೆ ಹಿರಿಸೊಸಿ ನಡೆದಂಗೆ
೨ ಚಿತ್ತಿಮಳೆ ಚಿತ್ತಗಡಕ
೩ ಕುರುಡು ಚಿತ್ತಿ
೪ ಕುಡ್ಡೀ ಮಳಿ ಬಿದ್ದಲ್ಲಿ ಬಿತ್ತು ಎದ್ದಲ್ಲೇ ಎತ್ತು
೫ ಹುಳುಕು ಚಿತ್ತಿ
೬ ಚಿತ್ತಮಳೆ ವಿಚಿತ್ತರದ ಬೆಳೆ
೭ ಕುರುಡು ವಿತ್ತಮಳೆ ಎರಚಿದತ್ತ ಬೆಳೆ
೮ ಚಿತ್ತಿಮಳೆಗೆ ಕುರುಡು ದಿಗಿಲು ಹಗಲು ಬರುತ್ತೆ ರಾತ್ರಿ ಬರಲ್ಲ
೯ ಚಿತ್ತವಾನುಲೋ ಚಿನಕು ನೇಲ ಪಡಲೇದು
೧೦ ಚಿತ್ತಮಳೆಗೆ ಗಳೆ ಹೊಡೆದ ಒಂದು ಎತ್ತಿನ ಕೊಂಬು ತೋಯ್ತು
೧೦ ಚಿತ್ತ ಮಳೆ ಎತ್ತಿನ ಒಂದು ಕುಂಡಿ ತೋಯ್ದರೆ ಇನ್ನೊಂದು ಕುಂಡಿ ತೋಯೋದಿಲ್ಲ

ಅನುಭವದಿಂದ ಇಂಥ ಮಳೆಯಾದದ್ದರಿಂದ 'ಕುರುಡು ಚಿತ್ತೆ' ಎಂದಿದ್ದಾರೆ. ಚಿತ್ತೆ 'ಅಣ್ಣನ ಮನೇಲಿ ಬಿದ್ದರೆ ತಮ್ಮನ ಮನೇಲಿ ಬೀಳುವುದಿಲ್ಲ ಎಂಬ ಮಾತೂ ಅದರ ಮನಬಂದ ಪ್ರವೃತ್ತಿಯನ್ನು

ಸೂಚಿಸುವುದಕ್ಕಾಗೇ ಹುಟ್ಟಿಕೊಂಡಿದೆ. ಹೀಗಾಗಿ ಚಿತ್ತೆ ಮಳೆ ನಂಬಿಕೆಗೆ ಅರ್ಹವಲ್ಲದ ಮಳೆ ಎಂಬುದು ರೈತರ ಅಭಿಪ್ರಾಯ.

ಮಳೆಗಾಲದ ದಿನಗಳಲ್ಲಿ ಬೀಳುವ ಹದಿನೈದು ಮಳೆಗಳ ಪೈಕಿ ಚಿತ್ತೆಯಷ್ಟು ಅಪಹಾಸ್ಯಕ್ಕೀಡಾದ ಮಳೆ ಬೇರೊಂದಿಲ್ಲ. ಸುಮಾರಾಗಿ ಅಕ್ಟೋಬರ್ ಮಧ್ಯಭಾಗದಲ್ಲಿ ಬೀಳಬೇಕಾದ ಮಳೆ ಇದು. ಆದರೆ, ಇದು ಅತ್ಯಂತ ಬೇಜವಾಬ್ದಾರಿ ಮಳೆ ಎಂದೇ ನಮ್ಮ ಜಾನಪದರ ಅನುಭವ. 'ಇದು ಮನಸ್ಸು ಬಂದ ಗಿರಾಕಿ, ಹೋದಲ್ಲಿ ಹೋಯ್ತು, ಬಂದಲ್ಲಿ ಬಂತು' ಎಂದು ಜನ ಲೇವಡಿ ಮಾಡಿದ್ದಾರೆ, ಇದನ್ನು ಅತ್ಯಂತ ವಿಚಿತ್ರ ವರ್ತನೆಯ ಮಳೆಯಿದು. ಒಂದೆಡೆ ಬಿದ್ದರೆ ಅಲ್ಲಿಂದ ನಾಲ್ಕೆಂಟು ಮಾರುದೂರದಲ್ಲಿ ಕೂಡಾ ಬೀಳದಿರಬಹುದು. ಆದ್ದರಿಂದಲೇ ಇದನ್ನು 'ಕುರುಡು ಚಿತ್ತಿ', 'ಚಿತ್ತಿ ಮಳಿ ಚಿತ್ತಗಡಕ', 'ಚಿತ್ತಿ ಮಳಿಗೆ ಎತ್ತಿನ ಒಂದು ಕುಂಡಿ ತೊಯ್ದರೆ ಮತ್ತೊಂದು ತೋಯೂದಿಲ್ಲ. ಎಂದೆಲ್ಲ ವರ್ಣಿಸಿ ತಮಾಷೆ ಮಾಡಿದ್ದಾರೆ. ಅಷ್ಟೇ ಅಲ್ಲ, ಇದನ್ನು ಸಾಮಾನ್ಯವಾಗಿ ರಾತ್ರಿಮಾತ್ರ ಬರುತ್ತದೆಂದು ತಿಳಿದು ಇದೊಂದು ಅಂಜುಕುಳಿಮಳೆ ಎಂದೂ ಆದ್ದರಿಂದಲೇ ಇದು ರಾತ್ರಿಮಾತ್ರ ಬರುವುದೆಂದು ಅಣಕವಾಡಿದ್ದಾರೆ.

ಚಿತ್ತೆಮಳೆಯನ್ನು ಎಲ್ಲಿಯೂ ಸ್ವಾಗತಿಸುವಂತೆ ಕಾಣುವುದಿಲ್ಲ. ಉತ್ತರಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕಿನಲ್ಲಿ ಇದನ್ನು 'ಹುಳುಕುಚಿತ್ತೆ' ಎಂದು ಕರೆದು ಇದು ಬಂದ್ರೆ ಭತ್ತಕ್ಕೆ ಹುಳು ಬೀಳುತ್ತೆ ಎಂದು ನಂಬಿದ್ದಾರೆ. ಶಿವಮೊಗ್ಗ ಜಿಲ್ಲೆಯ ಮಲೆನಾಡು ತಾಲ್ಲೂಕಾದ ಹೊಸನಗರ ತಾಲ್ಲೂಕಿನಲ್ಲಿ 'ಹಸ್ತೆ ಹಣಕಬೇಕು, ಚಿತ್ತೆ ಬರೀಬೇಕು' ಎಂಬ ಗಾದೆ ಇದೆ. ಅಂದರೆ ಹಸ್ತಮಳೆ ಕೆಲವು ಹನಿ ಹಾಕಬೇಕು, ಚಿತ್ತಮಳೆ ಹಾಗೇ ದಾಟಿ ಹೋದರೆ ಸಾಕು ಎಂದರ್ಥ. ಚಿತ್ತ ಹಸ್ತಮಳೆಗಳು ದಾರಿಗೊತ್ತಿಲ್ಲದ ಮಳೆಗಳೆಂದೂ ಶಬ್ದಮಾಡಿ ಕರೆದರೆ ಅಲ್ಲಿ ಬಂದು ಸುರಿಯುತ್ತವೆಂದೂ ಹಳೇಮೈಸೂರು ಭಾಗದ ಕೆಲವೆಡೆ ನಂಬಿಕೆ ಇದೆ.

ಕುಲ್ಡಚಿತ್ತಿ ಸುಮ್ಮನೆ ಕುರುಡರಂಗೆ ಬರ್‍ತೈತಿ. ಹಗಲು ರಾತ್ರಿ ಉದುರಿದ್ದೇ ಉದುರಿದ್ದು. ಎಲ್ಲಿ ಬಿತ್ತು ಅಲ್ಲೇ ಸುರಿಯುತ್ತದೆ. ಈ ಮಳೆಯಲ್ಲಿ ಕಡಲೆ ಬಿತ್ತುತ್ತಾರೆ. ಬಿರುಸಾಗಿ ಸುರಿಯು ಈ ಮಳೆಯ ಹನಿಗಳನ್ನು ಜನಪದ ಕವಿಗಳಿಗೆ ಹೋಲಿಸಿದ್ದಾರೆ. ಚಿತ್ರದುರ್ಗದ ಮದಕರಿನಾಯಕ ಮಾಯಕೊಂಡದ ಲಡಾಯಿಯಲ್ಲಿ ಬಿಟ್ಟ ಬಾಣಗಳ ಹೀಗಿದೆ.

ಮಾಯಕೊಂಡದಾಗೆ ಮೂಗುಡಿ ಬಯಲಾಗ
ರಣಭೂಮಿಗೆ ಆನೆ ನಡೆಸಿದರು
ಸಿತ್ತೆ ಮಳೆ ಸುರಿದಂಗೆ ಹತ್ತಿ ಬಂದವು ಬಾಣ
ಸೂರಿದಿಗನ ರವೆಯೆ ಕಾಣದೆ

ದಕ್ಷಿಣಕರ್ನಾಟಕದ ಕೆಲವೆಡೆಗಳಲ್ಲಿ ಚಿತ್ತಮಳೆಯ ಮೋಡವನ್ನು ಮಾತ್ರ ಕರೆತರುವ ಒಂದು ಆಚರಣೆಯಿದೆ. ಊರವರೆಲ್ಲ ದೇವಾಲಯದ ಬಳಿ ಸೇರಿ ಡೊಳ್ಳು, ತಮಟೆ, ಕಹಳೆ, ಹೆಸರು, ಚಿತ್ತಿ ಮಳೆ ಕುರುಡು, ಆದ್ದರಿಂದ ಈ ರೀತಿ ಸದ್ದುಮಾಡಿ ಮೋಡವನ್ನು ತಮ್ಮ ಕಡೆಗೆ ಕರೆತರುತ್ತೇವೆ ಎಂದು ಜನಪದರು ಹೇಳುತ್ತಾರೆ. ಈ ಭಾವನೆಯ ಹಿಂದಿರುವ ಅಂಶ ವಿಶ್ಲೇಷಣೆಗೆ ಅರ್ಹವಾಗಿದೆ. ಚಿತ್ತಿಮಳೆಯ ಕಾಲದಲ್ಲಿ ಗಾಳಿಕಡಿಮೆ ಇರುವುದರಿಂದ ಮೋಡಗಳು ಚಲಿಸುವುದಿಲ್ಲ. ಈ ಧ್ವನಿ ತರಂಗಗಳು ವಾತಾವರಣವನ್ನು ತುಂಬಿಕೊಂಡಾಗ ವಾತಾವರಣ ಬರಿದಾಗಿ ಮೋಡಗಳು ಈ ನಿರ್ವಾತಸ್ಥಳಕ್ಕೆ ದೂಡಲ್ಪಡುತ್ತವೆ. ಹಿಂದೆ ಮುಂದೆ ಚಲಿಸುವುದಕ್ಕೆ ಹವೆಮಾಧ್ಯಮದ ಕೊರತೆಯುಂಟಾಗಿ ಮೋಡಗಳು ತಡೆಹಿಡಿಯಲ್ಪಟ್ಟು ಅಲ್ಲಿಯೆ ಮಳೆ ಸುರಿಯುವುದುಂಟು. ಹೀಗೆ ಮೋಡಗಳನ್ನು ಕರೆತರುವ ಒಂದು ರೀತಿಯ ಆಚರಣೆ ಆಫ್ರಿಕಾದಲ್ಲಿಯೂ ಇರುವುದನ್ನು ಉಲ್ಲೇಖಿಸಬಹುದು. ಆಫ್ರಿಕಾದ ನೈಲ್ ನದಿಯ ಮೇಲ್ಭಾಗದಲ್ಲಿ ಮಳೆಯಿಲ್ಲದ ಸಂದರ್ಭದಲ್ಲಿ ಮಾಂತ್ರಿಕರು ಮಳೆಕಲ್ಲುಗಳನ್ನು ಕೈಯಲ್ಲಿ ಹಿಡಿದುಕೊಂಡು ಸನ್ನೆ ಮಾಡುತ್ತಾರೆ.

**ಸ್ವಾತಿ ಮಳೆ**

'ಸ್ವಾತೀಯಮಳೆ ಹೂದು ಸಾವಿರಾರು ಕೆರೆ ತುಂಬಿ
ಜೋತಾಡುತಾವೆ ಕುಣಿಗಲು- ಕುಚ್ಚನ ಮೀನು
ಮುಂಗೈಯ ಕಂಡು ನಗುತಾವೆ'[೧೫]
ಸ್ವಾತೀಯ ಮಳೆಯಾಗಿ ಭೂತಾಳ ಹಸಿಯಾಗಿ
ಪಾತಾಳ ಎಲ್ಲ ತುಳುಕ್ಯಾವು । ಭೂಮ್ಯಾಕಾಶ
ಫಲವೆದ್ದು ಕೈಯ ಮುಗದಾವು'[೧೬]

೧. ಸ್ವಾತಿಮಳೆಗೆ ತ್ಯಾಪೆ ಹಾಕೋದು
೨. ಸ್ವಾತಿಮಳೆ ಹೇತೆನಂದ್ರೂ ಬಿಡದು
೩. ಸ್ವಾತಿ ಸುರ‍್ಯಾಕ ಹತ್ತಿದರ ಹೇತಾಡಿದರೂ ಬಿಡದು
೪. ಸ್ವಾತಿಮಳಿ ಆದಮ್ಯಾಲ ಇನ್ಯಾತರ ಮಳಿ
೫. ಸ್ವಾತಿಮಳೆ ಮತ್ತು ಬೆಳೀತದೆ
೬. ಸ್ವಾತಿ ಆದ ಮ್ಯಾಕೆ ಆತೇನು

೭. ಸ್ವಾತಿಮಳೆ ಮುತ್ತಿನ ಮಳೆ
೮. ಸ್ವಾತಿಮಳೆಗೆ ಕಾಸಿಗೊಂದು ಕುರಿ
೯. ಸ್ವಾತಿಮಳೇಲಿ ಸಾಲೊಳಗೆ ನೀರು ಹರಿದರೂ ಬಿತ್ತುವುದು ಬೇಡ.
೧೦. ಹಾಲಿಗೆ ಸ್ವಾತಿಯ ನೀರನ್ನೇ ಹೆಪ್ಪಿಗೆ ಹಾಕು
೧೧. ಸ್ವಾತಿಯಲ್ಲಿ ಬಿತ್ತುಗೆ ಹಾಕಿದರೆ ಬೆಳೆ ಖಂಡಿತ

ಚಾರ್ವಾಕದ ಪಕ್ಷಿ ಕಾದು ಕಾತರಿಸುವ ಮಳೆ ಸ್ವಾತಿ ಎಂಬುದು ಒಂದು ಕವಿಸಮಯ. ಈ ಮಳೆಯ ಹನಿಯೇ ಚಿಪ್ಪಿನೊಳಗೆ ಸೇರಿ ಮುತ್ತಾಗುತ್ತದೆ ಎಂಬುದಿನ್ನೊಂದು ಕವಿಸಮಯ. ಇವೆರಡೂ ಭಾರತೀಯ ಕಾವ್ಯಮೀಮಾಂಸೆಯಲ್ಲಿ ದಾಖಲಾಗಿದ್ದು, ಭಾರತಕ್ಕೆಲ್ಲ ಸಾಮಾನ್ಯವಾಗಿರುವಂಥವು. ಇದನ್ನೆ ಹೋಲುವ ಜಾನಪದ ನಂಬಿಕೆಯೊಂದು ಕರಾವಳಿ ಹಾಗೂ ದಕ್ಷಿಣಕರ್ನಾಟಕದಲ್ಲಿದೆ. 'ಸ್ವಾತಿಮಳೆಗೆ ಮುತ್ತುಗಳು ಹೆಚ್ಚಾಗುತ್ತವೆ' ಎಂಬುದೇ ಆ ನಂಬಿಕೆ ಇದು ಬಹುಶಃ ಶಿಷ್ಟದಿಂದ ಜಾನಪದಕ್ಕೆ ಇಳಿದಿರುವ ನಂಬಿಕೆ ಆಗಿರಬಹುದು ಅಂದರೆ ಕವಿಸಮಯವೇ ಒಂದು ಪಯಣ ಯಾಕಾಗಿರಬಾರದು? ಬಹುಶಃ ಕವಿ ಹಾಗೂ ಸಂಶೋಧಕರನ್ನೂ ಅತಿಯಾಗಿ ಆಕರ್ಷಿಸಿದ ಮಳೆಯೆಂದರೆ ಸ್ವಾತಿಯೇ. ಸ್ವಾತಿ ಮಳೆಯ ರೋಮಾಂಚನಕಾರಿ ಅನುಭವವನ್ನು ಒಬ್ಬ ಸಂಶೋಧಕರು ಹೀಗೆ ವಿವರಿಸಿದ್ದಾರೆ.

ಸ್ವಾತಿ ಮಳಿ ಅಯ್ತು ಅಗರ ಪಗರ ಆಗ್ಲಿಲ್ಲ ಬಿಟ್ಟು ಬಿಡ್ದ ಹನ್ನೊಂದು ದಿನ ಹಚ್ಚಿ ಬಡ್ದರ ಅದರ ಸುದ್ದಿ ಏನು ಹೇಳುವದು. ಅವಾಗ ನಾವು ಇನ್ನು ಸಣ್ಣವರಿದ್ವಿ ಸ್ವಲ್ಪ ಸ್ವಲಪ ನೆನಪೈತೆ ಜನ ಮಳೆ ಅತಿಯಾಗಿ ಹತ್ತಿದಾಗ ಸ್ವಾತಿ ಮಳೆ ನೆನೆದು ತಮ್ಮ ಸ್ವಲ್ಪ ಸ್ವಲ್ಪ ಅನುಭವವನ್ನು ಮರುಕಳಿಸಿತ್ತಿರುತ್ತಾರೆ. ಈ ಬಗ್ಗೆ ನಾನು ಬಹಳ ಕುತೂಹಲ ತಾಳಿ ವಿಷಯ ಸಂಗ್ರಹಣೆಗೆ ಹೊರಟೆ. ಈ ಸ್ವಾತಿ ಮಳೆ ನಡೆದದ್ದು ೧೯೧೬ ರಲ್ಲಿಯಂತೆ ಅಂತಾ ಮಳೆ ಯಾವಾಗಲೂ ಆಗಿರಲಿಕ್ಕಿಲ್ಲ. ಏಕೆಂದರೆ ಮಳೆ ಧೋಧೋ ಎಂದು ಒಂದೇ ಸಮನೆ ಹನ್ನೊಂದು ದಿನಗಳ ಪರಿಯಂತರ ಏಕೂ ಪ್ರಕಾರವಾಗಿ ಹತ್ತಿತಂತೆ. ೧೯೧೬ ಅಂದರೆ ಆಗ್ಗೆ ಇನ್ನೂ ಕೆಲವು ಕಡೆ ವಾಹನ ಸೌಕರ್ಯವಿರಲಿಲ್ಲ. ಅಂಚೆ ತಂತಿ ಯಾವೂದು ಇರಲಿಲ್ಲ. ಊರ ಸುತ್ತಲೂ ಈಚಲು ಪೊದೆಯಿಂದ ತುಂಬಿದ ರಾಜೂರಿಗೆ ಬರುವ ಹಾದಿಯೇ ಕಾಣುತ್ತಿರಲಿಲ್ಲ. ಅದೂ ದಾರಿ ತಪ್ಪಿದರೆ ಮುಗಿದೇಹೋಯಿತು ಜೀವ 'ಆನೆ ಹದುಲಿ' ಗೆ ಬಲಿ. ಹೀಗಾಗಿ ಇಂಥ ಸಮಯದಲ್ಲಿ ಈ ರೀತಿ ಮಳೆ ಹತ್ತಿದರೆ ಹೇಗಾಗಬೇಡ ಜನರು ಹಾಗೆಲ್ಲಾ ನಾವು ಸಾಯುತ್ತೇವೆಂದು ಚಿಂತೆ ಬಿಟ್ಟಿದ್ದರಂತೆ. ಹೊರಗಿನಿಂದ ಏನೂ ತರಲಿಕ್ಕೆ ಆಗದು. ಆಗ್ಗೆ ಅಂಥಾ ದೊಡ್ಡ ಅಂಗಡಿಗಳೂ ನಮ್ಮೂರಲ್ಲಿ ಇರಲಿಲ್ಲ ತಾವು ಸಾಯಲಿ ಆದರೆ ದನಗಳು ಸಾಯಬಾರದೆಂದು ಅವುಗಳನ್ನು ಹಾಗೇ ಬಿಟ್ಟುಬಿಟ್ಟಿದ್ದರಂತೆ. ಅವು ಮಳೆಯಲ್ಲಿಯೇ ಜೋಳದ ನಿಲುವಿನಲ್ಲಿ ಸಾಕಾಗುವಂತೆ

ಮೇಯ್ದು ಬರುತ್ತಿದ್ದವಂತೆ. ಈಗಿನಂತೆ ಹೈಬ್ರೀಡ್ ಜೋಳ ಇರಲ್ಲಿಲ್ಲ, ಆಗ ಜೋಳ ನವಣೆ ಆಕರ ರಾಗಿ ಶ್ಯಾವಿಗೆಯಂಥ ಧಾನ್ಯಗಳನ್ನೇ ಬೆಳೆಯುತ್ತಿದ್ದರು. ಈ ಬಗ್ಗೆ ೧೯೮೩ ರಲ್ಲಿ ನಾನು ಈ ಮಳೆಯ ಪ್ರತ್ಯಕ್ಷ ಅನುಭವವನ್ನುಂಡ ವಯೊವೃದ್ದ ಸಮಾರು ೮೫ ವರ್ಷದ ಶ್ರೀ ಬಾಲಪ್ಪ ಹಾದಿಮನಿ ಎಂಬಾತನೊಂದಿಗೆ ಮಾತಾಡಿದೆ. ಯಪ್ಪಾ ಅಂತಾ ಮಳಿ ಎಂದೂ ಆಗಿರಲಿಲ್ಲ ಆಗದೂನೂ ಇಲ್ಲ, ಅದು ನೆಪ್ಪಾತಂದ್ರ ಹೊಟ್ಟೆ ರುಂ ಅನ್ತದ ಎಂದರು. (ಈ ಮಳಿ ೧೯೧೬ ಅಕ್ಟೋಬರ್ ೨೨ ರಿಂದ ನವೆಂಬರ್ ೫ ರವರೆಗಾಯಿತು)

ಈ ವಯೋವೃದ್ದ ಆಗ ಸ್ವಾತಿ ಮಳಿ ಹತ್ತಿದಾಗ ಸು, ೨೦-೨೨ ವರ್ಷದವನಿದ್ದನಂತೆ. ಒಕ್ಕಲುತನ ಮಾಡುತಿದ್ದನಂತೆ. ಆಗ್ಗೆ ನಮ್ಮೂರ ಜನಸಂಖ್ಯೆ ಈಗಿನಂತೆ ದಟ್ಟಣೆ ಇಲ್ಲದೆ ಸು, ೧೦೦೦ ಇತ್ತಂತೆ ಈ ಮಳೆಯಲ್ಲಿ ಸೋರದ ಮನೆಗಳೇ ಇದ್ದಿಲ್ಲ. ಎಲ್ಲವೂ ತಟತಟ ನೀರು ಇಳಿಯುತ್ತಿದ್ದವು. ಹೀಗಾಗಿ ಜನರು ಒಳಗೆ ತೊಲೆಗಳಿಗೆ ಗುಡಾರವನ್ನು ಕಟ್ಟಿ ಮೇಲೆ ಅದರ ಮದ್ಯದಲ್ಲಿ ಒಂದು ದೊಡ್ಡದಾದ ಕಲ್ಲೊಂದನ್ನಿಟ್ಟು ನೀರು ಎಲ್ಲಾ ಸಂಗ್ರಹವಾಗಿ ಈ ಕಲ್ಲಿದ್ದ ಭಾಗದಿಂದಲೇ ಕೆಳಗೆ ಬೀಳುವಂತೆ ಮಾಡುತ್ತಿದ್ದರಂತೆ. ಅಡುಗೆಯ ಪರಿಸ್ಥಿತಿಯಂತೂ ಹೇಳತೀರದು. ಅಡುಗೆಯನ್ನು ಕೆಲವರು ಮಾಡಿದರೆ ಕೆಲವರು ಉಪವಾಸ ಹೊಟ್ಟೆ ನೆಲಕ್ಕಾಕಿಕೊಂಡು ಮಲಗುತ್ತಿದ್ದರಂತೆ. ಅಡುಗೆ ಮಾಡಿದರೆ ಅದೂ ಒಂದು ಮಾಡೋ ಕಪಾಟೋ ಇಂತದ್ದರಲ್ಲಿ ಮಾಡಿಕೊಳ್ಳುತ್ತಿದ್ದರಂತೆ. ಮನೆಗಳು 'ಝುಂಪ್ಲ' ಹಿಡಿದು ಬೀಳುವುದಕ್ಕಂತೂ ಮಿತಿಯೇ ಇರಲಿಲ್ಲವಂತೆ. ಜನರು ಈ ರೀತಿಯಾಗಿದ್ದರಿಂದ ಗುಡಿಗುಂಡಾರಗಳಿಗೆ ಗುಡಿಗಳಿಗೆ ಚಾಪೆ ಕಟ್ಟಿಕೊಂಡು ಹೋಗುತ್ತಿದ್ದರಂತೆ. ಈ ಮನೆಗಳು ಸೋರುತ್ತಿದ್ದರಿಂದ ಮನೆಯಲ್ಲಿ ಒಟ್ಟಿದ ಧಾನ್ಯದ ನಿಟ್ಟುಗಳೆಲ್ಲಾ ಅಲ್ಲೇ ಮೊಳಕೆ ಹೊಡೆದಿದ್ದವಂತೆ. ಗೋದಿ ಜೋಳ ನವಣೆಗಳನ್ನು ತುಂಬಿದ ಚೀಲಗಳು ಮೊಳಕೆಯೊಡೆದು ಹೊಲಸು ವಾಸನೆಯಿಂದ ಮನೆ ನಾರಿದರೆ, ಹೊಲದಲ್ಲಿ ತೆನೆ ಹೊತ್ತ ಜೋಳ ತೆನೆಯಲ್ಲಿಯೇ ಮೊಳಕೆಯೊಡೆದಿದ್ದವಂತೆ. ಆ ವರ್ಷ ಹುಲ್ಲು ಬೆಳೆಗಳನ್ನು ನೋಡಿದರೆ ನಿಜಕ್ಕೂ ಆಶ್ಚರ್ಯವೆನಿಸುತ್ತದೆ ಎನ್ನುತ್ತಾರೆ ಬಾಲಪ್ಪಜ್ಜ. ದಾರಿಯಲ್ಲಿ ಬೆಳೆ'ದ ಹುಲ್ಲಿನಲ್ಲಿ ಹಾಯ್ದು ಹೋದರ 'ಹಾಯ್ದ ದರಿ ಬೀಳುತ್ತಿತ್ತು. ಹೆಸರು ಹಲಸಂದಿ ಬಳ್ಳಿಗಳು ಕಳ್ಳಿಯ ಗೊನೆಯಂತೆ ಕಾಯಿ ಹಿರಿದು ನಿಂತು, ಮಳೆಯ ಭಾರ ಕಾಳಿನ ಭಾರ ತಾಳಲಾರದೆ, ನೆಲಕ್ಕೆ ಹೊರಗಿದ್ದವಂತೆ. ಮಳೆಯಿಂದ ಸತತ ಹರನಾಳಿಗೆ ನೀರು ಧಾರಾಕಾರವಾಗಿ ಸುರಿದು ಊರೆಲ್ಲ ೧೧ ದಿನದವರೆಗು ಮೊಳಕಾಲವರೆಗು ನೀರು ಹರಿಯದೆ ಹಾಗೆ ನಿಂತಿತ್ತು. ಹಳ್ಳ ಕೊಳ್ಳಗಳು ತುಂಬಿ ಹರಿಯುತ್ತಿದ್ದವು. ಮಳೆ ನೀರಿನಿಂದ ಸೋರಿದ ಮನೆಯ 'ಇಲಾಣ' ಒಳಗೆ ಕಟ್ಟಿದ ದನ ಕರುಗಳ ಮೇಲೆ ಬಿದ್ದು ಬಿದ್ದು ದನಗಳ ಮೈ ದಪ್ಪಗೆ ಬಾತಿದ್ದವು ಅವು ಬಾತು ಮೇಲಿನ ಕೂದಲ ಪಟ್ಟಿಯೆ ಕಿತ್ತು ನರಳುತ್ತಿದ್ದವಂತೆ. ಈ ಸಂಕಟ ತಾಳರಾರದೆ ಅವನ್ನು ಹಾಗೆಯೆ ಹೊರಗೆ ಬಿಟ್ಟು ಬಿಟ್ಟಿದ್ದರಂತೆ. ಕೆಲವು

ನೀರಿನ ಸೆಳವಿಗೆ ಸಿಕ್ಕು ಸತ್ತು ಹೋದವಂತೆ ಈ ಸಮಯದಲ್ಲಿ ಜನರು ಬದುಕಿ ಉಳಿದಿದ್ದೆ ಒಂದು ಆಶ್ಚರ್ಯ ಎನ್ನುತ್ತಾರೆ. ಗುಡ್ಡದಿಂದ ಧಾರಾಕಾರ ನೀರು ಕೆಳಗೆ ಸತತ ಬೀಳುತ್ತಿತ್ತು. ಈಗಾಗಿ ಕೆಳಗಿನ ಹೊಲಗಳು ಸಾಗರದಂತೆ ನೀರಲ್ಲಿ ನಿಂತು ದೊಡ್ಡ ದೊಡ್ಡ ಒಡ್ಡುಗಳ ಮೇಲೆ ನೀರು ಹತ್ತಿ ಹರಿಯುತ್ತಿತ್ತಂತೆ.

ಈ ಗುಡ್ಡ ನೆನೆದು ಆಗಾಗ ದೊಡ್ಡ್ ದೊಡ್ಡ ಕಲ್ಲು ಪಡಿಗಳೆ ಕತ್ತರಿಸಿ ನೆಲಕ್ಕೆ ಬೀಳುತ್ತಿದ್ದವಂತೆ. ಸೂರ್ಯನ ದರ್ಶನವಂತು ಹನ್ನೊಂದು ದಿನದಲ್ಲಿ ಒಂದು ದಿನವು ಕಾಣದೆ ಹಗಲಿನಲ್ಲಿ ಕೂಡ ದೀಪ ಹಚ್ಚಿದ್ದರು. ತೊಯ್ದ ಅರಿವೆಗಳು ಆರದಕ್ಕೆ ಹನ್ನೊಂದು ದಿನಗಳವರೆಗೆ ಜಳಕವನ್ನು ಮಾಡಲಿಲ್ಲವಂತೆ. ಹೊರಗಿನ ಮಳೆ ನೀರು ತಂಪಾಗಿರದೆ ಬೆಚ್ಚಗಿರುತಿದ್ದವಂತೆ. ಸೋರಲಾರದ ಮನೆಗಳನ್ನು ಹನ್ನೊಂದು ದಿನದ ನಂತರ ನೋಡಿ ಸಂತಸ ಪಟ್ಟು ಅಂತಹ ಮನೆಯವರನ್ನು ಹಾಡಿ ಹೊಗಳಿದರ'ಂತೆ. ಊರಿಗೆ ಹೋದವರು ಹನ್ನೊಂದು ದಿನವು ಬರಲಿಲ್ಲ. ಬಂದವರು ಹೋಗಲೆ ಇಲ್ಲ. ಸಿಟ್ಟು ತಾಳಲಾರದೆ ಕೆಲವರು ಮಳೆ ನಿಲ್ಲಲು ಮಳೆಯ ವಿರುದ್ಧ್ ಬೆಂಕಿ ತೂರಿದರೆ ಕೆಲವರು ಕಂಬಳಿಯನ್ನು ಬೀಸಿದರಂತೆ ಕೆಲವರು ಹರಕೆಯನ್ನು ಹೊತ್ತರಂತೆ. ಈಗಿನಂತೆ ಆಗ ಸೀಮೆಎಣ್ಣೆ ಬಹಳ ಕಡಿಮೆ ಅಡುಗೆ ಸ್ಥಿತಿಯಂತು ಹೇಳತೀರದು ಕಟ್ಟಿಗೆ ಇಲ್ಲ ಕುಳ್ಳೂ ಇಲ್ಲ ಜಂತೆಯ ಕೆಲವು ಒಣಗಿದ ಕಟ್ಟಿಗೆಗಳನ್ನು ಹಿರಿದು ಅಡುಗೆ ಮಾಡಿ ಊಟವನ್ನು ಮಾಡುತ್ತಿದ್ದರಂತೆ.

**ಮಳೆ ನಿಂತ ಬಗೆ** – ಅಂದು ಶುಕ್ರವಾರ ಮನೆಯಲ್ಲಿ ದನಕರು ಕಟ್ಟಿ ಕಟ್ಟಿ ಬಾರೆದ್ದದ್ದರಿಂದ ನಮ್ಮಪ್ಪನು ಬೈದಿದ್ದರಿಂದ ಆ ಮಳೆಯಲ್ಲಿಯೆ ಅವನ್ನು ತಿರುಗಿಕೊಂಡು ಗುಡ್ಡದ ಹಾದಿಯಲ್ಲಿ ಹೋದೆ. ಅಲ್ಲಿ ಉಳಿದ ಕೆಲವು ದನ ಕಾಯಾರು ಕಲ್ಲ ಗುಮಡಿನ ಗೊನೆಯಂತೆ ಬೆಳದ ಹಲಸಂದಿಯನ್ನು ಉಡ್ಲ ತುಂಬ ಹರಿದು ತಿನ್ನಬೇಕೆಂದರೆ ಆಗ ನಮ್ಮ ಅಪ್ಪನು ದಪ್ಪ ದಪ್ಪನೆ ಗಂಡುರೊಟ್ಟಿ ಮಾಡಿಕೊಂಡು ಬಂದ, ಶೆಟಗೊಂಡು ಬಂದದಕ್ಕೆ ದುಃಖಿಸಿ ಬಿಕ್ಕಿ ಬಿಕ್ಕಿ ಒಬ್ಬರನ್ನೊಬ್ಬರು ತೆಕ್ಕಿ ಬಿದ್ದು, ನಾನೂ ದನಾ ಕಾಯಾರು ಅಳಾಕ ಹತ್ತಿದ್ವಿ, ಹನ್ನೊಂದು ದಿನದ ತನ್ಕ ಗಾಳಿ ಇದ್ದಿಲ್ಲ. ಅಂದು ಶುಕ್ರವಾರ ನಮ್ಮ ಕಣ್ಣೀರು ನೀರಿನ ಕೊಡ ಹರಿಯಾಕ್ ಹತ್ತಿದ್ವು, ನಾನು ಬೆದ್ರ ಸೆಟಗೊಂಡು ಬಂದು ಬಿಡದೇನು ಎಂದು ನಮ್ಮಪ್ಪ ತುಂಬಿದ ಕಣ್ಣಿನಿಂದ ತಬ್ಬಿ ಮತ್ತಷ್ಟು ಅತ್ತ ನಮ್ಮ ಅಳು ಕೇಳಿದನೇನೋ ಮಳೆರಾಯ, ಮ್ಯಾಗ ಕೆಳಗೆ ಜೋಡಕಾಮನ ಬಿಲ್ಲು ಮೂಡಿದ್ವು, ಸ್ವಲ್ಪ ಹೊತ್ತಿನ ನಂತರ ಏಕದಂ ಮಳೆ ನಿಂತು ಬಿಟ್ಟಿತು. ಆಗ ಜನರು ಒಬ್ಬೊಬ್ಬರು ಹೊರಗೆ ಬಂದ್ರು ನಂತರ ೧೫ ದಿನಗಳ ತನಕ ಹೊರಗೆ ಕಾಲಿಡಲಿಕ್ಕೆ ಬರಲಿಲ್ಲಾ ಎಂದು ಆವೇಶಭರಿತವಾಗಿ ಹೇಳಿದ. ಈ ರೋಮಾಂಚನಾಕಾರಿ ಮಳೆಯ ಕಥೆಯನ್ನು ಕೇಳುತ್ತಿದ್ದಂತೆ ಇದನ್ನು ಕಂಡು ಕಟ್ಟಿದರೋ ಏನೋ 'ಸ್ವಾತಿಮಳೆ ಹೆತೆನಂದ್ರು ಬಿಡುದಿಲ್ಲ' ಅಂತೆ[೧೭].

ಸ್ವಾತಿಮಳೆಯ ಕುರಿತಾಗಿ ರಾಧಕೃಷ್ಣಭಡ್ತಿಯವರು ಸೊಗಸಾದ ಕಥನವನ್ನು ಬರೆಯುತ್ತಾರೆ. ಸ್ವಾತಿಮಳೆಯ ಆಗಮನ ಪೂರ್ವದ ಪ್ರಾಕೃತಿಕ ವೈವಿಧ್ಯ ಸುಭಗತೆಯನ್ನು ಸರಳ ಸುಲಲಿತ ಭಾವಮಯ ವರ್ಣನೆಯೊಂದಿಗೆ ಕಟ್ಟಿ ಕೊಡುವ ಪ್ರಯತ್ನ ಮಾಡಿದ್ದಾರೆ ಅದು ಪ್ರಾಕೃತಿಕ ಸಹಜ ಪ್ರಕ್ರಿಯೆಯು ಕೂಡ. 'ಅದೊಂದು ಸುಂದರ ಸಾಗರ ತೀರ ಗಾಳಿಯ ಅಬ್ಬರಕ್ಕೆ ದೈತ್ಯ ಅಲೆಗಳು ಹಾರಾಡುತ್ತ ಬಂದು ದಡಕ್ಕೆ ಅಪ್ಪಳಿಸುತ್ತಿದ್ದುವ ಹಾಗೆ ಅಪ್ಪಳಿಸುವ ಅಲೆಗಳು ತಮ್ಮೊಂದಿಗೆ ನೂರಾರು ತರಹದ ವಸ್ತುಗಳನ್ನು ಹೊರದಬ್ಬಿ ಹೋಗುತ್ತಿದ್ದವು. ಹಿಂದೆಯೇ ಬರುವ ಮತ್ತೊಂದು ಅಲೆ ಅವನ್ನೆಳೆದುಕೊಂಡು ಹೋಗುವಾಗ ಬೇರೊಂದಿಷ್ಟನ್ನು ಬಿಟ್ಟು ಹೋಗುತ್ತಿದ್ದವು. ಅಲೆಗಳ ಈ ಜೂಟಾಟದ ನಡುವೆ, ಕಪ್ಪೆಚಿಪ್ಪೊಂದು ಕಣ್ಣಾಮುಚ್ಚಾಲೆ ಆಡಲಣಿಯಾಯಿತು. ಅಲೆಗಳ ಆಯತಪ್ಪಿಸಿ ಆ ಚಿಪ್ಪು ದಡದಲ್ಲೇ ಉಳಿದುಬಿಟ್ಟುತು. ಒಂದು ಎರಡು ... ಹೀಗೇ ಹತ್ತಾರು ಅಲೆಗಳಿಗೂ ಅದು ನಿಲುಕದೇ ಹೋಯಿತು.

ಇದ್ದಕ್ಕಿದ್ದಂತೆ ಆಗಸದ ಮುಖ ಕಪ್ಪಿಡತೊಡಗಿತು. ಚಿಪ್ಪಿನ ತುಂಟತನ ಕಂಡು ಹುಸಿ ಮುನಿಸು ತೋರಿತು, ಎಷ್ಟಾದರೂ ಸಾಗರ ಮೋಡಗಳ ತವರಲ್ಲವೇ? ಕೆಲ ಕ್ಷಣಗಳಷ್ಟೇ ಬೀಸಿ ಬಂದ ತಂಗಾಳಿಯ ಜೊತೆಗೆ ಹನಿಗಳು ತೂರಿಬರಲಾರಂಬಿಸಿದವು. ಅದಾದರೂ ಎಷ್ಟು ಸುಂದರ? ಅದೆಷ್ಟು ಆಹ್ಲಾದಕರ? ಸುಂದರಿಯ ಸುಕೋಮಲ ಹೆಜ್ಜೆಗೆ ದನಿ ಗೂಡಿಸುವ ಗೆಜ್ಜೆ ದನಿಯಂತೆ. ಲಯ ಬದ್ದ ಹನಿಗಳು. ಸ್ವಾತಿ ಮಳೆಯೇ ಹಾಗೆ. ಅಲ್ಲಿ ಆರ್ಭಟವಿಲ್ಲ. ಹುಚ್ಚಾಟವಿಲ್ಲ. ಥೇಟ್ ಮದುವೆಗೆ ಸಿಂಗರಿಸಿಕೊಂಡ ಮದುವಣಗಿತ್ತಿಯ ವೈಯ್ಯಾರವದು.

ಇದಕ್ಕಾಗಿಯೇ ಅಲೆಗಳ ಕಣ್ತಪ್ಪಿಸಿ ಕಾದಿದ್ದ ಚಿಪ್ಪು ಮೈಯೆಲ್ಲಾ ಅರಳಿಸಿ ನಿಂತುಕೊಡಿತು. ಸುರಿಯುವ ತುಂತುರುಗಳಲ್ಲಿ ಒಂದಾದರು ಬಂದು ತನ್ನ ತಲಪಿಯೇ ತಲುಪೀತೆಂಬ ಭರವಸೆ ಆ ಚಿಪ್ಪಿನದು. ಆ ಲೆಕ್ಕಾಚಾರ ತಪ್ಪಲಿಲ್ಲ. ಅದು ಆ ಚಿಪ್ಪಿನ ಅಪ್ಪುಗೆಗಾಗಿಯೇ ಸೃಷ್ಠಿಮಾಡಿದ್ದ ಹನಿ, ನೇರ ಬಂದು ಚಿಪ್ಪಿನ ಅಧರ ಸವರಿ ಗಂಟಲ ಮೂಲಕ ಒಡಲ ಸೇರಿದ್ದೇ ತಡ, ಮೆಲ್ಲನೆ ಆ ಹನಿಯನ್ನು ತನ್ನೊಡಲಲ್ಲಿ ಮುಚ್ಚಿಟ್ಟುಕೊಂಡೇಬಿಟ್ಟಿತು. ಇನ್ನೇನು? ಬಂದ ಕೆಲಸವಾದ ಮೇಲೆ ಬಚ್ಚಿಟ್ಟುಕೊಳ್ಳುವುದೇಕೇ? ಮರುಘಳಿಗೆ ಮೇಲೆ ಬಿದ್ದ ಅಲೆಯ ಜೊತೆಯಲ್ಲಿ ಆಕ್ಷೇಪವೆತ್ತದೇ ಕಡಲೊಡಲಿಗೆ ಜಾರಿತು ಆ ಚಿಪ್ಪು. ಆಗಸ, ಸಾಗರದ ಕೋಪವೆರಡೂ ಕರಗಿದ ಮೇಲೆ ಕಣ್ಬಿಟ್ಟಿದ್ದ ದಿನಕರ. ಶಾಂತಸಾಗರದ ಮೈಯ್ಯ ತೂರಿ ಹಾದುಹೋದ ಸೂರ್ಯನ ಕಿರಣವೊಂದು ಚಿಪ್ಪನ್ನು ಸ್ಪರ್ಶಿಸಿದ್ದೇ ಕೊನೆ. ಚಿಪ್ಪಿನೊಳಗಿದ್ದ ಹನಿ, ಹನಿಯಾಗಿ ಉಳಿಯದೇ ಹೊಳೆ ಹೊಳೆಯ ತೊಡಗಿತು. ಈ ಜಗದ ಅತ್ಯಮೂಲ್ಯ ಮುತ್ತಾಗಿ ಮಾರ್ಪಾಟು ಬಿಟ್ಟಿತ್ತು ಸ್ವಾತಿಹನಿ[೧೮].

ಅಕ್ಟೋಬರ್ ಕೊನೆದಿನಗಳು ಈ ಮಳೆಯಕಾಲ. ಅಂದರೆ ಸುಮಾರು ಮೂರುತಿಂಗಳ ಕಾಲ ಜಡಿದಿರುತ್ತದೆ. ಆಗಲೇ ಕರಾವಳಿಪ್ರದೇಶವಾದ ಹೊನ್ನಾವರ, ಕುಮುಟಾ., ತಾಲ್ಲೂಕುಗಳಲ್ಲಿ ಅತಿ

ಮಳೆಯಿಂದಾಗಿ ಮನೆಯ ಮಾಡುಗಳು, ತಡಿಕೆಯಗೋಡೆ ಮಳೆಗಾಲಕ್ಕೆ ಮುನ್ನ ರಿಪೇರಿಯಾಗಿದ್ದರೂ ಪುನಃ ಜರ್ಝರಿತವಾಗುತ್ತವೆ. ಈಗ ಅವುಗಳ ಪುನರ್ ರಿಪೇರಿ ಅಗತ್ಯವಾಗಿರುತ್ತದೆ. ಅದಕ್ಕೆ ತಕ್ಕಂತೆ, ಹಸ್ತೆ, ಚಿತ್ತೆ, ಸ್ವಾತಿ ಈ ಮಳೆಗಳು ಎಡೆಬಿಡದೆ ಸುರಿಯುವ ಮಳೆಗಳೇನಲ್ಲ. ಆದ್ದರಿಂದ ರಿಪೇರಿಗೆ ಅಗತ್ಯವಾದಷ್ಟು ಕಾಲಾವಕಾಶವೂ ದೊರೆಯುತ್ತದೆ. ಈ ಕಾರಣದಿಂದಲೇ 'ಸ್ವಾತಿಮಳೆಗೆ ತ್ಯಾಪೆ ಹಾಕೋದು' ಎಂಬ ಮಾತು ಈ ಕಡೆ ರೂಢಿಯಲ್ಲಿದೆ.

ಆದರೆ, ಉತ್ತರಕರ್ನಾಟಕ ಭಾಗದಲ್ಲಿ ಸ್ವಾತಿ ಎಡೆಬಿಡದೆ ಸುರಿಯುವ ಮಳೆಯಾಗಿದ್ದ ದಿನಗಳು ಹಿಂದೆ ಇದ್ದವೆಂದು ಕಾಣುತ್ತದೆ ವಿಶೇಷತಃ ದಾವಣಗೆರೆ, ಧಾರವಾಡ, ಬಿಜಾಪುರ ಜಿಲ್ಲೆಗಳಲ್ಲಿ. ಆದ್ದರಿಂದಲೇ ಈ ಜಿಲ್ಲೆಗಳಲ್ಲಿ 'ಸ್ವಾತಿಮಳೆ ಹೇತೇನಂದ್ರೂ ಬಿಡದು' ಎಂಬ ಗಾದೆ ಬಳಕೆಯಲ್ಲಿದೆ.

ರೋಹಿಣಿ, ಉತ್ತರೆಗಳಂತೆ ಸ್ವಾತಿಯೂ ರೈತರಿಗೆ ತುಂಬ ಪ್ರಿಯವಾದ ಹಾಗೂ ಅಗತ್ಯವಾದ ಮಳೆ. ಕರ್ನಾಟಕದ ಎಲ್ಲೆಡೆ ಈ ಪ್ರೀತಿ ವ್ಯಕ್ತವಾಗಿದೆ. ಗಾದೆಗಳಲ್ಲಿ ಕನಿಷ್ಟ ಪರಿಣಾಮದ ಬಗ್ಗೆ ದಕ್ಷಿಣಕನ್ನಡ ಜಿಲ್ಲೆಯವರು 'ಹಾಲಿಗೆ ಈ ನೀರಿನ ಹನಿ ಹಾಕಿದರೆ ಸಾಕು, ಅದೇ ಹೆಪ್ಪಾಗುತ್ತದೆ. ಬೇರೆ ಮಜ್ಜಿಗೇನೇ ಬೇಡ' ಎನ್ನುತ್ತಾರೆ. ಪುನಃ ಅಲ್ಲಿನ ರೈತರೇ ಈ ದಿನಗಳಲ್ಲಿ ಬಿತ್ತಿದರೆ (ಬಹುಶಃ ಎರಡನೆಯ ಬೆಲೆ) ಫಸಲು ಶಾಶ್ವತ ಎಂದೂ ನಂಬಿದ್ದಾರೆ. ಉಪಯುಕ್ತ ಮಳೆಗಳ ಪೈಕಿ ಸ್ವಾತಿ ಕೊನೆಯದು. ಉಳಿದವು ಲೆಕ್ಕಕ್ಕಿಲ್ಲ, ಆದ್ದರಿಂದಲೇ 'ಸ್ವಾತಿಮಳಿ ಆದ ಮ್ಯಾಗ ಯಾತರ ಮಳಿ?' ಎಂಬುದು ಗಾದೆಮಾತಾಗಿ ಹರಡಿಕೊಂಡಿದೆ. ದವಸಧಾನ್ಯಗಳೆಲ್ಲ ಒಡೆದುಕಾಳು ಗಟ್ಟಿಯಾಗುವ ಕಾಲದಲ್ಲಿ ಸ್ವಾತಿಮಳೆ ಬರುತ್ತದೆ. ಅದಕ್ಕಾಗಿ ಸ್ವಾತಿಮಳೆಗೆ ಮುತ್ತಾದಂತೆ ಎನ್ನುತ್ತಾರೆ. 'ಸ್ವಾತಿಹನಿ ಬಿದ್ದು ಜಾತಿ ಮುತ್ತಾದಂತೆ' ಎಂಬ ಮಾತಿನಲ್ಲಿ ಈ ಮಳೆಯ ಸಾಂದರ್ಭಿಕ ಮಹತ್ವವನ್ನು ಗುರುತಿಸಿಕೊಳ್ಳುತ್ತಾರೆ. ಹಿಡಿದುಕೊಂಡರೆ ಬಿಡದು ಎಂಬ ಮಾತು ಪ್ರಚಲಿತದಲ್ಲಿ ಇದೆ.

**ವಿಶಾಖಾ, ಅನುರಾಧಾ ಮಳೆಗಳು**

೧. ವಿಶಾಖಮಳೆ ಪಿಶಾಚಿ ಹಿಡಿದ ಹಾಗೆ

೨. ವಿಶಾಕಮಳೆ ಆಶಿಷಿ ಅಂದ್ರೂ ಬಿಡದು

೩. ವಿಷಾಕುವಾನುವಸ್ತೇ ವಿಷಪುಲಗಲು ಪೊತಾಯಿ

೪. ಅನುರಾಧಾಮಳೆಗೆ ಆನೆ ಮೈ ನಡುಗ್ತು

೫. ಅನುರಾಧಾ ಬಿತ್ತು ಮನೋರೋಗ ಹೋಯ್ತು

೬. ಅನುರಾಧಾ ಬಂದ್ರೆ ನಮ್ಮ ರಾಗಿ ನಮ್ಮದು

೭. ವಿಶಾಖಮಳೆ ಬಂದರೆ ಈಸಾಕು ( ವಿಷದ ಎಲೆ) ಉದುರುತ್ತೆ

ಒಕ್ಕಲಿಗನ ಅಭಿಪ್ರಾಯದಂತೆ ವಿಸಾತಿ ಎಂದರೆ ವಿಷ. 'ವಿಶಾತಿಮಳೆ ಬಂದರೆ ರೋಗ ಎಲ್ಲ ಹೊಕ್ಕವೆ' ಬೆಳೆಯ ಮೇಲಿನ ಮತ್ತು ಕಾಳಿನ ಮೇಲಿನ ವಿಷ ಲೇಪನವೆಲ್ಲ ಹೋಗುವುದುದಂತೆ. ಈ ಮಳೆಯು ಬರುವುದರಿಂದ ದನಕರುಗಳಿಗೆ ರೋಗರುಜಿನಗಳು ಹತ್ತುವುದಿಲ್ಲವಂತೆ. ಕೆಲವರ ಪ್ರಕಾರ ಈ ಮಳೆ ವಿಷದಂತೆ ಬೆಳೆಗಳ ಮೇಲೆ ಬಿದ್ದು ಕ್ರಿಮಿಕೀಟಗಳನ್ನು ನಾಶ ಮಾಡುತ್ತದೆ. ಮುಂದಿನ ಮಳೆಯಾದ ಅನುರಾಧ ಬಂದರೆ ಗಿಡದ ಮ್ಯಾಲಿನ ವಿಷವೆಲ್ಲ ಹೊರಟು ಹೋಗುತ್ತದೆ.

ಅಷ್ಟೊಂದು ಗಂಭೀರವಾಗಿ ಪರಿಗಣಿಸಲಾಗದ ಮಳೆಗಳು ಇವು ಎಂಬುದು ನಮ್ಮ ಜಾನಪದರ ನಂಬಿಕೆ. ಆದರೆ, ಇವು ಸುರಿದರೆ ಪರಿಣಾಮ ಇಲ್ಲದೆ. ಹೋಗುವುದಿಲ್ಲ. ಅಷ್ಟೇ ಅಲ್ಲ, ಪರಿಣಾಮದಲ್ಲಿ ಪರಸ್ಪರ ಪೂರಕವಾದ ಮಳೆಗಳಿವು ಎಂಬುದೂ ನಮ್ಮ ರೈತರ ಅಂಬೋಣ. ಉದಾಹರಣೆಗೆ ವಿಶಾಖಮಳೆ ಹೊಡೆದರೆ ಬೆಳೆಗಳಿಗೆ ಹುಳು ಬೀಳುವುದೆಂದೂ, ಅನುರಾಧಾಮಳೆಯಿಂದ ಅವು ನಾಶವಾಗುವುದೆಂದೂ ಉತ್ತರಕನ್ನಡ ಜಿಲ್ಲೆಯಲ್ಲಿ ನಂಬಿಕೆ ಇದೆ. ಆದ್ದರಿಂದಲೇ ವಿಶಾಖಾಮಳೆ ಬಿದ್ದರೆ ಅನುರಾಧಾ ಕೂಡಾ ಬೀಳಲೇಬೇಕು. ಎಂದು ಅವರು ಬಯಸುತ್ತಾರೆ. ವಿಶಾಖಾ, ಹಿಂಗಾರಿಮಳೆಗಳ ಪೈಕಿ ಕೊನೆಯದು.

ಅನುರಾಧಾಮಳೆಯ ದಿನಗಳಿಂದ ಛಳಿಗಾಲ ನಿಧಾನವಾಗಿ ಆರಂಭವಾಗುತ್ತದೆ. ಆದ್ದರಿಂದಲೇ 'ಅನುರಾಧಾಮಳೆಯ ನೀರನ್ನು ತೆಗೆದು ಹಾಲು ಮೊಸರಿನ ಪಾತ್ರೆಗೆ ಹಾಕುವ ರೂಢಿ ಹೊನ್ನಾವರ ಕುಮುಟಾ ತಾಲ್ಲೂಕುಗಳಲ್ಲಿದೆ. ಇದರಿಂದ ಮಳೆಯಲ್ಲಿ ಹೈನು ಹೆಚ್ಚುವುದೆಂದು ಇವರ ನಂಬಿಕೆ. ಇದು ಕೊನೆಯ ನಿಗದಿಯಾದ ಮಳೆ. ಈ ಮಳೆ ಸ್ವಲ್ಪ ಬಂದರೂ ಸಾಕು ರೈತ ನಿರುಂಬಳನಾಗುತ್ತಾನೆ. ಅನುರಾಧ ಬಂದರೆ ಮನರೋಗ ಹೋಯ್ತು ಎಂದು ಸಂತೋಷಪಡುತ್ತಾನೆ.

ಇಲ್ಲಿಗೆ ಮಳೆಗಾಲ ಅಧಿಕೃತವಾಗಿ ಮುಗಿದಂತೆ. ಮುಂದಿನ ನಕ್ಷತ್ರಗಳಲ್ಲಿ ಯಾವುವೂ ಬರುವುದಿಲ್ಲ. ಅನುರಾಧದ ನಂತರ ಇರುವ 'ಜೇಷ್ಟ ಮೂಲ, ಇವು ಕಾಳಾಮೂಳ' ಇವು ಬರುದಿಲ್ಲ. ಬಂದರೆ ಭಾರಿ ಹಾನಿ. ಜೇಷ್ಠಮೂಲಗಳನ್ನು ಕಟ್ಟಿಹಾಕಿರುತ್ತಾರೆ. ಹಾಗಾಗಿ ಇವು ಬರುವುದಿಲ್ಲ ಎಂಬ ನಂಬಿಕೆಯೊಂದನ್ನು ಉಳಿಸಿಕೊಂಡಿದ್ದಾರೆ. ಮುಂದೆ ಯುಗಾದಿಯ ತನಕ ಯಾವಾಗಲೋ ಒಮ್ಮೆ ಜೋರುಮಳೆ ಬಂದರೆ ನೆಲವನ್ನು ಅಗೆಯಲು ಉಳಲು ಅನುಕೂಲವಾಗುತ್ತದೆ. ಮಳೆ ಎಷ್ಟು ಬಂದರೂ ರೈತನಿಗೇನೂ ಬೇಸರವಿಲ್ಲ. 'ಮಳೆಬಂದರೆ ಕೇಡೇ, ಮಗ ಉಂಡರೆ ಕೇಡೇ' ಎಂಬ ಮನೋಭಾವ ಅವನದು. ಮಳೆಯು ಬರುವ ರೀತಿ, ಓಡಿಯುವ ರೀತಿ ಕಂಡು ಅವನು ಅವುಗಳಿಗೆ ವಿಶೇಷಣ ಹಚ್ಚುತ್ತಾನೆ. ಕ್ಷಣ ಕ್ಷಣಕ್ಕೆ ಬರುತ್ತಿದ್ದರೆ 'ಕಪ್ಪೆಮಳೆ' ವೇಗವಾಗಿ ಬಂದರೆ 'ಕುದುರೆಮಳೆ' ನಿರಂತರವಾಗಿ

ಹಿಡಿದುಕೊಂಡು ಬಿಟ್ಟರೆ 'ಸೋನೆಮಳೆ' ಸುರಿಯಲು ಶುರು ಮಾಡಿದರೆ 'ಜಡಿಮಳೆ' ಹದವಾಗಿ ಬಿತ್ತುತ್ತಿರುವಾಗ ಬಂದರೆ 'ಬೆದೆಗಡಕ' ಕೊಯ್ದು ಮೆದೆ ಹಾಕಿದಾಗ ಬಂದು ತೊಂದರೆಕೊಟ್ಟರೆ 'ಮದೆಗೆ'ಡಕ' ಕಣ ಮಾಡಿದಾಗ ಬಂದು ಹಾಳು ಮಾಡಿದರೆ 'ಕಣಗಡಕ' ಹೀಗೆ ಅವನ ಶಬ್ದ ಸಂಪತ್ತು ಮೆರೆಯುತ್ತದೆ. ಮಳೆ ಬರುವಾಗ ಬಿಸಿಲು ಬೀಳುವುದು ಅಪರೂಪ. ಹಾಗೆ ಬಿಸಿಲು ಬಿದ್ದರೆ ನರಿ ಮದುವೆಯಾಗುತ್ತೆ, ಕರಡಿ ಮದುವೆಯಾಗುತ್ತೆ ಎಂದು ನಂಬುತ್ತಾರೆ. ಸಂಜೆ ಬರುವ ಮಳೆ ಮಾತ್ರ ಬರುವಂತಹದು, ಬೆಳಗಿನದು ಖಾತ್ರಿಯಾದುದಲ್ಲ ಎಂಬುದು ಅವರು ಅನುಭವದಿಂದ ಕಂಡುಕೊಂಡುದು. ಅದಕ್ಕಾಗಿ 'ಬೆಳಗಿನಮಳೆ ಮಳೆಯಲ್ಲ' 'ಸಾಯಂಕಾಲದ ನೆಂಟ ಮಳೆ, ಎರಡೂ ಹೋಗಲ್ಲ' ಮುಂತಾದ ಗಾದೆಗಳನ್ನು ಸೃಷ್ಟಿಸಿದ್ದಾರೆ. ಮಳೆಯು ಚದುರಿದಂತೆ ಬರುತ್ತದೆ, ಒಂದು ಕಡೆ ಬಂದಿರುವುದನ್ನು ನೋಡಿ ಎಲ್ಲ ಕಡೆಯೂ ಹಾಗೆಯೇ ಬಂದಿರುತ್ತದೆಂದು ನಂಬುವುದು ಸಾಧ್ಯವಿಲ್ಲವೆಂಬುದಕ್ಕೆ 'ಊರಾಗಳ ಕೆಸರು ನೋಡಿ ಹೊಲಬಿತ್ತಕೋಗೋದು ಬಿಟ್ಟರಂತೆ' ದಾವಣಗೆರೆ ಕಡೆ ಕಾಣಸಿಗುವ 'ಊರಾಳ ಹಸಿ ನೋಡಿ ಹೆರೆ ಹೊಲ ಬೀಳು ಬಿಟ್ಟಿದ್ದರಂತೆ' ಎಂಬ ಮಾತು ಸಾಕ್ಷಿಯಾಗುತ್ತದೆ.

ಮಳೆಯನ್ನು ಕುರಿತಂತೆ ಕನ್ನಡದಲ್ಲಿ ನಾಲಕ್ಕೈದು ನೂರು ಗಾದೆಗಳಿರಬಹುದು. 'ಗಾದೆ ವೇದಕ್ಕೆ ಸಮ' 'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬ ಗಾದೆಗಳೂ ಇವೆ. ಆದರೆ, ಮಳೆಯ ವಿಷಯದಲ್ಲಿ ಎಲ್ಲ ಗಾದೆಗಳನ್ನೂ ನಂಬಲಿಕ್ಕಾಗದು. ಪ್ರಾಸಕ್ಕಾಗಿಯೇ ಹಿಂದೆ ಇದ್ದ (ಅನ್ಯ ಮಳೆ ಸಂಬಂಧಿತ) ಗಾದೆಗಳ ರೀತಿಯಲ್ಲಿ ಪುನಃ ಕೆಲವನ್ನು ಹೊಸೆದಿರಬೇಕೆಂದೂ ಅನಿಸುತ್ತದೆ.

ಆದರೆ ಮಗಿ, ಆಗದಿದ್ರೆ ಹೊಗಿ
ಆದರೆ ಆರಿದ್ರಾ, ಆಗದಿದ್ರ ದರಿದ್ರ
ಕೃತಿಕೆ ಬೀಳ್ದಿದ್ರೆ ಬಾಯಿಗೆ ಮೃತ್ತಿಕೆ

ಒಂದೇ ಅರ್ಥ ಕೊಡುವ ಈ ಮೂರು ಗಾದೆಗಳು ನಾಲ್ಕು ಬೇರೆ ಬೇರೇ ಮಳೆಗಳಿಗೆ ಸಂಬಂಧಿಸಿದವು. ಕೃತಿಕೆ ಮೂರನೆಯ ಮಳೆಯಾದರೆ, ಆರಿದ್ರಾ ಆರನೆಯದು. ತಿಂಗಳ ಕೊನೆಯ ಭಾಗದಲ್ಲಿ ಬೀಳೂವ ಕೃತಿಕೆ ಬೇಸಿಗೆ ಬೇಳೆಗೆ (ಹಿಂಗಾರಿ) ಅನುಕೂಲಕಾರಿ ಹಾಗೂ ಮುಂಗಾರಿ ಬಿತ್ತನೆಗೆ ನೆಲ ಹದಗೊಳಿಸುವಂಥಾದ್ದು. ಈ ಮಳೆಯನ್ನು ಕುರಿತಂತೆ ದೊರೆತಿರುವ ಮೂರು ಗಾದೆಗಳಲ್ಲಿ ಒಂದು ಮೇಲೆ ಸೂಚಿಸಿ ಮಳೆಯನ್ನು ಕೇಳೋರೇ ಇಲ್ಲ ಎನ್ನುತ್ತದೆ. ಮತ್ತೊಂದು ಕೃತ್ತಿಕೆಗೆ ಕುರುಹುಗಾಳಿ ಎನ್ನುತ್ತದೆ. ಅಂದರೆ ಇದರ ಮಹತ್ವಕ್ಕೆ 'ರಟ್ಟಮತ'ದಂಥ ಶಾಸ್ತ್ರಗ್ರಂಥದ ವಿನಃ ಜನಶ್ರುತಿಯ ಆಧಾರವಿಲ್ಲ. (ಗಾದೆಗಳಿರಲಿ, ಬೇರೆ ನಂಬಿಕೆಗಳೂ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪ್ರಸ್ತುತ ಲೇಖಕನಿಗೆ

ದೊರೆಯಲಿಲ್ಲ) ಈ ಮಳೆ ತುಸು ತಡವಾದರೆ, ಅಥವಾ ಆಗಬೇಕಾದ್ದರ ಅರ್ಧದಷ್ಟು ಆದರೆ, ಬಿತ್ತನೆಗೆ ತುಸು ತಡವಾದೀತು. ಮುಂದಿನ ಮಳೆಗೆ ಕಾಯಬೇಕಾದೀತು. ಆದು ವಿನಃ ಇದು ಬೀಳದಿದ್ದರೆ ಬಾಯಿಗೆ ಮಣ್ಣಾಗುವಂತಹುದೇನೂ ಇರಲಾರದು. ಆದರೂ ಮೇಲಿನ ಗಾದೆ ಹುಟ್ಟಿದೆ. ಇಂಥದಕ್ಕೆ ಏನಾದರೂ ಹೇಳಬೇಕಾದ ಅವಸರದ ಸಂದರ್ಭದಲ್ಲಿ ನಮ್ಮ ಜಾನಪದರು ಮೊದಲೇ ಸಿದ್ದವಾಗಿದ್ದ ರೂಪವನ್ನೆತ್ತಿಕೊಂಡು ಅದನ್ನು ಅದನ್ನು ಅಗತ್ಯ ರೀತಿಯಲ್ಲಿ ಬದಲಿಸಿ ಹೇಳುವುದೂ ಕಾರಣ. ನಮ್ಮ ಜಾನಪದ ತ್ರಿಪದಿಗಳಲ್ಲೂ ಒಂದೆರಡೇ ಶಬ್ದಗಳಿಂದ ಬದಲಾಗಿ ಬೇರೆ ಬೇರೆ ಊರು, ದೈವಗಳಿಗೆ ಆರೋಪಿತವಾಗಿರುವ ತ್ರಿಪದಿಗಳಿರುವುದನ್ನೂ ನೆನಪಿಸಿಕೊಳ್ಳಬಹುದು. ಒಪ್ಪಿಕೊಳ್ಳುವುದು ತಪ್ಪಾಗುತ್ತದೆ.

ಕೆಲವು ಮಳೆಗಳ ಸ್ವಭಾವದ ಸಂಬಂಧವಾಗಿ ಜನಪದರಲ್ಲಿ ಕೆಲವು ವಿಶಿಷ್ಟ ಹೇಳಿಕೆಗಳು ಪ್ರಚಲಿತವಾಗಿವೆ. ಇಂಥ ಹೇಳಿಕೆಗಳಿಗೂ ನಿರಂತರ ಅನುಭವವೇ ಆಧಾರ. ಪುನರ್ವಸು, ಪುಷ್ಯ ನಕ್ಷತ್ರಗಳನ್ನು ಕುರಿತು ಇವು ಬಯಲು ಸೀಮೆಯ ಒಕ್ಕಲಿಗನಿಗೆ ಭಾಷೆ ಕೊಟ್ಟ ಮಳೆಗಳು ಎಂಬ ಮಾತೂ ಪ್ರಚಾರದಲ್ಲಿದೆ. ಬೆಳೆಗಳಿಗೆ ಬಹು ಅಗತ್ಯವಾದ ಮಳೆಯನ್ನು ಇವು ತಪ್ಪದೇ ಸುರಿಸುತ್ತವೆ ಎಂಬ 'ಮಳೆಯಿಲ್ಲದ ಪೈರು ಮಾತೆ ಇಲ್ಲದ  ಕೂಸೂ ಸಮ' ಮಳೆ ಬಂದರೆ ಕೇಡೇ? ಮಗ ಉಂಡರೆ ಕೇಡೇ?' ಎಂಬ ಗಾದೆಗಳು ಮಳೆ ಎಷ್ಟು ಜೀವನಾವಶ್ಯಕ ಎಂಬ ವಿಷಯವನ್ನೇ ಸ್ಪಷ್ಟಪಡಿಸುತ್ತವೆ. ಗಾದೆಗಳು ಜನಪದ ಅನುಭವದ ಅಣಿಮುತ್ತುಗಳು ಎಂಬ ಮಾತನ್ನೇ ಈ ಗಾದೆಗಳು ಸ್ಪಷ್ಟಪಡಿಸುತ್ತವೆ.

**ಪರಂಪರೆ ಮತ್ತು ಮಳೆಕಥನಗಳ ಅನುಭವ ತಾತ್ವಿಕ ಆಯಾಮಗಳು**

**ಜೋಕುಮಾರನ ಕಥನ**

ಮಳೆಕಥನಗಳ ಆಚರಣೆ ಒಟ್ಟು ತಾತ್ವಿಕತೆಯು ಬಹುಶಃ ಕಥೆಯ ಆಶಯದ ಮೇಲೆಯೇ ನಿರ್ಧರಿಸಲ್ಪಡುತ್ತದೆ. ಮಾನವ ಬೌದ್ಧಿಕಗ್ರಹಿಕೆಯ ಅಂಶಗಳನ್ನು ಪರೋಕ್ಷವಾಗಿ ನಿಯಂತ್ರಿಸುವಂತವು ಪ್ರಕೃತಿಯ ಮೂಲಾಂಶಗಳಾಗಿರುತ್ತವೆ. ವೈಜ್ಞಾನಿಕ ಕ್ರಾಂತಿಯಿಂದ ಮನುಷ್ಯನ ಬದುಕು ಶೀಘ್ರಚಲನಾ ಶೀಲವಾಗಿದೆಯಾದರೂ ಅದರ ಜೀವನಚಕ್ರದ ಗತಿಯು ಮೂಲಕೇಂದ್ರದಲ್ಲೇ ಗಿರಕಿ ಹೊಡೆಯುತ್ತಿರುತ್ತದೆ. ತಾಂತ್ರಿಕಕ್ರಾಂತಿಯು ಮನುಷ್ಯನ ಬದುಕನ್ನು ವಿಕ್ಷಿಪ್ತಸ್ಥಿತಿಗೆ ತಂದಿದೆ ಎಂಬುದು ಸತ್ಯ. ಮತ್ತು ವೈಜ್ಞಾನಿಕ ಕ್ರಾಂತಿಯೊಂದೇ ಮನುಷ್ಯನ ಬದುಕನ್ನು ನಿಯಂತ್ರಿಸುತ್ತದೆ ಎಂಬುದು ಸುಳ್ಳು. ಯಾವುದೇ ಜೀವಿಯ ಮನಸ್ಸು ಪ್ರಕೃತಿಯೆಡೆಗೆ ಸದಾ ತುಡಿಯುತ್ತಿರುತ್ತದೆ. ಆ ಆಚರಣೆಗಳು ಸಾಂತ್ವಾನಭಾವದಲ್ಲಿ ಅದ್ದುತ್ತವೆ. ಆ ಕಾರಣಕ್ಕೆ  ಪ್ರಕೃತಿಯಾರಾಧನೆ ಮುಖ್ಯವೆನಿಸುತ್ತದೆ. ಅದರಲ್ಲಿ ಮನುಷ್ಯ ತನ್ನ ಜೀವ ವಿಕಾಸವನ್ನಷ್ಟೇ ಅಲ್ಲದೇ ತನ್ನ ಆದಿಮನಂಬಿಕೆಗಳನ್ನು ಅರಿತುಕೊಳ್ಳುತ್ತಾನೆ. ಆ

ಮೂಲಕ ತನ್ನ ಇಂದಿನ ಬದುಕಿಗೆ ಹಿಂದಿನ ಯಾವ ಶಕ್ತಿ ಕಾರಣವೆಂಬುದನ್ನು ಅರಿತುಕೊಳ್ಳುತ್ತಾನೆ. ಅಂತಹ ನಂಬಿಕೆಗಳಲ್ಲಿ ಮತ್ತು ಜೀವನ ವಿಧಾನಗಳಲ್ಲಿ ಜೋಕುಮಾರನ ಕುರಿತ ಜನಪದರ ನಂಬಿಕೆಯು ಒಂದು. ಕಾರಣ ಜೋಕುಮಾರನು ಮಳೆಯದೈವವೆಂದು ಜನಪದರು ಬಲವಾಗಿ ನಂಬುತ್ತಾರೆ. ಜೋಕುಮಾರ ಹುಟ್ಟಿನ ಬಗ್ಗೆ ಕಥೆಗಳು ಮತ್ತು ನಂಬಿಕೆಗಳು ಭಿನ್ನ ನೆಲೆಗಳಲ್ಲಿ ಸಿಗುವುದಷ್ಟೆ ಅಲ್ಲದೆ ಭಿನ್ನ ಆಯಾಮಗಳಿಗೆ ಚಿಂತನಾಕ್ರಮಗಳನ್ನು ಸೆಳೆಯುತ್ತವೆ. ಎಲ್ಲಾ ಕಥೆಗಳ ಸಾರವನ್ನು ಸಂಗ್ರಹಿಸಿ ಹೇಳುವುದಾದರೆ,

- ಕಥೆಗಳ ಅವ್ಯಕ್ತ ಆಶಯ
- ವ್ಯಕ್ತಿಸ್ವರೂಪದ ಅಗಾಧ ಸಾರ್ಥಕತೆ
- ಸೃಷ್ಟಿಕ್ರಿಯೆಯಲ್ಲಿ ಪುರುಷನ ನಶ್ವರತೆ ಮತ್ತು ಗೈರುಹಾಜರಿ
- ಅವ್ವ ಮತ್ತು ಆರ್ಯ ಸಂಸ್ಕೃತಿಯ ಸಂಕರ
- ಕೇಂದ್ರನೆಲೆಯಿಂದ ಬೀಜದ ಹುಡುಕಾಟ ಮತ್ತು ವಿಫಲ

ಇವುಗಳ ಆಚೆಗೂ ಕಥೆಗಳ ಆಧಾರದಿಂದ ಜೋಕುಮಾರ ಸ್ವಾಮಿಯನ್ನು ಕಂಡುಕೊಳ್ಳಬಹುದಾದರೂ ನಮ್ಮ ಹಿರಿಯ ವಿದ್ವಾಂಸರು ಆತನ ಹುಟ್ಟು ಆಚರಣೆ, ನಂಬಿಕೆಗಳ ಬಗ್ಗೆ ಹೆಚ್ಚು ಗಮನಹರಿಸಿದಂತೆ ಕಾಣುತ್ತದೆ.

ಜೋಕುಮಾರನಿಗೆ ಸಂಬಂಧಿಸಿದ ಕಥನಗಳನ್ನು ಸಂದರ್ಭಾನುಸಾರ ಬಳಸಿಕೊಳ್ಳುವ ಮುನ್ನ ನಾವು ಆತನ ಸ್ವರೂಪವನ್ನು ಗಮನಿಸುವುದು ಉತ್ತಮ. ಆ ಹಿನ್ನೆಲೆಯಲ್ಲಿ ಆತನ ಹಿನ್ನೆಲೆಯನ್ನು ಗುರುತಿಸುವ ಪ್ರಯತ್ನಮಾಡಬೇಕಾಗಿದೆ. 'ಜೋಕುಮಾರನ ಮೂರ್ತಿಯನ್ನು ಮಣ್ಣಿನಿಂದ ಮಾಡಿ ಬಾಯಿಗೆ ಬೆಣ್ಣೆಯನ್ನು ಒರಸಿ, ಬೇವಿನ ತೊಪ್ಪಲಿನಲ್ಲಿ ಮುಚ್ಚಿ ಅವನ ಗುಪ್ತಾಂಗವನ್ನು ನೀಟಾಗಿ ಕಾಣುವಂತೆ ಮಾಡಿರುತ್ತಾರೆ. ಅಕಾರಳ, ವಿಕಾರಳ ದೇಹಸ್ವರೂಪವನ್ನು ಮಾಡಿ ತಲೆಗೆ ಕುಂಚಿಗೆ ಕಟ್ಟಿ ಬಿದುರಿನ ಬುಟ್ಟಿಯಲ್ಲಿ ಹೊತ್ತು ಊರೂರು ತಿರುಗುತ್ತಾರೆ''. ಸೂಕ್ಷ್ಮವಾಗಿ ಗಮನಿಸುತ್ತಾ ಹೋದರೆ, ಇದುವರೆಗೆ ಇರುವ ಜೋಕುಮಾರನ ದಂತಕಥಗಳಿಗೆಲ್ಲ ಮೇಲಿನ ಸಾಮಾನ್ಯರೂಪವೇ ಅಂತಿಮ ಹಾಡುವಂತಿದೆ.

ಜೋಕುಮಾರನನ್ನು ದೈವಿ ಪುರುಷನೆಂದು ಸಾರುವ ಕಥನಗಳು ನಂತರದ ಸೇರ್ಪಡೆಯಾಗಿರಲು ಹಾಗೂ ಆಚರಣಾತಾತ್ವಿಕತೆಯ ಶಾಶ್ವತಅಸ್ತಿತ್ವಕ್ಕೆ ಇರಬೇಕು. ಆತನ ಸ್ವರೂಪವನ್ನು ಗಮನಿಸಿದರೆ ಆತ ಆದಿಮ ಬುಡಕಟ್ಟು ಸಂಸ್ಕೃತಿಯ ಆದಿದೈವನೆಂಬಂತೆ ಕಂಡುಬರುತ್ತಾನೆ. ನೆಲಮೂಲಸಂಸ್ಕೃತಿಯ ಪರಿಕರಗಳನ್ನು ಆತನಿಗೆ ಆರೋಪಿಸಲಾಗಿದೆ. ಜಲ ಮತ್ತು ಮಣ್ಣು ಸೇರುವ

ಕ್ರಿಯೆಯೇ ಸಂಭೋಗಕ್ರಿಯೆಯನ್ನು ಸೂಚಿಸುತ್ತದೆ. ಮಣ್ಣು ಮತ್ತು ನೀರನ್ನು ಕಲಿಸಿ ಏಕತ್ರಗೊಳಿಸುವುದು ನಾದಿ ಮಿದುಕೆ ಮಾಡುವುದು, ಅಂಗಾಂಗಗಳನ್ನು ಸವರಿ ಸವರಿ ಮೂರ್ತರೂಪಕ್ಕೆ ತರುವುದು ಇದೆಲ್ಲವೂ ಎರಡು ಭಿನ್ನ ಆಕೃತಿಗಳು ಒಂದರೊಳಗೊಂದು ಸೇರುವ ಸಾಂಕೇತವಾಗಿದದ್ದು, ಸಂಭೋಗಕ್ರಿಯೆಯನ್ನು ಅಭಿನಯಿಸುವುದಾಗಿದೆ. ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ ಜೋಕುಮಾರನನ್ನು ಮಾಡುವಾಗ ಏಕಾಂತದಲ್ಲಿ ಸ್ತ್ರೀಯೇ ಮಾಡುವುದಾಗಿದ್ದು ಆತನ ಗುಪ್ತಾಂಗವನ್ನು ವಿಶೇಷವಾಗಿ ಎದ್ದು ಕಾಣುವಂತೆ ಮಾಡಲಾಗುತ್ತದೆ. ಅದನ್ನು ನೋಡಿಯೇ ಸ್ತ್ರೀಯರು ನಾಚಿಕೆ ಮತ್ತು ಉದ್ವೇಗಕ್ಕೆ ಒಳಗಾಗುತ್ತಾರೆ. ಇದನ್ನು ಮನಶಾಸ್ತ್ರೀಯ ನೆಲೆಯಲ್ಲಿ ಗಮನಿಸಬಹುದಾದರೆ ಅನ್ಯಲಿಂಗಆಕರ್ಷಣೆಯ ಸಿದ್ಧಾಂತದನೆಲೆಯಲ್ಲಿ ಕಂಡುಕೊಳ್ಳಬಹುದು. ಒಟ್ಟಾರೆಯಾಗಿ ಸಂಭೋಗದ ಪುನರಭಿನಯದಂತೆ ಸಾದಾರವಾಗುತ್ತದೆ.

ಶಿಷ್ಟಜನಗಳ ತಿಳುವಳಿಕೆಯಂತೆ ಅನಕ್ಷರಸ್ಥ ಜನಪದರಿಗೆ ತತ್ವಶಾಸ್ತ್ರ ಗಂಧಗಾಳಿಯೂ ತಿಳಿಯದು ಎಂಬುದು. ಜೋಕುಮಾರನಕಥೆಯೂ ಈ ಅಂಶಗಳತ್ತ ಗಮನಹರಿಸುವಂತೆ ಮಾಡುತ್ತದೆ. ವೈದಿಕ ಸಂಸ್ಕೃತಿಯ ಜೋಕುಮಾರನನ್ನು ಆರ್ಯೀಕರಣ ಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿ ಆದ ಕೆಲವು ಸಂದಿಗ್ನತೆಗಳಲ್ಲಿಯೇ ಕೆಲವು ಮೂಲಾಂಶಗಳನ್ನು ಹಾಗೆಯೇ ಉಳಿಸಿರುವುದು. ಮತ್ತು ಜನಪದರ ಈ ದೈವ ಅನೈತಿಕತೆಯ ಪ್ರತೀಕ ಮತ್ತು ಪೂಜಾ ನಿಷೇದಾರ್ಹವೆಂಬಂತೆ ಬಿಂಬಿಸಲು ಯತ್ನಿಸಿರುವಲ್ಲಿಯೇ ಜೋಕುಮಾರನ ಮೂಲಸಂಸ್ಕೃತಿಯ ಕುರುಹುಗಳನ್ನು ಪ್ರಸ್ತಾಪಿಸಿರುವುದು. ಆಧಾರಗಳಿಗೋಸ್ಕರ ಕೆಳಗಿನ ಕಥೆಗಳನ್ನೇ ನೋಡಬಹುದಾಗಿದೆ.

ಪಾರ್ವತಿದೇವಿಯು ಒಂದು ದಿನ ಸ್ನಾನ ಮಾಡಲು ಹೊರಟು ತನ್ನ ಮೈಯಲ್ಲಿದ್ದ ಮಣ್ಣೆನ್ನೇ ತೆಗೆದು ಒಂದು ಗೊಂಬೆ ಮಾಡಿ ಅದಕ್ಕೆ ಜೀವಕಳೆ ತುಂಬಿ ಮನೆಯೊಳಕ್ಕೆ ಯಾರನ್ನು ಬಿಡಬೇಡ ಎಂದು ಹೇಳಿ ಹೋಗುತ್ತಾಳೆ. ಪಾರ್ವತಿ ಸ್ನಾನಕ್ಕೆ ಕುಳಿತಾಗ ತಾಯಿಯನ್ನು ಮೋಹಿಸಲು ಹೋಗುತ್ತಾನೆ. ಬಾಲಕನ ಈ ಸ್ವಭಾವವನ್ನು ನೋಡಿ ಆತನಿಗೆ ಜೋಕುಮಾರನೆಂದು ಕರೆದು ನೀನು ಹುಟ್ಟಿದ ಏಳನೇ ದಿನಕ್ಕೆ ಸತ್ತು ಹೋಗು ಎಂದು ಶಾಪವನ್ನಿತ್ತಳು[೨೦]. ಜೋಕುಮಾರನ ಕಥೆಗಳಲ್ಲಿ ಪ್ರಧಾನವಾಗಿ ಸಿಗುವ ಅಂಶವೆಂದರೆ ಆತ ಕಾಮುಕ ಎಂಬುದು. ಅವನು ಪಾರ್ವತಿಯ ಮೈಮೇಲಿನ ಮಣ್ಣಿನಿಂದ ಮಾಡಲ್ಪಟ್ಟು, ಆಕೆಯನ್ನೇ ಮೋಹಿಸುವನು. ಇದರಲ್ಲಿ ಅಶ್ಲೀಲವಾಗಲೀ, ಅನೈತಿಕ ಅಂಶಗಳಾಗಲೀ ಕಾಣಸಿಗಲಾರವು. ಇದರಲ್ಲಿ ಸಿಗುವ ಮುಖ್ಯಾಂಶಗಳೆಂದರೆ,

- ಅಲೌಕಿಕ ಗ್ರಹಿಕೆಯಲ್ಲಿಯೂ ಈತ ಮಣ್ಣು ಮತ್ತು ನೀರಿನಿಂದ ಆದವನು.
- ಆದಿಮಸಂಸ್ಕೃತಿಗಳಲ್ಲಿ ಕೇಂದ್ರವೇ ಮುಖ್ಯ ವಿನಃ ಸಂಬಂಧಗಳು ಅಮುಖ್ಯ.

• ಯಾವುದೇ ಕೇಂದ್ರವು ಭೋಗಿಸಲು ಅರ್ಹ ಎಂಬ ಚಾರ್ವಾಕೀಯ ಚಿಂತನೆ.

ಹಾಗೆಯೇ ಯಾವುದೇ ಜಾತಿ ಕುಲಗಳಿಲ್ಲದೆ ಮೋಹಗೊಂಡ ಹೆಣ್ಣನ್ನು ಸೇರುವ ಲಕ್ಷಣ ಜೋಕುಮಾರನಲ್ಲಿ ಕಂಡುಬರುತ್ತದೆ. ವೈದಿಕಸಂಸ್ಕೃತಿಯಲ್ಲಿ ಇರುವಂತೆ ಪಾತಿವ್ರತ್ಯದಕಲ್ಪನೆ ಆದಿಮಸಂಸ್ಕೃತಿಗಳಿರಲಿಲ್ಲ. ಮುಕ್ತ ಲೈಂಗಿಕತೆ ಇತ್ತೆಂದು ಸಂಶೋಧನೆಗಳು ಹೇಳುತ್ತವೆ. ಕೇಂದ್ರದಕಲ್ಪನೆ ಮಾತ್ರ ಇದ್ದ ಸಂದರ್ಭದಲ್ಲಿ ಜೀವೋತ್ಪತ್ತಿಯೇ ಮುಖ್ಯವಾಗಿದ್ದು ಎಂಬುದನ್ನು ಈ ಕಥೆಗಳು ಅಂತರಾಳದಲ್ಲಿ ಇರಿಸಿಕೊಂಡಿವೆ. ಈ ನಿಟ್ಟನಲ್ಲಿ ಇದನ್ನು ದ್ರಾವಿಡಸಂಸ್ಕೃತಿಯ ಪ್ರತೀಕದಂತೆ ಗ್ರಹಿಸಬಹುದು. ಕಾಲಕ್ರಮೇಣ ಜೋಕುಮಾರನ ಕಥೆಗಳು ಆರ್ಯೀಕರಣವಾಗುತ್ತಾ ಬಂದಿರುವುದಕ್ಕೆ ಸಾಕ್ಷ್ಯಗಳು ಆ ಕಥೆಗಳಲ್ಲಿಯೇ ಸಿಗುತ್ತವೆ.

ಜೋಕ ಎಂಬ ವ್ಯಕ್ತಿಯು ಸಪ್ತಾರ್ಷಿಗಳ ಒಬ್ಬ ನಂಬುಗೆಯ ಸೇವಕನು. ಒಂದು ದಿನ ಋಷಿಗಳು ಮರ್ತ್ಯಲೋಕದ ನರರ ವೈಭವವನ್ನು ಕುರಿತು, ಸುರರು ಅಮೃತವನ್ನು ಮಾತ್ರ ಊಟ ಮಾಡುತ್ತಾರೆ. ಆದರೆ ಮರ್ತ್ಯರು ಪರಮಾನ್ನ ಪಂಚಭಕ್ಷ್ಯಗಳನ್ನು ಸವಿಯುತ್ತಾರೆ. ಅವರು ಜಿಹ್ವಲಂಪಟರು. ವಿಷಯಲೋಲುಪರು, ಪಾಪಿಗಳು ಇತ್ಯಾದಿಗಳನ್ನು ಆಡಿಕೊಳ್ಳುವುದನ್ನು ಕೇಳಿ ಮರ್ತ್ಯಲೋಕಕ್ಕೆ ಹೋಗಿ ನೋಡಿಕೊಂಡು ಬರುವೆನು ವರವನ್ನು ದಯಪಾಲಿಸಿರೆಂದು ಬೇಡಿಕೊಂಡನು. ಆಗವರು ಎರಡು ಷರತ್ತುಗಳನ್ನು ಹಾಕಿದರು.

೧. ಯಾವುದೇ ತರಹದ ಮೃಷ್ಟಾನ್ನ ಭೋಜನವನ್ನು ಮುಂದಿಟ್ಟರೂ ಊಟ ಮಾಡಬಾರದು.

೨. ಯಾವ ಸುಂದರ ತರುಣಿಯರಿಗೂ ಮನ ಸೋಲಬಾರದು.

ಜೋಕಋಷಿಯು ಭೂಮಿಗೆ ಬರುವಾಗ ಕತ್ತಲೆಯಾಗಿದ್ದು, ಒಂದು ಮಾರಮ್ಮದೇವರ ಗುಡಿಯಲ್ಲಿ ಇಳಿದುಕೊಂಡನು. ತಾನು ಅಮೃತವನ್ನು ಸೇವಿಸಿ ಸಪ್ತರಾಗಗಳಲ್ಲಿ ಮನೋಹರವಾಗಿ ಹಾಡತೊಡಗಿದನು. ಇದನ್ನೆಲ್ಲ ಒಳಗಿದ್ದ ಮಾರಿ ನೋಡಿ ಕೇಳಿ ಮೃಷ್ಟಾನ್ನಭೋಜನವನ್ನು ಒಂದು ಚಿನ್ನದ ತಟ್ಟೆಯಲ್ಲಿ ತಂದಿಟ್ಟು ಇವನೇ ಬ್ರಹ್ಮನಿಗಿಂತ ವಿಶಾಲರೂಪವುಳ್ಳವನು ಎಂದು ಇವನ ರೂಪಕ್ಕೆ ಮಾರುಹೋದಳು. ಒಂದು ಕಡೆಗೆ ಮೃಷ್ಟಾನ್ನ ಇನ್ನೊಂದು ಕಡೆಗೆ ಸುಂದರವಾದ ಹೆಣ್ಣಿನ ಆಕರ್ಷಣೆ ಮತ್ತೊಂದು ಕಡೆಗೆ ಗುರುಗಳ ಆಜ್ಞೆ ಈ ಮೂರರಲ್ಲಿ ಅವನು ಯಾವುದಕ್ಕೆ ಮಣಿಯಬೇಕೆಂದು ಜೋಕನಿಗೆ ತೋಚಲಿಲ್ಲ. ಕೊನೆಗೆ ಧೈರ್ಯ ಮಾಡಿ ಊಟಮಾಡಿದನು. ಚಿನ್ನದ ತಂಬುಗೆಯಿಂದ ಕೈತೊಳೆದುಕೊಂಡನು. ಆ ಚೆಲುವಾದ ಮಾರಿಯನ್ನು ಮುಖವನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿ ನೀನೇನು ಲಕ್ಷ್ಮೀಯೋ, ಗಿರಿಜೆಯೋ ಎಂದು ಪ್ರಶ್ನಿಸಿದನು. ಅವಳು ತಾನು ಮಾರಿ ಎಂದು ಹೇಳಿ ಮೋಹದಿಂದ ಅವನಿಗೆ ತಾಂಬೂಲವನ್ನು ಕೊಟ್ಟಳು. ಇದೇ ಸಮಯವನ್ನು ಕಾಯ್ದು ಕುಳಿತ ಮನ್ಮಥನು ತನ್ನ ಕಾಮಬಾಣವನ್ನು ಪ್ರಯೋಗಿಸಿದನು. ಅವನು ಅವಳಿಗೆ ಸೋತು ಎಚ್ಚರವಾದಾಗ ತನ್ನ ತಪ್ಪಿನ

ಅರಿವಾಗಿತ್ತು. ಗುರುಗಳ ಮಾತನ್ನು ಮೀರಿದೆ ಎಂದು ಕೊರಗುತ್ತಾ ಋಷಿಗಳ ಕಡೆ ಹೋಗಿ ಅವರ ಕಾಲಿಗೆ ಬಿದ್ದು ಕ್ಷಮಿಸಬೇಕೆಂದು ಕೇಳಿಕೊಂಡನು. ಅವರು ಆವನನ್ನು ಕಾಲಿನಿಂದ ಒದೆದರು. ಆಗ ಜೋಕಋಷಿಯು ಗುರುಗಳೇ, ನಿಮ್ಮ ಪಾದಗಳು ನನ್ನನ್ನು ಮುಟ್ಟಿದವು ನನ್ನ ಪಾಪವು ಹರಿಯಿತು ನಿಮಗೆ ಧನ್ಯವಾದಗಳು ಎಂದನು. ಆಗ ಅವರು ತಮ್ಮಲ್ಲಿಯೇ ನಗುತ್ತಾ ಏಳು ದಿನ ಸುಮ್ಮನಿರು ನೀನು ನಮ್ಮಲ್ಲಿಗೆ ಬಂದು ಸೇರುತ್ತೀಯ ಎಂದು ವಚನ ಕೊಟ್ಟರು. 'ಇಂಥ ಜೋಕಋಷಿಯ ಸಂಬಂಧದಿಂದ ಮಾರಿ ಬಸುರಿಯಾಗಿ ಭಾದ್ರಪದ ಅಷ್ಟಮಿಯೆಂದು ಒಬ್ಬ ಪುಷ್ಠಿಯಾದ ಮಗನನ್ನು ಹೆತ್ತಳು. ಆ ಕೂಸು ಹುಟ್ಟಿದ ಕೂಡಲೇ ಮಾತನಾಡಹತ್ತಿತ್ತು. ಅಲ್ಲದೇ ತಾಯಿಗೆ ತನ್ನ ತಂದೆಯಾರೆಂದು ಕೇಳಿತು. ಆಗ ಅವಳು ತನ್ನಗೆ ಏನು ತಿಳಿಯದೆಂದು ಆದರೆ ಅವನು ಒಬ್ಬ ಸತ್ಯ ಸ್ವರ್ಗದ ಪುರುಷ. ಅವನು ಎತ್ತ ಹೋದನು ನನಗೆ ಗೊತ್ತಿಲ್ಲ ಎನ್ನುತ್ತಾಳೆ. ನಾನು ನನ್ನ ತಂದೆಯನ್ನು ಹುಡುಕಿಕೊಂಡು ಬರುತ್ತೇನೆ ಎಂದು ಹೊರಟನು. ಹಾದಿಯಲ್ಲಿ ಗಂಗಾಮತಸ್ಥರು ಭಾದ್ರಪದ ಹುಣ್ಣಿಮೆಯ ದಿನ ಗಂಗೆಯನ್ನು ಪೂಜಿಸಿ, ಊಟ ಮಾಡುತ್ತಿದ್ದ ಸಮಯದಲ್ಲಿ ತಮ್ಮ ಕತ್ತೆಯನ್ನು ಕಾಯಲು ನೇಮಿಸಿದ ಸುಂದರ ತರುಣಿ 'ಸುಕರ್ಣಿಕ'ಳನ್ನು ನೋಡಿ ಪೀಡಿಸಿ ಕಾಡಿಸುತ್ತಾನೆ. ಅವಳು ಚೀರಿಕೊಂಡಾಗ ಅಲ್ಲಿದ್ದ ಮಡಿವಾಳರೆಲ್ಲರೂ ಓಡಿ ಬಂದು ಅವನನ್ನು ಬಡಿದು ಕೊಂದು ಅಲ್ಲಿಯೇ ಇದ್ದ ಕಲ್ಲಿನ ಕೆಳಗೆ ಅವನ ಹೆಣವನ್ನಿಟ್ಟು ಹೋಗುತ್ತಾರೆ. ಜೋಕುಮಾರನ ಅಂಶದಿಂದ ಆ ಬಾಲಕನಿಗೆ ಜೋಕುಮಾರನೆಂದು ಹೆಸರಾಗಿತ್ತು'[೨೧]. ಇದರಲ್ಲಿ ಸಿಗುವ ಆದಿಮಸಂಸ್ಕೃತಿಯ ಲಕ್ಷಣಗಳೆಂದರೆ,

- ಯಾವುದೇ ಪುರುಷ ತನ್ನಲ್ಲಿಗೆ ಬಂದರೂ ಸ್ವೀಕರಿಸುವ ಆದಿಮಪ್ರಜ್ಞೆ (ಗಮನಿಸಬೇಕಾದ ಸಂಗತಿಯೆಂದರೆ ಆ ರೀತಿಯ ಮುಕ್ತಮನಸ್ಸಿನ ಸ್ತ್ರೀ ಎಲ್ಲರಿಂದಲೂ ಒಪ್ಪಿತವಾಗಿ ದೈವವಾಗುವುದು)
- ಸೇರಿದ ಹೆಣ್ಣಿನ ಬಗ್ಗೆ ಮುಖ್ಯವಾಗಿ ತನ್ನ ಬೀಜಅಸ್ತಿತ್ವದ ಬಗ್ಗೆ ಪರಿಕಲ್ಪನೆಯು ಇಲ್ಲದ ಪುರುಷನ ನಶ್ವರತೆ.
- ಬೀಜದ ಪ್ರಾಮುಖ್ಯತೆಯನ್ನು ಸಾರಲೆತ್ನಿಸುವ ವೈದಿಕ ಮನಸ್ಸಿನ ತುಡಿತ.
- ವೈದಿಕ ಮನಸ್ಸನ್ನು ಛಿದ್ರಿಸುವ ಕೇಂದ್ರತತ್ವ
- ಆಕಾಶ ಭೂಮಿಯ ಸಂಕರದ ಸೂಕ್ಷ್ಮಚಿತ್ರಣ.

ಈ ತತ್ವಕ್ಕೆ ಅನುಸಾರವಾಗಿಯೇ ಇನ್ನೊಂದು ಅಂಶ ಕಥೆಗಳಲ್ಲಿ ಸಿಗುತ್ತದೆ. ಜೋಕುಮಾರನು ಬ್ರಾಹ್ಮಣರ ಸ್ತ್ರೀ ಸ್ನಾನ ಮಾಡುವಾಗಲೂ ನೋಡುತ್ತಾನೆ. ಹಾಗೂ ಹೊಲೆಯರ ಹೆಣ್ಣುಮಕ್ಕಳಿಗೂ ಕಾಟಕೊಡಲು ಆರಂಭಿಸುತ್ತಾನೆ. ಆದರೆ ಆ ಹೆಣ್ಣುಗಳ್ಯಾರು ಇವನನ್ನು ಸ್ವೀಕರಿಸದೇ ದೂರುಕೊಡುತ್ತಾರೆ. ಆಗ

ಹೊಲೆಯರೇ ಒನಕೆಯಿಂದ ತಲೆಹೊಡೆದು ಸಾಯಿಸುತ್ತಾರೆ. ಗಮನಿಸಬೇಕಾದ ಅಂಶವೆಂದರೆ ಹೊಲೆಯರು (ಈ ನೆಲದ ಅವ್ವ ಸಂಸ್ಕೃತಿಯ ಆದಿಮಸಂಸ್ಕೃತಿ ಪ್ರತಿಪಾದಕರು ವೈದಿಕಸಂಸ್ಕೃತಿಯ ಕಠೋರ ವಿರೋಧಿಗಳು) ಜೋಕುಮಾರನನ್ನು ಸಾಯಿಸುವುದು. ಇದು ಸ್ಪಷ್ಟವಾಗಿ ಅವ್ವಸಂಸ್ಕೃತಿಯ ಅಧಃಪತನವನ್ನು ವೈದಿಕ ಸಂಸ್ಕೃತಿಯ ಪ್ರತಿಷ್ಠಾಪನೆಯತ್ತ ಬೆಳಕು ಚೆಲ್ಲುತ್ತದೆ. ಪಾತಿವ್ರತ್ಯದಮೌಲ್ಯಗಳು ಬಲವಂತ ಹಾಗೂ ಸ್ವ ಒಪ್ಪಿತವಾಗಿ ಈ ಜನಾಂಗಗಳಿಗೂ ಆವರಿಸುವ ಪ್ರಕ್ರಿಯೆಯನ್ನು ಈ ಕಥೆಗಳು ತನ್ನ ಅಂತರಾಳದಲ್ಲಿ ಇರಿಸಿಕೊಂಡಿವೆ.

ಕಥೆಗಳೆಲ್ಲವೂ ನಿರೂಪಿಸುವಂತೆ ಜೋಕುಮಾರನು ಕಾಮುಕ, ಪುಂಡ, ನೀತಿಗೆಟ್ಟವ, ತಾಯಿಗಂಡ ಆದರೂ ಜನಪದರು ಆತನ ಆಚರಣೆ ಮಾಡುತ್ತಾರೆ. ಮತ್ತು ಆಚರಣೆಶಾಶ್ವತವಾಗಿರುವಂತೆ ಮುಂದಿನ ಪರಂಪರೆಗೆ ಸಾಗಿಸುತ್ತಾ ಬಂದಿದ್ದು, ಜೋಕುಮಾರನು ಜನಪದಜೀವನದ ಒಂದು ಅಂಶವಾಗಿಯೇ ಕಂಡು ಬರುತ್ತಾನೆ. ಇದಕ್ಕೆ ಕಾರಣಗಳು ಬಹುಶಃ ಈ ಕೆಳಗಿನಂತಿರಬೇಕೆನಿಸುತ್ತದೆ.

- ವೈದಿಕರು ಯಾವುದನ್ನು ತಿರಸ್ಕರಿಸುತ್ತಾರೋ ಅದನ್ನೇ ಪ್ರಬಲವಾಗಿ ಆಚರಣೆಯಲ್ಲಿ ತರುವುದರ ಮುಖಾಂತರ ಮತಾಂತರದ ಪ್ರಕ್ರಿಯೆಗೆ ಪ್ರಬಲ ಸಂಘರ್ಷ ಒಡ್ಡುವುದು. ಆ ಮೂಲಕ ತಮ್ಮ ಅನನ್ಯತೆಯನ್ನು ಕಾಪಾಡಿಕೊಳ್ಳವುದು.
- ಬರ ಬಂದು ಬೆಳೆಗಳು ಒಣಗಿದ ಸಂದರ್ಭದಲ್ಲಿ ಯಾವ ದೈವವೂ ಇತ್ತ ಗಮನಹರಿಸದಿದ್ದಾಗ ಜೋಕುಮಾರನು ಶಿವನಿಗೆ ಪರಿಸ್ಥಿತಿ ಮನವರಿಕೆಮಾಡಿ ಮಳೆ ಬರಿಸಿದನೆಂಬ ಅಚಲ ನಂಬಿಕೆ.
- ಜೋಕುಮಾರನು ನೆಲಮೂಲಸಂಸ್ಕೃತಿಯ ಅಸ್ತಿತ್ವವಾಗಿದ್ದು ಅದನ್ನು ಪರಂಪರೆಗೆ ಮುಂದುವರೆಸುವ ಮೂಲಕ ಭವಿಷ್ಯದಲ್ಲಿಯೂ ವೈದಿಕಚಿಂತನೆಗೆ ತಿರುಗೇಟು ನೀಡುತ್ತಾ ತಡೆಯೊಡ್ಡುವುದು.

ಇದಲ್ಲದೆಯೂ ಬೇರೆ ಕಾರಣಗಳು ಇರಲು ಸಾಧ್ಯ. ಜೋಕುಮಾರನ ಹಾಡುಗಳನ್ನು ಮಾನವಶಾಸ್ತ್ರ ಹಾಗೂ ಮನಃಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನಮಾಡುವ ಅಗತ್ಯವಿದೆ. ಸಮೃದ್ಧಿಯ ಸಂಕೇತವಾಗಿ ತನ್ನ ಪುಂಡಾಟಗಳಿಂದ ಜನಪದರ ಮನಸ್ಸಿನಲ್ಲಿರುವ ಜೋಕುಮಾರನು ಈಗ ಇರುವ ಅಲೌಕಿಕ ಕಥೆಗಳಿಂದ ಹೊರತಾಗಿ ತನ್ನನ್ನು ನೋಡುವಂತೆ ಒತ್ತಾಯಿಸುತ್ತಾನೆ.

ಈ ಆಚರಣೆಗಳು ಜನಪದರಲ್ಲಿ ಧಾರ್ಮಿಕ ಭಾವನೆಗಳೊಂದಿಗೆ ಮನರಂಜನೆಯನ್ನು ಕೂಡ ಒದಗಿಸುತ್ತವೆ. ಬೆಳದಿಂಗಳ ರಾತ್ರಿಯಲ್ಲಿ ಆಚರಿಸಲ್ಪಡುವ ಈ ಆಚರಣೆ ಮಕ್ಕಳಲ್ಲಿ ಕುತೂಹಲ ಹುಟ್ಟಿಸುತ್ತದೆ. ಈ ಪೂಜೆಯ ಆಚರಣೆಯಲ್ಲಿ ಪ್ರಾದೇಶಿಕ ಭಿನ್ನತೆಯನ್ನು ಗುರುತಿಸಬಹುದು. ಪೂಜಾವಿಧಾನ, ಆಚರಣೆ, ನಂಬಿಕೆ ಹಾಗೂ ಸಂಪ್ರದಾಯಗಳಲ್ಲಿ ಏಕತೆ ಕಂಡುಬರುವುದಿಲ್ಲ.

**ಸಂಖ್ಯಾ ಟಿಪ್ಪಣಿಗಳು**

೧. ಈಶ್ವರಪ್ಪ. ಎಂ.ಜಿ. ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ. ಪುಟ.೧೫೪

೨. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ್ದು. ವಕ್ತೃ, ದರಗದ ಹಾಲಮ್ಮ. ಸತ್ತೂರು.

೩. ರಾಧಕೃಷ್ಣಭಡ್ತಿ. ಎಸ್. ಮೇಘಮೇದಿನಿ. ಪುಟ,೧೮

೪. ಪುನರುಕ್ತ. ೨೨-೨೩

೫. ಪುನರುಕ್ತ. ಪುಟ,೬೭

೬. ತಿಪ್ಪೇಸ್ವಾಮಿ. ಜಿ.ಆರ್. ಸಂ, ದಕ್ಷಿಣ ಕರ್ನಾಟಕದ ಬೇಸಾಯದ ಹಾಡುಗಳು. ಪುಟ,೨೭

೭. ತಿಪ್ಪೇಸ್ವಾಮಿ. ಜಿ.ಆರ್. ಸಂ, ದಕ್ಷಿಣ ಕರ್ನಾಟಕದ ಬೇಸಾಯದ ಹಾಡುಗಳು. ಪುಟ,೫೮

೮. ವಾಲಿ. ಎಮ್.ಎನ್. ಕೃಷಿ ಜಾನಪದ.ಪುಟ.೨೨

೯. ಉಧೃತ: ಜಾನಪದ ಕಲರವ. ಪುಟ, ೧೦೧

೧೦. ವಾಲಿ. ಎಮ್.ಎನ್. ಕೃಷಿ ಜಾನಪದ. ಪುಟ.೨೩

೧೧. ತಿಪ್ಪೇಸ್ವಾಮಿ. ಜಿ.ಆರ್. ಸಂ, ದಕ್ಷಿಣಕರ್ನಾಟಕದ ಬೇಸಾಯದ ಹಾಡುಗಳು. ಪುಟ,೫೯

೧೨. ಉಧೃತ: ಜಾನಪದ ಕಲರವ. ಪುಟ, ೧೦೧

೧೩. ತಿಪ್ಪೇಸ್ವಾಮಿ. ಜಿ.ಆರ್. ಸಂ, ದಕ್ಷಿಣ ಕರ್ನಾಟಕದ ಬೇಸಾಯದ ಹಾಡುಗಳು. ಪುಟ, ೪೧

೧೪. ಪುನರುಕ್ತ. ಪುಟ, ೩೪

೧೫. ನಾಗೇಗೌಡ, ಎಚ್.ಎಲ್. ಸಂ. ಪದವವೆ ನಮ್ಮ ಎದೆಯಲ್ಲಿ. ಪುಟ, ೪೩೫

೧೬. ಮಲ್ಲಿಕಾರ್ಜುನ ಕಂಬಾರ. ಜಾನಪದ ಲೇಖನಗಳು. ಪುಟ, ೩೯

೧೭. ಪುನರುಕ್ತ. ಪುಟ. ೪೧

೧೮. ರಾಧಕೃಷ್ಣಭಡ್ತಿ. ಎಸ್. ಮೇಘಮೇದಿನಿ.. ಪುಟ, ೬೭

೧೯. ಮೂಲಗಿ. ಬಿ.ಆರ್. ಧಾರವಾಡ ಜಿಲ್ಲೆಯ ಜನಪದ ಸಂಪ್ರದಾಯಗಳು. ಪುಟ,೧೪೧

೨೦. ಪುನರುಕ್ತ. ೧೪೦

೨೧. ಪುನರುಕ್ತ. ೧೩೮-೧೩೯

## ಅಧ್ಯಾಯ. ನಾಲ್ಕು

## ಒಕ್ಕಲುತನ ಮತ್ತು ಮಳೆಯ ಕಥನಗಳು.

ಒಕ್ಕಲುತನವೆಂದರೆ ಬದುಕಲ್ಲದೆ ಬೇರೇನೂ ಅಲ್ಲ. ಒಗೆತನ ಎನ್ನುವ ಪದವೂ ಇದನ್ನೇ ಸೂಚಿಸುತ್ತದೆ. ಭೂಮಿಯು ಸೃಷ್ಟಿಯಾದ ಬಗೆಗಿನ ಜನಪದರ ಸೃಷ್ಟಿಪುರಾಣಗಳು ಅನೇಕ. ಅವುಗಳಲ್ಲಿ ಭೂಮಿಯು ತಾಯಿಯೆಂಬ ಪರಿಕಲ್ಪನೆ ಬಂದದ್ದು ಪ್ರಮುಖವಾದದು. ಭೂಮಿಯ ಕುರಿತಾಗಿ ಅತ್ಯಂತ ಆತ್ಮಿಯತೆಯಿಂದ ಆಕೆಯ ವೈಶಾಲ್ಯತೆಯನ್ನು ನಿಧಿಗೆ ಹೋಲಿಸಿಕೊಂಡು ಹಾಡಿಕೊಳ್ಳಲಾಗುತ್ತಿದೆ.

'ಕೂರಿಗ್ಹಾಕುದ ಮೊದಲು ಬೀರಗಲ್ಲಿಗೆ ಹೋಗಿ
ಸೇರ್ಹಿಡಿ ಬೀಜ ನಿಧಿ ಒಯ್ದು
ಸೇರ್ಹಿಡಿ ಬೀಜ ನಿಧಿ ಒಯ್ದು ಬಿತ್ತಿದರ
ಐಸಿರಿ ನಮ್ಮ ಹೊಲದಾಗೊ'

ಎಂಬುದನ್ನು ಮಾತೃತ್ವದ ನೆಲೆಯಲ್ಲಿಯೇ ನಿರ್ವಚಿಸಿಕೊಂಡಿರುವುದು ಕಂಡುಬರುತ್ತದೆ. ಇಂತಹ ಭೂಮಿಯನ್ನು ಕುರಿತಾದ ಪುರಾಣಗಳು ಭಾರತೀಯ ಪರಂಪರೆಯಲ್ಲಿ ಆದಿಮದ ಸಂಕೇತಗಳಂತೆಯೇ ಗುರುತಿಸಲ್ಪಡುತ್ತವೆ. ಆದಿಬಸವಣ್ಣನ ಕಥೆಯಲ್ಲಿ ಭೂಮಿಯ ಉಗಮದ ಕಥೆ ಹೀಗಿದೆ. ತಾಯಿ ಉರಿಯಾದೇವಿ, ಮಗ ಉರಿಯಾದೇವ ಏಳು ಸಮುದ್ರಗಳ ನಡುವೆ ಭೂಮಿಯ ತುಣುಕನ್ನು ಸೃಷ್ಟಿಸುವಂತೆ ತಾಯಿ ಮಗನಿಗೆ ಹೇಳುತ್ತಾಳೆ. ಅದರಂತೆಯೇ ಮಗ ನಿರ್ಮಿಸುತ್ತಾನೆ. ಬೇಕಾದಷ್ಟು ಹುಲ್ಲು ಬೆಳೆಯುತ್ತದೆ. ಆ ಹುಲ್ಲು ಮೇಯಲು ಬಸವಣ್ಣ ಬೇಕಾದಾಗ ತಾಯಿ ಮತ್ತು ಮಗ ಇಬ್ಬರ ಬೆವರು ಮತ್ತು ಕೊಳೆಯಿಂದ ಬಸವಣ್ಣನನ್ನು ಸೃಷ್ಟಿಸುತ್ತಾರೆ. ಮುಂದೆ ಬಸವಣ್ಣನೇ ತನ್ನ ಗಂಡನಾಗಬೇಕೆಂದು ಭೂಮಿತಾಯಿ ಕೇಳುತ್ತಾಳೆ. ತಾಯಿಯನ್ನು ವರಿಸುವುದು ಹೇಗೆ ಎಂಬ ಅಳುಕಿನಿಂದ ಮಗನು ಒಪ್ಪದಿದ್ದಾಗ ಈ ಬಸವಣ್ಣ ಹೋದ ಕಡೆಗೆಲ್ಲಾ ಭೂಮಿ ವಿಸ್ತರಿಸುತ್ತಾ (ಬೆಳೆಯುತ್ತಾ) ಹೋಗುತ್ತದೆ. ಕಡೆಗೆ ಉರಿಯಾದೇವಿಯ ಆಜ್ಞೆಯಂತೆ ಭೂದೇವಿಯನ್ನು ಬಸವಣ್ಣ ವರಿಸುತ್ತಾನೆ. ಒಕ್ಕಲುತನವನ್ನು ಮುಖ್ಯವಾಗಿಸಿಕೊಂಡ ಈ ಕತೆ ಎತ್ತನ್ನು ದೇವರೆಂದು ನಂಬಿಕೊಂಡ ಜನರಲ್ಲಿ ಹುಟ್ಟಿಕೊಂಡಿರಬಹುದಾದಾ ಕಾಲ್ಪನಿಕ ಕತೆಯಾಗಿದೆ.

ಈ ಜಗತ್ತು ಮೊದಲು ನೀರು ನೀರಾಗಿತ್ತು. ನೀರಿನ ನೀರಿನ ನಡುವೆ ಭೂಮಿ ಹುಟ್ಟಿತು ಎಂಬ ನಂಬಿಕೆ ಇಲ್ಲಿ ವ್ಯಕ್ತವಾಗುತ್ತದೆ. ನೀರು ನೀರಾಗಿದ್ದ ಜಗತ್ತಿನ ಮೇಲೆ ಶಿವನು ದೋಣಿಯಲ್ಲಿ ಸಾಗುವಾಗ

ಸುತ್ತಲೂ ನೀರು ಹೆಪ್ಪುಗಟ್ಟಿ ಭೂಮಿಯಾಯ್ತು ಎಂಬ ಮತ್ತೊಂದು ನಂಬಿಕೆಯು ಇದೆ. ನೀರನಲ್ಲಿದ್ದ ಮಾನವರನ್ನು ಶಿವ ತನ್ನ ದೋಣಿಯಲ್ಲಿ ಹಾಕಿಕೊಂಡು ಹೆಪ್ಪುಗಟ್ಟಿದ ನೆಲದ ಮೇಲೆ ಬಿಟ್ಟನೆಂದು ಇನ್ನೊಂದು ನಂಬಿಕೆ ಕಥಾಸರಿತ್ಸಾಗರದಲ್ಲಿದೆ. ಜನಪ್ರಿಯ ಮಿಥ್‌ವೊಂದರ ಸಾರವು ಹೀಗಿದೆ 'ಬಹುದಿನಗಳ ಹಿಂದೆ ಭೂಮಿ ದ್ರವರೂಪದಲ್ಲಿತ್ತು. ಆಗ ಶಿವನು ತನ್ನ ತೊಡೆಯನ್ನು ಕತ್ತರಿಸಿ ಒಂದು ಹನಿ ರಕ್ತವನ್ನು ನೀರಿನಲ್ಲಿ ಬೀಳಿಸಿದಾಗ ಮೊಟ್ಟೆಯ ಆಕಾರ ಪಡೆದುಕೊಂಡಿತು. ಶಿವನು ಅದನ್ನು ಒಡೆದ. ಅದರಿಂದ ಪುರುಷನೊಬ್ಬ ಹೊರಬಂದ. ಅವನಿಂದ ಪ್ರಪಂಚದ ಸೃಷ್ಟಿಯಾಗಿ ಮಾನವಕೋಟಿ ಬೆಳೆದು ಈ ಪ್ರಂಪಂಚದ ಸೃಷ್ಟಿಯಾಯ್ತು'[೧]. ಪ್ರಸಕ್ತ ಕಥಾನಕದ ಆಶಯದಂತೆ ಭೂಮಿ ಆಕಾಶಗಳ ಸಂಬಂಧದ ಬಗೆಯನ್ನು ಜನಪದರು ನಂಬಿರುವ ರೀತಿ ಅರಿವಾಗುತ್ತದೆ. ರಾಕ್ಷಸರ ಕೊಬ್ಬಿನಿಂದ ಭೂಮಿಯ ಸೃಷ್ಟಿಯಾಯಿತೆಂಬ ವಿವರಗಳು ದೇವಿಭಾಗವತದಲ್ಲಿವೆ. ವಿಷ್ಣುವಿನ ಮನಸ್ಸಿನಿಂದ ಹುಟ್ಟಿದ ಪಂಚಮಹಾಭೂತಗಳು ಸೇರಿ ಮಹಾಪೃಥ್ವಿಯ ಉದಯವಾಯಿತೆಂದೂ ದೇವೀಭಾಗವತದ ನವಮಾಸ್ಕಂದದಲ್ಲಿ ಉಲ್ಲೇಖವಿದೆ. ಆಕಾಶವೇ ಗಂಡ, ಭೂಮಿತಾಯಿಯೇ ಹೆಂಡತಿ ಎಂಬ ಕಲ್ಪನೆ ಜನಪದರಲ್ಲಿ ಪಡಿಮೂಡಿದೆ. ಇದರಿಂದ ಭೂಮಿಯ ಮೇಲಿನ ಜನ ಹುಟ್ಟಿದರು ಆಕಾಶವೇ ತಂದೆ, ಭೂಮಿತಾಯಿಯೇ ತಾಯಿ ಎಂಬ ನಂಬಿಕೆ ಕೂಡ ಹುಟ್ಟಿಕೊಂಡು ಮಾನವಉಗಮವು ಅದದ್ದೇ ಹೀಗೆ ಎಂಬ ನಿಲುವಿಗೆ ಜಪದರು ಬರುತ್ತಾರೆ. ಹೀಗೆ ಪುರಾಣಮೂಲವಾದ ಈ ಸಿದ್ಧಾಂತವು ಭೂಮಿ ತಾಯಿ ನಮ್ಮ ತಾಯಿ ಎಂಬ ನಿಲುವಿಗೆ ತಂದು ನಿಲ್ಲಿಸುತ್ತದೆ.

ಸಂಸ್ಕೃತಿವಿಕಾಸದ ವಿವಿಧ ಹಂತಗಳಲ್ಲಿ ಕೃಷಿಯು ಒಂದು. ಶಿಲಾಯುಗದಲ್ಲಿ ಬೇಟೆಯ ಮೂಲಕ ಆಹಾರವನ್ನು ಪೂರೈಸಿಕೊಳ್ಳುತ್ತಿದ್ದ ಮಾನವರು ಮುಂದೆ ಪಶುಸಾಕಣೆಯನ್ನು ಕೈಗೊಂಡರು. ಪಶುಗಳ ಸಗಣಿ ಭೂಮಿಯ ಮೇಲೆ ಶೇಖರವಾಗತೊಡಗಿದಂತೆ ಭೂಮಿಯ ಫಲವತ್ತತೆಯನ್ನು ಕಂಡುಕೊಂಡು ಕೃಷಿ ಪದ್ಧತಿಯನ್ನು ಪ್ರಾರಂಭಿಸಿದರು. ಇದರ ಫಲವಾಗಿ ಅವರಿಗೆ ಕೃಷಿಗೆ ಸಂಬಂಧಿಸಿದ ಸಕಲವು ದೈವ ಸ್ವರೂಪವಾಗಿ ಕಂಡಿತು. ಅವನ್ನು ಆರಾಧಿಸುವುದರ ಮೂಲಕ ಮೊದಲಗೊಂಡು ಸ್ತುತಿಸುವ ಮಾತುಗಳು ರೂಪುಗೊಂಡಿರಬೇಕು ಅಂಥ ಮಾತುಗಳಿಗೆ ನಾದ, ಲಯದ ಚೌಕಟ್ಟು ದೊರೆತಾಗ ಅವು ಕೃಷಿ ಸಾಹಿತ್ಯ ಅರ್ಥಾತ್ ಕೃಷಿಗೆ ಸಂಬಂಧಿಸಿದ ಜನಪದ ಗೀತೆ, ಲಾವಣಿ ಒಗಟು, ಐತಿಹ್ಯಗಳು ಬೆಳೆದುಬಂದಂತೆ ಕಂಡುಬರುತ್ತದೆ. ಇವೆಲ್ಲ ಮಾನವನ ಬದುಕಿನ ಭಾಗಗಳೇ ಆಗಿವೆ. ಹಾಗಾಗಿ ಕೃಷಿಯ ಅಧ್ಯಯನವು ಸಂಸ್ಕೃತಿ ಅಧ್ಯಯನವೇ ಆಗಿದೆ.

ಪಶುಸಾಕಾಣೆಯನ್ನು ಕೈಗೂಂಡು ಒಂದೆಡೆ ವಾಸ್ತವ್ಯ ಹೂಡಿದ ಮನುಷ್ಯ ನೆಲದೊಡಲಿನಿಂದ ಉತ್ಪನ್ನಗಳನ್ನು ಪಡೆಯುವ ಚಿಂತನೆಯಲ್ಲಿ ತೊಡಗುವ ಮೂಲಕ ಮುನಿಯಂತೆ ಶೋಧಕನಾಗಿ

ಗೋಚರವಾದ ಅಂದರೆ ನೆಲವನ್ನು ಯಾವಾಗ ಉಳುಮೆ ಮಾಡಬೇಕು ಅದಕ್ಕೆ ಯಾವಾಗ ಬೀಜ ಬಿತ್ತಬೇಕು ಅಥಾವ ನಾಟಿಮಾಡಬೇಕು ಎಂಬುದನ್ನು ಆಲೋಚಿಸಿದಾಗ ಅಲ್ಲದೆ ಕೃಷಿಗೆ ಬೇಕಾದ ಸಾಮಗ್ರಿಗಳನ್ನು, ಅವನ್ನು ಸಿದ್ಧಪಡಿಸಿಕೊಳ್ಳಬೇಕಾದ ಸಂದರ್ಭ, ಬೆಳೆಯಕಟಾವು, ಕಣಮಾಡುವಿಕೆ ದವಸ ಧಾನ್ಯಗಳಸಂಗ್ರಹ ಮೇವುಸಂಗ್ರಹಣೆ ಇತ್ಯಾದಿಗಳ ಬಗೆಗೆ ಸದಾ ಚಿಂತಿಸುತ್ತ ನಿರಂತರ ಪ್ರಯೋಗಶೀಲನಾದದ್ದು ಗಮನಾರ್ಹ ಸಂಗತಿ. ಆದ್ದರಿಂದಲೇ ಕೃಷಿ ಮತ್ತು ಕೃಷಿಯನ್ನು ಅವಲಂಬಿಸಿರುವುದರ ಬಗೆಗೆ ತಿಳಿಯಬೇಕಾದದ್ದು ತೀರಾ ಅನಿವಾರ್ಯ.

ವೇದಪುರಾಣಗಳಲ್ಲಿ ಮಳೆ ಮತ್ತು ಅದಕ್ಕೆ ಸಂಬಂಧಿಸಿದ ಪ್ರಕ್ರಿಯೆಗಳ ಸುಂದರ ಕಲ್ಪನೆಯನ್ನಷ್ಟೇ ಕಾಣುತ್ತೇವೆ. ಆದರೆ ಜಾನಪದದಲ್ಲಿ ಮಾನವಜೀವನದೊಂದಿಗೆ ಮಳೆಯ ಅವಿನಾಭಾವ ಸಂಬಂಧದ ಒಂದು ಸ್ಪಷ್ಟಚಿತ್ರ ದೊರೆಯುತ್ತದೆ. ಕೃಷಿಯೇ ಮುಖ್ಯ ಜೀವನಾಧಾರವಾ ಹಾಗೂ ಕೃಷಿಗಾಗಿ ಮಳೆಯನ್ನೇ ಅವಲಂಬಿಸಿರುವ ಭಾರತದಂತಹ ದೇಶದಲ್ಲಿ ಜನಪದರು ಪ್ರಾಕೃತಿಕ ಶಕ್ತಿಗಳ ಪೈಕಿ ಮಳೆಗೆ ಹೆಚ್ಚಿನ ಮಹತ್ವ ನೀಡಿದ್ದಾರೆ. ತಮ್ಮ ಬದುಕಿನ ಸರ್ವತೋಮುಖ ಸಂಘರ್ಷಗ'ಳಿಗೂ ಕಾರಣವಾದ ಮಳೆಯನ್ನು ಕುರಿತು ಅಪಾರವಾದ ಜಾನಪದ ಈ ಜನರಲ್ಲಿ ರೂಢಿಯಲ್ಲಿರುವುದು ಆಶ್ಚರ್ಯವೇನಲ್ಲ. ಭಾರತವೊಂದೇ ಅಲ್ಲ. ಆಫ್ರಿಕಾದ ಬುಡಕಟ್ಟು ಜನಾಂಗಗಳಲ್ಲಿ, ಪ್ಯೂಬ್ಲೊ ಇಂಡಿಯನ್, ಹೋಪಿ, ಜಿಕಾರಿತಾ ಅಪಾಟೆ, ಹೀಬ್ರೂ, ಕೆಲಿಕ್, ಯೂಚಿ, ಶನಿ, ಚಾಕೋ ಇಂಡಿಯನ್ ಮೊದಲಾದ ಜನಸಮುದಾಯಗಳಲ್ಲಿ ಮಳೆ ಮತ್ತು ಅದಕ್ಕೆ ಸಂಬಂಧಿಸಿದ ವಿದ್ಯಮಾನಗಳ ಬಗ್ಗೆ ವೈವಿದ್ಯಮಯ ಜಾನಪದ ಪ್ರಚಲಿತವಿದೆ.

ಜಗತ್ತಿನ ಪುರಾತನಸಂಸ್ಕೃತಿಗಳು ಕೃಷಿಪ್ರಧಾನವಾಗಿದ್ದುದರಿಂದ ನದಿ, ಮಳೆ ಮತ್ತು ಅಂತರ್ಜಲಗಳು ಅತ್ಯಂತ ಅವಶ್ಯಕವಾಗಿದ್ದವು. ನೀರು ಕೇವಲ ಪ್ರಾಕೃತಿಕ ಪದಾರ್ಥ ಮಾತ್ರವೇ ಆಗಿರದೆ, ಜನರ ಧಾರ್ಮಿಕ ವಿಧಿಗಳಲ್ಲಿ, ಪವಿತ್ರವಸ್ತುವಾಗಿ ಹುಟ್ಟುಸಾವುಗಳ ಸೂತಕ ಶುದ್ಧೀಕರಣ ಗೊಳಿಸುವ ಸಾಧನವಾಗಿ, ಸ್ವತಃ ದೇವತೆಯಾಗಿ, ಫಲವಂತಿಕೆಯನ್ನು ರೇಚನಗೊಳಿಸುವ ಪ್ರಚೋದಕವಾಗಿ, ರೋಗನಿರೋಧಕವಾಗಿ, ಮಾಂತ್ರಿಕ ಆಚರಣೆಯಲ್ಲಿ ಬಹುಮುಖ್ಯಶಕ್ತಿಯಾಗಿ ಕಾಣಿಸಿಕೊಂಡಿದೆ. ಬೆಂಕಿಯ ಅನ್ವೇಷಣೆಯಿಂದ ನಾಗರೀಕತೆಗಳು ಅಭಿವೃದ್ಧಿಗೊಂಡಿರಬಹುದಾದರೂ, ನೀರು ನಾಗರೀಕತೆ ಮತ್ತು ಸಂಸ್ಕೃತಿಗಳೆರಡರ ಬೆಳವಣಿಗೆಗೂ ಕಾರಣವಾಗಿರುವುದನ್ನು ಗುರುತಿಸಬಹುದು. ಪುರಾತನಕಾಲದಿಂದಲೂ ಮನುಷ್ಯನ ಆಂತರಿಕ ಮತ್ತು ಬಾಹ್ಯ ಅವಶ್ಯಕತೆಯಾಗಿ ಸಂಸ್ಕೃತಿಗಳ ಅನನ್ಯತೆಗೆ ಕಾರಣ ಸಾಮಗ್ರಿಯಾಗಿ ನೀರು ಬೆಳೆದು ಬಂದಿದೆ. ಮಾನವಜೀವನದ ಮೇಲೆ ಅದ್ಭುತ ಪ್ರಭಾವ ಬೀರುವ ಪ್ರಾಕೃತಿಕಶಕ್ತಿಗಳ ಪೈಕಿ ಮಳೆಯಸ್ಥಾನ ಬಹುಮುಖ್ಯವಾದುದು.

ಸಕಲಜೀವಿಗಳಿಗೂ ಜೀವನಾಧಾರವಾದ ಹಾಗೂ ಜೀವಪೋಷಕವಾದ ಮಳೆಯನ್ನು ಜಗತ್ತಿನ ಎಲ್ಲೆಡೆಯೂ ವರದಾಯಕ ಎಂದು ಭಾವಿಸಲಾಗಿದೆ. ಅದಕ್ಕೆ ದೈವತ್ವವನ್ನು ಆರೋಪಿಸಿ ಪೂಜಿಸಲಾಗುತ್ತದೆ. ಬಂಜರುಭೂಮಿಗಳಲ್ಲಿ ದೀರ್ಘ ಬರಗಾಲಕ್ಕೆ ತುತ್ತಾದ ಪ್ರದೇಶಗಳಲ್ಲಿ ಮಳೆಗೆ ಸಂಕೀರ್ಣವಾದ ಅನೇಕ ಮಾಂತ್ರಿಕ ಧಾರ್ಮಿಕಆಚರಣೆಗಳ ಸಂಬಂಧ ಕಲ್ಪಿಸಲಾಗಿದೆ. ಬೇಟೆಯನ್ನೇ ಜೀವನಮಾರ್ಗವಾಗಿ ಅವಲಂಬಿಸಿದ ಆದಿಮಾನವನ ಹಂತದಿಂದ ನೀರಿನ ಆಶ್ರಯದಲ್ಲಿ ಕೃಷಿಮಾಡುವ ಹಂತವನ್ನು ಮಾನವ ತಲುಪಿದ ಮೇಲೆ ಮಳೆಯಸ್ಥಾನ ಅವನ ಜೀವನದಲ್ಲಿ ಇನ್ನಷ್ಟು ಭದ್ರವಾಗಿ ನೆಲೆಯೂರಿದೆ ಎಂಬುದು ಗಮನಾರ್ಹ.

'ವ್ಯವಸಾಯದ ಉಗಮವನ್ನು ಕುರಿತಂತೆ ಮತ್ತು ವ್ಯವಸಾಯದ ಬೆಳವಣಿಗೆಗೆ ಸಂಬಂಧಿಸಿದಂತೆ ಪ್ರಪಂಚದಾದ್ಯಂತ ಪುರಾಣಗಳು ಗಮನಾರ್ಹವಾದ ಉಲ್ಲೇಖಗಳನ್ನು ನೀಡುತ್ತಾನೆ. ಮಾನವ ಬೆಳವಣಿಗೆಯ ಇತಿಹಾಸದಲ್ಲಿ ಅವನ ಜೀವನೋಪಾಯಕ್ಕೆ ಏನೇನು ಸುಲಭ ಸಾಧನ, ಸಲಕರಣೆಗಳನ್ನು ಪಡೆದುಕೊಳ್ಳಲಾಗಿಯೋ ಆ ಕಾಲದ ಸಲಕರಣೆಯನ್ನು ಒದಗಿಸಿದ ವ್ಯಕ್ತಿಯನ್ನು ದೇವತೆಯನ್ನಾಗಿ ಮೂರ್ತೀಕರಿಸಲಾಗಿದೆ. ಇಲ್ಲವೇ ದೇವರೇ ಅವನ ರೂಪದಲ್ಲಿ ಬಂದ ಈ ಅನುಕೂಲಮಾಡಿ ಕೊಟ್ಟಿದ್ದಾನೆಂದು ನಂಬಲಾಗಿದೆ. ಸಸ್ಯಶಕ್ತಿಯನ್ನು ಉಳಿಸಿಕೊಳ್ಳಲು, ಬೆಳೆಗಳ ಆತ್ಮವನ್ನು ಕಾಪಾಡಲು, ಮಳೆಯು ಕಾಲಕಾಲಕ್ಕೆ ಬರುವಂತೆ ಮಾಡಲು, ಸಸ್ಯಗಳಿಗೆ ತಗುಲುವ ರೋಗರುಜಿನಗಳನ್ನು ನಿವಾರಣೆ ಮಾಡಲು ಅನೇಕ ಕಡೆಗೆ ಅನೇಕ ದೇವತೆಗಳ ಪೂಜೆಮಾಡುವ ವಿಶೇಷ ಆಚರಣೆಗಳಲ್ಲಿ ಜನರು ತೊಡಗಿದ್ದಾರೆ'[೨]. ಈ ಸಂಬಂಧಿಯಾದ ಆಚರಣೆಗಳನ್ನು ಫ್ರೇಜರ ಅವರು ತಮ್ಮ ಉದ್ಗ್ರಂಥವಾದ 'ಗೋಲ್ಡನ್‌ಬೋ'ದಲ್ಲಿ ಸಂಗ್ರಹಿಸಿ ವಿವರವಾಗಿ ಚರ್ಚಿಸಿದ್ದಾರೆ. ಸಿರಿಯಾ ಮತ್ತು ಬ್ಯಾಬಿಲೋನಿಯಾಗಳಲ್ಲಿ ಪೂಜಿತವಾಗುತ್ತಿದ್ದ ದೇವತೆ 'ಎಡೊನಿಸ್' ಫ್ರಿಜೆಯಾಕ್ಕೆ 'ಅಯ್‌ಟನ್' ಹಾಗೂ ಈಜಿಪ್ಟ್‌ಗೆ 'ಓಸಿರಿಸ್' ಗ್ರೀಕ್ ಪುರಾಣಗಳಲ್ಲಿ 'ಡ್ಯೊನಿಸಿಸ್' 'ಡೆಮಟರ' ಮತ್ತು 'ಪರ್ಸೆಪೋನ್' ದೇವತೆಗಳು ಪೂಜಿತವಾಗುತ್ತವೆ. ಇವುಗಳಲ್ಲಿ 'ಡೆಮೆಟರ್' ಮತ್ತು 'ಪರ್ಸೆಪೋನ್' ದೇವತೆಗಳು ಸ್ತ್ರೀದೇವತೆಗಳಾಗಿದ್ದು ಧಾನ್ಯಮಾತೃ ಹಾಗೂ ಧಾನ್ಯಕನ್ಯೆ ಎಂದೂ ಪೂಜಿತವಾಗುತ್ತವೆ. ಇವುಗಳಲ್ಲಿ ಈಜಿಫ್ಟ್‌ನ 'ಒಸಿರಿಸ್'ನ ಕತೆಯಂತೂ ಅಪ್ಪಟ ವ್ಯವಸಾಯ ಸಂಶೋಧಕನ ಮತ್ತು ಪ್ರಚಾರಕನ ಕತೆಯಂತಿದೆ. ಒಸಿರಿಸ್ ಆಕಾಶ ಮತ್ತು ಭೂಮಿಯ ಮಗ (ಆಕಾಶದಿಂದ ಬೀಳುವ ಮಳೆಯಿಂದಾಗಿ ಭೂಮಿಯಲ್ಲಿ ಬೆಳೆ ಬರುವುದರಿಂದಾಗಿ ಒಸಿರಿಸ್‌ನನ್ನು ಧಾನ್ಯದೇವತೆಯೆಂದು ಕಲ್ಪಿಸಿರಲಿಕ್ಕೂ ಸಾಕು ಎಂದು ಫ್ರೇಜರ ಹೇಳುತ್ತಾರೆ. ಭೂಮಿಯಲ್ಲಿ ಬೆಳೆ ಬರುವಂತೆ ಮಾಡಿದುದರಿಂದ ಅವನನ್ನು ಆಕಾಶ ಮತ್ತು ಭೂಮಿಯ ಮಗ ಎಂದು ಕರೆದಿರಲಿಕ್ಕೂ ಸಾಕು.) ತನ್ನ ಆಡಳಿತ ಕಾಲದಲ್ಲಿ ಒಸಿರಿಸ್ ಅನಾಗರಿಕರಾಗಿದ್ದ ಈಜಿಪ್ಟ್‌ನ ಜನತೆಗೆ ನಿಯಮಗಳನ್ನು ವಿಧಿಸಿ, ಪೂಜಾಕ್ರಮವನ್ನು ತಿಳಿಸಿದನು. ಮೊದಲಿಗೆ ನರಭಕ್ಷಕರಾಗಿದ್ದ ಈ ಜನತೆಗೆ ಗೋಧಿ ಮತ್ತು

ಬಾರ್ಲಿ ಧಾನ್ಯಗಳನ್ನು ಕಂಡುಹಿಡಿದು ಅವುಗಳನ್ನು ಭೂಮಿಯಲ್ಲಿ ಬೆಳೆಯುವ ವ್ಯವಸಾಯ ವಿಧಾನಗಳನ್ನು, ವೈನ್ ತಯಾರುಮಾಡುವುದನ್ನು ಹೇಳಿಕೊಟ್ಟು ಅವರನ್ನು ಸುಸಂಸ್ಕೃತರನ್ನಾಗಿ ಮಾಡಿದನು. ತಾನು ಕಂಡುಹಿಡಿದ ವ್ಯವಸಾಯ ಕ್ರಮವನ್ನು ಇತರೆ ದೇಶಗಳ ಜನರಿಗೆ ತಿಳಿಸಿ ಉಪಕಾರ ಮಾಡುವ ದೃಷ್ಟಿಯಿಂದ, ಒಸಿರಿಸ್ ಈಜಿಪ್ಟ್‌ನ ರಾಜ್ಯವನ್ನು ತನ್ನ ಹೆಂಡತಿಗೆ ಒಪ್ಪಿಸಿ ಪ್ರಪಂಚದ ಬಹುಪಾಲು ದೇಶಗಳನ್ನು ಸುತ್ತಿದನು. ತನ್ನ ಪ್ರವಾಸವನ್ನು ಮುಗಿಸಿ ಬಂದ ಒಸಿರಿಸ್ಸನನ್ನು ಈಜಿಪ್ಟಿನ ಜನತೆ, ದೇವತೆಯೆಂದು ಭಾವಿಸಿ ಪೂಜಿಸತೊಡಗಿದರು. ಅನಾಗರಿಕರನ್ನು ನಾಗರಿಕರನ್ನಾಗಿ ಮಾಡಿದ, ನರಭಕ್ಷಣೆಯನ್ನು ತಪ್ಪಿಸಿದ ಜನರಿಗೆ ಜೀವನವಿಧಾನವನ್ನು ಹೇಳಿಕೊಟ್ಟ ಸಸ್ಯಗಳ ಬೆಳೆಯನ್ನು ಕಂಡುಹಿಡಿದು ಅದನ್ನು ಪ್ರಪಂಚಕ್ಕೆ ಪ್ರಚಾರಮಾಡಿದ ಯಶಸ್ಸು ಒಸಿರಿಸ್ಸನಿಗೆ ಸಲ್ಲುತ್ತದೆ.

ಪುರಾಣ ಪ್ರಾಚೀನಮಾನವನ ಇತಿಹಾಸವೆನ್ನುತ್ತಾರೆ. ಈ ಮಾತು ಭಾರತೀಯ ಪರಿಸರದಲ್ಲಂತೂ ಬಹಳ ನಿಜ. ಏಕೆಂದರೆ ಅನೇಕ ಐತಿಹಾಸಿಕ ಘಟನೆಗಳು ಪೌರಾಣಿಕಕತೆಗಳಲ್ಲಿ ಸುರಕ್ಷಿತವಾಗಿವೆ ಮತ್ತು ಅಂತಹ ಕತೆಗಳನ್ನು ಭಾರತೀಯ ಮನಸ್ಸು ಸೃಷ್ಟಿಸುವುದರಲ್ಲಿ ಅಗ್ರಗಣ್ಯವೂ ಹೌದು. ವೇದ ಮತ್ತು ಪುರಾಣಗಳಲ್ಲಿ ನಮಗೆ ಪ್ರಧಾನವಾಗಿ ಕಂಡುಬರುವುದು ಅನೇಕ ದೇವತೆಗಳ ಉಪಾಸನೆ. ಅದರಲ್ಲಿಯೂ ಇಂದ್ರ, ವಾಯು, ಪರ್ಜನ್ಯ, ಪೃಥ್ವಿ, ಅಗ್ನಿ, ಸೋಮ ಮುಂತಾದ ಪ್ರಕೃತಿಯ ಶಕ್ತಿಗಳ ಉಪಾಸನೆ. 'ಈ ಪ್ರಕೃತಿ ಉಪಾಸನೆ, ಸಿಂಧುಸಂಸ್ಕೃತಿಯಿಂದ ಪ್ರಭಾವಿತರಾಗಿ ಅರ್ಯರು ವೇದಗಳಲ್ಲಿ ಸೇರಿಸಿದ ಪ್ರಧಾನ ಅಂಶವೆನ್ನಬಹುದು. ವೇದಗಳಲ್ಲಿ ಕಾಣುವ ದೇವತೆಗಳು ಸಾಮಾನ್ಯವಾಗಿ 'ಮಾನವ ವೇಷಧಾರಿಗಳಾದ ಪ್ರಕೃತಿಶಕ್ತಿಗಳು'ಎಂದು ಹೇಳಬಹುದು. ಅಲ್ಲದೆ ಹೊಲ, ಮನೆ, ನೇಗಿಲು ಮೊದಲಾದ ಔದ್ಯೋಗಿಕ ಪರಿಕರಗಳಿಗೆ ಅಧಿಪತಿಗಳಾದ ಪ್ರಾದೇಶಿಕ ದೇವತೆಗಳೂ ವೇದಗಳಲ್ಲಿವೆ'[೩]

ಭಾರತೀಯ ಸಂಪ್ರದಾಯದಲ್ಲಿ 'ಪೃಥುವೈನ್ಯ'ನನ್ನು ಕೃಷಿಯ ಮೂಲಪುರುಷ ಎಂದು ಆರಾಧಿಸಲಾಗುತ್ತದೆ. ಅಥರ್ವಣವೇದ (೮, ೧೩-೯-೧೨, ಕ್ರಿ.ಪೂ. ೧೫೦೦-೫೦೦)ಮತ್ತು ವಿಷ್ಣುಪುರಾಣ (ಪುಸ್ತಕ ೧,ಅಧ್ಯಾಯ ೧೩, ಕ್ರಿ.ಸ.ಸು.೫೦೦) ಗಳಲ್ಲಿ ಪೃಥುವೈನ್ಯನ ಪೌರಾಣಿಕಕಥೆಯನ್ನು ವಿವರಿಸಲಾಗಿದೆ. ಈ ಪುರಾಣೋಕ್ತ ರಾಜನನ್ನು ಕುರಿತಂತೆ ಕನ್ನಡ ವಿಶ್ವಕೋಶ ಸಂಕ್ಷಿಪ್ತವಾದ ವಿವರಣೆಯನ್ನು ನೀಡುತ್ತದೆ. ಅದರ ಪ್ರಕಾರ ಪೃಥುವೈನ್ಯನು ಚಾಕ್ಷುಷ ಮನ್ವಂತರದಲ್ಲಿದ್ದ ವೇನರಾಜನ ಮಗ. ವೇನನು ನಾಸ್ತಿಕನಾಗಿದ್ದುದರಿಂದ ಭೂಮಿಯಲ್ಲಿ ಬೆಳೆಯಾಗದೆ ಬಿತ್ತಿದ ಬೀಜಗಳನ್ನೆಲ್ಲ ಭೂಮಿಯೇ ನುಂಗಿತು. ಆಗ ಪ್ರಜೆಗಳು ವೇನನ ಶರೀರವನ್ನು ಮಥಿಸಿ ಪೃಥುವನ್ನು ಸೃಷ್ಟಿಸಿದರು. ಪೃಥವು ಭೂಮಿಯು ನುಂಗಿದ್ದ ವಸ್ತುಗಳನ್ನೆಲ್ಲ ಜನರಿಗೆ ಕೊಡಿಸಿ ಪ್ರಜೆಗಳ ಸುಖಕ್ಕೆ ಕಾರಣನಾದ. ಅಂದಿನಿಂದ ಭೂಮಿಗೆ ಪೃಥಿವೀ ಎಂಬ ಹೆಸರು ಬಂತು. ಇಲ್ಲಿ ಮೂಲಕಥೆಯನ್ನು ಬಹಳಷ್ಟು ಸ್ರಸ್ವಗೊಳಿಸಲಾಗಿದ್ದು 'ಪೃಥು' ವಿನಿಂದ 'ಪೃಥಿವಿ' ಎಂಬ ಹೆಸರು ಬಂದುದನ್ನು ಒತ್ತಿಹೇಳಲಾಗಿದೆ. ಈ

ಕುರಿತ ವಿವರವು ವೇದಪುರಾಣಗಳಲ್ಲಿ ಸ್ಪಷ್ಟವಾಗಿದೆ. ಎಂ.ಜಿ. ಈಶ್ವರಪ್ಪನವರ ಸಂಶೋಧನಾ ಪ್ರಬಂಧವು ಈ ಕುರಿತು ಸಾಕಷ್ಟು ವಿವರಗಳನ್ನು ನೀಡುತ್ತದೆ. ಇಲ್ಲಿ ಈ ವಿಷಯವು ಔಚಿತ್ಯವಲ್ಲದ ಕಾರಣ ಉಚಿತ ಅಂಶಗಳನ್ನಷ್ಟೇ ಬಳಸಿಕೊಳ್ಳಲಾಗಿದೆ.

ಪೌರಾಣಿಕ ವಿಶ್ವಕೋಶದಲ್ಲಿ ಆತನ ಕಥೆಯ ದೀರ್ಘ ವಿವರಣೆ ಇದೆ. ಅವನ ಹುಟ್ಟು, ಶಕ್ತಿಶಾಲಿ ಸಂಪನ್ನತೆ, ಪ್ರಜೆಗಳ ಮೇಲೆ ಕರುಣೆ, ಭೂಮಿಯ ಸಸ್ಯಸಂಪತ್ತಿನ ಅನಾವರಣ, ವ್ಯವಸಾಯದ ತಿಳುವಳಿಕೆ, ಜೀವನ ವಿಧಾನದ ಮಾರ್ಗದರ್ಶನ ಮೊದಲಾದವುಗಳು ಅಲ್ಲಿ ಉಲ್ಲೇಖವಾಗಿವೆ. ಕತೆಯ ತಿರುಳು ಹೀಗಿದೆ. 'ವೇನರಾಜನು ನಾಸ್ತಿಕನಾಗಿದ್ದುದರಿಂದ ಯಜ್ಞಯಾಗಾದಿಗಳನ್ನು ಬಹಿಷ್ಕರಿಸಿದ. ಬಹಿಷ್ಕರಿಸಬಾರದು ಎಂದು ಋಷಿಗಳು ಎಷ್ಟು ಬೇಡಿಕೊಂಡರೂ ಅವನು ಕೇಳಲಿಲ್ಲ. ಕೇಳದಿದ್ದಾಗ ಅವನನ್ನು ಋಷಿಗಳು ಕುಶದಿಂದ ಕೊಂದರು. ಅವನಿಗೆ ಮಕ್ಕಳಿರಲಿಲ್ಲ. ರಾಜನಿಲ್ಲದ ಸಿಂಹಾಸನವಾಯಿತು. ರಾಜನಿಲ್ಲದಾಗ ಹಾಹಾಕಾರದಿಂದ ಭೂಮಿಯ ತುಂಬ ಧೂಳು ಎದ್ದಿತು. ಆಗ ಋಷಿಗಳು ವಿಚಾರಮಾಡಿ ತೊಡೆಗಳನ್ನು ಮಥಿಸಿದಾಗಿ ಅವನ ಕ್ರೂರತೆಯ ಸಂಕೇತವಾಗಿ ನಿಸೀದ ಹುಟ್ಟಿದ. ಅವನೇ ನಿಷಾದನಾದ ಅನಂತರ ವೇನನ ಬಲತೋಳನ್ನು ಮಥಿಸಿದರು. ಆಗ ಶಕ್ತಿಶಾಲಿಯಾದ ಉತ್ತಮಸ್ಥನಾದ ಪೃಥು ಹುಟ್ಟಿದ. ಅವನು ಅಂದರೆ ಪೃಥು ಹೋದರೆ ಸಮುದ್ರ ನಿಂತು ಗೌರವತೋರಿತು. ಗುಡ್ಡಬೆಟ್ಟಗಳು ದಾರಿ ನೀಡಿದವು. ತನ್ನ ಒಳ್ಳೆಯ ಗುಣಗಳಿಂದ, ಪ್ರೀತಿ ಪ್ರೇಮಗಳಿಂದ ಪ್ರಜೆಗಳಿಗೆ ಪ್ರಿಯನಾದ. ಬಂಜರಾಗಿ ಉತ್ಪನ್ನಗಳನ್ನೆಲ್ಲ ನಿಲ್ಲಿಸಿದ್ದ ಪೃಥ್ವಿಯನ್ನು ಬೆನ್ನತ್ತಿ ಅವಳನ್ನು ಹಸುಮಾಡಿ, ಸ್ವಯಂಭು ಮನುವನ್ನು ಕರುಮಾಡಿ ಹಾಲು ಕುಡಿಸಿದ. ಭೂಮಿಯ ಎಲ್ಲ ಸಸ್ಯಗಳು ಪುನಃ ಬರುವಂತೆ ಮಾಡಿದ. ವೇನನ ಸಾವು ಮತ್ತು ಪೃಥುವಿನ ಜನನ ಹಾಗೂ ರಾಜ್ಯಾಧಿಕಾರದ ಅವಧಿಯಲ್ಲಿ ಭೂಮಿಯು ತನ್ನೆಲ್ಲ ಸಸ್ಯಸಂಪತ್ತನ್ನು ಹೊಟ್ಟೆಯೊಳಗೆ ಅಡಗಿಸಿಕೊಂಡಿದ್ದಳು. ಮನು ಹಾಲು ಕುಡಿಯುತ್ತಿದ್ದಂತೆ ಸಸ್ಯಸಂಪತ್ತೆಲ್ಲ ಪುನಃ ಜೀವ ತಾಳಿತು.

ಭೂಮಿಯ ಮೇಲೆ ಚೆದುರಿ ಹೋಗಿದ್ದ ಬೆಟ್ಟಗುಡ್ಡ ಪರ್ವತಗಳನ್ನೆಲ್ಲ ತನ್ನ ಬಿಲ್ಲಿನ ಕೊನೆಯ ಭಾಗದಿಂದ ಎಳೆದು ಒಂದು ಕ್ರಮಕ್ಕೆ ತಂದ. ಭೂಪ್ರದೇಶ ಸಮಪಾತಳಿಯಲ್ಲಿರಲಿಲ್ಲ, ಹಳ್ಳಿ ಪಟ್ಟಣಗಳೆಂಬ ವಿಭಾಗಗಳಿರಲಿಲ್ಲ, ಭತ್ತ ಗೋದಿ ಮುಂತಾದ ದವಸ ಧಾನ್ಯಗಳಿರಲಿಲ್ಲ, ಪಶುಪಾಲನೆಯಿರಲಿಲ್ಲ, ವ್ಯಾಪಾರ ವಹಿವಾಟು ಗೊತ್ತಿರಲಿಲ್ಲ. ಪೃಥುವು ತಾನು ರಾಜ್ಯಾಧಿಕಾರಕ್ಕೆ ಬರುತ್ತಿದ್ದಂತೆಯೇ ಇವೆಲ್ಲವನ್ನು ಪ್ರಜೆಗಳಿಗೆ ವ್ಯವಸ್ಥೆಮಾಡಿಕೊಟ್ಟ, ದೊರಕಿಸಿಕೊಟ್ಟ, ಕಲಿಸಿಕೊಟ್ಟ, ತಿಳುವಳಿದೆ ನೀಡಿದ'[೪]. ಈ ಕಥೆಯನ್ನು ಓದುತ್ತಿದ್ದರೆ ಅನಾಗರಿಕತೆಯಿಂದ ನಾಗರಿಕತೆಯವರೆಗೆ ನಡೆದು ಬಂದ ಮಾನವನವಿಕಾಸದ ಇತಿಹಾಸವನ್ನು ಸಾಂಕೇತಿಕರೂಪದ ಕತೆಯಲ್ಲಿ ಹೇಳುತ್ತಿದೆಯೇನೋ ಅನ್ನಿಸುತ್ತದೆ. ಈ ಪುರಾಣಕತೆ ಪ್ರಾಚೀನ ಮಾನವನ ಇತಿಹಾಸಕ್ಕೆ ಸುರಕ್ಷಕ ಅನುಲೇಪನವಾಗಿ ಕೆಲಸ

ಮಾಡಿದೆ. ಪ್ರಾಯಶಃ ವೇನನಕಾಲ ಪ್ರಾಗೈತಿಹಾಸಿಕಕಾಲ. ಅವನಿಗೆ ದೇವರು, ಪೂಜೆ, ಭಯ ಭಕ್ತಿ ಎಂಬುದು ಗೊತ್ತಿರಲಿಲ್ಲ. ಅದುದರಿಂದ ಭಾರತೀಯ ಮನಸ್ಸು ಅವನನ್ನು ನಾಸ್ತಿಕ ಎಂದು ಕರೆಯಿತು. ಅವನಿಗೆ ಹುಟ್ಟಿದ ಮೊದಲಮಗ ಸುಟ್ಟ ಕಂಬದಂತೆ ಕಪ್ಪಗಿದ್ದ, ಗುಡ್ಡ ಗಾಡುಗಳಲ್ಲಿ ವಾಸಮಾಡುವ ಅನಕ್ಷರಸ್ಥನಾಗಿದ್ದ. ಅಂದರೆ ಅವನಿಗೇನೂ ಗೊತ್ತಿರಲಿಲ್ಲ. ಅವನಿಂದ ಬೇರೆಯವರಿಗೆ ಏನೂ ಉಪಯೋಗವಿಲ್ಲ. ರಾಜ್ಯವನ್ನು ಆಳುವ ಮಾತಂತೂ ದೂರವೇ ಉಳಿಯಿತು. ಇವನು ಅನಾಗರಿಕಯುಗವನ್ನು ಪ್ರತಿನಿಧಿಸುತ್ತಾನೆ. ಆನಂತರ ಹುಟ್ಟಿದವನು ಪೃಥು, ಬುದ್ಧಿವಂತ ಚಾಣಾಕ್ಷ, ಅವನು ಪ್ರಕೃತಿಯನ್ನು ಹತೋಟಗೆ ತರಬಲ್ಲ ಶಕ್ತಿವಂತನಾಗಿದ್ದ. ಹಾಗಾಗಿ ಸಮುದ್ರಗಳು ಬೆಟ್ಟಗಳು ಅವನಿಗೆ ದಾರಿ ತೆರೆದವು. ಭೂಮಿಯಲ್ಲಿದ್ದ ತಿನ್ನಬಲ್ಲ ಸಸ್ಯಗಳನ್ನು ಹುಡುಕಿ ತೆಗೆದ. ಹುಡುಕುವ ಕ್ರಿಯೆಗೆ ಪೃಥಿವಿ ಹಸುವಾದಳು, ಮನು ಕರುವಾದ. ಇದು ಪಶುಪಾಲನೆಯ ಸಂಕೇತ. ಪಶುಗಳು ತಿನ್ನುವ ಬೆಳೆಗಳನ್ನು ಸಸ್ಯಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದ. ಭತ್ತ ಮತ್ತು ಗೋಧಿಯನ್ನು ಕಂಡುಕೊಂಡ, ಕೃಷಿ ಶುರುವಾಗುತ್ತಿದ್ದಂತೆ ನೆಲೆನಿಂತ. ಜನಸಂಖ್ಯೆ ಜಾಸ್ತಿಯಾಗತೊಡಗಿ ಹಳ್ಳಿ ಮತ್ತು ಪಟ್ಟಣಗಳ ನಿರ್ಮಾಣಮಾಡಿದನು. ವ್ಯವಸಾಯದ ಉತ್ಪನ್ನಗಳಿಂದ ವ್ಯಾಪಾರ ವಹಿವಾಟು, ಸಂಪರ್ಕ ಮುಂತಾದವುಗಳು ಶುರುವಾದುವು. ಹೀಗೆ ಗತಕಾಲದ ಇತಿಹಾಸ ಅಶ್ಚರ್ಯಕರವಾಗಿ ಈ ಕತೆಯಲ್ಲಿ ಉಳಿದುಕೊಂಡು ಬಂದಿದೆ.

ಭಾರತದಲ್ಲಿ ವ್ಯವಸಾಯ ಶಿಲಾಯುಗಕ್ಕೆ ಸಂಬಂಧಿಸಿದಂತೆ ಭಾರತದಲ್ಲಿ ಯಾವುದೇ ಅವಶೇಷಗಳು ನಮಗೆ ಹೆಚ್ಚಾಗಿ ದೊರಕಿಲ್ಲವಾದರೂ, ಪ್ರಪಂಚದ ದೇಶಗಳವರಂತೆಯೇ ಭಾರತದ ಪ್ರಾಚೀನ ಮಾನವನನ್ನೂ ಹಳೆಶಿಲಾಯುಗದ ಮಾನವ ಎಂದು ಕರೆಯಲಾಗಿದೆ. ಈ ಹಳೆಶಿಲಾಯುಗದಲ್ಲಿ ಮಾನವನು ಆಹಾರ ಸಂಗ್ರಹ ಜೀವಿಯಾಗಿದ್ದನು. ಅವನು ಪ್ರಾಣಿಗಳನ್ನು ಬೇಟೆಯಾಡಿ ಜೀವನ ಸಾಗಿಸಬೇಕಾಗಿತ್ತು. ಅವನ ಉಡುಪು ಉಪಕರಣಗಳು ಪ್ರಾಣಿಪ್ರಪಂಚದ ಆಧಾರದ ಮೇಲೆ ಸ್ಥಾಪಿತವಾಗಿದ್ದುವು. ಬೆಣಚುಕಲ್ಲಿನಿಂದ ಅವನು ಕೊಡಲಿ ಕತ್ತಿ ಗುರಾಣಿ, ಚಾಕುವಿನಂತಹ ಆಯುಧಗಳನ್ನು ನಿರ್ಮಾಣ ಮಾಡಿಕೊಂಡಿದ್ದನು. ಲೋಹದ ಬಳಕೆ ಆತನಿಗೆ ಗೊತ್ತಿರಲಿಲ್ಲ. ಮೂಳೆ, ಕೊಂಬು ಅಥವಾ ಮರದ ತುಂಡುರಳು ಉಪಕರಣಗಳ ಕಾವು ಅಥವಾ ಕೈಗಳಾಗಿ ಕೆಲಸಮಾಡಿ ಕತ್ತರಿಸಲು, ಆಗಿಯಲು, ಬೇಟೆಯಾಡಲು ಮತ್ತು ರಕ್ಷಣೆಗೂ ಅವು ಬಳಕೆಯಾಗುತ್ತಿದ್ದಿರ ಬಹುದು. ಮಧ್ಯ ಶಿಲಾಯುಗಕ್ಕೆ ಸೇರಿದ ಅನೇಕ ಸ್ಥಳಗಳು ಗುಜರಾತಿನಲ್ಲಿಯೂ ಮತ್ತು ತಿನ್ನದೇಲಿಯಲ್ಲಿಯೂ ಸಿಕ್ಕಿವೆ. ಈ ಯುಗದಲ್ಲಿ ಬಿಲ್ಲು ಬಾಣ ಬಳಕೆಗೆ ಬಂದಿತೆಂದು ಗೊತ್ತಾಗಿದೆ. ಬಾಣಗಳಿಗೆ ಅರ್ಧಚಂದ್ರಾಕಾರದ ಸಣ್ಣ ಸಣ್ಣ ಕಲ್ಲಿನ ಆಯುಧಗಳನ್ನು ಸಿಕ್ಕಿಸಿ ಬೇಟೆಯಾಡಲು ಉಪಯೋಗಿಸುತ್ತಿದ್ದರು. ಗುಜರಾತಿನ ಲಾಂಗ್‌ನಾಜ್ ಎಂಬಲ್ಲಿ ಖಡ್ಗಮೃಗದ ಭುಜದ ಮೂಳೆಯನ್ನು

ಕಲ್ಲಿನ ಸಣ್ಣಪುಟ್ಟ ಆಯುಧಗಳನ್ನು ಮಾಡುವಾಗ ಅಡಿಗಲ್ಲಿನಂತೆ ಉಪಯೋಗಿಸುತ್ತಿದ್ದರೆಂದು ಶೋಧನೆಗಳಿಂದ ಗೊತ್ತಾಗಿದೆ.

ನಾಗರಿಕತೆಗಳ ಇತಿಹಾಸದಲ್ಲಿ ವ್ಯವಸಾಯ ಮಾನವನ ನಾಗರಿಕತೆಯ ಇತಿಹಾಸದ ಜೊತೆಜೊತೆಗೆ ವ್ಯವಸಾಯದಇತಿಹಾಸವೂ ಸೇರಿಕೊಂಡಿದೆ. ಪ್ರಾಚೀನ ಮಾನವನು ವ್ಯವಸಾಯವನ್ನು ಕಂಡುಕೊಂಡ ನಂತರವೇ ವ್ಯವಸಾಯ ಪ್ರದೇಶದ ಹತ್ತಿರ ನೆಲೆನಿಂತಿರುವುದು. ಸಂಘಗಳಲ್ಲಿ ಬದುಕಿ ನೀತಿನಿಯಮಗಳ ಪರಿಧಿಗೆ ಒಳಗಾಗಿರುವುದು ಮತ್ತು ಕಾಡುಪ್ರಾಣಿಗಳನ್ನು ಪಳಗಿಸಿಕೊಂಡು ಅವುಗಳ ಸಹಾಯದಿಂದ ಉಳಲು ತೊಡಗಿರುವುದು. ಅವನ ಆಹಾರ ಉತ್ಪಾದನೆಯಲ್ಲಿ ಉಂಟಾದ ಹೆಚ್ಚಳ ಕುಶಲ ಕಲೆಗಾರರನ್ನು ಬೆಳೆಸಲು, ಸಂಸ್ಕೃತಿ ಅರಳಲು, ನಾಗರಿಕತೆಯು ಬೆಳೆಯಲು ಕಾರಣವಾಯಿತು. ಅದುದರಿಂದ ಜೀವವಿಕಾಸದ ಬೆಳಕಿನಲ್ಲಿ ಮತ್ತು ಮಾನವನ ಭೌತಿಕಸಂಸ್ಕೃತಿಯಲ್ಲಿ ಮಾತ್ರ ವ್ಯವಸಾಯವನ್ನು ಅರ್ಥಮಾಡಿಕೊಳ್ಳಲು ಸಾಧ್ಯ. ಈ ದೃಷ್ಟಿಯಿಂದ ಪ್ರಪಂಚದ ನಾಗರಿಕತೆಗಳಲ್ಲಿ ಕಂಡು ಬರುವ ಭೌತಿಕ ಅಂಶಗಳ ಆಧಾರದ ಮೇಲೆ ವ್ಯವಸಾಯದ ಇತಿಹಾಸವನ್ನು ಅರಿಯಲು ಪ್ರಯತ್ನಿಸಲಾಗಿದೆ. ಈ ದಿಸೆಯಲ್ಲಿ ಜೆ.ಎಸ್.ಭಟ್ಟ ಅವರು ಬರದಿರುವ 'ನಾಗರಿಕತೆಯ ಇತಿಹಾಸ' ಗ್ರಂಥದಿಂದ ನಾಗರಿಕತೆಗಳಲ್ಲಿ ಕಂಡು ಬರುವ ಅಂಶಗಳನ್ನು ಹೀಗೆ ಸಂಗ್ರಹಿಸಬಹುದು;

'ಸುಮೆರಿಯನ್ ನಾಗರಿಕತೆ(ಕ್ರಿ.ಪೂ.೫೦೦೦ )ಪ್ರಾಯಶಃ ಅತ್ಯಂತ ಪ್ರಾಚೀನವಾದದ್ದು. ಇತಿಹಾಸ ಪ್ರಾರಂಭವಾದದ್ದೇ ಈ ನಾಗರಿಕತೆಯಿಂದ. ಟೈಗ್ರಿಸ್ ಮತ್ತು ಯೂಫ್ರಟೀಸ್ ನದಿಗಳು ಪ್ರವಾಹದೊಂದಿಗೆ ಕೊಚ್ಚಿ ತಂದು ತಮ್ಮ ದಂಡೆಗಳ ಮೇಲೆ ತುಂಬುವ ಫಲವತ್ತಾದ ಮಣ್ಣಿನಿಂದಾಗಿ ಇಲ್ಲಿ ಸಮೃದ್ಧಿಯಾದ ಬೆಳೆ ತೆಗೆಯುವ ಸಾಧ್ಯತೆಯಿತ್ತು. ಇಲ್ಲಿ ನಾಗರಿಕತೆಯೊಂದು ಬೆಳೆಯಲು ವಿಶೇಷ ಕಾರಣವಾಯಿತು. ಯು ಆರ್ ನಲ್ಲಿ ದೊರೆತಿರುವ ಮುದ್ರೆಗಳು ಸಿಂಧೂಕಣಿವೆಯಲ್ಲಿ ದೊರೆತಿರುವ ಮುದ್ರೆಗಳನ್ನು ಹೋಲುವುದರಿಂದ ಭಾರತದೊಂದಿಗೆ ಸುಮೇರಿಯನ್ನರು ವ್ಯಾಪಾರೀ ಸಂಬಂಧ ಹೊಂದಿದ್ದಿರ ಬಹುದೆಂದು ಊಹಿಸಲಾಗಿದೆ. ಬ್ಯಾಬಿಲೊನಿಯಕ್ಕೆ (ಕ್ರಿ.ಪೂ.ಸು.೩೦೦೦)ನೀರಿನ ಆಸರೆ ಚೆನ್ನಾಗಿತ್ತು. ಆದುದರಿಂದ ಅಲ್ಲಿ ಒಳ್ಳೆಯ ಬೆಳೆ ಆಗುತ್ತಿತ್ತು.. ಅವರ ವ್ಯಾಪಾರವೂ ಚೆನ್ನಾಗಿ ಕುದುರಿತ್ತು. ಅವರು ಎತ್ತುಗಳನ್ನು ವ್ಯವಸಾಯಕ್ಕೆ ಮತ್ತು ಸಾಗಾಣಿಗೆ ಬಳಸುತ್ತಿದ್ದರು. ಎತ್ತುಗಳ ಬಗೆಗೆ ಅಪಾರವಾದ ಗೌರವ ಭಾವನೆಯಿತ್ತು. ಬಾಡಿಗೆಗೆ ತಂದ ಎತ್ತನ್ನು ಕೊಂದರೆ ಅದಕ್ಕೆ ಬದಲಿ ಎತ್ತನ್ನು ಕೊಡಬೇಕೆಂದು ವಿಧಿಸಲಾಗಿತ್ತು. ಅಸ್ಸಿನಿಯದ ನಾಗರಿಕತೆಯ (ಕ್ರಿ.ಪೂ.ಸು.೨೮೦೦) ಜನರಿಗೆ ಕೃಷಿಯಲ್ಲಿ ವಿಶೇಷವಾದ ಪರಿಣಿತಿಯಿತ್ತು. ಊಳಿಗದವರನ್ನು, ಗುಲಾಮರನ್ನು ನಿಯಮಿಸಿಕೊಂಡು ನೀರಾವರಿಯಿಂದ ಬೆಳೆಯನ್ನು ತೆಗೆಯುತ್ತಿದ್ದರು. ಹಣ್ಣು, ತರಕಾರಿ, ವಿವಿಧ ಧಾನ್ಯಗಳನ್ನು ಅವರು ಬೆಳೆಯುತ್ತದ್ದಲ್ಲದೆ ಮುಖ್ಯವಾಗಿ ಶಾಖಾಹಾರಿಗಳಾಗಿದ್ದರು. ಕ್ರಿ.ಪೂ.೧೪೦೦ ಮತ್ತು ೧೦೫೦ ರ ಸುಮಾರಿನಲ್ಲಿ ಹತ್ತಿಯನ್ನು ಭಾರತದಿಂದ

ಆಮದು ಮಾಡಿಕೊಳ್ಳುತ್ತಿದ್ದರು. ಪವಿತ್ರ ವೃಕ್ಷಪೂಜೆ ಅವರ ವೈಶಿಷ್ಟ್ಯವಾಗಿತ್ತು. ಸಸ್ಯಗಳನ್ನು ದೇವತೆಗಳು ಎಂದು ಬಗೆಯುತ್ತಿದ್ದರು. ಬಹುಶಃ ಕಬ್ಬಿಣದ ಆಯುಧ ಬಳಸಿದವರಲ್ಲಿ ಇವರೇ ಮೊದಲಿಗರೆಂದು ಕಾಣುತ್ತದೆ

ಮೇಲಿನ ವಾದವನ್ನು ಅನುಸರಿಸಿಯೇ 'ಈಜಿಯನ್ ನಾಗರಿಕತೆಯ (ಕಿ.ಪೂ. ೨೫೦೦ - ೧೧೦೦) ಪ್ರಾರಂಭದಲ್ಲಿ ಕ್ರೀಟ್ ಕೃಷಿಪ್ರಧಾನವಾದ ಪ್ರದೇಶವಾಗಿತ್ತು. ಸಮುದ್ರದ ಮೇಲೆ ಹೆಚ್ಚು ಅವಲಂಬಿಸಿದ್ದರೂ ಮೀನುಗಾರಿಕೆ, ಕುರಿಸಾಕಣೆ ಮುಂತಾದ ಕಸುಬುಗಳನ್ನು ಇವರು ಅನುಸರಿಸುತ್ತಿದ್ದರು. ಭೂಮಿ ಫಲವತ್ತಾಗಿತ್ತು. ಆದರೆ ಜನಸಂಖ್ಯೆ ಹೆಚ್ಚಿದಂತೆ ಕೇವಲ ಕೃಷಿಯನ್ನೇ ಅವಲಂಭಿಸಿ ಜೀವನ ಸಾಗಿಸುವುದು ಕಷ್ಟ ಸಾಧ್ಯವೆನಿಸಿತು. ಆಗ ಇವರು ಇತರ ಉದ್ಯೋಗಗಳನ್ನು ಅರಸಲು ತೊಡಗಿದರು. ಇವರು ಗೂಳಿಗಳನ್ನು ಬಲು ಪ್ರೀತಿಯಿಂದ ಸಾಕುತಿದ್ದರು. ಗೂಳಿಕಾಳಗ ಇವರಿಗೆ ಪ್ರಿಯವಾದುದಾಗಿತ್ತು’[೫]. ಆರಂಭದ ನಾಗರಿಕತೆಗಳೆಲ್ಲ ಗ್ರಾಮೀಣವೇ, ಇತಿಹಾಸದ ಪುಟಗಳನ್ನು ತಿರುವಿದಾಗ ಜಗತ್ತಿನ ಬಹುಸಂಖ್ಯಾತ ಜನರು ನದಿಯ ದಂಡೆಗಳ ಮೇಲೆ ತಮ್ಮ ವಸತಿಗಳನ್ನು ಕಟ್ಟಿಕೊಂಡುದ್ದುದು ಕಂಡು ಬರುತ್ತದೆ. ನೈಲ್‌ನದಿಯ ದಂಡೆಯ ಮೇಲೆ ನಿರ್ಮಿತವಾಗಿರುವ ಈಜಿಪ್ಟಿನ ನಾಗರಿಕತೆಯು( ಕ್ರಿ.ಪೂ ೧೩೦೦) ಅಂತಹವುಗಳಲ್ಲಿ ಒಂದು. ಈಜಿಪ್ಟಿನ ಜನರಿಗೆ ನೈಲ್ ಜೀವನದಿ ಎನಿಸಿದೆ. ಈಜಿಪ್ಟಿನ ಜನರು ಕೃಷಿಯನ್ನೇ ಅವಲಂಬಿಸಿದ್ದರು. ನೈಲ್‌ನದಿ ಅವರಿಗೆ ವ್ಯಾಪಾರ ವಾಣಿಜ್ಯಗಳನ್ನು ಬೆಳೆಸುವುದಕ್ಕೆ ನೆರವಾಗುವುದಲ್ಲದೆ ಸಂಪರ್ಕಸಾಧನದ ಸೇತುವೆಯಾಗಿತ್ತು. ಪ್ರತಿ ವರ್ಷ ತನ್ನ ಪ್ರವಾಹದ ಜೊತೆಗೆ ತಂದು ಹಾಕುವ ಮೆಕ್ಕಲು ಮಣ್ಣು ಕೃಷಿಯೋಗ್ಯವಾಗುತ್ತಿತ್ತು. ಫಲವಂತಿಕೆಯನ್ನು ಹೆಚ್ಚಿಸುತ್ತಿತ್ತು. ಹಳೆಯ ರಾಜವಂಶದ ಕಾಲದ ಸಮಾಜವು ಪುರುಷಕೇಂದ್ರಿಕೃತವಾದುದಾಗಿತ್ತು, ಆದರೂ ಅಲ್ಲಿ ಪುರುಷರಂತೆ ಸ್ತ್ರೀಯರಿಗೂ ಸಮಾನ ಅಧಿಕಾರವಿತ್ತು. ಸ್ತ್ರೀಯರು ಅಧಿಕಾರಿಗಳಾಗಿದ್ದ ಉಲ್ಲೇಖಗಳಿವೆ’[೬]. ರೋಮನ್ನರು (ಕ್ರಿ.ಪೂ.೭೫೩) ಬಾರ್ಲಿ, ಗೋಧಿಗಳಲ್ಲಿದೆ ಯಥೇಚ್ಛವಾಗಿ ತರಕಾರಿಯನ್ನು ಬೆಳೆದು ತಿನ್ನುತ್ತಿದ್ದರು. ಹಬ್ಬದ ದಿನಗಳಲ್ಲಿ ಅವರು ಮಾಂಸ ಬಳಸುತ್ತಿದ್ದರು.

ಗ್ರೀಕ್‌ನಾಗರಿಕತೆ ಕ್ರಿ.ಪೂ ೪೩೦ -೪೦೦ ರವರೆಗೆ ಸೇರಿದ್ದು, ಇವರಲ್ಲಿ ಕಂಚಿನ ಬಳಕೆಯ ನಂತರ ಕಬ್ಬಿಣದ ಬಳಕೆ ಬಂದಂತೆ ಕಾಣುತ್ತದೆ. ಕಬ್ಬಿಣದ ಬಳಕೆಯಾಗಿರುವುದರಿಂದ ಪರಿಣಾಮಕಾರಿ ಯಾದ ಕೃಷಿಯನ್ನು ಇವರು ಕಂಡುಕೊಂಡಿದ್ದಾರೆ. ಇವರಿಗೆ ಎಲ್ಲ ಉದ್ಯೋಗಕ್ಕಿಂತ ಬಹುಮುಖ್ಯವಾದ ಕೃಷಿ ತಮ್ಮ ಬದುಕಿಗಾಗಿ ಎಲ್ಲರೂ ರೈತರನ್ನೇ ಅವಲಂಭಿಸಿರಬೇಕಾಗಿತ್ತು. ಯೋಗ್ಯವಾದ ಎಲ್ಲ ಭೂಮಿಯನ್ನು ಗ್ರೀಕರು ಕೃಷಿಗೆ ಅಳವಡಿಸಿದರು. ಬೆಳೆಗಳಿಗೆ ನೀರಾವರಿ ಸೌಲಭ್ಯ ಮತ್ತು ಮಹಾಪೂರದಿಂದ ರಕ್ಷಿಸಿಕೊಳ್ಳುವ ಕ್ರಮವನ್ನು ಅವರು ಯೋಜಿಸಿದ್ದರು. ಸುಗ್ಗಿ ಏಪ್ರೀಲ್ ಇಲ್ಲವೇ ಮೇ

ತಿಂಗಳಲ್ಲಿ ಬರುತ್ತಿತ್ತು. ಮುಖ್ಯವಾದ ಬೆಳೆ ಬಾರ್ಲಿಯಾದರೆ ಗೋಧಿಯನ್ನು ಅಲ್ಪ ಪ್ರಮಾಣದಲ್ಲಿ ಬೆಳೆಯುತ್ತಿದ್ದರು. ಗ್ರೀಕರು ದ್ರಾಕ್ಷಿ ಬೆಳೆಯುತ್ತಿದ್ದರಲ್ಲದೆ, ಅದರಿಂದ ಮದ್ಯ ತಯಾರಿಸುವ ಕಲೆ ಅವರಿಗೆ ಗೊತ್ತಿತ್ತು. ಆಲಿವ್ ಮರದ ಬಣ್ಣದಿಂದ ಚಿತ್ರಕಾರರು ತಮ್ಮ ಪ್ರತಿಭೆಯನ್ನು ಗುರುತಿಸಿಕೊಂಡರು. ಆಭಿಜಾತಯುಗದಲ್ಲಿ ಗ್ರೀಕರು ಆರ್ಥಿಕ ಸ್ವಾವಲಂಬನೆ ಸಾಧಿಸಿದ್ದರು. ಅವರು ಬಂಗಾರ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳನ್ನು ಬಳಕೆಗೆ ತಂದರೆಂಬುದನ್ನು ನಾಗರೀಕತೆಯನ್ನು ಅಧ್ಯಯನ ಮಾಡಿದ ಎಲ್ಲಾ ಸಂಶೋಧನೆಗಳು ಸಾಧರಪಡಿಸಿವೆ.

ಚೀನಾದ ನಾಗರಿಕತೆಯು(ಕ್ರಿ.ಪೂ ೩೦೦) ಕೃಷಿಯಲ್ಲಿ ಅಪಾರವಾದ ಸಾಧನೆಯನ್ನು ಮಾಡಿದೆ. ಇದೂ ಸಹ ನದಿಯ ದಡದ ನಾಗರಿಕತೆಯೇ. ಹೋವಾಂಗ್ ಹೋ ಮತ್ತು ಯಾಂಗ್‌ಟ್ಸೀ ಚೀನಾದ ಮಹಾನದಿಗಳು. ಇವು ಪ್ರತಿವರ್ಷ ಫಲವತ್ತಾದ ಮಣ್ಣನ್ನು ದಂಡೆಗೆ ತಂದು ಹಾಕುವುದರಿಂದ ಕೃಷಿ ಸಮೃದ್ಧವಾಗಿದೆ. ಸಮಾಜದಲ್ಲಿ ರೈತನ ಸ್ಥಾನಮಾನ ಹಿರಿದಾದುದಾಗಿತ್ತು. ಪ್ರತಿವರ್ಷ ವಸಂತದಲ್ಲಿ ರಾಜ ಭೂಮಿಯನ್ನು ಉಳುವಶಾಸ್ತ್ರ ಮಾಡುತ್ತಿದ್ದ. ಸ್ವತಃ ರಾಜನೇ ಉಳುಮೆಯ ಕ್ರಿಯೆಯಲ್ಲಿ ತೊಡುಗುತ್ತಿದ್ದನೆಂದರೆ ಅವರು ಕೃಷಿಗೆ ನೀಡಿದ್ದ ಮಹತ್ವದ ಅರಿವುಂಟಾಗುತ್ತದೆ. ಆಹಾರ ಅಕ್ಕಿಯಾಗಿತ್ತು. ಇದಲ್ಲದೆ ಗೋದಿ, ಬಾರ್ಲಿ ಸಿಹಿಗೆಣಸು ಮತ್ತು ಅನೇಕ ತರಕಾರಿಗಳನ್ನು ಪ್ರಾಚೀನ ಚೀನೀಯರು ಬೆಳೆಯುತ್ತಿದ್ದರು. ಚಹಾವನ್ನು ಜಗತ್ತಿಗೆ ನೀಡಿದ ಕೀರ್ತಿ ಚೀನೀಯರದು. 'ಕೋಣ, ಕುದುರೆ ಎತ್ತುಗಳನ್ನು ಅವರು ಪಳಗಿಸಿಕೊಂಡಿದ್ದರು. ಕೃಷಿಯು ಒಂದು ನಿರ್ಧಿಷ್ಟಪಡಿಸಿದ ತಾರೀಖಿನಿಂದ ನಡೆಯುತ್ತಿತ್ತು. ನೀರಾವರಿ ಮತ್ತು ಗೊಬ್ಬರದ ಬಳಕೆ ಅವರಿಗೆ ಗೊತ್ತಿತ್ತು'[2]. ನಾಗರೀಕತೆಯ ಜೊತೆಜೊತೆಯಲ್ಲಿಯೇ ಕೃಷಿಯ ಆವಿಷ್ಕಾರವೂ ಮಾನವನ ವಿಕಾಸವು ನಡೆದಿದೆ. ರೈತ ಯಾವಾಗ ಬೇಸಾಯಕ್ಕೆ ಅಣಿಯಾದನೋ ಆಗಿನಿಂದಲೇ ಕೃಷಿಸಂಬಂದಿ ಸಾಹಿತ್ಯರಚನೆಗೆ ಅಣಿಯಾಗಿರಲು ಸಾಧ್ಯತೆಗಳಿವೆಯಾದರೂ ಸಂಶೋಧನೆಗಳು ಅದನ್ನಿನ್ನೂ ಸಾಬೀತುಪಡಿಸಬೇಕಾಗಿದೆ.

ದಕ್ಷಿಣ ಅಮೆರಿಕದ ಈಗಿನ ಪೆರುಪ್ರದೇಶದಲ್ಲಿ ಉಗಮಿಸಿದ ಇಂಕ ನಾಗರಿಕತೆ (ಕ್ರಿಶ ೧೨೦೦-೧೪೦೦)ಬಹಳ ಅರ್ವಾಚೀನವಾದುದು. ಇಂಕ ಜನ ವಾಸಿಸುತ್ತಿದ್ದ ಪ್ರದೇಶ ವ್ಯವಸಾಯಯೋಗ್ಯ ವಾಗಿರಲಿಲ್ಲ. ಆದರೆ ನಿರಂತರ ದುಡಿಮೆ ಮತ್ತು ಸಾಹಸದಿಂದ ಅವರು ಅದನ್ನು ವ್ಯವಸಾಯಯೋಗ್ಯ ಭೂಮಿಯನ್ನಾಗಿ ಮಾಡಿಕೊಂಡರು. ಕಾಡಿನಲ್ಲಿ ಬೆಳೆಯುತ್ತಿದ್ದ ಅನೇಕ ಸಸ್ಯಗಳನ್ನು ಆಹಾರದಲ್ಲಿ ಉಪಯೋಗಿಸುವ ವಿಧಾನವನ್ನು ಅವರು ಕಂಡುಕೊಂಡರು. ಕೊಕೊ, ಟೊಮಾಟೊ, ಸಿಹಿಗೆಣಸು, ಮರಗೆಣಸು, ಮುಸುಕಿನ ಜೋಳ, ಶೇಂಗಾ, ಹತ್ತಿ ಇವನ್ನು ಅವರು ಬೆಳೆಯುತ್ತಿದ್ದರು. ಇವುಗಳಲ್ಲಿ ಹಲವು ಬೆಳೆಗಳ ಪರಿಚಯ ಆ ಕಾಲದಲ್ಲಿ ಐರೋಪ್ಯರಿಗೆ ಇರಲಿಲ್ಲ. ಸಾಮ್ರಾಜ್ಯದ ಭೂಮಿಯನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿತ್ತು. ಇದರಲ್ಲಿ ಮೊದಲನೆಯದು ಸೂರ್ಯದೇವನದು,

ಎರಡನೆಯದು ಸಾಮ್ರಾಟನದು, ಮೂರನೆಯದು ಪ್ರಜೆಗಳದು. ಸೂರ್ಯದೇವನ ಜಮೀನಿನಿಂದ ಬಂದ ಉತ್ಪನ್ನವನ್ನು ದೇವಾಲಯಗಳಿಗೆ ಮತ್ತು ಪುರೋಹಿತವರ್ಗಕ್ಕೆ ವಿನಿಯೋಗಿಸಿದರೆ, ಜಮೀನಿನಿಂದ ಬಂದ ಉತ್ಪನ್ನವನ್ನು ಅವನ ಸಿಬ್ಬಂದಿ ಮತ್ತು ಪರಿವಾರ ವರ್ಗದವರಿಗಾಗಿ ಉಪಯೋಗಿಸುತ್ತಿದ್ದರು. ಸಮಯಕ್ಕೆ ಸರಿಯಾಗಿ ಪೈರುಗಳ ಕಟಾವು ನಡೆಯುತ್ತಿತ್ತು. ಭಾರವನ್ನು ಎಳೆಯುವ ಪ್ರಾಣಿಗಳು ಇರದಿದ್ದರೂ ಅವರು ಸಮರ್ಥವಾಗಿ ಬೆಳೆ ತೆಗೆಯುತ್ತಿದ್ದರು. ಪ್ರತಿಯೊಬ್ಬ ಪ್ರಜೆಯೂ ರೈತನಾಗಿದ್ದ. ಆತ 'ತನಗೆ ಬೇಕಾದ ಆಹಾರ ಮತ್ತು ಬಟ್ಟೆಯನ್ನು ಉತ್ಪಾದಿಸಿಕೊಳ್ಳುತ್ತಿದ್ದ. ರಾಜ್ಯದಲ್ಲಿ ಉಗ್ರಾಣಗಳನ್ನು ನಿರ್ಮಿಸಲಾಗಿತ್ತು. ಸಾಮಾನ್ಯವಾಗಿ ರಾಜಪರಿವಾರದವರಿಗೆ ತೆರಿಗೆ ವಿನಾಯಿತಿಯಿತ್ತು. ಸಾಮ್ರಾಜ್ಯದಲ್ಲಿ ಪ್ರತಿಯೊಬ್ಬ ಪ್ರಜೆಯೂ ಚೆನ್ನಾಗಿ ಬಟ್ಟೆತೊಡಬೇಕೆಂಬ ನಿಯಮಜಾರಿಯಲ್ಲಿತ್ತು. ಎರಡು ವರ್ಷಗಳಿಗೊಮ್ಮೆ ಪ್ರತಿಹಳ್ಳಿಯಲ್ಲಿಯು ರಾಜನ ಪರವಾಗಿ ಉಣ್ಣೆ ಬಟ್ಟೆಗಳ ವಿತರಣೆ ನಡೆಯುತ್ತಿತ್ತು. ಇಂಕ ಜನರಿಗೆ ತಂಬಾಕಿನ ಉಪಯೋಗದ ಅರಿವು ಇತ್ತು. ತಲೆಭಾರ ಕಡಿಮೆ ಮಾಡಲು ಅವರು ನಶ್ಯ ಉಪಯೋಗಿಸುತ್ತಿದ್ದರು. ಗಾಯವಾದರೆ ಮುಲ್ಲಿ ಎಂಬ ಮರದ ರಸವನ್ನು ಲೇಪಿಸುತ್ತಿದ್ದರು. ಕೀಲು ತಪ್ಪಿದರೆ ಚಿಲ್ಲ ಎಂಬ ಮೂಲಿಕೆ ಉಪಯೋಗಿಸುತ್ತಿದ್ದರು[೮].

ಪ್ರಪಂಚದಾದ್ಯಂತ ಹರಡಿಕೊಂಡಿರುವ ಪ್ರಾಚೀನನಾಗರಿಕತೆಗಳು ವ್ಯವಸಾಯಕ್ಕೆ ಸಂಬಂಧಿಸಿದ ಈ ಹಿಂದಿನ ವಿವರಗಳನ್ನು ದೊರಕಿಸಿಕೊಡುತ್ತವೆ. ಆಹಾರ ಉತ್ಪಾದನೆಯು ಮಾನವನ ಬದುಕು ಹಸನಾಗಲು ಕಾರಣವಾಗಿರುವ ವಿಷಯವನ್ನು ಸ್ಪಷ್ಟಪಡಿಸುತ್ತದೆ. ಪ್ರಸ್ತುತ ನಾಗರಿಕತೆಗಳು ನಮಗೆ ಮನನ ಮಾಡುವ ಅಂಶಗಳು ಇಷ್ಟು ಅರಣ್ಯದಲ್ಲಿ ಸಹಜವಾಗಿ ದೊರಕುವ ದವಸಧಾನ್ಯಗಳನ್ನು ಸಂಗ್ರಹಿಸುವ ಮತ್ತು ಬಿತ್ತುವ ಹಾಗೂ ಪ್ರಾಣಿಗಳನ್ನು ಪಳಗಿಸಿಕೊಳ್ಳುವುದರ ಮುಖಾಂತರ ವ್ಯವಸಾಯ ಆರಂಭವಾಯಿತು. ಕಾಲಕ್ಕೆ ಅನುಗುಣವಾಗಿ ಮಾಡಬೇಕಾದ ಉಳುಮೆ, ಬಿತ್ತನೆ, ಕೊಯ್ಲಿಗಾಗೆ ಒಂದು ಪ್ರದೇಶಕ್ಕೆ ಅನಿವಾರ್ಯವಾಗಿ ನೆಲೆ ನಿಂತ ಗುಂಪುಗಳ ವಸತಿಯೇ ಪಟ್ಟಣಗಳಾಗಿ ಮಾರ್ಪಾಟಾದವು. ಅವರು ಮಾಡಿದ ದೊಡ್ಡ ಶೋಧನೆಗಳಾದ ನೀರಾವರಿ ವ್ಯವಸಾಯ ಮತ್ತು ನೇಗಿಲು ಅವರ ವ್ಯವಸಾಯ ಉತ್ಪಾದನೆಯನ್ನು ಹೆಚ್ಚಿಸಿದುವು. ಅದರಿಂದಾಗಿ ಬೇಟೆಗಾರಿಕೆಯಿಂದ, ಮೀನುಗಾರಿಕೆಯಿಂದ ಬದುಕುತ್ತಿದ್ದ ಪ್ರಾಚೀನರ ಜೀವನಮಾದರಿಯೇ ಭಿನ್ನವಾಗಬೇಕಾಯಿತು. ಅವರು ಸಾಮೂಹಿಕಶಕ್ತಿಯ ಕೇಂದ್ರಬಿಂದುವಿನಂತೆ ರಾಜ್ಯವೊಂದು ಉದಯ ವಾಯಿತು. ನಗರವೆಂದರೆ ಒಂದು ದೊಡ್ಡ ಹಳ್ಳಿಯಾಯಿತು. ಆ ನಗರ ತನ್ನೆಲ್ಲ ರಾಜ್ಯದ, ಪ್ರದೇಶದ ಉತ್ಪನ್ನಗಳ ಹತೋಟಿಯ ಶಕ್ತಿಯಾಯಿತು. ಕುಶಲ ಕೆಲಸಗಾರರಾದ ಕುಂಬಾರರು ಮತ್ತು ನೇಕಾರರಿಗೆ ಪ್ರೋತ್ಸಾಹನೀಡಿತು. ಆಡಳಿತಯಂತ್ರದ ರಕ್ಷಣಾತ್ಮಕ ಕೋಟೆಯಾಯಿತು. ಇದು ಮಾನವ ಪ್ರಗತಿಯ ರಚನಾತ್ಮಕ ಮಾಧರಿಯಾಗಿಯೂ ಸಹ ಮುಖ್ಯ

ಕೃಷಿ ಎಂದಾಕ್ಷಣ ಭೂಮಿ ಮತ್ತು ರೈತ ನಮ್ಮೆದುರು ಧುತ್ತನೆ ಬಂದು ನಿಲ್ಲುತ್ತವೆ. ಮಾನವ ಮತ್ತು ಭೂಮಿಗಳ ಸಂಬಂಧ ಅವಿನಾಭಾವಿಯಾದದ್ದು. ಭಾರತೀಯ ಸಂಪ್ರದಾಯದ ಸಂದರ್ಭದಲ್ಲಿ ಭೂಮಿ ಮಾತೃಸ್ವರೂಪಿಣಿ. ಭಾರತದಲ್ಲಿ ಮುಕ್ಕೋಟಿ ದೇವತೆಗಳು ನಂಬಿದವರಿಗೆ ವರಪ್ರಸಾದಕೊಡುವವೋ ಇಲ್ಲವೋ ತಿಳಿಯದು ಆದರೆ ಭೂಮಿತಾಯಿ ಮಾತ್ರ ನಂಬಿದವರಿಗೆ, ದುಡಿಮೆಯ ಪೂಜೆಮಾಡುವವರಿಗೆ ವರಪ್ರಸಾದ ನೀಡುವ ಏಕೈಕ ದೇವತೆಯೆನ್ನಬಹುದು. ನವಶಿಲಾಯುಗಕ್ಕೆ ಸಂಬಂಧಿಸಿದಂತೆಯೂ ನಮಗೆ ಹೆಚ್ಚು ವಿವರಗಳು ದೊರಕಿಲ್ಲ. ಕಾಶ್ಮೀರದ ಬುರರೂಮಾ, ಬಳ್ಳಾರಿಯ ಸಂಗನಕಲ್ಲು, ಚಿತ್ರದುರ್ಗದ ಬ್ರಹ್ಮಗಿರಿ ಈ ಮೂರು ಸ್ಥಳಗಳಲ್ಲಿ ಕರ್ನಾಟಕದಲ್ಲಿ ನಡೆದಿರುವ ಭೂ ಅಗೆತದ ಪ್ರದೇಶಗಳೆಂದರೆ ಮೇಲೆ ಹೇಳಿರುವ ಸಂಗನಕಲ್ಲು ಮತ್ತು ಬ್ರಹ್ಮಗಿರಿಗಳಲ್ಲದೆ, ಕುಪಗಲ್ಲು, ಗಳ್ಳೂರು, ಟಿ.ನರಸೀಪುರ ಮತ್ತು ಹೆಮ್ಮಿಗೆ. ಈ ವೇಳೆಗಾಗಲೇ ವ್ಯವಸಾಯ ಪ್ರಾಥಮಿಕ ಹಂತದಲ್ಲಿತ್ತು. ಮಾನವರು ಬಾರ್ಲಿ, ಗೋದಿ ದವಸಗಳನ್ನು ಕಂಡುಕೊಂಡಿದ್ದರು. ಎತ್ತು, ನಾಯಿ, ಆಡು, ಕುರಿ ಮುಂತಾದ ಪ್ರಾಣಿಗಳನ್ನು ಪಳಗಿಸಿಕೊಂಡಿದ್ದನು. ನದಿಯ ದಂಡೆಗುಂಟ ವಾಸಮಾಡುವುದನ್ನು ಕಲಿತು ನೆಲೆನಿಂತು ಅಲೆಮಾರಿ ಜೀವನ ತ್ಯಜಿಸಿದ್ದರು. ಮಣ್ಣಿನ ಮಡಕೆ ಕುಂಬಾರನ ಕುಲುಮೆಯಿಂದ ಮಾಡುವುದನ್ನು ಕಲಿತು ಅಡಿಗೆ ತಯಾರಿಕೆಯನ್ನು ರೂಢಿಸಿ ಕೊಂಡಿದ್ದರು.

ಸಿಂಧೂ ಮತ್ತು ರಾವಿನದಿಗಳ ತಟದ ಉತ್ಖನನ'ದಲ್ಲಿ ಗೊತ್ತಾಗಿರುವ ಹರಪ್ಪ ಮೊಹೆಂಜೊದಾರೊ ಸಂಸ್ಕೃತಿಯಲ್ಲಿ ವ್ಯವಸಾಯದ ಅಧಿಕೃತ ಅಂಶಗಳು ನಮಗೆ ದೊರಕುತ್ತವೆ. ಇದು ಲೋಹಯುಗದ ಸಂಸ್ಕೃತಿ (ಕ್ರಿ.ಪೂ ೩೦೦೦) ಈ ವೇಳೆಗೆ ಮಾನವ ಶಿಲಾಯುಗದಿಂದ ಲೋಹಯುಗಕ್ಕೆ ಪ್ರವೇಶಿಸಿದನೆಂದು ಕಾಣುತ್ತದೆ. ತಾಮ್ರ, ಹಿತ್ತಾಳೆ, ಸತು, ಲೋಹಗಳು ಆತನಿಗೆ ಪರಿಚಯವಾಗಿ ತನ್ಮೂಲಕ ಗಟ್ಟಿಯಾದ ಸಲಕರಣೆಗಳನ್ನು ತಯಾರುಮಾಡಿಕೊಂಡು ನಾಗರಿಕತೆಯನ್ನು ವಿಸ್ತರಿಸಿಕೊಂಡಂತೆ ಕಾಣುತ್ತದೆ. ವ್ಯವಸಾಯ ಈ ಸಂಸ್ಕೃತಿಯ ಪ್ರಧಾನ ಕಸುಬಾಗಿತ್ತು. ಅನೇಕ ಜಾತಿಯ ದವಸಧಾನ್ಯಗಳನ್ನು ಇವರು ಬೆಳೆದಂತೆ ಕಾಣುತ್ತದೆ. ಎರಡು ಜಾತಿಯ ಗೋಧಿಗಳ ವ್ಯವಸಾಯ ಬಹಳವಾಗಿ ನಡೆಯುತ್ತಿತ್ತು.

ಇದೇ ಸಂದರ್ಭದಲ್ಲಿ ರಷ್ಯದ ಸಸ್ಯಶಾಸ್ತ್ರದ ಪಂಡಿತರಾದ ಬಾವಿಲಾವ್‌ರವರು ರೊಟ್ಟಿ ಗೋಧಿ ಹಿಮಾಲಯದ ಪಕ್ಕಕ್ಕೇ ಸೇರಿದ ಅಫಘಾನಿಸ್ತಾನದಲ್ಲೇ ಮೊಟ್ಟಮೊದಲು ಗೋಧಿಯನ್ನು ಪತ್ತೆ ಮಾಡಲಾಗಿದೆ. ಬಾರ್ಲಿಯನ್ನು ಬೆಳೆಯಲಾಗುತ್ತಿತ್ತು. ಲಾಲ್ಕಾನ ಜಿಲ್ಲೆಯ ಮುಖ್ಯ ಆಹಾರವಾದ ಭತ್ತದ ವ್ಯವಸಾಯವೂ ಸಾಗಿ ಜನತೆಯ ಅಹಾರದಲ್ಲಿ ಅದೂ ಒಂದಾಗಿತ್ತು. ಪುರಾತನ ಸಿಂಧ್‌ನಲ್ಲಿ ಮಳೆಯು ಹೆಚ್ಚಾಗಿದ್ದ ಅಂಶವನ್ನು ನೆನಪಿನಲ್ಲಿಟ್ಟುಕೊಂಡರೆ ಭತ್ತವನ್ನು ಬೆಳೆಯುವುದು ಅಂಥ

ಕಠಿಣವಾದುದದೇನೂ ಆಗಿರಲಿಲ್ಲ. ಆದರೂ ಅಕ್ಕಿಯೂ ಅಷ್ಟೊಂದು ಜನಪ್ರಿಯವಾಗಿದ್ದಂತೆ ಕಾಣುವುದಿಲ್ಲ. ಖರ್ಜೂರವೂ ಒಂದು ಆಹಾರದ ವಸ್ತುವಾಗಿದ್ದಿತು. ಹರಪ್ಪಾದ ನಿವಾಸಿಗಳು ಬಟಾಣಿ ಮತ್ತು ಸಾಸುವೆಯನ್ನು ಕೂಡ ಬೆಳೆಯುತ್ತಿದ್ದರು. ಹರಪ್ಪಾದ ಇನ್ನೊಂದು ಪ್ರಮುಖವಾದ ಬೆಳೆ ಹತ್ತಿ. ಮೊಹಿಂಜೊದಾರೊವಿನಲ್ಲಿ ಸಿಕ್ಕಿದ ಬೆಳ್ಳಿಪಾತ್ರಯೊಂದರ ಪಕ್ಕಕ್ಕೆ ಕೆಂಪುಬಣ್ಣದ ಹತ್ತಿಯ ಬಟ್ಟೆಯ ಚೂರೊಂದು ಅಂಟಿಕೊಂಡಿತ್ತು. ಅಂದರೆ ಇವರಿಗೆ ಹತ್ತಿಯಿಂದ ಬಟ್ಟೆಯನ್ನು ಮಾಡುವ ವಿಧಾನ ಗೊತ್ತಿತ್ತು. ಈ ಬಟ್ಟೆ ಹೆಚ್ಚಾಗಿ ಮೆಸಪೊಟೊಮೆಯಾಕ್ಕೆ ರಫ್ತಾಗುತ್ತಿತ್ತೆಂದು ವಿದ್ವಾಂಸರ ಅಭಿಪ್ರಾಯ. ಆ ದೇಶದಲ್ಲಿ ಚಾರಿತ್ರಿಕ ಕಾಲದ ವೇಳೆಗೆ ಭಾರತೀಯ ಹತ್ತಿ ಬಟ್ಟೆಯನ್ನು 'ಸಿಂಧು' ಎಂದು ಕರೆಯುತ್ತಿದ್ದರು. ಇದನ್ನೇ ಗ್ರೀಕರು 'ಸಿಂಡನ್' ಎಂದು ಕರೆದರು. ಕ್ರಿ.ಪೂ ೧೫೦೦ ವರುಷಗಳೇ ಏಕೆ ಅದಕ್ಕೂ ಪ್ರಾಚೀನ ಕಾಲದಿಂದಲೇ ಹಿಂದೂದೇಶದಿಂದ ಹತ್ತಿಯ ಬಟ್ಟೆಗಳು ಬ್ಯಾಬಿಲೋನ, ಈಜಿಪ್ತ ಮೊದಲಾದ ಪರದೇಶಗಳಿಗೆ ಹೋಗುತ್ತಿದ್ದುವು. ಡಾ ಸಾಯಿನ್ ಎಂಬ ಸುವಿಖ್ಯಾತ ಅಸೀರಿಯಶಾಸ್ತ್ರಜ್ಞನು ಬ್ಯಾಬಿಲೋನಿನಲ್ಲಿ ಹಿಂದೂದೇಶದ ಬಟ್ಟೆಗಳಿಗೆ 'ಸಿಂಧು' ಎಂಬ ಹೆಸರಿದ್ದುದನ್ನು ಹೇಳುತ್ತಾನೆ. ಈಜಿಪ್ಟಿನ ಪುರಾತನ ಗೋರಿ (ಪಿರಾಮಿಡ್)ಗಳಲ್ಲಿರುವ ಹೆಣಗಳಿಗೆ ಸುತ್ತಿದ ಬಟ್ಟೆಯು ಹಿಂದೂದೇಶದ್ದೇ ಎಂದು ಕೆಲವರು ಹೇಳುವರು. ಕೆಲವರಿಗೆ ಈ ಬಗ್ಗೆ ಸಂದೇಹವಿದೆ. ಆದರೂ ಈಜಿಪ್ತಿಗೆ ಹಿಂದೂದೇಶದ ಆರ್ಯಪೂರ್ವ ಜನಾಂಗದವರು ಬಟ್ಟೆಗಳನ್ನು ಕಳಿಸುತ್ತಿದ್ದ ಹಾಗೂ ಅದಕ್ಕೆ 'ಪಟ'ವೆಂಬುದು ಈಜಿಪ್ಟಿನಲ್ಲಿ ಪ್ರಾಚೀನಕಾಲಕ್ಕೆ ಹೆಸರಿದ್ದ. ಸಂಗತಿಯನ್ನು ಡಾ. ಪಂಚಾನನ ಮಿತ್ರರು ಕಂಡುಹಿಡಿದಿರುವರು. ಚೈನಾ ಹೇಗೆ ಜಗತ್ತಿಗೆ ಚಹಾ ನೀಡಿದೆಯೋ ಹಾಗೆ ಭಾರತ ಜಗತ್ತಿಗೆ ಹತ್ತಿಯನ್ನು ನೀಡಿದೆ.

ಕೃಷಿಸಮೃದ್ಧಿಯು 'ಅಮ್ಮನ' ಲೈಂಗಿಕ ಶಕ್ತಿಯ ಸಮೃದ್ಧಿಯನ್ನೆ ಅವಲಂಭಿಸಿದೆ ಎಂಬ ಆದಿವಾಸಿಗಳ ನಂಬಿಕೆಯು ಮಹಿಳಾಆರಾಧನೆಯ ಸಂದರ್ಭದಲ್ಲಿ ಪ್ರಸ್ತುತವೆನಿಸುತ್ತದೆ. ಮಾರಿಯಮ್ಮನಿಗೆ ಮದುವೆ ಮಾಡಿಸುವ ಅವಳು ಮಕ್ಕಳನ್ನು ಹೆರುವ ಕತೆಯನ್ನು ಕಟ್ಟಿದಂತಿದೆ. ಭೂಮಿತಾಯಿ ಫಲವತಿಯಾಗಬೇಕಾದರೆ ಮದುವೆಯಾಗುವುದು ಅಗತ್ಯ ಅದಕ್ಕಾಗಿ ಅವಳಿಗೊಬ್ಬ ಗಂಡನಿರಲೇಬೇಕು. ಆದಿಯಲ್ಲಿ ವ್ಯವಸಾಯವನ್ನು ಮಾಡಬೇಕಾದವವರು ಹೊಲೆಯಲೇ ಆಗಿರಬೇಕೆಂಬ ಬಲವಾದ ಊಹೆಗಳಿವೆ. ಈ ಹಿನ್ನಲೆಯಲ್ಲಿ ಒಂದು ಉದಾಹರಣೆ ನೀಡುವುದಾದರೆ ಭೂಮಿತಾಯಿಯ ಜೊತೆಗೆ ಅಭೇದ ಸಂಬಂಧಗಳು ಶಿರಸಿ ಮಾರಿಕಾಂಬಿಯ ಜಾತ್ರೆಗೆ ಹೊಲೆಯನ ಸಂಬಂಧ ಕಲ್ಪಿಸಿದ್ದಾರೆ. ಮುಂದೆ ಹೊಲೆಯನ ಬಲಿಯಾಗಿ ಅವನಿಂದ ಭೂ ಸ್ವಾಮಿತ್ವವೇ ಹೋಗಿದುದರ ಸಂಕೇತವಾಗಿ ಕೋಣನ ಬಲಿ ಪ್ರಚಲಿತವಿರಬಹುದು ಅಥವಾ ಕೋಣನ ಬಲಿ ಭೂಮಿಯ ಫಲವಂತಿಕೆಗಾಗಿಯೇ ಎನ್ನುವ ಅಂಶವನ್ನು ಫ್ರೇಜನರನ್ನು ದಾಖಲಿಸಿದ ಆದಿವಾಸಿ ನಂಬಿಕೆಯ ಹಿನ್ನಲೆಯಲ್ಲಿಯೇ ಅರ್ಥೈಸಬಹುದಾಗಿದೆ'. ಎಸ್. ಎಸ್. ಹಿರೇಮಠರ ಬರಹಗಳು ಇದನ್ನು ಮತ್ತಷ್ಟು ಗಟ್ಟಿಗೊಳಿಸುತ್ತವೆ.

ಮನುಷ್ಯ ಬೇಟೆಯಕಲೆಯನ್ನು ಕಲಿಯುವುದಕ್ಕೆ ಮುಂಚೆ ಮನುಷ್ಯರು ಗುಂಪುಜೀವನ ನಡೆಸುತ್ತಿದ್ದರು. ಆಗ ಸ್ತ್ರೀಪುರುಷರ ನಡುವೆ ಕೆಲಸದ ವಿಭಜನೆಯೇನು ಆಗಿರಲಿಲ್ಲ. ಎಲ್ಲರೂ ಗೆಡ್ಡೆ-ಗೆಣಸು, ಹಣ್ಣು-ಹಂಪಲುಗಳನ್ನು ಸಂಗ್ರಹಿಸುವ ಕ್ರಿಯೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಆದರೆ ಮನುಷ್ಯ ಬೇಟೆಯ ಕಲೆಯನ್ನು ಕಲಿತ ಮೇಲೆ ಕಾಡಿನಲ್ಲಿ ಬೇಟೆಗಾಗಿ ಅಲೆಯುವ ಕೆಲಸ ಪುರುಷನದ್ದಾಯಿತು. ಸ್ತ್ರೀಯು ಮಕ್ಕಳ ಲಾಲನೆ ಪಾಲನೆಯ ಜವಾಬ್ದಾರಿಯನ್ನು ಹೊತ್ತಿದ್ದರಿಂದ ವಸತಿಯ ಸುತ್ತಮುತ್ತಲೇ ಆಹಾರ ಸಂಗ್ರಹಣೆಯ ಪ್ರಯತ್ನ ನಡೆಸುತ್ತಿದ್ದರು ಎಂದು ಅನೇಕ ವಿದ್ವಾಂಸರು ಊಹಿಸಿದ್ದಾರೆ.

ಕೃಷಿಯ ಆರಂಭದ ದಿನಗಳಲ್ಲಿ ಗಮನಿಸಿದರೆ ಕೃಷಿಗೆ ಸಂಬಂಧಪಟ್ಟಂತೆ ಮಹಿಳೆಯಪಾತ್ರ ಬಹಳ ಮಹತ್ವವಾದದ್ದು. ಏಕೆಂದರೆ ವ್ಯವಸಾಯಕ್ಕೆ ನಾಂದಿ ಹಾಡಿದವಳೇ ಹೆಣ್ಣು. ಹಾಗಾಗಿ ಮನುಷ್ಯನ ಅಲೆಮಾರಿತನ ಬದುಕನ್ನು ಒಂದೆಡೆ ನೆಲೆ ನಿಲ್ಲುವಂತೆ ಮಾಡಿದವಳೇ ಹೆಣ್ಣು ಎಂದು ಹೇಳಬಹುದು. 'ಗೆಡ್ಡೆಗೆಣಸು ಸಂಗ್ರಹಣೆಯ ಸಂದರ್ಭದಲ್ಲಿಯೇ ಸ್ತ್ರೀಯರು ಕೃಷಿಕೆಲಸದ ಆವಿಷ್ಕಾರ ಮಾಡಿದರು. ಅವರು ಹೇಗೆ ಈ ಕೃಷಿಕಾರ್ಯವನ್ನು ಕಂಡುಹಿಡಿದರೆನ್ನುವುದನ್ನು ಈಗಿನ ದಿನಗಳಲ್ಲಿ ನಾವು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ಕಾಡಿನಲ್ಲಿ ಹಣ್ಣುಹಂಪಲು ಇತ್ಯಾದಿಗಳನ್ನು ಸಂಗ್ರಹಿಸುವ ಸಂದರ್ಭದಲ್ಲಿ ಸ್ತ್ರೀಯರು ಕಾಲಾನುಕ್ರಮದಲ್ಲಿ ತಾವು ಅಲ್ಲಲ್ಲಿ ಎಸೆದಿದ್ದ ಬೀಜಗಳು ಮೊಳಕೆಯೊಡೆದು ಮೊಳಕೆಯಿಂದ ಸಸಿ ಬೆಳೆದುದನ್ನು ಕಂಡರು. ಈ ಜ್ಞಾನವೇ ಕೃಷಿಯ ಆವಿಷ್ಕಾರಕ್ಕೆ ಮೊದಲ ಹೆಜ್ಜೆಯಾಗಿರಬಹುದು'[೧೦]. ಕೃಷಿ ಆವಿಷ್ಕಾರ ಹೀಗಾಗಿರಬಹುದು ಎಂದು ಊಹಿಸಿದಂತೆ ಸ್ತ್ರೀ ಕೃಷಿಯನ್ನು ಆವಿಷ್ಕರಿಸಿದ ಕಾಲಘಟ್ಟವನ್ನು ನಾವು ಗುರುತಿಸಿಕೊಳ್ಳಬಹುದು. 'ಆಹಾರ ಸಂಗ್ರಹಣೆಯ ಹಂತ ಹೊಸಶಿಲಾಯುಗದ ಆರಂಭದೊಂದಿಗೆ ಕೊನೆಗೊಳ್ಳುತ್ತದೆ'[೧೧]. ಆದರೆ ಹೊಸಶಿಲಾಯುಗದ ಆರಂಭದೊಂದಿಗೆ ಆಹಾರ ಉತ್ಪಾದನೆಯ ಕ್ರಮ ಬೆಳೆದುಬಂದಿತು ಎಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಮಹಿಳೆಯೇ ಕೃಷಿ ಆವಿಷ್ಕಾರ ಮಾಡಿದ್ದು ಎನ್ನುವುದಾದರೆ, ನವಶಿಲಾಯುಗದ ಕಾಲಕ್ಕೆ ಸ್ತ್ರೀಯಿಂದ ಕೃಷಿ ಆವಿಷ್ಕಾರವಾಯಿತೆಂದು ಹೇಳಬಹುದು.

ಸ್ತ್ರೀಯರೇ ಕೃಷಿಯ ಆವಿಷ್ಕಾರಕರು ಎನ್ನುವುದಕ್ಕೆ ರಾಬರ್ಟ್ ಬ್ರಿಫಾಲ್ಟ್ ಎನ್ನುವ ವಿದ್ವಾಂಸ ದಂತಕಥೆಗಳ ಉದಾಹರಣೆಯನ್ನು ಕೊಟ್ಟಿದ್ದಾರೆ. 'ಅಮೇರಿಕಾದಲ್ಲಿನ ಒಂದು ಆದಿವಾಸಿ ಗುಂಪಿನ ಹೆಸರು ಚೆರೊಕಿ. ಅವರ ಒಂದು ದಂತಕಥೆಯ ಪ್ರಕಾರ ಒಬ್ಬ ಸ್ತ್ರೀ ಅರಣ್ಯದಲ್ಲಿ ಮೊದಲು ಸಸ್ಯವನ್ನು ಹುಡುಕಿದಳು. ಸಾಯುವಾಗ ಆ ಸ್ತ್ರೀ ತಾನು ಸತ್ತ ಮೇಲೆ ತನ್ನ ದೇಹವನ್ನು ನೆಲದ ಮೇಲಿಂದ ಎಳೆದುಕೊಂಡು ಹೋಗಬೇಕೆಂದು ಹೇಳಿದ್ದಳು. ಅವಳ ದೇಹ ಎಲ್ಲೆಲ್ಲಿ ನೆಲವನ್ನು ಸ್ಪರ್ಶಿಸಿದ್ದಿತೋ

ಅಲ್ಲೆಲ್ಲಾ ಬೆಳೆ ಸಮೃದ್ಧಿಯಾಗಿ ಬೆಳೆದಿದ್ದಿತು'[೧೨]. ಎಂಬ ವಿವರಗಳನ್ನು ದಂತಕಥೆ ಒಳಗೊಂಡಿದೆ. ಅಂದರೆ ಕೃಷಿಯ ಹುಟ್ಟಿಗೆ ಸ್ತ್ರೀಯೇ ಕಾರಣಕರ್ತಳು ಎನ್ನುವುದನ್ನು ಈ ದಂತಕಥೆಯು ಧ್ವನಿಸುತ್ತದೆ.

'ಹರಪ್ಪಸಂಸ್ಕೃತಿಯಲ್ಲಿ ಒಂದು ಕುತೂಹಲಕರವಾದ ಮುದ್ರೆ ದೊರೆತಿದ್ದು, ಅದು ಕೃಷಿ ದೃಶ್ಯಕ್ಕೆ ಸಂಬಂಧಿಸಿದ್ದಾಗಿದೆ. ಈ ಮುದ್ರಿಕೆಯಲ್ಲಿ ಒಂದು ಸ್ತ್ರೀ ವಿಗ್ರಹವಿದ್ದು, ಆಕೆಯ ಗರ್ಭದಿಂದ ಒಂದು ಸಸ್ಯವು ಹುಟ್ಟುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಇನ್ನೊಂದು ಬದಿಯಲ್ಲಿ ಸ್ತ್ರೀಪುರುಷರ ಚಿತ್ರಗಳಿವೆ. ಒಂದು ಮನುಷ್ಯನು ನೇಗಿಲಿನಂಥ ಆಯುಧವನ್ನು ಹಿಡಿದಿದ್ದಾನೆ. ಈ ಚಿತ್ರದಲ್ಲಿರುವ ಮನುಷ್ಯ ಉಳುಮೆ ಮಾಡುವ ರೈತನೆಂದು ಭಾವಿಸಲಾಗಿದೆ. ಗರ್ಭದಿಂದ ಸಸ್ಯವು ಹೊಮ್ಮುತ್ತಿರುವ ಸ್ತ್ರೀಚಿತ್ರವನ್ನು ಮಾತೃದೇವತೆಯೆಂದು ಹೇಳಲಾಗಿದೆ. ಈಕೆಯನ್ನು ಶಾಕಾಂಬರಿ ಎಂದು ಗುರುತಿಸುತ್ತಾರೆ. ಹೀಗೆ ಸಸ್ಯಸಂಬಂಧಿಯಾದ ದೇವತೆಯ ಇನ್ನೊಂದು ಮುದ್ರಿಕೆಯು ಹರಪ್ಪಾಸಂಸ್ಕೃತಿಯಲ್ಲೇ ದೊರಕಿದೆ. ಈ ಚಿತ್ರ ಒಂದು ಹೆಣ್ಣಿನದ್ದಾಗಿದ್ದು ಈಕೆ ಒಂದು ವೃಕ್ಷದ ಎರಡು ಕೊಂಬೆಗಳ ನಡುವೆ ನಿಂತಿದ್ದಾಳೆ. ಒಬ್ಬ ಭಕ್ತನು ಮರದ ಪಕ್ಕದಲ್ಲಿ ಬಾಗಿ ನಿಂತಿದ್ದಾನೆ. ಒಂದು ಮೇಕೆಯು ಭಕ್ತನ ಹಿಂದೆ ನಿಂತಿದೆ. ಇದರ ಕೆಳಭಾಗದಲ್ಲಿ ಏಳು ವಿಗ್ರಹಗಳನ್ನು ಕಾಣಬಹುದು. ಈ ಚಿತ್ರದ ಹೆಣ್ಣಿನವಿಗ್ರಹವನ್ನು ಮಾತೃದೇವತೆಯೆಂದು ಭಾವಿಸಲಾಗಿದೆ'[೧೩].ಈ ವಿವರಗಳು ಕೃಷಿಗೂ ಮಹಿಳೆಗೂ ಇದ್ದ ಸಂಬಂಧವನ್ನು ಸೂಚ್ಯವಾಗಿ ತಿಳಿಸುತ್ತವೆ. ಅಲ್ಲದೆ ಸಸ್ಯಗಳ ಹುಟ್ಟಿಗೆ ಮಹಿಳೆಯೇ ಕಾರಣ ಎನ್ನುವುದನ್ನು, ಸ್ತ್ರೀಯ ಗರ್ಭದಿಂದ ಸಸ್ಯವು ಹುಟ್ಟಿದಂತೆ ಚಿತ್ರಿಸಲಾದ ಈ ಮುದ್ರಿಕೆಯು ಸ್ಪಷ್ಟಪಡಿಸುತ್ತದೆ. ಒಂದು ವೃಕ್ಷದ ಎರಡು ಕೊಂಬೆಗಳ ನಡುವೆ ಒಂದು ಹೆಣ್ಣು ನಿಂತಿರುವಂತೆ ಮುದ್ರಿಕೆಯೊಳಗೆ ಚಿತ್ರಿಸಿದ ಚಿತ್ರ ಕೂಡಾ ಸಸ್ಯಗಳ ಬೆಳವಣಿಗೆಗೂ ಮಹಿಳೆಗೂ ಯಾವುದೋ ಬಗೆಯ ಸಂಬಂಧವಿದೆ ಎನ್ನುವುದನ್ನು ತಿಳಿಸುತ್ತದೆ. ಏಕೆಂದರೆ ಆದಿಮಮನುಷ್ಯ ರಚಿಸುತ್ತಿದ್ದ ಚಿತ್ರಕಲೆ, ಭಿತ್ತಿಚಿತ್ರಗಳಲ್ಲಿ ಅವರ ಬದುಕನ್ನು ಹೊರತುಪಡಿಸಿದ ಸಂಗತಿಗಳೇನಾಗಿರಲಿಲ್ಲ. ಅವರ ಸುತ್ತಮುತ್ತಲಿನ ಪರಿಸರದಲ್ಲಿ ಏನನ್ನು ಕಾಣುತ್ತಿದ್ದರೋ ಅದನ್ನೇ ಅವರು ತಮ್ಮ ಕಲೆಯಲ್ಲಿ ಅಭಿವ್ಯಕ್ತಿಸುತ್ತಿದ್ದರು. ಹಾಗಾಗಿ ಈ ಮುದ್ರಿಕೆಯೊಳಗಿನ ಚಿತ್ರಗಳು ಕೃಷಿಯೊಟ್ಟಿಗೆ ಮಹಿಳೆಗಿದ್ದ ಸಂಬಂಧದ ಬಗೆಗಿನ ಪರಿಕಲ್ಪನೆಯ ಹಿನ್ನೆಲೆಯಲ್ಲಿಯೇ ರೂಪುಗೊಂಡಿರುವ ಸಾಧ್ಯತೆ ಇದೆ.

ಕೃಷಿಯಲ್ಲಿ ಮಹಿಳೆ ಬಹುಕಾಲದಿಂದಲೂ ಕಾರ್ಯನಿರ್ವಹಿಸುತ್ತಿದ್ದಳು ಎನ್ನುವುದಕ್ಕೆ ಪ್ರಾಚೀನ ಗ್ರಂಥಗಳಾದ ರಾಮಾಯಣ, ಮಹಾಭಾರತಗಳಲ್ಲಿ ಕೆಲವು ಉಲ್ಲೇಖಗಳು ಸಿಗುತ್ತವೆ ಎಂದು ಕೆಲವು ವಿದ್ವಾಂಸರು ಹೇಳಿದ್ದಾರೆ. 'ಭಾರತದಲ್ಲಿ ಮಹಿಳೆ ಕೃಷಿಗೆ ಅಂಟಿಕೊಂಡೇ ಬೆಳೆದು ಬಂದಿದ್ದಾಳೆ. ಮಹಿಳೆಗೂ ಮಣ್ಣಿಗೂ ಬಿಗಿಯಾದ ನಂಟಿರುವುದು ರಾಯಾಯಣ, ಮಹಾಭಾರತ ಗ್ರಂಥಗಳಲ್ಲಿ ಕಾಣಬಹುದು. ಜನಕ ಮಹಾರಾಜ ತನ್ನ ಪತ್ನಿಯೊಂದಿಗೆ ಚಿನ್ನದ ನೇಗಿಲಿನಿಂದ ಭೂಮಿಯನ್ನು

ಉಳುತ್ತಿದ್ದಾನೆಂದು ರಾಮಾಯಣದಲ್ಲಿ ತಿಳಿಸಲಾಗಿದೆ'. ಪ್ರಾಚೀನಗ್ರಂಥಗಳಲ್ಲೂ ಮಹಿಳೆ ಪುರುಷನಿಗೆ ಸರಿಸಮನಾಗಿ ದುಡಿಯುತ್ತಿದ್ದಳು ಎಂಬ ಉಲ್ಲೇಖಗಳಿವೆ. 'ಕಾಳಿದಾಸ ತನ್ನ ರಘುವಂಶ ಕಾವ್ಯದಲ್ಲಿ ಮಹಿಳೆ ಕಬ್ಬು, ಭತ್ತದ ಗದ್ದೆಗಳಲ್ಲಿ ಇಂಪಾಗಿ ಹಾಡುತ್ತಿದ್ದ ಬಗ್ಗೆ ಹೇಳಿದ್ದಾನೆ. ಮೇಘದೂತದಲ್ಲಿ ಹೆಣ್ಣಿನ ಹಿರಿಮೆಯನ್ನು ಮನೋಜ್ಞವಾಗಿ ಚಿತ್ರಿಸಿದ್ದಾನೆ. ಕಾಲಕ್ಕೆ ಸರಿಯಾಗಿ ಕೃಷಿಕಾರ್ಯಗಳನ್ನು ಕೈಗೊಳ್ಳುವುದು, ಉತ್ತಮ ಬೆಳೆ ಪಡೆಯುವುದು ಇತ್ಯಾದಿಗಳಲ್ಲಿ ಮಹಿಳೆಯೂ ಪುರುಷನಷ್ಟೇ ಆಸ್ಥೆ ವಹಿಸಬಲ್ಲಳು ಎಂದು ಕಾಳಿದಾಸ ಹೇಳಿದ್ದಾನೆ' ಎಂಬ ಮಾಹಿತಿಗಳು ದೊರೆಯುತ್ತವೆ. ಡಿ.ವೆಂಕಟರಾವ್ ಅವರು ಭಾರತದಲ್ಲಿ ಮಹಿಳೆ ಕೃಷಿಯಲ್ಲಿ ಪುರುಷನೊಂದಿಗೆ ಬಹುವಾಗಿ ಸಹಕರಿಸಿದಳು ಎಂಬ ಬಗ್ಗೆ ಮತ್ತೊಂದೆಡೆ ಹೀಗೆ ಹೇಳಿದ್ದಾರೆ; 'ಪುರಾತನ ಕಲೆಗಳಲ್ಲಿ ಅನೇಕ ಕಲಾ ಕುಸುರಿಗಳು ಇದಕ್ಕೊಂದು ಉದಾಹರಣೆಯಾಗಿವೆ. ಜೈನರ ಕೃತಿಗಳಲ್ಲೂ ಮಹಿಳೆಯರು ಹೊಲದಲ್ಲಿ ಹಾಡು ಹೇಳುತ್ತಾ ಗಲಾಟೆ ಮಾಡುತ್ತಾ ಮೃಗ ಪಕ್ಷಿಗಳನ್ನು ಓಡಿಸುತ್ತಿದ್ದಳು ಎಂದು ಹೇಳಲಾಗಿದೆ' ಎಂದಿರುವರು.

'ಒಕ್ಕಲುತನ ನಿಂತಿರುವುದೇ ಮಳೆಯ ಆಧಾರದಲ್ಲಿ. ಮಳೆನಕ್ಷತ್ರಗಳನ್ನು ಜನಪದರು ಒಪ್ಪಿಕೊಂಡಿದ್ದಾರೆ. ಮುಖ್ಯವಾಗಿ ಅಶ್ವಿನಿಮಳೆ, ಭರಣಿಮಳೆ, ಪುಷ್ಯಮಳೆ, ಆಶ್ಲೇಷಾಮಳೆ, ಮಕ್ಕೆಮಳೆ, ಅನುರಾಧಮಳೆ, ಜ್ಯೇಷ್ಠಮಳೆ, ಮೂಲಾಮಳೆ, ಉತ್ತರಾಷಾಡಮಳೆ, ಶ್ರಾವಣಮಳೆ ಹೀಗೆ ಇಪ್ಪತ್ತನಾಲ್ಕು ಮಳೆಗಳನ್ನು ಒಂದು ವರ್ಷಾವಧಿಯಲ್ಲಿ ರೈತರು ಗುರುತಿಸಿಕೊಂಡಿದ್ದಾರೆ. ಈ ಒಂದೊಂದು ಮಳೆಗಳೂ ಪ್ರಾದೇಶಿಕ ವ್ಯತ್ಯಾಸಗಳಲ್ಲಿ, ಹೆಸರುಗಳಲ್ಲಿ ಕರೆಯಲ್ಪಡುತ್ತವೆ. ಹಂಪಿಯ ಪರಿಸರದಲ್ಲಿ ಹಿಂಗಾರಿ ಮಳೆಗಳೇ ಹೆಚ್ಚು. ಯುಗಾದಿ ವೇಳೆಗೆ ಒಂದು ಮಳೆ ಆಗಲೇಬೇಕೆಂಬ ಆಶಯವಿದೆ. ಮಳೆಯ ವಿವರಗಳನ್ನೆಲ್ಲ ನಕ್ಷತ್ರಗಳ ಮೂಲಕ ಹೇಳುವರು. ಒಂದೊಂದು ನಕ್ಷತ್ರವೂ ಒಂದೊಂದು ಬಗೆಯ ಮಳೆ ತರುವುದೆಂದು ನಂಬುವರು. ಭರಣಿಮಳೆ ಧರೆತುಂಬ ಹೊಳೆಹರಿಸುವುದೆಂದು ಹೇಳಿದರೆ ಸ್ವಾತಿಮಳೆಯ ಹನಿ ಮುತ್ತಿನ ಚಿಪ್ಪಿನಲ್ಲಿ ಬಿದ್ದಾಗ ಅದು ಮುತ್ತಾಗಿ ಪರಿವರ್ತಿತವಾಗಿದ್ದರೂ ಜನಪದರು ತಮ್ಮವನ್ನಾಗಿ ಸ್ವೀಕರಿಸಿದ್ದಾರೆ. ಜೀವಜಾಲದ ಜೀವಕ್ಕೆ ಅವಿನಾಭಾವ ಸಂಬಂಧವನ್ನು ಈ ಮಳೆಗಳ ಮೂಲಕ ಜನಪದರು ಕಂಡುಕೊಂಡಿರುವುದು ವಿಶಿಷ್ಟವಾಗಿದೆ. ನಿಸರ್ಗದ ಈ ಸರಪಳಿಯನ್ನು ಅನುಸಿರಿಸಿಯೆ ಒಕ್ಕಲುಸಂಸ್ಕೃತಿ ಬೆಳೆದಿರುವುದು. ಮಳೆಗಾಲವಿಲ್ಲದೆ ಹೋದರೆ ಕೃಷಿಆಚರಣೆಗಳೆಲ್ಲ ಬರಪೀಡಿತವಾಗಿ ನೆಲಕ್ಕಚ್ಚುತ್ತವೆ. ಸಮೃದ್ಧ ಮಳೆಯಾದರೆ ಹಳ್ಳಿಗಳು ಸಮೃದ್ಧವಾಗಿರುತ್ತವೆ. ಮಳೆ ಕೈಕೊಟ್ಟರೆ ಜನಪದರು ನಿಸರ್ಗವನ್ನೇ ದೂರುವರು. ಕೆರೆಕಟ್ಟೆ ಬಾವಿಗಳು ನೀರಿಲ್ಲದೆ ಬತ್ತಿ ಹೋದರೆ ಜಲಪೂಜೆಗೆ ತೊಡಗುವರು. ಮಳೆಗಾಗಿ ಪ್ರಾರ್ಥಿಸುವರು. ಕಪ್ಪೆಗಳಿಗೆ, ಕತ್ತೆಗಳಿಗೆ ಪೂಜಿಸಿ ಮೆರವಣಿಗೆಯೊ ಮದುವೆಯೊ ಮಾಡಿ ಮಳೆರಾಯನನ್ನು ಕರೆಯುವರು'[೧೪].

ಕೃಷಿಗೂ–ಮಹಿಳೆಗೂ ಅವಿನಾಭಾವಸಂಬಂಧವಿದೆ. ನೇರವಾಗಿ ಇಲ್ಲವೆ ಪರೋಕ್ಷವಾಗಿ ಮಹಿಳೆ ಕೃಷಿಯೊಂದಿಗೆ ಒಡನಾಟವನ್ನು ಹೊಂದಿದವಳಾಗಿದ್ದಾಳೆ. ಏಕೆಂದರೆ ನಮ್ಮಲ್ಲಿ 'ಬೇಸಾಯ ನಾ ಸಾಯ ನೀ ಸಾಯ ಮನೆಮಂದಿ ಎಲ್ಲ ಸಾಯ' ಎಂಬ ಗಾದೆ ಮಾತೊಂದಿದೆ. ಇದು ಕೃಷಿಕರ ಶ್ರಮದ ಬಗೆಗೆ ಹೇಳುವಂತಹ ಮಾತಾದರೂ ಈ ಗಾದೆ ಮಾತು ಕೃಷಿ ಎನ್ನುವುದು ಮನೆಗೆ ಸಂಬಂಧಿಸಿದ ಪ್ರಕ್ರಿಯೆಯಾಗಿದೆ ಎಂಬುದನ್ನು ಧ್ವನಿಸುತ್ತದೆ. ಒಂದು ಮನೆ ಎಂದರೆ ಅದು ಆ ಮನೆಯ ಗಂಡು, ಹೆಣ್ಣು ಮತ್ತು ಮಕ್ಕಳನ್ನು ಒಳಗೊಂಡಿರುವಂತಹದ್ದು. ಹಾಗಾಗಿ ಕೃಷಿ ಎನ್ನುವುದು ಮನೆಗೆ ಸಂಬಂಧಿಸಿದ ಪ್ರಕ್ರಿಯೆ ಎನ್ನುವುದಾದರೆ ಅದು ಆ ಮನೆಯ ಸದಸ್ಯರೆಲ್ಲರಿಗೂ ಸಂಬಂಧಿಸಿದ ಪ್ರಕ್ರಿಯೆಯೇ ಆಗಿದೆ. ಆದರೆ ಇಲ್ಲಿ ಕುಟುಂಬದೊಳಗಿನ ಪುರುಷ, ಮಹಿಳೆ, ಮಕ್ಕಳೆಲ್ಲರೂ ಒಂದಲ್ಲಾ ಒಂದು ರೀತಿಯಲ್ಲಿ ಕೃಷಿಯಲ್ಲಿ ಭಾಗಿಯಾಗುತ್ತಾರೆ ಎಂಬುದನ್ನು ಹೇಳಲಾಗಿದೆ. ಕೃಷಿಯಲ್ಲಿ ಮಹಿಳೆಯೂ ಭಾಗಿಯಾಗಿದ್ದಾಳೆ ಎಂಬುದಕ್ಕೆ ಈ ಮಾತೊಂದೆ ಸಾಕೆನಿಸುತ್ತದೆ.

ಆಕಾಶವನ್ನು ಗಂಡಾಗಿಯೂ ಅದಕ್ಕೆ ತದ್ವಿರುದ್ಧವಾದ ತಳಭಾಗದಲ್ಲಿರುವ ಭೂಮಿಯನ್ನು ಹೆಣ್ಣಾಗಿಯೂ ಕೃಷಿಕಸಮುದಾಯ ಪರಿಭಾವಿಸಿಕೊಂಡಿದೆ. ಗಂಡು ಹೆಣ್ಣಿನ ಕಲ್ಪನೆಯನ್ನು ಜನಪದ ಸಂಪ್ರದಾಯಗಳು ಬಲಿಷ್ಠವಾದ ರೂಪಕಗಳಲ್ಲಿ ದಾಖಲಿಸಿವೆ. ಬಹುಮಟ್ಟಿಗೆ ಇದು ಫಲವಂತಿಕೆಯ ಆಚರಣೆಗಳಲ್ಲೆಲ್ಲಾ ಪ್ರಕಟವಾಗುತ್ತದೆ. ಭೂಮಿಯೆಂಬ ಹೆಣ್ಣು ಮುಟ್ಟಾದಳೆಂದು ಭಾವಿಸಿಕೊಂಡು ಆಕೆಗೆ ತಿಂಡಿಕೊಟ್ಟು ಎಣ್ಣೆ ಕೊಟ್ಟು ಸ್ನಾನ ಮಾಡಿಸಿ ಮೂರು ದಿನ ಮೈಲಿಗೆ ಆಚರಿಸುವ ಸಂಪ್ರದಾಯವು ಕರಾವಳಿ ಕರ್ನಾಟಕದಲ್ಲಿ ಕೆಡ್ಡಾಸ ಎಂಬ ಹೆಸರಿನಲ್ಲಿ ಜನಪ್ರಿಯವಾಗಿದೆ, ಕರ್ನಾಟಕದ ಇತರೆಡೆಗಳಲ್ಲಿಯೂ ಲೈಂಗಿಕಕ್ರಿಯೆ ಸಂತಾನಭಿವೃದ್ಧಿಗೂ ಕೃಷಿಗೂ ಗಾಢವಾದ ಸಂಬಂಧಕಲ್ಪಿಸಲಾಗಿದೆ. ಕೊಂತಿಪೂಜೆ, ಗೌರಿಪೂಜೆ, ಬಲೀಂದ್ರಪೂಜೆ, ಮೊದಲಾದವು ಮೂಲತಃ ಕೃಷಿಭೂಮಿಯ ಆರಾಧನಾಕ್ರಮಗಳೇ ಆಗಿವೆ'[೧೫]. 'ಜನಪದರ ಬದುಕು ನಿಂತಿರುವುದೇ ಕೃಷಿಯ ನೆಲಗಟ್ಟಿನ ಮೇಲೆ. ಜನಪದರಲ್ಲಿ ಇಂದೂ ಅಸ್ತಿತ್ವದಲ್ಲಿರುವ ಅತ್ತೆಮನೆ ಹೊಂಗಲು, ಹೊನ್ನೇರುಕಟ್ಟುವುದು, ಜೋಕುಮಾರಸ್ವಾಮಿ, ಸುಗ್ಗಿಕುಣಿತ, ಧಾನ್ಯನೃತ್ಯ, ಮಳೆಗಾಗಿ ನಡೆಸುವ ಉಳುಮೆ ಮುಂತಾದ ಆಚರಣೆಗಳು ಮೂಲಭೂತವಾಗಿ ಫಲವಂತಿಕೆಯನ್ನು ಬೇಡುವ (Fertility rituals) ಕೃಷಿಯ ವಿಧಿಗಳೇ ಆಗಿವೆ. ಈ ಆಚರಣೆಯಲ್ಲಿ ಬಲಿ ಅರ್ಪಿಸುವುದು ಅತ್ಯಂತ ಪ್ರಮುಖ ಕಾರ್ಯಾಚರಣೆ ಯಾಗಿರುತ್ತದೆ'[೧೬]. 'ರಕ್ತ ಚೆಲ್ಲುವುದರಿಂದ ಸಮೃದ್ಧಿ ಉಂಟಾಗುತ್ತದೆ ಎಂಬುದು ಮನುಷ್ಯನ ಸಾಮಾನ್ಯ ತಿಳುವಳಿಕೆ. ಹಾಗಾಗಿ ಬಹುತೇಕ ಇಂತಹ ಆಚರಣೆಗಳು ಸಮೃದ್ಧಿಯನ್ನು ಬಯಸಿ ನಡೆಸುವ ಆಚರಣೆಗಳೇ ಆಗಿವೆ. ಹೀಗೆ ಚೆಲ್ಲಿದ ರಕ್ತವನ್ನು ಬೇಸಾಯದ ಭೂಮಿಯ ಮೇಲೆ ಚೆಲ್ಲಿ ಹೆಜ್ಜಿನ

ಬೆಳೆಗಾಗಿ ಪ್ರಾರ್ಥಿಸುವುದು ಸಾಮಾನ್ಯವಾಗಿ ಕಂಡುಬರುವ ಅಂಶವಾಗಿದೆ. ರಕ್ತ ಮತ್ತು ಸಮೃದ್ಧಿಯ ಆಚರಣೆಗೆ ಪರಸ್ಪರ ಸಂಬಂಧವಿದೆ'[೧೭]. ಜಲಸಂಸ್ಕೃತಿಯು ಮೂಲಭೂತವಾಗಿ ಕೃಷಿಯನ್ನು ಆಧರಿಸಿದ ಸಂಸ್ಕೃತಿಯಾಗಿದೆ.

ಕೃಷಿ ಸ್ತ್ರೀಯ ಸಂಶೋಧನೆಯಾಗಿದ್ದು, ಆರಂಭಕಾಲದಲ್ಲಿ ಜನರು ನಿಸರ್ಗದ ಎಲ್ಲ ಪರಿಕರಗಳನ್ನು ಸ್ತ್ರೀಗೇ ಸಮೀಕರಿಸಿ ಆರಾಧನೆ ನಡೆಸುತ್ತಿದ್ದುದು ನಮಗೆಲ್ಲಾ ಗೊತ್ತಿದೆ. ಆದರೆ ಕೃಷಿ ತಾಂತ್ರಿಕ ಆಯಾಮಗಳಿಂದ ಹೆಚ್ಚು ವಿಸ್ತಾರಗೊಳ್ಳುತ್ತಾ ಹೋದಂತೆ ಪುರುಷನ ಒಡೆತನಕ್ಕೆ ವಶವಾಗುತ್ತಾ ಬಂದಿದೆ. ಹೀಗೆ ಕೃಷಿ ಮತ್ತು ಪ್ರಕೃತಿಯ ಒಡೆತನದ ಹಕ್ಕುಗಳು ಪುರುಷರ ಕೈವಶವಾಗುವುದರ ಮೂಲಕ ಸಂಸ್ಕೃತಿಗಳಲ್ಲಿ ಅದುವರೆಗೆ ಇದ್ದ ಸ್ತ್ರೀ ಪುರುಷ ಅಂತಸ್ತಿನಲ್ಲಿ ಸ್ಥಾನಗಳು ಪಲ್ಲಟವಾಗತೊಡಗಿದ್ದನ್ನು ಕಾಣಬಹುದು. ಅಲ್ಲದೆ ನಿಸರ್ಗ ಮತ್ತು ಕೃಷಿಯ ಪರಿಕರಗಳೆಲ್ಲವು ಪುಲ್ಲಿಂಗಕ್ಕೆ (ಪುರುಷ ರೂಪಗಳಾಗಿ) ಕ್ರಮೇಣ ಪರಿವರ್ತನೆಗೆ ಆಗ ತೊಡಗಿದ್ದನ್ನು ಕಾಣಬಹುದು.

ನಿಸರ್ಗ ಮತ್ತು ನಿಸರ್ಗದ ಇತರ ರೂಪಗಳು (ಉದಾ: ನದಿ, ಸಮುದ್ರ, ಮಳೆ ಬೆಟ್ಟ, ಕಾಡು ಇತ್ಯಾದಿಗಳು) ಮೊದಲು ಪುರುಷರೂಪಗಳಾಗಿ, ಅನಂತರ ಸಮಾಜದಲ್ಲಿ ಪುರುಷಪ್ರಧಾನ ವ್ಯವಸ್ಥೆಯ ಸ್ಥಿರೀಕರಣ (Establish)ಗೊಳ್ಳದೆ, ಪುರುಷಪ್ರಧಾನತೆಯು ಮೊದಲು ಕ್ರಮೇಣವಾಗಿ ಸ್ತ್ರೀಪ್ರಧಾನತೆಯನ್ನು ಆವರಿಸಿಕೊಂಡು ಅನಂತರದ ಕಾಲದಲ್ಲಿ ಸ್ತ್ರೀರೂಪಿಯಾದ ನಿಸರ್ಗ ಮತ್ತು ನಿಸರ್ಗದ ಇತರ ರೂಪಗಳು ಪುರುಷರೂಪಗಳಾಗಿ ಮಾರ್ಪಾಟುಗೊಂಡಿರುವುದನ್ನು ಸಾಂಸ್ಕೃತಿಕ ಮಾನವಚರಿತ್ರೆಯ ಸೂಕ್ಷ್ಮ ಅವಲೋಕದಿಂದ ತಿಳಿಯಬಹುದಾಗಿದೆ'[೧೮]. ಮೆಸಪಟೋಮಿಯನ್ನರ ಪ್ರಕಾರ ಆದಿಯಲ್ಲಿ ಸಮುದ್ರ (ನಮ್ಮು) ಇತ್ತು. ಅನ್ ಮತ್ತು ಇನ್-ಕಿ ಎಂಬ ಸ್ವರ್ಗ ಮತ್ತು ಭೂಮಿಯ ದೇವತೆಗಳು ಹುಟ್ಟಿದರು. ಅನ್ ಎಂಬುವವಳು ಸುಮೇರಿಯನ್‌ರಲ್ಲಿ ಬಹಳ ಮುಖ್ಯವಾದ ದೇವತೆಯಾಗಿದ್ದಾಳೆ. ಹೀಗೆ ಭೂಮಿ, ನೀರು, ಗಾಳಿ, ಬೆಂಕಿಗಳನ್ನು ಸೃಷ್ಟಿಸುವ ಶಕ್ತಿಗಳನ್ನು ಸ್ತ್ರೀಗೆ ನೀಡುವ ಕಲ್ಪನೆಯ ಹಿಂದೆ ಮಾತೃಮೂಲ ಸಮಾಜವು ಕ್ರಿಯಾಶಾಲಿಯಾಗಿರುತ್ತದೆ. ಆದ್ದರಿಂದಲೇ ಸೃಷ್ಟಿಯಲ್ಲಿ ಸ್ತ್ರೀಗೆ ಪ್ರಾಧಾನ್ಯತೆ ದೊರಕಿರುವುದು ಸಹಜವಾಗಿಯೇ ಇದೆ. ಭೂಮಿ (ಭೂಮಿತಾಯಿ) ನೀರು (ಗಂಗಮ್ಮ) ಗಾಳಿ (ಗಾಳಿಮಾರಿ) ಬೆಂಕಿ (ಅಗ್ನಿದೇವಿ, ಜ್ಯೋತ್ಯಮ್ಮ) ಮುಂತಾದ ರೂಪಗಳಲ್ಲಿ ಸ್ತ್ರೀಯು ದೇವತೆಯಾಗಿ ಕಾಣಿಸಿಕೊಂಡಿದ್ದಾಳೆ. ಹೀಗಾಗಿ ಪಂಚಭೂತಗಳೆಲ್ಲವೂ ಒಂದಲ್ಲಾ ಒಂದು ವಿಧದಲ್ಲಿ ಜನಪದರಲ್ಲಿ ಸ್ತ್ರೀರೂಪಿಗಳೇ ಆಗಿವೆ. ಇಲ್ಲಿ ಹೆಣ್ಣನ್ನು ಗೌರವಿಸುವ, ಆತ್ಮೀಯವಾಗಿ ಕಾಣುವ, ತಮ್ಮ ಬದುಕಿನೊಳಗೇ ಇರುವ ದೈವೀರೂಪವಾಗಿ ನೋಡುವ ಕ್ರಮವಿದೆ. ಈ ಮಾತುಗಳಿಂದ ಕೆಳಗಿನ ಮೂರು ತೀರ್ಮಾನಗಳಿಗೆ ಬರಬಹುದು.

ಕೃಷಿಸಮಾಜಗಳ ಕಲ್ಪನೆಯಲ್ಲಿ ದೇವರೆಂದರೆ ಹೆಣ್ಣು. ಜೀವಸೃಷ್ಟಿಯ ಸಾದೃಶ್ಯದ ಕಾರಣ ಪ್ರಕೃತಿ ಕೂಡ ಇವರಿಗೆ ಹೆಣ್ಣೇ. ಸ್ತ್ರೀಯಃ ಸಮಸ್ತಾಃ ಸಕಲಾ ಜಗತ್ತು ಎಂದು ಹೇಳುವ ಭಾರತೀಯ ಶಾಕ್ತಪಂಥದವರಲ್ಲೂ ಹೆಣ್ಣನ್ನು ಜಾಗತಿಕ ಮೂಲಶಕ್ತಿಯನ್ನಾಗಿ ಪರಿಕಲ್ಪಿಸಿಕೊಂಡಿರುವುದು ಕಂಡು ಬರುತ್ತದೆ. ಅತ್ಯಂತ ಪ್ರಾಚೀನ ವೇದವಾದ ಋಗ್ವೇದದಲ್ಲಿ ಪ್ರಕೃತಿಯನ್ನು ಸೃಷ್ಟಿಕರ್ತ ಎಂದು ಸಾರಿದರೆ, ಸ್ತ್ರೀ ತಾನು ಕಾರಣ ಎಂದು ಸಾರುತ್ತಾಳೆ. 'ನಾನು ಇಡೀ ವಿಶ್ವದ ರಾಣಿ, ಎಲ್ಲಾ ಸಂಪತ್ತನ್ನು ಕೊಡುವವಳು, ಸತ್ಯವನ್ನು ಕಂಡಿರುವಳು ನಾನು. ನಾನು ಪೂಜ್ಯರಲ್ಲಿ ಪ್ರಥಮಳು, ನನ್ನನ್ನು ದೇವತೆಗಳು ಅನೇಕ ಸ್ಥಾನಗಳಲ್ಲಿ ಇರಿಸಿದ್ದಾರೆ. ನನ್ನ ವಾಸಸ್ಥಾನಗಳು ಅಷ್ಟು ವಿವಿಧವಾಗಿವೆ. ನಾನು ವಿವಿಧ ಪ್ರಾಣಿಗಳಲ್ಲಿ ಇದ್ದೇನೆ'[೧೯].

ಇಂದಿಗೂ ಚಾಲ್ತಿಯಲ್ಲಿರುವ 'ಹೊನ್ನೇರು'ಕಟ್ಟುವ ಆಚರಣೆ ಭೂಮಿಯನ್ನು ರಕ್ತತರ್ಪಣದ ಮೂಲಕ ಹೆಚ್ಚು ಫಲವತಿಯನ್ನಾಗಿಸುವ ಮಂತ್ರಾಚರಣೆಯನ್ನು ಆಶಯವನ್ನಾಗಿ ಹೊಂದಿದೆ. ಹೊನ್ನೇರುಕಟ್ಟುವ ಆಚರಣೆಯ ಕ್ರಮಗಳು ಸಾಂಕೇತಿಕವಾಗಿ ಮಂತ್ರಾಚರಣೆಯ ವಿಧಿಗಳನ್ನು ನಿರೂಪಿಸುತ್ತವೆ. ಪ್ರಾಣಿ ಬಲಿಯ ಮುಖಾಂತರ ಭೂಮಿಗೆ ರಕ್ತತರ್ಪಣ ಮಾಡಿದ ನಂತರ ಊರಫಲವನ್ನು ನೇಗಿಲುಕಟ್ಟಿ ಉಳುವುದು, ಲೈಂಗಿಕ ಕ್ರಿಯಾವರ್ತನೆಯಂತೆ ಕಾಣುವುದರಿಂದ ಭೂಮಿ ಹೆಚ್ಚು ಫಲವತಿಯಾಗುತ್ತಾಳೆ, ಆ ವರ್ಷದ ಫಲಸು ಹೆಚ್ಚು ಸಮೃದ್ಧವಾಗಿ ಹೆಚ್ಚುತ್ತದೆ ಎಂಬ ನಂಬಿಕೆಗೆ ಕಾರಣವಾಗಿದೆ. ಭೂವಿಗೆ ಸಲ್ಲಿಸುವ 'ಅತ್ತೆಮನೆ ಹೊಂಗಲು' ಸುಗ್ಗಿ ಪೂಜೆಗಳು ಎಲ್ಲವು ಸುಖಾಪೇಕ್ಷೆಗಳನ್ನು ಕೇಂದ್ರವಾಗಿ ಉಳ್ಳ ಆಶಯಗಳೇ ಆಗಿವೆ. ಅಲ್ಲದೆ ರಕ್ತಪ್ರೋಕ್ಷಣೆ ಮಾಡುವ, ಅನ್ನದ ಅಗಳುಗಳನ್ನು ರಕ್ತದಲ್ಲಿ ನೆನಸಿ ಊರು ಫಲದ ಸುತ್ತಹಾಕುವ ಆಚರಣೆಯ ಕ್ಷುದ್ರಶಕ್ತಿಗಳು, ಕೃಷಿರೋಗಗಳು ಮುಂತಾದವುಗಳನ್ನು ಕಟ್ಟುಮಾಡುವ (ನಿರ್ಬಂಧಿಸುವ) ಆಶಯಗಳುಳ್ಳ ಆಚರಣೆಯೂ ಆಗಿವೆ.

ಇನ್ನು ಆಕಾಶ ಭೂಮಿಗಳನ್ನು ಗಂಡು ಹೆಣ್ಣುಗಳೆಂದು ವೈದಿಕಪರಂಪರೆ ಮತ್ತು ಪ್ರಪಂಚದ ಎಲ್ಲಾ ಅಗ್ನಿಪೂಜಕ ಪರಂಪರೆಗಳು ನಂಬಿವೆ. ಆಕಾಶ ಮತ್ತು ಭೂಮಿಯ ಸಂಯೋಗದಿಂದಲೇ ಜೀವ ಸೃಷ್ಟಿಯಾಗಿದೆ ಎಂದು ಆ ಪರಂಪರೆಗಳ ಪುರಾಣಗಳು ವಿವರಿಸುತ್ತವೆ. ಭಾರತೀಯ ವೇದ ಮತ್ತು ಉಪನಿಷತ್ತುಗಳು ಜಗತ್ತಿನ ಎಲ್ಲಾ ವಸ್ತುಸೃಷ್ಟಿಗಳನ್ನು ಪುರುಷಶಕ್ತಿಯ ಮಹತ್ತಿನ ಮೂಲಕ ವಿವರಿಸಿದ್ದರೂ ಭೂಮಿಯನ್ನು ಮಾತ್ರ ಸ್ತ್ರೀರೂಪದಲ್ಲೇ ಉಳಿಸಿವೆ. ಆದರೆ ಜನಪದರು ಸ್ತ್ರೀರೂಪದಲ್ಲಿ ಕಲ್ಪಿಸಿಕೊಂಡಿದ್ದ ನೀರು (ಮಳೆ) ವಾಯು (ಗಾಳಿ)ಗಳನ್ನು ಪುರುಷರಾಗಿಸಿದ ವೈದಿಕ ಮೀಮಾಂಸಕರು ಭೂಮಿಯ ಸ್ತ್ರೀರೂಪವನ್ನು ಒಪ್ಪಿಕೊಂಡಿರುವುದಲ್ಲದೆ, ಆಕೆಯನ್ನು ಸುತ್ತಿಸಿದ್ದಾರೆ. ಪೃಥ್ವಿಸಂಹಿತೆಯ ಈ

ಉದಾಹರಣೆಯನ್ನು ಗಮನಿಸಿ, ಪೃಥ್ವಿದೇವತೆ ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ಪರ್ವತಗಳ ಮತ್ತು ಮೇಘಗಳ ಭಾರವನ್ನು ಲೀಲೆಯಿಂದ ಧರಿಸಿದ್ದಾಳೆ. ಅಂತರಿಕ್ಷದಲ್ಲಿ ಸಾಗುವ ಮೇಘಗಳ ಘರ್ಷಣೆಯನ್ನು ಧರಿಸುವವಳೂ ಇವಳೇ. ಎಲೈ ಮಹಾಮಹಿಮಳೇ ಪುಷ್ಕಳವಾದ ಪ್ರವಾಹಗಳಿಂದ ಕೂಡಿದ ನದಿ ನದಿಗಳನ್ನು ಹೊಂದಿರುವ ನೀನು ಪ್ರತ್ಯಕ್ಷವಾದ ಈ ಭೂಮಿಯನ್ನು ನಿನ್ನ ಮಹಾತ್ಮೆಯಿಂದ ಸುಖಪಡಿಸುವೆ. 'ಕರ್ನಾಟಕದ ಎಲ್ಲಾ ಕೃಷಿಕ ಜನರು ಆಚರಿಸುವ ಕೊಂತಿಪೂಜೆ, ಗೌರಿಪೂಜೆ, ಬಲೀಂದ್ರಪೂಜೆ ಮೊದಲಾದವು ಭೂಮಿಯನ್ನು ಆರಾಧಿಸುವ ಫಲವಂತಿಕೆಯನ್ನು ಸಮೃದ್ಧಗೊಳಿಸುವ ಆಶಯಗಳುಳ್ಳ ಆಚರಣೆಗಳೇ ಆಗಿವೆ. ಜನಪದರ ಜೀವನದಲ್ಲಿ ಭೂಮಿ ರಕ್ಷಕತತ್ವದ ಸಂಕೇತವಾಗಿದೆ'[೨೦] ಎನ್ನುವ ಡಿ.ಆರ್. ನಾಗರಾಜರ ಮಾತು ಕೂಡಾ ಇದನ್ನೆ ಸಮರ್ಥಿಸುತ್ತದೆ.

**ಕೃಷಿ ದ್ರಾವಿಡ ಮೂಲವೋ ಆರ್ಯ ಮೂಲವೋ**

ಭಾರತದ ವ್ಯವಸಾಯ ದ್ರಾವಿಡ ಮೂಲವೇ, ಆರ್ಯ ಮೂಲವೇ ಎಂಬ ಜಿಜ್ಞಾಸೆಯೊಂದು ಇದೆ. ಸಮೃದ್ಧವಾದ ದ್ರಾವಿಡರ ಸಿಂಧೂಸಂಸ್ಕೃತಿಯನ್ನು ನೋಡಿದರೆ ಭಾರತ ವ್ಯವಸಾಯ ದ್ರಾವಿಡಮೂಲ ಎನಿಸುತ್ತದೆ. ನೇಗಿಲ ಬಳಕೆ, ಧಾನ್ಯಗಳನ್ನು ಕುಟ್ಟುವ ಗಿರಣಿ, ಹತ್ತಿಯಿಂದ ಬಟ್ಟೆ ಮಾಡುವ ವಿಧಾನ ಬೃಹತ್ತಾದ ಕಣಜ ಇವು ಒಮ್ಮಿಂದೊಮ್ಮಿಲೇ ಬರಲು ಸಾಧ್ಯವಿಲ್ಲ. ಸಾವಿರಾರು ವರ್ಷಗಳ ಶ್ರಮಬೇಕು. ವ್ಯವಸಾಯದಲ್ಲಿ ನೇಗಿಲು ಬಳಕೆಯಾಗುತ್ತಿತ್ತು ಎಂದರೆ ಪ್ರಾಚೀನ ಮಾನವನ ಗುಳಿದಸಿ ಮತ್ತು ಕಳೆಗುದ್ದಲಿಗಳ ಕಾಲ ದಾಟಿ ಎಷ್ಟೋ ವರ್ಷಗಳಾಗಿವೆ ಎಂದು ಅರ್ಥ. ಬಾರ್ಲಿ ಮತ್ತು ಗೋಧಿಯಲ್ಲದೆ ಭತ್ತವನ್ನು ಇವರು ಬೆಳೆದಿದ್ದಾರೆ. ಭತ್ತವನ್ನು ನಾಟಿಮಾಡುವ ಪದ್ಧತಿ ಕಾಶ್ಮೀರ ಜನರಿಗೆ ಪ್ರಾಚೀನಕಾಲದಲ್ಲಿಯೇ ಗೊತ್ತಿತ್ತು ಎಂದು ಇತಿಹಾಸ ತಜ್ಞರಾದ ಡಿ.ಡಿ ಕೊಸಾಂಬಿಯವರು ಹೇಳಿದ್ದಾರೆ. ಸಿಂಧೂಜನರು ಪ್ರಪಂಚದ ಜನರಿಗೆ ಮೈಮುಚ್ಚಲು ಹತ್ತಿಯನ್ನು ರಫ್ತು ಮೂಲಕ ಆಗಿನ ಕಾಲದಲ್ಲಿಯೇ ಕಳಿಸಿದ್ದಾರೆ. ಈ ಎಲ್ಲ ಅಂಶಗಳನ್ನು ನೋಡಿದರೆ ಭಾರತದ ವ್ಯವಸಾಯ ದ್ರಾವಿಡರಿಂದ ಏಳಿಗೆಗೊಂಡಿದೆ ಎಂದು ಹೇಳಬೇಕಾಗುತ್ತದೆ. ಆರ್ಯರು ಎಂದರೆ ನೆಲವನ್ನು ಉಳುವವರು, ಹಳ್ಳಿಗಳಲ್ಲಿ ಹೆಚ್ಚಾಗಿ ವಾಸಮಾಡುತ್ತಿದ್ದರು ಹೊರಗಿನಿಂದ ಬಂದವರಲ್ಲ.

"ಶುಭಾಗಿರಿಯಾದ ಸೀತೆಯೇ, ಪ್ರತಕ್ಷಳಾಗು, ನಿನ್ನನ್ನು
ಉದ್ಘೋಷಿಸುತ್ತೇವೆ ನಮಗೆ ಫಲರೂಪದ ಕಾಣಿಕೆಗಳನ್ನು
ನೀಡು, ಇಂದ್ರನು ಸೀತೆಯ ರಕ್ಷಕನಾಗಲಿ, ಪುಶನನು
ಅವಳಿಗೆ ಮಾರ್ಗದರ್ಶಕನಾಗಲಿ, ಆಕೆಯು ಸಮೃದ್ಧವಾಗಿ
ಆಲವನ್ನು ಸಂರಕ್ಷಿಸಿಕೊಳ್ಳಲಿ, ಆನಂತರ ಕ್ಷೀರಧಾರೆಯಂತೆ
ನಮಗೆ ಉತ್ಪನ್ನಗಳನ್ನು ವರ್ಷ ವರ್ಷ ಕರುಣಿಸಲಿ" (ಋಗ್ವೇದ ೮ ೫.೧೨ ೧-೨)

ಋಗ್ವೇದದಲ್ಲಿ ನೀರಾವರಿಗೆ ಸಂಬಂಧಿಸಿದಂತೆ ಅನೇಕ ಆಧಾರಗಳು ದೊರೆಯುತ್ತವೆ. ಅದರಲ್ಲಿ 'ಬಾವಿ' ಪದೇ ಪದೇ ಬರುತ್ತದೆ. ಮತ್ತು ಅದನ್ನು ಬತ್ತಿ ಹೋಗದ ಹಾಗೆ ಜಲಭರಿತವಾಗಿರುವುದು ಎಂದು ವಿವರಿಸಲಾಗಿದೆ. (ಋಗ್ವೇದ ೧೦೧,೬) ಬಾವಿಯಿಂದ ನೀರನ್ನು ಒಂದು ಚಕ್ರ (ರಾಟೆ), ಚರ್ಮದ ಪಟ್ಟಿ ಹಾಗೂ ನೀರು ಪಾತ್ರೆ (ಬಿಂದಿಗೆಗಳಿಂದ ಮೇಲೆಳೆಯಲಾಗುತ್ತಿತ್ತು ಋಗ್ವೇದ ೮ ೬೯,೧೨) ಹಾಗೆಯೇ ಪ್ರಾಯಶಃ ಒಂದು ಮರದ ಉದ್ದ ಕೋಲಿಗೆ ಹಗ್ಗದಿಂದ ಅಗಲ ಸಾಧನವೊಂದನ್ನು ಕಟ್ಟಿದ್ದು ಕೋಲಿನ ಮತ್ತೊಂದು ತುದಿಯಲ್ಲಿ ಭಾರದ ತೂಕ ಕಟ್ಟಿ ಸನ್ನಿಯಾಧಾರದ ಮೂಲಕ ನೀರು ಎಳೆಯಲಾಗುತ್ತಿತ್ತು. ಈ ತೆರನಾಗಿ ನೀರೆಳೆಯುವ ಹಳೆಯ ಕಾಲದ ಸಾಧನಗಳು ನಮ್ಮ ದೇಶದಲ್ಲಿ ಈಗಲೂ ಕಾಣಸಿಗುತ್ತವೆ. ಮೆಕ್ಡೊನೆಲ್ ಮತ್ತು ಕೀತ್‌ರಿಗೆ ಋಗ್ವೇದಕಾಲದಲ್ಲಿ ನೀರಾವರಿಗೆ ಆಚರಣೆಯಲ್ಲಿದ್ದ ಕೃತಕ ನೀರ್ಗಾಲುವೆಗಳನ್ನು ಕುರಿತು ಸ್ಪಷ್ಟ ಆಧಾರಗಳು ದೊರೆಕಿವೆ. ಬಾವಿಯಂತಹ ನೀರಾವರಿ ಮೂಲಗಳನ್ನು, ಕೃತಕಕಾಲುವೆಗಳ ನಿರ್ಮಾಣವನ್ನು ನೋಡಿದರೆ ಅಂದಿನ ಕಾಲದಲ್ಲಿ ಕೃಷಿ ಸಮೃದ್ಧವಾಗಿತ್ತು ಎಂದು ಭಾವಿಸಬೇಕಾಗುತ್ತದೆ. ಯಜುರ್ವೇದದಲ್ಲೂ ಕೃಷಿಸಂಬಂಧಿಯಾದ ಪ್ರಾರ್ಥನಾಪದ್ಯಗಳು ಬರುತ್ತವೆ. ನಂತರದ ಅಥರ್ವಣವೇದದಲ್ಲಿ ಇಂಥದೊಂದು ಪ್ರಾರ್ಥನೆ ಬರುತ್ತದೆ.

"ಭೂವಿಯು ತನ್ನಲ್ಲಿ ತಪ್ಪಲು ಮತ್ತು ಎತ್ತರದ ಪ್ರದೇಶಗಳನ್ನು
ಒಳಗೊಂಡಿದ್ದಾಳೆ, ಇಲ್ಲಿ ಸಮತಟ್ಟಾದ ಪ್ರದೇಶವಿದೆ. ಇಲ್ಲಿ
ಅವಳು ತನ್ನಲ್ಲಿ ವಿವಿಧೋಪಯೋಗೆ ಸಸ್ಯಗಳನ್ನು ಆಡಗಿಸಿ
ಕೊಂಡಿದ್ದಾಳೆ, ಆಕೆ ತನ್ನ ತೆರೆದ ಕೈಗಳಿಂದ ಅವುಗಳನ್ನು
ನಮಗೆ ಉಡುಗೊರೆಯಾಗಿ ನೀಡಲಿ" (ಅಥರ್ವಣವೇದ ೯, ೧)

ಕೃಷಿಯನ್ನು ಧಾರ್ಮಿಕವಿಧಿಯೆಂದು ಪರಿಗಣಿಸಲಾಗಿದ್ದ ಆಂದಿನ ಕಾಲದಲ್ಲಿ, ಕೃಷಿಯನ್ನು ಪ್ರಾರಂಭಿಸುವುದಕ್ಕೆ ಮುಂಚೆ ಶುಭದಿನದಲ್ಲಿ ಭೂದೇವಿ, ಧಾನ್ಯದೇವಿಯಗಳನ್ನು ಮತ್ತು ತ್ರಿಮೂರ್ತಿಗಳನ್ನು ಪ್ರಾರ್ಥಿಸಿ ದನಗಳ ಕೊಟ್ಟಿಗೆಯನ್ನು ಸಾರಿಸಿ, ಸುಗಂಧದ್ರವ್ಯಗಳನ್ನು ಹರಡಿ ಸುವಾಸನಾಯುಕ್ತ ಹೂವುಗಳಿಂದ ಅಲಂಕರಿಸ ಲಾಗುತ್ತಿತ್ತು. ಅನಂತರ ರೈತನು ಶುಭಚಿಹ್ನೆಗಳನ್ನು ಕೂಡಬೇಕಾಗಿತ್ತು. ಇವುಗಳು ತಿನ್ನುವ ಮೇವನ್ನು ಒಂದು ಶುಭಕಾಲದಲ್ಲಿ ಸಂಗ್ರಹಿಸಿಡಬೇಕು ಮುಂತಾದವೂ ಆ ಕಾಲದಲ್ಲಿ ಅನುಸರಿಸುತ್ತಿದ್ದ ವಿಧಾನಗಳು. ಮುನಿ ಕಶ್ಯಪರದೆಂದು ಹೇಳಲಾಗುವ 'ಕೃಷಿಸೂಕ್ತಿ'ಯಲ್ಲಿ ನೇಗಿಲು ದ್ರವ್ಯ ಮತ್ತು ಆರತಿಯೆತ್ತಿ ಭೂಮಿ, ಎತ್ತು ಹಾಗೂ ನೇಗಿಲುಗಳನ್ನು ಪೂಜಿಸುವುದರಿಂದ ಶುಭವಾಗುತ್ತದೆ" ಎಂದು ಹೇಳುತ್ತಾನೆ. ಕಶ್ಯಪರ ಪ್ರಕಾರ ಮೊದಲ ಉಳುಮೆಯ ಸಂದರ್ಭದಲ್ಲಿ ಈ ಕೆಳಗಿನಂತೆ ಪ್ರಾರ್ಥನೆ ಮಾಡಿ, ಪುಣ್ಯ ಕಾರ್ಯವನ್ನು ಆರಂಭಿಸಬೇಕು:

"ಓ ಭೂದೇವಿಯೇ, ಸಮಸ್ತವನ್ನು ಧರಿಸುವ ವಿಶಾಲಿನಿಯೇ,
ನಿನಗೆ ನಮಸ್ಕರಿಸಿ ಕೃಷಿ ಮಾಡಲು ಹೊರಟಿದ್ದೇನೆ, ನನ್ನ
ಕರ್ಮದಿಂದ ಸಂತುಷ್ಟಳಾಗು ಓ ಪವಿತ್ರಳೇ ಉಳುವುದು
ಅಗೆಯುವುದು ಇತ್ಯಾದಿಗಳಿಂದ ನಿನಗೆ ಯಾವುದೇ ರೀತಿಯಿಂದ
ಧಕ್ಕೆ ಮಾಡಿದರೂ ನನ್ನನ್ನು ಕ್ಷಮಿಸು. ಈ ಎಲ್ಲ ಜೀವಿಗಳೂ
ನಿನ್ನ ಕಲೆ, ನನ್ನ ಮೇಲೆ ಕರುಣೆಯಿಟ್ಟು ಅಮಿತ ಲಾಭವನ್ನು ನೀಡು".

ಕೃಷಿಕರು ಕೃಷಿಸಂಬಂಧಿತ ಹಾಡು ಆಚರಣೆಗಳಲ್ಲಿ ತಮ್ಮ ಕೃತಕಭಾವವನ್ನು ವ್ಯಕ್ತಗೊಳಿಸಲು ವಾಗ್ರೂಪವನ್ನು ಬಳಸಿದ್ದಾರೆ. ಕೆಲವೊಮ್ಮೆ ಇವು ವ್ಯಕ್ತಿಯೊಬ್ಬನ ಸೃಷ್ಟಿಯಾಗಿದ್ದು, ವ್ಯಕ್ತಿಯಿಂದ ವ್ಯಕ್ತಿಗೆ ತಲುಪುವಲ್ಲಿ ಅಲ್ಪಸ್ವಲ್ಪ ಬದಲಾವಣೆಗೊಂಡು ಬಳಕೆಯಾಗಿತ್ತು. ಹೋದಂತೆ ರಸ್ವವಾದಂತೆ ವಿಸ್ತೃತಗೊಳ್ಳುತ್ತಲೂ ಮೂಲದ ಚೌಕಟ್ಟಿನ ಮಾದರಿಯಲ್ಲಿ ಹೊಸತಾಗಿ ಸ್ಪಷ್ಟಗೊಳ್ಳುತ್ತಲೂ ಪ್ರಾದೇಶಿಕಭಿನ್ನತೆಯನ್ನು ಪಡೆದುಕೊಂಡಿರಬೇಕು. ಭಾರತದಂತಹ ದೇಶದಲ್ಲಿ ಇಂತಹ ಸಾಹಿತ್ಯಕ್ಕೆ ಮೊದಲು ಅಷ್ಟೊಂದು ಪ್ರಾಧಾನ್ಯತೆ ದೊರಕಲಿಲ್ಲ. ಪಾಶ್ಚಾತ್ಯರಲ್ಲಿ ಇದರ ಬಗೆಗೆ ವಿಶೇಷವಾದ ಒಲವು ಆಸಕ್ತಿಮೂಡಿ ವೈಜ್ಞಾನಿಕ ಅಧ್ಯಯನ ಮೊದಲುಗೊಂಡಾಗ ಅಂತಹ ಸಾಹಿತ್ಯ ತಮ್ಮಲ್ಲಿಯೂ ಇದೆ ಎಂಬುದನ್ನು ಗಮನಿಸಿದವರು, ಗ್ರಹಿಸಿದವರು, ಅದರತ್ತ ಆಸಕ್ತರಾದರು. ಇಂದಿಗೂ ಅಂತಹ ಸಾಹಿತ್ಯವನ್ನು ಪಾಶ್ಚಾತ್ಯ ಅಧ್ಯಯನ ಮಾದರಿಗಳಲ್ಲೇ ವಿಚಾರಮಾಡಲಾಗುತ್ತಿದೆ. ನಮ್ಮಲ್ಲಿ ಇಂತಹ ಸಾಹಿತ್ಯ ಅಧ್ಯಯನಕ್ಕೆ ಈ ನೆಲದ ಸಿದ್ಧಾಂತಗಳನ್ನು ರೂಪಿಸಿ ಅಧ್ಯಯನ ಮಾಡುವ ವಿಧಾನ ಜರೂರಾಗಿ ರೂಪುಗೊಳಿಸಬೇಕಾಗಿದೆ.

ನಾವು ಜಾಗತೀಕರಣಕ್ಕೆ ಎಷ್ಟೇ ಬಿಚ್ಚಿಕೊಂಡರೂ ನಮ್ಮೊಳಗಿನ ದನಿಯನ್ನು ಕಳೆದುಕೊಳ್ಳಲು ಸಾಧ್ಯವಿಲ್ಲ. ಭೂಮಿಯ ಹದ, ಎದೆಯ ಹದ ಕೃಷಿಕರ ಪಾಡು ಹಾಡಾಗಿ ಹರಿದಿದೆ. ಆ ಹಾಡುಗಳಲ್ಲಿ ಲಯವಿರುವಂತೆ ಜೀವನದ ಲಯವು ಅಂತರ್ಗತವಾಗಿರುತ್ತದೆ. ಕೃಷಿಕರಬದುಕಿನ ಏಳುಬೀಳುಗಳು ಹಾಡಿನಲ್ಲಿ ಸಹಜವಾಗಿಯೇ ದಾಖಲಾಗಿ ಬಿಡುತ್ತವೆ. ಅಂತಹ ಹಾಡುಗಳ ಅಧ್ಯಯನವೆಂದರೆ ಕೇವಲ ಸಾಹಿತ್ಯದ ಅಧ್ಯಯನವಲ್ಲ, ಒಂದು ಸಂಸ್ಕೃತಿಯ ಅಧ್ಯಯನ. ಆ ಮೂಲಕ ಕೃಷಿಸಂಸ್ಕೃತಿಯನ್ನು ಪುನರ್‌ಸೃಷಿಸಲು ಸಾಧ್ಯ. ಅವರು ಬಳಸುವ ಭಾಷೆಯನ್ನು ಅಧ್ಯಯನಮಾಡಲು ಆಧುನಿಕರ ಶಬ್ದಕೋಶಗಳು ಪೂರ್ಣವಾಗಿ ನೆರವಾಗಲಾರವು. ಆವೃತ್ತಿಗೆ ಸಂಬಂಧಿಸಿದ ಶಬ್ದಬಳಕೆಗೆ ಅರ್ಥವನ್ನು ಹುಡುಕಬೇಕಾದವರು ಜೀವಂತ ಶಬ್ದಗಳ ಪುಟಗಳನ್ನು ನೋಡಬೇಕು. ಇದು ಮೇಲಿಂದ ಮೇಲೆ ಹಲವಾರು ಪುಸ್ತಕಗಳನ್ನು ತಡಕಾಡುವುದರಿಂದ ಅಗಾಧ ಕೆಲಸ, ಕ್ಷೇತ್ರಕಾರ್ಯ ನಡೆಸಬೇಕು. ರೈತರ ನೆನಪಿನ ಕಣಜಗಳಲ್ಲಿ ಹೆಕ್ಕಿ ತೆಗೆಯಬೇಕಾದ ಕಾರ್ಯ. ಇದಕ್ಕೆ ಸಾಕಷ್ಟು ಶ್ರಮ, ತಾಳ್ಮೆ, ಕುಶಲತೆ

ಇರಬೇಕು. ಕೃಷಿಕರು ಒಂದು ಶಬ್ದವನ್ನು ಎಲ್ಲಾ ಸಂದರ್ಭದಲ್ಲೂ ಒಂದೇ ಅರ್ಥದಲ್ಲಿ ಬಳಸುವುದಿಲ್ಲ. ಒಂದು ಶಬ್ದಕ್ಕೆ ಹಲವು ಅರ್ಥ ಮಗ್ಗಲುಗಳಿದ್ದು ಅವರು ಬಳಸುವ ಸಂದರ್ಭಸನ್ನಿವೇಶವನ್ನು ಆಧರಿಸಿಯೇ ಆ ಶಬ್ದಗಳ ಬಹುಮುಖಿ ಅರ್ಥಗಳನ್ನು ತಿಳಿಯಬೇಕಾಗುತ್ತದೆ.

ಇಂತಹ ಹಾಡುಗಳು ಸಾಮಾನ್ಯವಾಗಿ ಕೃಷಿಕರು ತಮ್ಮ ಕೆಲಸಕಾರ್ಯಗಳ ಏಕತಾನತೆಯಿಂದ ಬಿಡಿಸಿ ಕೊಳ್ಳಲು ಸೃಷ್ಟಿಮಾಡಿಕೊಂಡಿರಬೇಕು. ಬೇಸರವನ್ನು ದೂರವಿಡಲು ಹಾಡಿರಬಹುದು. ಸಾಮೂಹಿಕವಾಗಿ ಇಂತಹ ಹಾಡುಗಳನ್ನು ಹಾಡುವಾಗ, ಉದಾಹರಣೆಗೆ- ನಾಟಿಹಾಕುವ ಸಂದರ್ಭದಲ್ಲಿ ಪ್ರಧಾನಗಾಯಕರಿದ್ದು ಉಳಿದವರು ಸೊಲ್ಲುಕೊಡುತ್ತಿರುತ್ತಾರೆ. ಸಾಮೂಹಿಕವಾಗಿ ಪಾಲ್ಗೊಳ್ಳುವಿಕೆಯಲ್ಲಿ ಸಹಕಾರತತ್ವ ಬಿಂಬಿತವಾಗುತ್ತದೆ. ಇದೆಲ್ಲವೂ ಬುದ್ಧಿವಂತಿಕೆಯಲ್ಲಿ ಮೂಡಿಬಂದ್ದುದ್ದಲ್ಲ. ಭಾವನಾತ್ಮಕತೆಯ ಪಾಲು ಹೆಚ್ಚುರುತ್ತದೆ. ಅಕ್ಷರವಂಚಿತ ಜನಸಮುದಾಯದಲ್ಲಿ ಸುಪ್ತ ಕಾವ್ಯಜಗತ್ತು ಅಡಗಿರುತ್ತದೆ. ಅದಕ್ಕೆ ಸ್ಫೂರ್ತಿಸಿಕ್ಕಾಗ ಅಂದರೆ ಕಾರ್ಯನಿರತರಾದಾಗ ತಾನಾಗಿಯೇ ಹಾಡು ಅರಳುತ್ತದೆ.

ಜನಪದರ ಹಾಡುಗಳನ್ನು ಅಧ್ಯಯನ ಮಾಡತೊಡಗಿದಾಗ ಮುಖ್ಯವಾಗಿ ನಮ್ಮ ಗಮನಕ್ಕೆ ಬರಬಹುದೆಂದಾದರೆ ಅವರು ನಿರ್ವಹಿಸುತ್ತಿರುವ ಕಾಯಕಕ್ಕೆ ಅನುಗುಣವಾಗಿ ದನಿಯಲ್ಲಿ ಏರಿಳಿತಗಳು ಕೇಳಿಬರುತ್ತವೆ. ಆ ಸಂದರ್ಭದಲ್ಲಿ ಅವರು ಮಾನಸಿಕವಾಗಿ ತೋರುವ ಪ್ರಕ್ರಿಯೆಗೆ ಅನುಗುಣವಾಗಿ ಅಕ್ಷರಗಳು, ಶಬ್ದಗಳು ಬಳಕೆಯಾಗಿರುತ್ತವೆಂಬುದನ್ನು ಸೂಕ್ಷ್ಮವಾಗಿ ಯಾರಿಗೂ ಗ್ರಾಹ್ಯವಾಗುತ್ತದೆ. ಇಂಥ ಹಾಡುಗಳಲ್ಲೂ ಗಂಡಸರ ಹಾಡುಗಳು ಹೆಂಗಸರ ಹಾಡುಗಳಾಗಿರುತ್ತವೆ. ಗಾಡಿ ಹೊಡೆಯುವಾಗ, ಕಪಿಲೆಹೊಡೆಯುವಾಗ, ಹುಣಸೇಕಾಯಿಕೀಳುವಾಗ ಕೇಳಿಬರುವ ಹಾಡುಗಳು ಗಂಡಸಿನ ದನಿಯಾಗಿದ್ದರೆ ಬೀಸುವ, ಕುಟ್ಟುವಹಾಡುಗಳು ಸ್ತ್ರೀಯರ ಕಂಠದಿಂದ ಹೊರಬಂದವುಗಳಾಗಿರುತ್ತವೆ. ಶ್ರಮವಿಭಜನೆ ಯನ್ನು ಗುರುತಿಸುವ ರೀತಿಯಲ್ಲೇ ಇವನ್ನು ಗುರುತಿಸಬಹುದಾಗಿದೆ. ಜನಪದರಲ್ಲಿ ಬದುಕುವ ರೀತಿ ಹಾಗೂ ಸೃಜನಶೀಲ ಕ್ರಿಯೆ ಬೇರೆ ಬೇರೆಯಾಗಿರುವುದಿಲ್ಲ. ಎದ್ದತಕ್ಷಣ ಆ ದಿನಕ್ಕೆ ಬೇಕಾದ ಸಿದ್ಧತೆ ಮಾಡಿಕೊಳ್ಳಬೇಕಾಗುತ್ತದೆ. ಬೆಳಗಾದೊಡನೆಯೇ ರಾಗಿಕಲ್ಲಿಗೆ ಕೈಹಾಕಬೇಕಾಗುತ್ತದೆ. ಆ ಕಾಯಕದ ಜೊತೆಯಲ್ಲಿಯೇ ರಾಗಿಕಲ್ಲು ಪದಗಳು ಸೃಷಿಗೊಳ್ಳುತ್ತದೆ. ರಾಗಿಕಲ್ಲು ಕೇವಲ ಕಲ್ಲಾಗಿರದೆ ಕಲ್ಲಮ್ಮದೇವತೆಯಾಗಿ ಕಾಣಿಸುತ್ತದೆ. ಜನಪದರಿಗೆ ಬದುಕಿನ ಬಗೆಗೆ ಪ್ರೀತಿ ಇರುವುದರಿಂದಲೇ ಎಲ್ಲಾವಸ್ತುಗಳ ಬಗೆಗೂ ಪ್ರೀತಿವಿಶ್ವಾಸ, ಗೌರವ. ಹಾಡುಗಳನ್ನು ಹಾಡಿದರೆ ಸಸ್ಯಗಳು ಬೇಗ ಬೆಳವಣಿಗೆಯಾಗುತ್ತವೆಂದು ಇತ್ತೀಚಿನ ವೈಜ್ಞಾನಿಕ ಸಂಶೋಧನೆಗಳು ಪ್ರಸ್ತುತಪಡಿಸಿವೆ. ಕೆಲವರ ಪಾಲಿಗೆ ಮಣ್ಣು ಕಲ್ಲಾಗಿ ಮಾತ್ರ ಕಾಣುವ ಭೂಮಿ ಕೃಷಿಕರ ಪಾಲಿಗೆ ತಾಯಿ. ಬೆಳಗಾಗಿ ನಾನೆದ್ದು ಯಾರ್‍ಯಾರ

ನೆನೆಯಾಲಿ/ ಎಳ್ಳು ಜೀರಿಗೆ ಬೆಳೆಯೋಳ/ ಭೂಮಿತಾಯ /ಎದ್ದೊಂದು ಘಳಿಗೆ ನೆನೆದೇನ/ ಆಕೆ ಕೇವಲ ಮಾನವರಿಗೆ ಮಾತ್ರ ತಾಯಲ್ಲ. ಸಕಲ ಜೀವರಾಶಿಗಳಿಗೂ ಆಶ್ರಯಧಾತೆ, ಅನ್ನಧಾತೆ. ಸಕಲಜೀವರಾಶಿಗಳ ಚಟುವಟಿಕೆಗಳು ಈ ಭೂಮಿಯ ಮೇಲೆ ನಡೆಯುವುದು.

ಕೃಷಿಕರು ಓಡಿ ಬಿತ್ತಿದರೆ ಖಂಡುಗ ಮರಳಿಕೊಡುವ ಭೂಮ್ತಾಯಿ. ಕ್ಷಮೆ- ಕರುಣೆಗೆ ಮತ್ತೊಂದು ಹೆಸರು. ಮಣ್ಣನ್ನು ನಂಬಿ ಬದುಕುವವರಿಗೆ ಲೋಕದಲ್ಲಿ ಬೆಲೆಯಾದುದ್ದು ಮಣ್ಣೇ. ಇದಕ್ಕೆ ಮುಖ್ಯಕಾರಣ ಅವರು ಇದರೊಂದಿಗೆ ಬೆಳೆಸಿಕೊಂಡಿರುವ ಭಾವನಾತ್ಮಕ ಸಂಬಂಧ, ಆರ್ಥಿಕ ಸುರಕ್ಷತೆ ಸಹ ಭೂಮಿಯಿಂದಲೇ ಅವರಿಗೆ ದೊರೆತಿದೆ. ಅವರು ಬೆಳೆದ ಧವಸಧಾನ್ಯ ತಮಗೆ ಮಾತ್ರ ಎಂದೂ ಭಾವಿಸಿದವರಲ್ಲ. ಲೋಕಕ್ಕೆ ಅನ್ನದಾತರು ಅವರು, ಕೃಷಿಯಲ್ಲಿ ದೊರೆಯುವ ಹುಲ್ಲು, ಸೊಪ್ಪೆಯನ್ನು ತಾವು ಸಾಕಿದ ಜೀವರಾಶಿಗಳಿಗೆ ಬಳಸುತ್ತಾರೆ. ಅವರ ಬಯಕೆಗಳನ್ನು ಪೂರೈಸುವ ಭೂಮಿತಾಯಿ ಪ್ರಾತಃಸ್ಮರಣೀಯಳು ಎಂದು ಹೇಳುವುದರಲ್ಲಿ ಯಾವುದೇ ಉತ್ಪ್ರೇಕ್ಷೆಯು ಕಾಣದು.

ಕೃಷಿಗೆ ಭೂಮಿತಾಯಿಯಷ್ಟೇ ನೀರಿಗೂ ಮಹತ್ವವಿದೆ. ಕೃಷಿಕರಪಾಲಿಗೆ ಅದು ಬರಿಯ ನೀರಲ್ಲ ಗರತಿಗಂಗಮ್ಮ ಅಲ್ಲ. ಇದು ಕೇವಲ ಜೀವಧಾರಕ ವಸ್ತುವಲ್ಲ ಮೈಮನದ ಮೈಲಿಗೆಯನ್ನು ತೊಳೆದು ಹಾಕುವ ಪಾಪನಾಶಿನಿ. ಅವರು ಗಂಗೆಯನ್ನು ಪೂಜಿಸುತ್ತಾರೆ. ಮಳೆರಾಯ ಹೊನ್ನಸುರಿಸುತ್ತಾನೆ. ಭೂಮಿತಾಯಿ ಬಂಗಾರ ಬೆಳೆಯುತ್ತಾಳೆ. ಮಳೆ ಸಕಾಲಕ್ಕೆ ಬಾರದೆಹೋದರೆ ಕಂಗಾಲಾಗುತ್ತಾರೆ. ಮಳೆರಾಯನನ್ನು ಮೊರೆಹೋಗುತ್ತಾರೆ. 'ಹುಯ್ಯೋ ಹುಯ್ಯೋ ಮಳೆರಾಯ ಹುವ್ವಿನತೋಟಕೆ ನೀರಿಲ್ಲ, ಬಾರೋ ಬಾರೋ ಮಳೆರಾಯ ಬಾಳೆಯ ತೋಟಕೆ ನೀರಿಲ್ಲ. ಉಂಬೋ ಮಕ್ಕಳ ಕಂಬಕ್ಕೆ ಕಟ್ಟಿ ಹುಯ್ಯೋ ಹುಯ್ಯೋ ಮಳೆರಾಯ' ಎಂದು ಬೇಡುತ್ತಾರೆ. ಮಳೆಬೆಳೆ ಸರಿಯಾಗಿ ಆದಾಗ ಹಬ್ಬ ಹರಿದಿನಗಳು ವಿವಿಧ ಆಚರಣೆ ಸಂಪ್ರದಾಯಗಳು ಸಾಂಗವಾಗಿ ಜರುಗುತ್ತವೆ. ಬೆಳ್ದಿಂಗಳಪ್ಪನ ಪೂಜೆ ಆ ಸಂಬಂಧವಾಗಿ ತಿಂಗಳು ಮಾವನ ಪದಗಳು ಕೇಳಿಬರುತ್ತವೆ. ಇದರಲ್ಲಿ ಮನರಂಜನೆ ಮುಖ್ಯವಾಗಿದ್ದರೂ ಮಳೆ ಬರುತ್ತದೆಂಬ ನಂಬಿಕೆ, ಹಳ್ಳಿಗೆ ಒಳ್ಳೆಯದಾಗುತ್ತದೆಂಬ ಭಾವನೆ ಬಲವಾಗಿದೆ. ಮಳೆಯಪ್ಪ, ಮಳೆರಾಜ ಸಾಲತರಲು ಹೋಗುವನು ಎಂಬ ಕಲ್ಪನೆಗಳಿವೆ. ಆತನಿಗೂ ಮನುಷ್ಯರಿಗಿರುವಂತೆ ಸಂಸಾರವಿದೆ. ಕೋಪಬಂದಾಗ ದೂರಸರಿಯುತ್ತಾನೆ. ಆಗ ಆತನನ್ನು ಒಲಿಸಿಕೊಳ್ಳಲು ನಾನಾರೀತಿಯ ಆಚರಣೆಗಳು ಜರುಗುತ್ತವೆ.

ಉತ್ತರ ಕರ್ನಾಟಕದಲ್ಲಿ ಗುರ್ಚಿಹೊರುವ ಸಂಪ್ರದಾಯವಿದ್ದರೆ ದಕ್ಷಿಣ ಕರ್ನಾಟಕದಲ್ಲಿ ಮಳೆರಾಯನನ್ನು ಮಾಡುವುದಿದೆ. ಮಂಡ್ಯ ಮೈಸೂರು ಜಿಲ್ಲೆಗಳಲ್ಲಿ ಕೊಂತಿಪೂಜೆ ಪ್ರಮುಖವಾಗಿ ನಡೆಯುತ್ತದೆ. ಜನಪದರು ತಮ್ಮ ಕೃಷಿಕಾಯಕದ ಪರಿಭಾಷೆಯಲ್ಲೇ ಅಲೌಕಿಕತೆಯನ್ನು ಒಗ್ಗೂಡಿಸಿ

ಬಿಡುತ್ತಾರೆ. 'ನಾರಾಯಣ ನಿನ್ನ ನಾಮದ ಬೀಜವ/ ನಾನೆಲ್ಲಿ ಬಿತ್ತಿ ಬೆಳೆಯಲಿ ನಿನ್ನ ನಾಮ ನಾಲಗೆ ಮೇಲೆ ಬೆಳೆದೇನು' ಇಲ್ಲಿ ಬಳಕೆಯಾಗಿರುವ 'ಬೀಜ', 'ಬಿತ್ತು' ಬೆಳೆ ಶಬ್ದಗಳು ಕೃಷಿಸಂಸ್ಕೃತಿಯ ಅವಿಭಾಜ್ಯ ಅಂಗಗಳು. ಇದರಂತೆಯೇ ಕೃಷಿಯು ಉತ್ಕೃಷ್ಟವಾಗಿರಬೇಕೆಂಬುದು ಅವರ ಮಹದಾಸೆ. ಭೂಮಿಯನ್ನು ಕೃಷಿಗೆ ಹದಗೊಳಿಸಿಕೊಳ್ಳಲು ಹೋಲಕ್ಕೆ ಗೊಬ್ಬರ ಹಾಕುತ್ತಾರೆ. ಈ ಕ್ರಿಯೆಯನ್ನು ಅವರು ತಾಯಿ ಮಕ್ಕಳ ಸಂಬಂಧವಾಗಿಯೇ ನೋಡುತ್ತಾರೆ.

ಹೊಸಬಂಡಿಯಮೇಲೆ ಹಸುವಿನ ಗೊಬ್ಬರ ತಂದು

ಹಸಿದ ಬೂದೇವಿಗೆ ಹಾಕಿ ಹಸಿದ

ಮಕ್ಕಳ ಕಾಯವ್ವ ನನತಂದೆಯೇ॥

ಹಸಿದ ಭೂದೇವಿಗೆ ಊಟಹಾಕಿದಂತೆ ಗೊಬ್ಬರಹಾಕುವುದನ್ನು ಕಂಡಿರುವ ಅವರಲ್ಲಿ ಅಂತಃಕ'ರಣವೆ ಅನಾವರಣಗೊಂಡಿದೆ. ಅದನ್ನು ಉಂಡು ತರೋದೆ ಭೂದೇವಿ. ಮಣ್ಣಿನ ಮಕ್ಕಳಾದ ಕೃಷಿಕರಿಗೆ ಅನ್ನ ನೀಡುತ್ತಾಳೆ ಎಂಬ ನಂಬಿಕೆ ಅವರದು. ಭೂಮಿತಾಯಿಯ ಹಸಿವನ್ನು ತಣಿಸುವ ಶಕ್ತಿ ಗೊಬ್ಬರಕ್ಕಿದೆ ಎಂಬುದನ್ನು ಅವರು ಕಂಡುಕೊಂಡಿದ್ದಾರೆ. ಇದೊಂದು ಪವಿತ್ರವಾದ ಕೆಲಸ ಎಂದು ಭಾವಿಸಿದ್ದಾರೆ.

ಕಸವ ಹೊಡೆಯುವ ಕೈ ಕಸ್ತೂರಿ ನಾತಾವ

ಬಸವಣ್ಣ ನಿನ್ನ ಸೆಗಣೆಯ ಬಳಿದ ಕೈ

ಎಸಳ ಯಾಲಕ್ಕಿ ಗೋನಿನಾಥ

ಗೊಬ್ಬರದ ಮೂಲವಸ್ತು ಯಾವುದು? ಸಗಣಿ, ಕಸ, ಅದನ್ನು ಬಳಿಯುವಾಗ ಅವರಿಗೆ ಮುಜುಗರವೂ ಇಲ್ಲ. ಕೈವಾಸನೆಯಾಗುತ್ತದೆಂಬ ಕಿರಿಕಿರಿಯೂ ಇಲ್ಲ. ಗೊಬ್ಬರಕೊಡುವ ಹಸುವನ್ನು 'ಬಸವಣ್ಣ' ಎಂದು ಭಾವಿಸಿದ್ದಾರೆ. ಸಗಣಿ ಮುಟ್ಟಿದ ಕೈ ಪರಿಮಳದವಾಸನೆಯನ್ನು ಪಡೆದುಕೊಳ್ಳುತ್ತದೆ. ಕೃಷಿಮಾಡಿದ ಹೊಲದಲ್ಲಿ ಬೆಳೆದ ಧಾನ್ಯವನ್ನು ತಂದು ಕಣದಲ್ಲಿ ರಾಶಿಮಾಡಿದ ಕಾಳು ತನಗಾಗಿ ಮಾತ್ರವಲ್ಲ ಎಲ್ಲರಿಗಾಗಿ.

ಬಂಗಾರದ ಕೊಳಗ ಬಲಗೈಲಿ ತಕ್ಕೊಂಡು

ಭತ್ತ ಅಳೆದೇನೂ ಬಡವರಿಗೆ ಅಣ್ಣಯ್ಯ

ರಾಶಿ ಅಳೆಯೋದೋ ಬೆಳಗಾದೋ

ಎಂತ ಸಮೃದ್ಧವಾದ ಬೆಳೆ ಅದನ್ನು ತಾನೊಬ್ಬನೇ ಬೆಳೆದು ಉಂಡು ಸುಖಿಸಬೇಕೆಂಬ ಸ್ವಾರ್ಥ ಅವರದ್ದಲ್ಲ. ಇತರರಿಗೂ ಕೊಟ್ಟುಉಣ್ಣಬೇಕೆಂಬ ಭಾವನೆ ಅದು ಬಡವರಿಗೆ. ಅಂತ ಘನರಾಶಿಯನ್ನು

ಅಳೆಯುವುದ ರೊಳಗೆ ಬೆಳಗಾಯಿತು ಎನ್ನುವುದರಲ್ಲಿ ಎಂಥ' ಅರ್ಥವಿದೆ. ರಾಶಿಯ ಸಮೃದ್ಧಿಯನ್ನು ತಿಳಿಸುವುದರೊಂದಿಗೆ ಬೆಳಗು. ಎಂಬ ಶಬ್ದ ಉದಾತ್ತವಾದ ಚಿಂತನೆಗಳನ್ನು ತಿಳಿಸುತ್ತದೆ. ಇದನ್ನೇ ತಾನೇ ವೈದಿಕರು ತಮಸೋಮ ಜ್ಯೋತಿರ್ಗಮಯ ಎಂದು ಹೇಳಿರುವುದು. ವೇದಶಾಸ್ತ್ರಪುರಾಣಗಳ ಸಕಲಸಾರವನ್ನು ಕೃಷಿಸಂಬಂಧಿತ ಹಾಡುಗಳಲ್ಲಿ ಕಾಣಲು ಸಾಧ್ಯವಿದೆ.

ಜನಪದರ ಹಾಡುಗಳಲ್ಲಿ ಬರವಣಿಗೆ ರೂಪದ ಶಿಷ್ಟಪದ ರಚನೆಗೆ ಸಮಾನಾಂತರವಾಗಿ ಜನಪದ ಸಾಹಿತ್ಯ ರೂಪುಗೊಳ್ಳುತ್ತಿತ್ತು ಎನ್ನುವುದನ್ನು ಕೂಡ ಗಮನಿಸಬಹುದು. ಇದು ಅರಿವಿಲ್ಲದೆ ನಡೆದಿರಬಹುದು. ಸೂಕ್ಷ್ಮವಾಗಿ ಗಮನಿಸಿದರೆ ಪ್ರತಿಸಂಸ್ಕೃತಿಯೊಂದು ಸದ್ದಿಲ್ಲದೆ ರೂಪುಗೊಳ್ಳುತ್ತಿರುವುದನ್ನು ಗಮನಿಸಬಹುದು. ಇವು ಪ್ರಾದೇಶಿಕತೆಯಿಂದ ವಿಭಿನ್ನತೆಯನ್ನು ಪಡೆದುಕೊಂಡಿದ್ದರೂ ಮೂಲ ಆಶಯ ಒಂದೇ ಆಗಿರುತ್ತದೆ. ಕೃಷಿಕರಿಗೆ ಹಸು, ಎಮ್ಮೆ ಸರ್ವಸ್ವ ಎತ್ತನ್ನು ಬಸವಣ್ಣನೆಂದೇ ಸಂಬೋಧಿಸುತ್ತಾರೆ. ಜಗತ್ತಿನಮೂಲ ಬಸವಣ್ಣನೇ ಎಂದು ನಂಬಿ ಆತನ ಹುಟ್ಟಿನ ಮೂಲವನ್ನು ಸ್ಮರಿಸುತ್ತಾರೆ.

ಭೂಮಿ ಹುಟ್ಟದ ಮೊದಲು । ಭೂಮಿಕಟ್ಟದ ಮೊದಲು
ಭೂಪಹುಟ್ಟದ ಬಸವಯ್ಯ । ಮ್ಯಾಗಿನ
ಶಿವಗೇಳು ದಿನಕೆ ಹಿರಿಯನ

ಸಂಕ್ರಾಂತಿಹಬ್ಬದಲ್ಲಿ ಕಾಮನಹಬ್ಬದಲ್ಲಿ ಎತ್ತುಗಳನ್ನು ಪೂಜಿಸುತ್ತಾರೆ, ಕಷ್ಟದಲ್ಲಿ ಅವು ನಮ್ಮನ್ನು ರಕ್ಷಿಸುತ್ತವೆ ಎಂಬ ನಂಬಿಕೆಯೂ ಇದೆ. ತಂಬೂರಿ ಸಂಪ್ರದಾಯದವರು ಹಾಡಿರುವ ಲಿಂಗಣ್ಣಗೌಡ ಎಂಬ ಕಥನ ಕಾವ್ಯದಲ್ಲಿ ಅಣ್ಣ ತಮ್ಮಂದಿರಿಗೆ ಸಂಬಂಧಿಸಿದ ಸಂಗತಿ ಇದೆ. ಶೆಟ್ಟಣ್ಣಗೌಡ ಲಿಂಗಣ್ಣಗೌಡ ಅಣ್ಣತಮ್ಮಂದಿರು ಅಣ್ಣ ವ್ಯಾಪಾರದ ಸಲುವಾಗಿ ದೂರದ ಊರಿಗೆ ಹೋದಾಗ ಆತನ ಹೆಂಡತಿ ಹೊನ್ನಾದೇವಿ ಮೈದುನನ್ನು ಕೂಡಲು ಪ್ರಯತ್ನಿಸುತ್ತಾಳೆ, ಮೈದುನ ನಿಂಗಣ್ಣಗೌಡ ಹೊನ್ನದೇವಿಯ ಬಯಕೆಗೆ ಸ್ಪಂದಿಸುವುದಿಲ್ಲ. ಸೇಡನ್ನು ತೀರಿಸಿಕೊಳ್ಳಲು ಆಕೆ ತನ್ನ ಗಂಡ ಬಂದಾಗ ನಿಂಗಣ್ಣಗೌಡ ನನ್ನನ್ನು ಕೆಣಕಿದ ಎಂದು ಸುಳ್ಳು ಹೇಳುತ್ತಾಳೆ. ಕೋಪಗೊಂಡ ಅಣ್ಣ ತಮ್ಮನನ್ನು ಸಾಯಿಸಿ ರುಂಡವನ್ನು ಹಾಳುಬಾವಿಗೆ ಮುಂಡವನ್ನು ನೀರುಬಾವಿಗೆ ಹಾಕುತ್ತಾನೆ. ಆಗ ನಿಂಗಣ್ಣಗೌಡ ಸಾಕಿದ ಎರಡು ಎತ್ತುಗಳು ರುಂಡಮುಂಡವನ್ನು ಎತ್ತಿಕೊಂಡು ಬರುತ್ತವೆ. ಚಿಕ್ಕಬೆಳ್ಳಿ, ದೊಡ್ಡ ಬೆಳ್ಳಿ ಎಂಬ ಎರಡು ಎತ್ತುಗಳ ಶೋಕ ಮತ್ತು ಗೌರವವನ್ನು ಕಂಡ ಶಿವ ಪ್ರತ್ಯಕ್ಷವಾಗಿ ನಿಂಗಣ್ಣಗೌಡನನ್ನು ಬದುಕಿಸಿ ಆತನನ್ನು ಮತ್ತು ಎತ್ತುಗಳನ್ನು ರತ್ನಗಲ್ಲಿಗೆ ಕಳಿಸುತ್ತಾನೆ. ಅಣ್ಣ ತಮ್ಮನನ್ನು ಕೊಂದ ತಪ್ಪಿಗಾಗಿ ಕೊರಗಿ ಬಡವನಾಗಿ ಕಟ್ಟಿಗೆ ಮಾರಾಟ ಮಾಡುತ್ತ ಹೆಂಡತಿಯೊಂದಿಗೆ ರತ್ನಗಲ್ಲಿಗೆ ಬರುತ್ತಾನೆ. ಆಗ ಎತ್ತುಗಳು

ಹೊನ್ನಲಾದೇವಿಯನ್ನು ಸಾಯಿಸುತ್ತವೆ. ನಿಂಗಣ್ಣಗೌಡ ಆಗ ಮಧ್ಯ ಪ್ರವೇಶಿಸಿ ಅಣ್ಣನನ್ನು ಉಳಿಸಿ ಪದ್ಮಾವತಿ ಪಟ್ಟದ ಶೂರಸೇನ ರಾಜನಮಗಳನ್ನು ತಂದು ಮದುವೆ ಮಾಡಿಸಿ ಅಣ್ಣನಿಗೆ ಪಟ್ಟಕಟ್ಟಿ ಮದುವೆಯಾಗುತ್ತಾನೆ. ಜನಪದ ಕಥೆಗಳಲ್ಲಿ ನಿರಪರಾಧಿ ಸಾಯುವುದಿಲ್ಲ. ಇಲ್ಲಿ ನಿಂಗಣ್ಣಗೌಡ ನಿರಪರಾಧಿ ಅವನನ್ನು ಬದುಕಿಸಲು ಹಾತೊರೆಯುವುದು ಎರಡು ಎತ್ತುಗಳು. ಅವು ಬೇಸಾಯದ ಅವಿಭಾಜ್ಯ ಅಂಗಗಳು. ಹಾಗಾಗಿ ಮನುಷ್ಯ ಅವನ್ನು ಪ್ರೀತಿಸುತ್ತಾನೆ. ಪರಸ್ಪರ ಪ್ರೀತಿವಿಶ್ವಾಸ ಎಂಥ ಅಪಾಯವನ್ನು ಬೇಕಾದರೂ ಎದುರಿಸಬಲ್ಲದು ಎಂಬುದನ್ನು ಇದು ಸಮರ್ಥಿಸುತ್ತದೆ.

ಜನಪದಸಾಹಿತ್ಯದ ಇನ್ನೊಂದು ಮುಖ್ಯ ಪ್ರಕಾರವಾದ ಗಾದೆಗಳಲ್ಲಿ ಮಳೆಯ ವಾಸ್ತವ ಸ್ವರೂಪ, ಪರಿಣಾಮ, ಮುನ್ಸೂಚನೆ, ಉಪಯುಕ್ತತೆಗಳ ಬಗ್ಗೆ ಜನಪದರ ವ್ಯವಸಾಯವಿಜ್ಞಾನದ ಜೀವಂತ ದಾಖಲೆಗಳು, ಬಿತ್ತನೆಯ ಸಂದರ್ಭದಿಂದ ಹಿಡಿದು ಕುಯ್ಲು ಆಗುವವರೆಗೂ ಯಾವ ಯಾವ ಮಳೆಗಳು ಹೇಗೆ ಎಂಬ ಬಗ್ಗೆ ಗಾದೆಗಳು ಪ್ರಚಲಿತವಾಗಿದ್ದು ಇವು ನಮ್ಮ ರೈತರ ತುದಿನಾಲಿಗೆಯಲ್ಲಿ ಇರುತ್ತದೆ. ಈ ಗಾದೆಗಳನ್ನು ಕೇಳಿದಾಕ್ಷಣ ಯಾವುದೇ ಮಳೆಯಸ್ವರೂಪದ ಪರಿಚಯವಾಗಿಬಿಡುತ್ತದೆ. ರೈತರು ಪ್ರತಿಯೊಂದು ಮಳೆಯನ್ನೂ ಆಯಾ ನಕ್ಷತ್ರದ ಹೆಸರಿನಿಂದ ಗುರುತಿಸುತ್ತಾರೆ. 'ಅಸಲೆ ಮಳೆಗೆ ನೆಲವೆಲ್ಲ ಹಸಲೆ', ಹಸಿರಾಗುವುದನ್ನು ಸೂಚಿಸಿದರೆ 'ಭರ್ಣಿ ಸುರುದ್ರೆ ಬರಗಾಲ್ದ ಭಯಿಲ್ಲ', 'ಭರಣಿ ಮಳೆ ಹುಯ್ದರೆ ಧರಣೆಲ್ಲ ಬೆಲೆ' ಎಂಬ ಗಾದೆಗಳು ಭರಣಿ ಹಾಗೂ ರೋಹಿಣಿಮಳೆಗಳಿಂದ ಸಮೃದ್ಧವಾಗಿ ತಂದುಕೊಡುತ್ತದೆ ಎಂಬುದು ಅನುಭವದ ಮಾತು. ಆದ್ದರಿಂದಲೇ 'ಸ್ವಾತಿಯ ಮಳೆ ಹೋದ ಮ್ಯಾಗ ಐತೇನು?' ಎಂಬ ಗಾದೆ ರೂಢಿಯಲ್ಲಿದೆ. 'ಚಿತ್ತಿ ಸ್ವಾತಿಯಮಳೆ ಹೋದ ಮ್ಯಾಲ ಇನ್ನಯಾತರ ಮಳೆ, ಸ್ವಾತಿ ಮಳೆಯಾದ್ರೆ ಹುಲ್ಲು ಹೊಡೆ, ಸ್ವಾತಿ ಮಳೆಯಾದ್ರೆ ಚಾಪೆ ಕೆಲಗಿನದೂ ತೆನೆಯಾಗ್ತದೆ' ಹಸ್ತಾಮಳೆ ಸಮೃದ್ಧವಾಗಿ ಬೀಳುವಂಥ ಮಳೆ. ಈ ಮಳೆ ತಪ್ಪಿದರೆ ಕಷ್ಟ ತಪ್ಪಿದ್ದಲ್ಲ. 'ಹಸ್ತ ಮಳೆ ಆಗದಿದ್ದರೆ ಹಲ್ಲು ಕಿಸ್ತಾ ' 'ಉತ್ತರಮಳೆ ಹುಯ್ಯದಿದ್ದರೆ ಹೆತ್ತ ತಾಯಿ ಹಿಟ್ಟುಕೊಡಲ್ಲ' ಎಂಬ ಗಾದೆಗಳೂ ಸಹ ಉತ್ತಮ ಬೆಳೆಗೆ ಈ ಮಳೆ ಬೇಕೇ ಬೇಕು ಎಂಬುದನ್ನು ಸೂಚಿಸುತ್ತದೆ. 'ಉತ್ತರೆ ಮಳೆ ಬಂದ್ರೆ ಬಿತ್ತಿದ್ದೆಲ್ಲ ಫಲ, ಉತ್ರೆ ಮಳೆಗೆ ಹುಟ್ದ್ ಹುಲ್ಲೆಲ್ಲ ಹೊಡೆ' ಎಂಬ ಗಾದೆಗಳು ಈ ಮಳೆ ಪೈರುಗಳಿಗೆ ಬಹುಸಹಾಯಕ ಎಂಬ ಅಂಶವನ್ನೇ ಸೂಚಿಸುವಂಥಹವು.

ಇನ್ನೂ ಕೆಲವು ಮಳೆಗಳು ಅಕಾಲದಲ್ಲಿ ಸುರಿದು ಬೆಳೆಯನ್ನು ಹಾಳು ಮಾಡುತ್ತವೆ. ಇಂಥವುಗಳನ್ನು ಜನಪದರು ಗಾದೆಮಾತಿನಲ್ಲಿ ಬೈದಿದ್ದಾರೆ. ಪೈರು ಕಟಾವಾಗಿ ಹೊಲದಲ್ಲಿ ಹರಡಿದ್ದಾಗ ಅಥವಾ ಸುಗ್ಗಿಯ ಕಾಲದಲ್ಲಿ ಬಂದು ಧಾನ್ಯವನ್ನು ಕೆಡಿಸಿದ ಮಳೆಯನ್ನು ಮದೆಗೆಡುಕ ಅಶ್ವಿನಿಮಳೆಗೆ ಆರುಕಟ್ಟು, ಭರಣಿ ಮಳೆಗೆ ಬೀಜ ಬಿತ್ತು. ಕುಲ್ಡಲ ಮಳೆಗೆ ಕಲ್ಲಂಗ್ಡಿ ಊರಿದ್ರೆ ಉಲ್ಲುಡ್ಡಿ ಕಾಯಿ ಬಿಡ್ತವೆ' ಇಂತಹ ಗಾದೆಗಳು ಕೃಷಿ ಸಂಬಂಧವಾದ ಜ್ಞಾನವನ್ನು ಬೋಧಿಸುವಂಥವು. 'ಮಿಗ್ಗಿರಿ ಮಳೆಗೆ

ಮಿಕ್‌ಪಕ್ಕದ್ವೆಲ್ಲ ಚೆಲ್ಬೇಕು', ಆದ್ರಿ ಮನೇಲಿ ಹಚ್ಚಿದರೆ ಆರುಕಾಯಿ ಹೆಚ್ಚು', ಅಶ್ವಿನಿಮಳೆಗ ಆರುಕಟ್ಟು, ಭರಣಿಮಳೆಗೆ ಬೀಜ ಬಿತ್ತು, ಕುಲ್ಪನ ಮಳೆಗೆ ಕಲ್ಲಂಗ್ಡಿ ಊರಿದ್ರೆ ಉಲ್ಟುಲ್ಡಿ ಕಾಯಿ ಬಿಡ್ತವೆ' ಇಂತಹ ಗಾದೆಗಳು ಕೃಷಿ ಸಂಬಂಧದ ಜ್ಞಾನವನ್ನು ಬೋಧಿಸುವಂತಹವು.

ಗೌರಿ ಹೊತ್ತಿಗೆ ಗಡುಗೆ ಮುಳುಗೆ ಮಳೆ

ಮಗೆ ಮಳೆಗೆ ಹುಯ್ದರೆ ಮಗೆ ಗಾತ್ರ ತೆನೆ

ಸಾತಿ ಮಳೆ ಹೇತೇನು ಅಂದ್ರೂ ಬಿಡದು

ರೋಣಿ ಮಳಿಗೆ ಗುಬ್ಬಚ್ಚಿ ಪುಚ್ಚತೋಯಲ್ಲ

ಉಬ್ಬೇ ಮಳೆ ಉಬ್ಬುಬ್ಬಿ ಬಾರಿಸ್ತು

ಉಬ್ಬೇ ಮಳೆಗೆ ಉಬ್ಬುತಗ್ಗು ಸಮ

ಮುಂತಾದ ಗಾದೆಗಳು ಆಯಾ ಮಳೆಯ ಲಕ್ಷಣ, ಪರಿಣಾಮಗಲನ್ನು ತಿಳಿಸುತ್ತವೆ. ಇದೇ ಗಾದೆಗಳು ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ಇಡೀ ಕರ್ನಾಟಕದಲ್ಲಿ ಕೇಳಿಬರುತ್ತದೆ. ಮಲೆನಾಡು, ಬಯಲುಸೀಮೆ ಕರಾವಳಿಗಳ ಬೇಸಾಯಪದ್ಧತಿಯಲ್ಲಿ ವ್ಯತ್ಯಾಸವಿರುವುದರಿಂದ ಮತ್ತು ಆಯಾ ಪ್ರದೇಶಗಳಲ್ಲಿ ಬೀಳುವ ಮಳೆಗಳ ಲಕ್ಷಣವೂ ಭಿನ್ನವಾಗುತ್ತಿದ್ದರಿಂದ ಗಾದೆಗಳು ಉತ್ತಮ ಸಾಮಗ್ರಿ ಒದಗಿಸುತ್ತವೆ.

**ಬೆನವ ಒಕ್ಕಲುತನದ ಸಂಕೇತ**

ದೇವಿಪ್ರಸಾದರು ವಿವರಿಸುವ ಕೃಷಿ–ಬೇಟೆ ಕಸುಬುಗಳು ಮತ್ತು ಗೌರಿ ಗಣೇಶರ ಸಂಬಂಧವು ಈ ಸಮಸ್ಯೆಯನ್ನು ಹುಟ್ಟಿನ ಅಧಿಕೃತತೆಯ ನೆಲೆಯಿಂದ ಫಲವಂತಿಕೆಯ ಸಂಧುಕಟ್ಟಿಗೆ, ಆರ್ಯಪೂರ್ವ ಸಮಾಜದ ಸಂದರ್ಭಕ್ಕೆ ಅನ್ವಯಿಸಿ ವಿಶ್ಲೇಷಣೆ ನಡೆಸುತ್ತದೆ.

'ಗಣಪತಿ ಗೌರಿ ಇಬ್ಬರೂ ಮೂಲತಃ ಶಿಷ್ಟ ಪರಂಪರೆಯ ದೈವಗಳಲ್ಲ ಬದಲಾಗಿ ಕೃಷಿ ದೇವತೆಗಳು ಎನ್ನುವುದನ್ನು ಲೋಕಾಯತದಲ್ಲಿ ಶಕ್ತಿಯ ಪ್ರತಿರೂಪ, ಸೃಷ್ಟಿಕರ್ತೆ, ಆಕೆಯನ್ನು ವೈದಿಕರು ಜಾಣ್ಮೆಯಿಂದ ಶಿವನ ಹೆಂಡತಿಯಾಗಿಸಿ ಆಕೆಯನ್ನು ಶಿವನ ಪುರುಷನ ಅಧೀನವಾಗಿಸಿದ್ದು ಧಾರ್ಮಿಕರಾಜಕಾರಣದ ಕುತಂತ್ರವೇ ಆಗಿದೆ. ಪಾರ್ವತಿಯನ್ನು ಶಿವನು ಹೆಂಡತಿಯಾಗಿಸಿಕೊಂಡು ಪಿತೃಕುಟುಂಬ ವ್ಯವಸ್ಥೆಯ ಮೂಲಕ ಅಧೀನಪಡಿಸಿಕೊಂಡರೂ, ಸ್ತ್ರೀ ಸೃಷ್ಟಿಸಾಮರ್ಥ್ಯದ ಸಂಕೇತವಾಗಿ ಗಣಪತಿ ಅವರ ಕಣ್ಮುಂದೆಯೇ ಇದ್ದ. ಆತ ಗಂಡಿನ ಬೀಜದ ಸಹಾಯವಿಲ್ಲದೇ ಜೀವಸೃಷ್ಟಿಯಾಗುವ ಸಾಧ್ಯತೆಯನ್ನು ಲೋಕಕ್ಕೆ ಸಾರಿ ಹೇಳುವ ಸಂಕೇತವಾಗಿದ್ದ. ಆದ್ದರಿಂದಲೇ ಗಣಪತಿ ವೈದಿಕರ ದಮನಕ್ಕೆ ಗುರಿಯಾದ. ಆತನನ್ನು ಸಂಪೂರ್ಣವಾಗಿ ನಾಶಪಡಿಸುವ ಸಾಧ್ಯತೆ ವೈದಿಕರಿಗೆ ಇರಲಿಲ್ಲ. ಆ ವೇಳೆಗಾಗಲೇ ಗಣಪತಿ ಜನಸಮೂಹಗಳ ದೇವತೆಗಳ ದೇವತೆಯಾಗಿ ಪ್ರಸಿದ್ಧವಾಗಿದ್ದ. ಆದ್ದರಿಂದ

ಅಂತಹ ಪ್ರಯತ್ನವನ್ನು ಸಮಾಜದ ಬಹುಸಂಖ್ಯಾತರಾದ ಶ್ರಮಿಕ ಕೃಷಿಸಮುದಾಯಗಳು ಒಪ್ಪುತ್ತಿರಲಿಲ್ಲ. ಈ ದ್ವಂದ್ವದ ಸಂಘರ್ಷದ, ಸಮನ್ವಯದ ಫಲವೇ ಆನೆಯ ಮುಖದ, ಕಣಜಗಾತ್ರದ ಹೊಟ್ಟೆಯ, ಪುಟ್ಟ ಇಲಿ ವಾಹನದ ಗಣಪತಿಯ ಚಿತ್ರ. ಗಂಡಿನ ಸಹಯೋಗವಿಲ್ಲದ ಹುಟ್ಟು ಅಪರಿಪೂರ್ಣ, ನೈತಿಕ ಮತ್ತು ನಿಯಮಬಾಹಿರ ಎಂದು ಲೋಕಕ್ಕೆ ಸಾರಿ ಹೇಳುವ ಹಾಗೆ, ಸುಂದರ ಬಾಲಕನಾದ ಗಣಪತಿಯ ರೂಪವನ್ನು ಅಸಹ್ಯ ಪಡುವಂಥ ವಿಕಟ, ವಿಕೃತರೂಪಕ್ಕೆ ಆರ್ಯಸಂಸ್ಕೃತಿಯು ಮಾರ್ಪಡಿಸಿತು. ಅಷ್ಟೇ ಅಲ್ಲ ಗರ್ಭಕ್ಷೇತ್ರ ರಹಿತನಾಗಿ ಕೇವಲ ಶಿವನ ವೀರ್ಯದಿಂದ ಹುಟ್ಟಿದ ಸ್ಕಂದನಿಗೆ ಮಾತ್ರ ಪೂರ್ಣತೆಯ ಸುಂದರ ರೂಪವನ್ನು ಕಲ್ಪಿಸಿ, ಆ ಮೂಲಕ ಬೀಜದಶ್ರೇಷ್ಠತೆಯನ್ನು ವೈದಿಕಪರಂಪರೆ ಕಾಪಾಡಿಕೊಂಡಿತು. ಆದರೆ ಈ ರೂಪಾಂತರ ನಡೆಯುವ ಮುನ್ನವೇ ಗಣಪತಿ ಗೌರಿ ದೈವತಗಳು ಜನಸಂಸ್ಕೃತಿಯಲ್ಲಿ ಪಡೆದಿದ್ದ ದೈವಿಕಸ್ಥಾನಕ್ಕೇನೂ ಚ್ಯುತಿ ಬರಲಿಲ್ಲ. ಗಣಪತಿಯ ರೂಪಕೆಡಿಸುವ ಮೂಲಕ ಜನರನ್ನು ಆತನಿಂದ ವಿಮುಖಿಯಾಗಿಸಲು ವೈದಿಕಪರಂಪರೆ ಪ್ರಯತ್ನಿಸಿದರು ಯಶಸ್ಸು ಸಾಧಿಸಲಾರದೆ, ಗಣಪತಿ ಮತ್ತಷ್ಟು ಪ್ರಬಲ ದೈವತನಾಗಿ ನೆಲೆಗೊಂಡಿರುವುದನ್ನು ಕಾಣಬಹುದು'[೨೧] ಅಲ್ಲದೆ ಕಾಲಾಂತರದಲ್ಲಿ ವೈದಿಕಪರಂಪರೆಯೇ ಅನಿವಾರ್ಯವಾಗಿ ಗಣಪತಿಯನ್ನು ತಮ್ಮ ದೈವಗಳ ಮುಖ್ಯಸ್ಥನಾಗಿ ಮಾಡಿಕೊಂಡಿದ್ದೂ ಅಲ್ಲದೆ, ಪ್ರಥಮಪೂಜೆಯ ಹಕ್ಕನ್ನು ನೀಡುವಂತಾದದ್ದು ಈ ಎರಡು ಪರಂಪರೆಗಳ ನಡುವೆ ನಡೆದಿರುವ ಮೇಲಾಟಗಳಿಗೆ ಸಾಕ್ಷಿಯಾಗಿ ನಿಂತಿದೆ.

ರೂಪಭಗ್ನತೆಯ ಮೂಲಕ ಗಣಪತಿಯ ಹುಟ್ಟನ್ನು ಸಾಂಕೇತಿಕವಾಗಿ ಸಮಾಜದಿಂದ ಬಹಿಷ್ಕರಿಸಲು ಪ್ರಧಾನಸಂಸ್ಕೃತಿ ಪ್ರಯತ್ನಿಸಿದಷ್ಟೂ ಜನಪದರ ಜೀವನವು ಆ ವಿಕೃತಕಲ್ಪನೆಯನ್ನೇ ಹೆಚ್ಚು ಹೆಚ್ಚು ಒಪ್ಪಿಕೊಂಡಿತು. ಬಹುಶಃ ಇದಕ್ಕೆ ಕಾರಣ, ಜನಪದರ ಜೀವನದರ್ಶನವೇ ಆಗಿದೆ. ಜನಪದರಲ್ಲಿ ವಿಕೃತ ಕಲ್ಪನೆಯು ರೂಪಭಗ್ನತೆಗಿಂತ ಭಿನ್ನವಾದದ್ದು, ಪ್ರಕೃತಿ ಬೆಟ್ಟ, ಗುಡ್ಡ, ಪ್ರಾಣಿ, ಪಕ್ಷಿ, ದೈವ ಸ್ವರೂಪದವೇ ಆಗಿವೆ. ಇವೆಲ್ಲವೂ ಪೂಜಾರ್ಹವೇ. ಅವರಲ್ಲಿ ಸುಂದರವಾದದ್ದು ಎನ್ನುವ ಕಲ್ಪನೆ ಅದು ಬದುಕಿಗೆ ಅನುವಾಗುವ ಬಗೆಯದೇ ಹೊರತು ಕೇವಲ ಬಾಹ್ಯರೂಪದ, ಲಕ್ಷಣಾತ್ಮಕವಾದ ನೆಲೆಯದಲ್ಲ. ಆದ್ದರಿಂದಲೇ ಆನೆಯ ಮುಖದ ಗಣಪತಿ ಪ್ರಕೃತಿಯಸಂಕೇತವಾಗಿ ಇಡೀ ನಿಸರ್ಗವೇ ಮೂರ್ತಿಭವಿಸಿದಂತೆ, ಆತನ ವಿಕೃತಿಯ, ವಿಕಟರೂಪವೂ ಗಾಢ ಆರಾಧನೆಗೆ ಭಾಜನವಾಯಿತು.

ಇಂದಿಗೂ ಗಣೇಶನನ್ನು ಮಣ್ಣಿನಿಂದಲೇ ತಯಾರಿಸಿ, ಸುಡದೆ, ಪೂಜಿಸಿ ನಂತರ ಜಲಧಿಯಲ್ಲಿ ವಿಸರ್ಜಿಸುವ ಆಚರಣೆಯಲ್ಲಿ ಪ್ರಕೃತಿ ಮತ್ತು ಗಣಪತಿಯನ್ನು ಏಕವಾಗಿಸಿಕೊಂಡಿರುವ ತತ್ವವೊಂದು ಮೈಪಡೆದಿದೆ. ವೈದಿಕಪರಂಪರೆ ರಾಜ್ಯ, ಅಧಿಕಾರಗಳಿಂದ ವಿರೂಪಗೊಳಿಸುವಲ್ಲಿ ಸಫಲವಾಯಿತೇ ಹೊರತು ಗಣಪತಿಯನ್ನು ಸಮಾಜದಿಂದ (ಜನಪದ ಸಮೂಹದಿಂದ) ಉಚ್ಚಾಟಿಸಲು ಸಾಧ್ಯವಾಗಲಿಲ್ಲ.

ಅನೇಕ ಜಾನಪದಕಥನ, ಕಲೆ, ಪರಿಕರಗಳಲ್ಲಿ, ವೈದಿಕಪರಂಪರೆ ಮತ್ತು ಇತ್ತೀಚಿನ ವಸಾಹತು ಪರಂಪರೆಗಳು ಹೇರಿದ ಮೌಲ್ಯಗಳು ಪ್ರಶ್ನಿಸಲ್ಪಟ್ಟಿರುವ, ಸರಾಸಗಟಾಗಿ ತಿರಸ್ಕರಿಸಲ್ಪಟ್ಟಿರುವ ನೆಲೆಗಳನ್ನು ಗುರುತಿಸಬಹುದು. ಜನಪದ ಸಂಸ್ಕೃತಿ ಹೊರಗಿನ ಪ್ರತಿಯೊಂದು ವಿಚಾರವನ್ನೂ ಒಪ್ಪಿಕೊಳ್ಳಲಿಲ್ಲ ಎನ್ನುವುದು ಈ ಮಾತಿನ ಅರ್ಥವಲ್ಲ. 'ಅನೇಕ ಸಂಗತಿಗಳಲ್ಲಿ ಕೆಲವನ್ನು ಒತ್ತಾಯದಿಂದ ಪೂರ್ಣ ಒಪ್ಪಿಕೊಂಡಿದ್ದರೂ ತನ್ನ ಅನನ್ಯತೆಯ ಲಕ್ಷಣಗಳನ್ನು ಬಿಟ್ಟು ಕೊಟ್ಟಿಲ್ಲದಿರುವುದು ಅದರ ಶ್ರೇಷ್ಠತೆಗೆ ಸಾಕ್ಷಿಯಾಗಿದೆ. ಗಣಪತಿಯ ಹುಟ್ಟು ವಿಕೃತಿ ಮತ್ತು ಗಣಪತಿಯ ಜನಪ್ರಿಯತೆ ಸಂಸ್ಕೃತಿಯಸಂಕರಗಳಲ್ಲಿ ಹುದುಗಿರುವ ಹಿಂಸೆಯನೆಲೆಯನ್ನು ತೋರುವ ಅನನ್ಯ ಉದಾರಣೆಯಾಗಿದೆ'[೨೨]. ಅಂಗಾಂಗ ರಚನೆಯಲ್ಲಿ ವಿನ್ಯಾಸದಲ್ಲಿ ಗಣಪತಿ ಬಹುಮಟ್ಟಿಗೆ ಕೃಷಿಸಾಧನಗಳನ್ನು ಹೋಲುತ್ತಾನೆ. ಆ ದೇವರ ಅಗಲವಾದ ಎರಡು ಕಿವಿಗಳ ವಿನ್ಯಾಸ ರೈತಾಪಿ ಜನರು ಕಾಳೂ ಕಡಿಯನ್ನು ತೂರುವ ಮತ್ತು ಕೇರುವ ಮತು ಕಸಕಡ್ಡಿಯನ್ನು ತಗೆದು ಶುದ್ದ ಮಾಡುವ ಮೊರಗಳಂತಿದ್ದರೆ, ಸೊಂಡಿಲು ನೀರೆತ್ತುವ ಚರ್ಮದ ಕಪಿಲೆಬಾನಿಯನ್ನು ಹೋಲುತ್ತದೆ. ಅದು ತುದಿಯಲ್ಲಿ ಕಿರಿದಾಗಿಯೂ ಮುಖಕ್ಕೆ ಅಂಟಿಕೊಂಡಿರುವ ಭಾಗದಲ್ಲಿ ಅಗಲವಾಗಿಯೂ ಕಂಡು ಬರುತ್ತದೆ. ಸೊಂಟಕ್ಕೆ ಸುತ್ತಿಕೊಂಡಿರುವ ಹಾವು ಕಪಿಲೆಹೊಡಿಯುವಾಗ ಬಳಸುವ ಹಗ್ಗದಮಿಣಿಯಂತೆಯೂ ಉಬ್ಬಿದ ಹೊಟ್ಟೆಯು ಕುಂಭಾರರು ಜೇಡಿಮಣ್ಣಿನಿಂದ ಮಾಡಿ ಹದವಾಗಿ ಸುಟ್ಟು ಧಾನ್ಯಸಂಗ್ರಹಣೆಗಾಗಿ ಸಂರಕ್ಷಣೆಗಾಗಿ ಬಳಸುವ ವಾಡೆಯಂತಿದೆ. ಎಲ್ಲಿ ಧಾನ್ಯಗಳನ್ನು ಸಂಗ್ರಹಿಸಿಡುತ್ತಾರೊ ಅಂಥ ಜಾಗಗಳಲ್ಲಿ ಇಲಿ ಬರುವುದು ಸರ್ವೇಸಾಮಾನ್ಯ. ಇಲಿಗಳು ಓಡಾಡುವಲ್ಲಿ ಹಾವುಗಳು ಓಡಾಡುವುದನ್ನು ಇಂದಿಗೂ ನೋಡಬಹುದಾಗಿದೆ. ಏಕದಂತವು ನೇಗಿಳಕುಳವನ್ನು ಸೂಚಿಸುತ್ತದೆ. ಎರಡು ಕಾಲುಗಳು ಭತ್ತ ಕುಟ್ಟಲು ಬಳಸುವ ಒನಕೆಯಂತಲೂ ನಾಲ್ಕು ಕೈಗಳು ಬೇಸಾಯದ ಬದುಕು ಕೈಗೆ ಕೈ ಸೇರದರೇನೇ ಸಾದ್ಯವಾಗುವುದು ಎಂಬುದನ್ನು ತಿಳಿಸುತ್ತದೆ. ಹಾಗೆಯೇ ಪಾಶ ಅಂಕುಶಗಳು ಕೂಡ ವ್ಯವಸಾಯಕ್ಕೆ ಬಳಸುವ ಇತರೆ ಸಾಧನಗಳನ್ನು ಹೋಲುವುದುಂಟು. ಮೋದಕ( ಕಡುಬು) ಕೂಡ ಹೊಸಬೆಳೆ ಬಂದಾಗ ಮಾಡುವ ಸುಗ್ಗಿಯನ್ನು ನೆನಪಿಗೆ ತರುತ್ತದೆ. ಆನೆಯ ಮುಖವನ್ನು ಒಟ್ಟಾಗಿ ಗ್ರಹಿಸಿದಾಗ ಬೇಸಾಯಗಾರನಿಗೂ ಕಾಡಿಗೂ ಇರುವ ನಿಕಟವಾದ ಸಂಪರ್ಕ ಸಂಬಂಧವು ವ್ಯಕ್ತವಾಗುತ್ತದೆ. ಈ ಕಾರಣದಿಂದಾಗಿ ಗಣಪತಿಯು ಶ್ರಮಸಂಸ್ಕೃತಿಯ ಕೃಷಿಮೂಲದ ಹೆಸರು ಎಂಬುದನ್ನು ಒಪ್ಪಿಕೊಳ್ಳಲು ಯಾವುದೇ ತೊಡಕು ಇರಲಾರದು. ಎಲ್ಲಾ ದೇವತೆಗಳನ್ನು ಪೂಜಿಸುವ ಮೊದಲಲ್ಲಿ ಗಣಪತಿಗೆ ಮೊದಲಪೂಜೆ ಎನ್ನುವುದನ್ನು ಒಪ್ಪಿಕಂಡರೂ ಭಾರತ ಕೃಷಿಪ್ರಧಾನ ದೇಶವೆಂಬುದನ್ನು ಪುಷ್ಠೀಕರಿಸಿದಂತೆಯೇ ಆಗುತ್ತದೆ. 'ಕೃಷಿಕರು ತಾವು ಬೇಸಾಯಕ್ಕಾಗಿ ಬಳಸುವ ಎಲ್ಲಾ ಸಾಮಗ್ರಿಗಳನ್ನು ವ್ಯವಸ್ಥಿತವಾಗಿ ಜೋಡಿಸಿ ಪೂಜಿಸುವ ಪದ್ದತಿ ಹಳ್ಳಿಗಳಲ್ಲಿ ಇಂದಿಗೂ ಕಂಡು ಬರುತ್ತದೆ. ಅಂದರೆ

ಅಂಥಾ ಪೂಜಾಸಂದರ್ಭದಲ್ಲಿಯೇ ಗಣಪತಿಯ ವಿಗ್ರಹದರೂಪದ ಕಲ್ಪನೆ ಮೊಳೆತಿರಬೇಕು. ಗಣಪತಿ ಹಬ್ಬದ ಆಚರಣೆಯ ಸಂದರ್ಭದಲ್ಲಿ ಪೂಜಿಸುವ ಕೂರಿಸುವ ಗಣಪತಿ ವಿಗ್ರಹಗಳು ಮಣ್ಣಿನಿಂದಲೇ ತಯಾರುಮಾಡುವುದು ಕೂಡ ಕೃಷಿಗೆ ಮಣ್ಣೇ ಆಧಾರವೆಂಬುದನ್ನು ತಿಳಿಸುತ್ತದೆ. ಪೂಜಾ ನಂತರ ಗಣಪತಿ ವಿಸರ್ಜನೆ ನೀರಿನಲ್ಲಿಯೇ ಆಗುವುದು ಕೂಡಾ ಕೃಷಿಗೆ ಜಲವೇ ಆಧಾರವೆಂಬುದನ್ನು ಸ್ಪಷ್ಟಪಡಿಸುತ್ತದೆ[೨೩].

ಭಾರತದಲ್ಲಿ ಬಿಹಾರ, ಒರಿಸ್ಸಾ-ಬೆಂಗಾಲ್‌ಗಳಲ್ಲಿ, ನಡೆಯುತ್ತಿದ್ದ ಪ್ರಕೃತಿಗೆ ಬಲಿನೀಡುವ ಆಚರಣೆಯನ್ನು ಫ್ರೇಜರ್ ದಾಖಲಿಸಿದ್ದಾರೆ. ಈ ರಾಜ್ಯಗಳಲ್ಲಿ ಕೊಂಡಾಸ್ ಎಂಬ ಜನಾಂಗವಿದ್ದು ಇವರ ದ್ರಾವಿಡ ಪ್ರ-ಅಸ್ಟ್ರೊಲೂಯ್ಡ್ ಜನಾಂಗಕ್ಕೆ ಸೇರಿದವರು. ಈ ಜನಾಂಗದಲ್ಲಿ ನರಬಲಿಗೆ ಅಂತಲೇ ಒಂದು ಪಂಗಡವನ್ನು (ಕುಟುಂಬ) ನೇಮಿಸಲಾಗಿತ್ತು. ಇವರನ್ನು (ಬಲಿಪಶು) ಮೆರಿಯಾ (Meriah) ಎಂದು ಗುರುತಿಸಲಾಗಿತ್ತು. ಪ್ರತಿವರ್ಷವೂ ನಡೆಯುತ್ತಿದ್ದ ನರಬಲಿಯ ಆಚರಣೆಯೂ ಅತ್ಯಂತ ಭೀಭತ್ಸವಾಗಿತ್ತು. ಬಲಿಯಾಗುವ ವ್ಯಕ್ತಿಯನ್ನು ವೃಕ್ಷವೊಂದಕ್ಕೆ ಕಟ್ಟಿ ಚೂಪಾದ ಕೋಲುಗಳಿಂದ ಆತನ ದೇಹವನ್ನು ಆಚರಣೆಯಲ್ಲಿ ಭಾಗವಹಿಸುತ್ತಿರುವ ಎಲ್ಲರೂ ಇರಿಯಬೇಕಾಗಿತ್ತು. ಈ ಆಚರಣೆಗೆ ಬೇರೆ ಬೇರೆ ಊರುಗಳಿಂದ ಜನ ಬರುತ್ತಿದ್ದರು. ಬಲಿಯಾದವನ ತಲೆ ಮತ್ತು ಮೂಳೆಗಳನ್ನು ಹೊರತುಪಡಿಸಿ ಅವನು ಇನ್ನೂ ಜೀವಂತವಾಗಿದ್ದಾಗಲೇ ಅವನ ಮೈಯಿಂದ ಕೈಗೆ ಸಿಗುವಷ್ಟು ಮಾಂಸವನ್ನು ಕಿತ್ತುಕೊಳ್ಳುತ್ತಿದ್ದರು. ಮತ್ತು ಆ ಮಾಂಸವನ್ನು ಓಡುತ್ತಾ ತಮ್ಮ ಗ್ರಾಮಗಳಿಗೆ ತರುತ್ತಿದ್ದರು. ಅಲ್ಲಿ ಪೂಜಾರಿ ಅದನ್ನು ಎರಡು ಭಾಗ ಮಾಡಿ ಒಂದು ತುಣುಕನ್ನು ಊರಿನ ಮಧ್ಯೆ ಆಗಲೇ ಸಿದ್ದಪಡಿಸಿದ್ದ ಗುಳಿಯಲ್ಲಿ ಹೂತಿಡುತ್ತಿದ್ದ. ಮತ್ತು ಇನ್ನರ್ಧ ಮಾಂಸದ ತುಣುಕಿನಲ್ಲಿ ಊರಿನಲ್ಲಿರುವ ಮನೆಗಳಿಗೊಂದರಂತೆ ತುಂಡುಮಾಡಿ ಹಂಚುತ್ತಿದ್ದ. ಈ ಪವಿತ್ರ ಮಾಂಸದ ತುಂಡನ್ನು ಆ ಮನೆಗಳ ಯಜಮಾನರು ತಮ್ಮ ಹೊಲಗಳಿಗೆ ತೆಗೆದುಕೊಂಡು ಹೋಗಿ ಹೂಳಿ ಬರುತ್ತಿದ್ದರು. ಈ ಆಚರಣೆಯಿಂದ ಭೂಮಿಯ ಫಲವಂತಿಕೆವೃದ್ಧಿಸುವುದೆಂದು ಅವರು ಭಾವಿಸಿದ್ದರು.

**ಕೃಷಿ ಆಚರಣೆಗಳು ಮತ್ತು ಮಳೆ ಕಥನಗಳು**

**ಮಳೆಗಾಲದ ಕೃಷಿಯ ಹಾಡು: 'ಒಯ್ಯಕಾಕುವ'**

ಕೊಡವರು ಪ್ರಧಾನವಾಗಿ ಕೃಷಿಕರು. ದುಡಿಮೆಯ ಕಸುವನ್ನು ತುಂಬಿಕೊಂಡವರು. ಅವರ ವ್ಯವಸಾಯದ ಅಧಿದೇವತೆ ಇಗ್ಗುತಪ್ಪ. ಅವನ ಜೊತೆಗೆ ಭೂಮಿಕಾಣಕೆಗಳ ರಕ್ಷಕ. ಗುಳಿಗರಾಜಾವು (ಅರಿದ್ರ ಮಾಸದಲ್ಲಿ ಇವನಿಗೆ ಆಹಾರವುಂಟು.) ಇವರ ಆಸರೆಯಲ್ಲಿ ವ್ಯವಸಾಯದ ಕಾರ್ಯಾರಂಭ.

ಒಯ್ಯಕಾಕುವ ಹಾಡನ್ನೂ ಸಾಮಾನ್ಯವಾಗಿ ಕೊಡವರ ಆಷಾಡಮಾಸವೆನ್ನಿಸುವ ಕಕ್ಕಡ (ಆಟಿ) ಮಾಸದಲ್ಲಿ (ಜುಲೈ-ಆಗಷ್ಟ್) ಮಾತ್ರ ಹಾಡಬೇಕೆಂಬ ಕಟ್ಟುಪಾಡಿದೆ. ಈ ಹಾಡಿನಲ್ಲಿ ನಾಟಿಕಾಲ ಒದಗುವ ಮುನ್ನ ಮಾಡಿಕೊಂಡ ಸಿದ್ದತೆ, ಮಳೆ ಬಿದ್ದ ಮೇಲೆ ಉತ್ತು ಬಿತ್ತುವ ಬಗೆ, ನಾಟಿಯ ರೀತಿ-ನೀತಿ, ನಾಟಿ ಓಟದ ಸ್ಪರ್ದೆ, ನಾಟಿ ನೆಟ್ಟಿದ್ದಕ್ಕೆ ಫಲಶೃತಿ, ಬೆಳೆಯ ಬಗ್ಗೆ ನಿರೀಕ್ಷೆ. ಇಗ್ಗುತಪ್ಪ, ಕಾವೇರಮ್ಮೆಯರ ಪ್ರಾರ್ಥನೆ, ತಮ್ಮ ಒಕ್ಕದ ಇತಿಹಾಸವನ್ನು ಪೋಣಿಸಿ ಹಾಡುವುದುಂಟು. ಎರಡನೇ ಮಾದರಿಯಲ್ಲಿ ಗಣಪತಿಪ್ರಾರ್ಥನೆಯೂ ಇರುತ್ತದೆ. ಮನೆ, ಸಮಾಜ ಹಾಗೂ ದೇಶಕ್ಕೆ ಬೆಳೆದ ಬೆಳೆಯ ಭಾಗ ನೀಡಬೇಕಾದ ಕರ್ತವ್ಯ. ನಾಟಿ ನೆಡಬೇಕಾದವರು, ನಾಟಿಕಾರರಿಗೆ ಬಡಿಸುವ ತರತರ ಅಡಿಗೆಯ ವಿವರಗಳು, ನಾಟಿಗೆ ಉಪಯೋಗಿಸುವ ಭತ್ತದಮಾದರಿಗಳು, ಹಾಗೂ ನಂಜುಂಡದೇವರ ನೆನಕೆ ಇವುಗಳ ಬಗ್ಗೆ ಸಾಲುಗಳಿವೆ.

> ಕೊಡಗು ಸ್ವದೇಶವು ಎಷ್ಟೋ ಚೆಂದವಾದುದು।
> ಬೆಟ್ಟ ಬೆಟ್ಟ ತುದಿಯೇ, ಮಲೆನಾಡ ತೀರವೇ
> ನೀಲ ಬಣ್ಣ ಕಡಲು, ಮುತ್ತೂ ಮುತ್ತೂ ಕಾಣ್ಬುದು।
> ಬೆಳ್ಳಿಧಾರ ಜಲವು, ಬೆಟ್ಟದಿಂದಲಿಳಿದು
> ಕಾಡು ತೋಟ ಗದ್ದೆಯ, ಊರು ಗ್ರಾಮ ದಾಟುವ
> ಮೀನು ತುಂಬ ನದಿಯು, ಕಡಲಲ್ಲಿ ಸೇರೋದು।

ಮಳೆಯನ್ನೇ ಅವಲಂಬಿಸಿ ಕೆಸರುಗದ್ದೆಯಲ್ಲಿ ಕಾಯಕ ನಡೆಸುವುದು ಕೊಡಗಿನಲ್ಲಿ ವೈಶಿಷ್ಟ. ಮಳೆಯಲ್ಲಿ ನೆನೆಯುತ್ತಾ ಕಾಯಕದ ಹರುಷವನ್ನು ಬದುಕಿನಲ್ಲಿ ಕಲೆಯಾಗಿ ಕಾಣುವ ಹಂಬಲ ಕೊಡಗಿನ ರೈತರದು. ವರ್ಷದ ಹೆಚ್ಚಿನ ಅವಧಿಯನ್ನೆಲ್ಲ ಗದ್ದೆಯಲ್ಲಿ ವ್ಯವಸಾಯ. ಕಾಫಿ, ಕಿತ್ತಳೆ, ಏಲಕ್ಕಿ ತೋಟಗಳಲ್ಲಿ ದುಡಿಮೆಯಲ್ಲಿ ಕಳೆದು ಕಾಯಕಕ್ಕೆ ಘನತೆ ತುಂಬಿದ್ದಾರೆ. ಕ್ರಿಯಾಮೌಲ್ಯವನ್ನು ಸಾಧಿಸಿದ್ದಾರೆ. ಈ ಮೌಲ್ಯದಲ್ಲಿ ದೈವಶಕ್ತಿಯ ಹಿನ್ನೆಲೆಯಾನ್ನೂ ಆಚರಣೆಗಳ ಅನುಭಾವಗಳನ್ನೂ ತಂದಿಟ್ಟು ಭಾರತೀಯ ಸಂಪ್ರದಾಯದ ನಿಷ್ಠ ಪ್ರತೀಕಗಳಾಗಿ ಬಾಳುತ್ತಾ ಬಂದಿದ್ದಾರೆ ಕೊಡಗಿನ ರೈತರು. ಇಂತಹವರಿಗೆ ಮಳೆಗಾಲವೇನು? ಚಳಿಗಾಲವೇನು? ವರ್ಷಧಾರೆ ಸುರಿಯುತ್ತಿದ್ದರೂ ಕುರುಂಬೆಯ (ಕುರುಬರ ಕೊಡೆ) ಆಸರೆಯಲ್ಲಿ ಕಾಯಕ ನಿರತರು. ಚಳಿಗಾಲದ ಮಂಜು, ಶೀತಲಗಾಳಿ, ಹಿಮ ಸುರಿಯುತ್ತಿದ್ದರೂ, ತಲೆಗಿಟ್ಟ ಟೊಪ್ಪಿಯ ಕಾವಿನಲ್ಲಿ ಕಾಫಿ, ಕಿತ್ತಲೆ ತೋಟಗಳಲ್ಲಿ ಮಗ್ನರು. ಇವರು ಮಳೆಗಾಲದಲ್ಲಿ ನಿರತರಾಗುವ ಗದ್ದೆಯ ವ್ಯವಸಾಯದ ಪರಿ ವೈಖರಿಯುತವಾದುದು. ನಾಟಿಯ ಬಗೆ

ಆಕರ್ಷಕವಾದುದು. ಈ ಹರುಷದ ಕಾಯಕದಲ್ಲಿ ಚಿಮ್ಮುವ ಹಾಡೇ 'ಒಯ್ಯು ಕಾಕುವ' ನಾಟಿ ನೆಟ್ಟ ತೃಪ್ತಿಯಲ್ಲಿ ಹೃದಯತುಂಬಿ ಬರುವ ಹೂಗಾನ, ನಿರೀಕ್ಷೆಗಳ ಸ್ವರಗಾನ.

ಇಡೀ ವರ್ಷದ ವ್ಯವಸಾಯದ ವಿವರಗಳನ್ನು ಗೀತಾತ್ಮಕವಾಗಿ ತುಂಬಿ 'ಒಯ್ಯಕಾಕುವ'ವನ್ನು ಹಾಡುವ ಪ್ರೇರಣೆ, ಹಸಿರಿನೊಡನೆ ಕಾಯಕನಡೆಸಿದ ಮೇಲೆ ಕಳಕಳಿಯಾಗಿ ಉಕ್ಕಿಬಂದ ನಾಟಿಯ ಫಲವನ್ನು ಕಂಡು ಇಲ್ಲಿ ಕೃಷಿಕಾರರಿಗೆ ತೃಪ್ತಿ ಬಂದಿರಬೇಕು. ಅಂತೆಯೇ ವರ್ಷಂಪ್ರತಿ ಕಾಯಕಮುಗಿಸಿ, ಶುಭಕ್ಕೆ ಹಾರೈಸಿ ಅವರು ನಮಿಸಿ ನಲಿದು ತೆರಳುತ್ತಾರೆ. ಅವರೆಗೆ ಬಳಸಿದ ವ್ಯವಸಾಯದ ಪರಿಕರಗಳನ್ನು ಚೊಕ್ಕ ಮಾಡಿ ಸಿಂಹಮಾಸದಲ್ಲಿ ಒದಗುವ ಆಯುಧ ಪೂಜೆಯ (ಕೈದುಪೊಳ್ದು-ಕೈಲ್‌ಪೊಳ್ದು) ಹಬ್ಬಕ್ಕೆ ಸಂತೋಷದಿಂದ ಸಿದ್ಧವಾಗುತ್ತಾರೆ. ಈ ನಾಡಾವಳಿಗಳು ಪ್ರಭಾವ ಕೊಡಗಿನ ಎಲ್ಲ ರೈತರುಗಳ ಮೇಲೆ ಸಾಕಷ್ಟು ಬಿದ್ದಿರುವುದಕ್ಕೆ ಇಂದಿನ ಅವರ ಆಚರಣೆಗಳೆ ಸಾಕ್ಷಿಯಾಗಿವೆ. ಅಂತೆಯೇ ಬದುಕನ್ನು ಕಾಯಕಶೀಲತೆಯಿಂದ ನಡೆಸಿ ಆ ಕಲೆಯು ಆ ತರಂಗವನ್ನು ಪುಷ್ಟವಾಗಿ ತೋರುವ 'ಒಯ್ಯಕಾಕುವ' ಕೊಡಗಿನ ಮಳೆಗಾಲದ ಜನಪದ ಜಾಯಮಾನದ ಸಹಜ ಚೈತನ್ಯದ ಹಾಡು ಆಗಿದೆ. ಈ ನಾಟಿನೆಟ್ಟು ಒಂದು ಅಥವಾ ಒಂದೂವರೆ ತಿಂಗಳು ಕಳೆದ ಮೇಲೆ ಗದ್ದೆಯಲ್ಲಿ ಗಮನಿಸಿದರೆ ಧಾರೆನಾಟಿಯಲ್ಲಿ ಬೆಳೆದಸಾಲು ಪೈರಿನ ದೃಶ್ಯ ಬಹುಸುಂದರವಾಗಿ ಕಾಣುತ್ತದೆ.

**ಕೃಷಿ ಸಂಬಂಧಿ ಆಚರಣೆಗಳು ಮತ್ತು ಮಹಿಳೆ**

ಮನುಷ್ಯರು ಭಾವಜೀವಿಗಳಾದುದರಿಂದ ತಾವು ಕಂಡುಂಡ ಅನುಭವಗಳನ್ನು ವಿವಿಧ ಬಗೆಯಲ್ಲಿ ಅಭಿವ್ಯಕ್ತಿಸುತ್ತಲೇ ಬಂದಿದ್ದಾರೆ. ತಮಗಾದ ಸುಖ-ದುಃಖ, ನೋವು-ನಲಿವು, ಆಸೆ-ನಿರಾಸೆ, ಹರ್ಷ, ಆತಂಕ-ತಲ್ಲಣ, ಮನೋಭಿಲಾಷೆ ಮೊದಲಾದವುಗಳನ್ನು ಹೊರಹಾಕುತ್ತಲೇ ಬಂದಿರುವರು. ಯಾವುದೇ ಸಂಸ್ಕೃತಿಯಲ್ಲಿ ಕಂಡುಬರುವ ನಂಬಿಕೆ-ಆಚರಣೆಗಳು ಒಂದು ರೀತಿಯಲ್ಲಿ ಆ ಸಂಸ್ಕೃತಿಯ ಅಭಿವ್ಯಕ್ತಿಯ ಮಾಧ್ಯಮಗಳೇ ಆಗಿವೆ. ಮನುಷ್ಯರ ಅಭಿವ್ಯಕ್ತಿ ಮಾಧ್ಯಮಗಳಾದ ನಂಬಿಕೆ ಆಚರಣೆಗಳಿಂದ ಸಂಸ್ಕೃತಿಯ ಶೋಧವು ಸಾಧ್ಯ. ಏಕೆಂದರೆ ಅವು ಸಂಸ್ಕೃತಿಯ ಹೊಳಹುಗಳನ್ನು ಒಳಗೊಂಡಿರುವುದರಿಂದ ಸಂಸ್ಕೃತಿಯೊಂದರ ಇತಿಹಾಸವನ್ನು ಅರಿಯುವಲ್ಲಿ ನಂಬಿಕೆ-ಆಚರಣೆಗಳು ಮಹತ್ವದ ಪಾತ್ರವಹಿಸುತ್ತವೆ. ಸಂಸ್ಕೃತಿ ಹೀಗಿತ್ತು ಅಥವಾ ಹೀಗಿದೆ ಎಂದು ಹೇಳುವಲ್ಲಿ ಆಯಾ ಸಮುದಾಯದ ಸಾಂಸ್ಕೃತಿಕ ಆಚರಣೆಗಳು ಮಹತ್ವದ ಆಕರಗಳಾಗಬಲ್ಲವು. ಹಾಗಾಗಿ ಮಾನವಿಕವಿಜ್ಞಾನಗಳಲ್ಲಿ ಸಮುದಾಯವೊಂದರ ಸಂಸ್ಕೃತಿಯ ಅಧ್ಯಯನದ ಸಂದರ್ಭದಲ್ಲಿ ಆ ಸಮುದಾಯದ ಸಂಸ್ಕೃತಿಯಲ್ಲಿ ರೂಢಿಸಿಕೊಂಡಿರುವ ನಂಬಿಕೆ ಆಚರಣೆಗಳನ್ನು ಮೊರೆಹೋಗಲಾಗುತ್ತಿದೆ ಅಥವಾ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗುತ್ತಿದೆ.

ಒಂದು ಸಮುದಾಯಧ ನಂಬಿಕೆ ಆಚರಣೆಗಳು ಆ ಸಮುದಾಯದ ಪ್ರತಿಬಿಂಬಗಳೇ ಆಗಿವೆ. ಏಕೆಂದರೆ ಆ ಸಮುದಾಯ ಏನನ್ನು ಸತ್ಯ ಎಂದು ಭಾವಿಸಿರುತ್ತದೆಯೋ, ಏನನ್ನು ಒಪ್ಪಿರುತ್ತದೆಯೋ ಅವೇ ನಂಬಿಕೆ ಆಚರಣೆಗಳಾಗಿ ರೂಪ ತಳೆದಿರುತ್ತವೆ. ಅಲ್ಲದೆ ಈ ನಂಬಿಕೆ ಆಚರಣೆಗಳು ಇದ್ದಕ್ಕಿದ್ದಂತೆ ದಿಢೀರನೆ ಹುಟ್ಟಿದಂತವುಗಳಲ್ಲ. ಜೀವನಕ್ಕೂ ಮತ್ತು ನಂಬಿಕೆಗೂ ನಿಕಟವಾದ ಸಂಬಂಧವಿದೆ. ಅವು ಆ ಸಮುದಾಯದ ಅನುಭವದ ಹಿನ್ನೆಲೆಯಲ್ಲಿ ರೂಪತಳೆದಂತವುಗಳಾಗಿರುತ್ತವೆ.

ಜನಪದ ನಂಬಿಕೆಗಳು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ. ಹೀಗೆ ಅಂಗೀಕೃತವಾಗುವಲ್ಲಿ ಪುನರಾವರ್ತನೆ ಹಾಗೂ ಸಾಮೂಹಿಕ ನಿರೀಕ್ಷಣೆಗಳು ಮುಖ್ಯವಾಗುತ್ತವೆ. ನಂಬಿಕೆಗಳು ಜನಪದರ ಜೀವನಾನುಭವದ ಉತ್ಪನ್ನಗಳು ಹೀಗಾಗಿ ಮಾನವ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧ. ಅದು ಸೂಚನೆ, ನಿಯಮ, ವಿಧಿ-ನಿಷೇಧ, ನಿರ್ದೇಶನ, ಆಗ್ರಹ, ಆದೇಶ ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನು ಕೊಂಡುಕೊಂಡಿದೆ. ಜನಪದರ ಕೆಲಸ, ಆಲೋಚನೆ, ರೂಢಿ, ಜೀವನಕ್ರಮ, ಸಂಪ್ರದಾಯ, ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವುಗಳು. ನಂಬಿಕೆಯು ಸಂಪ್ರದಾಯ ಆಚರಣೆಗಳೊಂದಿಗೆ ಅಂತರ್‌ಸಂಬಂಧವನ್ನು ಹೊಂದಿದ್ದು, ಆ ಮೂಲಕ ಕ್ರಿಯಾರೂಪಗಳನ್ನು ತಾಳುತ್ತದೆ' (ಪ್ರೊ.ಎ.ವಿ.ನಾವಡ, ೧೯೯೯, ಪು.೧೪೦). ಹೀಗೆ ಒಂದು ಸಂಸ್ಕೃತಿಯನ್ನು ರೂಪಿಸುವಲ್ಲಿ ಅನೇಕ ಅಂಶಗಳಲ್ಲಿ ಒಂದಾಗಿದ್ದ ನಂಬಿಕೆಗಳು ಮಾನವ ಬದುಕಿನೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿದ್ದರಿಂದ ಮತ್ತು ಇವುಗಳು ಜನಪದರ ಅನುಭವಗಳ ಮೂಲಕ ಸೃಷ್ಟಿಗೊಂಡಿದ್ದರಿಂದ ಇವುಗಳನ್ನು ಅಧ್ಯಯನಕ್ಕೊಳಪಡಿಸುವ ಮೂಲಕ ಜನಜೀವನವನ್ನು ಅರಿಯ ಬಹುದಾಗಿದೆ. ಅಂತಹ ಒಂದು ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಕೃಷಿ ಮನುಕುಲ ಒಂದೆಡೆ ನೆಲೆನಿಂತು ವಾಸಿಸಲು ಪ್ರಾರಂಭಿಸಿದಾಗಿನಿಂದಲೂ ನಿರಂತರವಾಗಿ ನಡೆದುಕೊಂಡು ಬಂದ ಚಟುವಟಿಕೆ. ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದ ಸಂಸ್ಕೃತಿಯ ಈ ನಿರಂತರ ಚಟುವಟಿಕೆ ಕೇವಲ ಶ್ರಮಹೂಡಿಕೆಯ ಮತ್ತು ಲಾಭಗಳಿಕೆಯ ವ್ಯವಹಾರವಾಗದೆ ಹತ್ತಾರು ನಂಬಿಕೆಗಳನ್ನು ತನ್ನ ಸುತ್ತ ಸೃಷ್ಟಿಸಿಕೊಂಡಿದೆ. ತನ್ನದೆ ಮನೋಭೂಮಿಕೆಯಲ್ಲಿ ಸಾಂಸ್ಕೃತಿಕವಲಯವನ್ನು ರೂಪಿಸಿಕೊಂಡಿದೆ. ಈ ಸಾಂಸ್ಕೃತಿಕವಲಯದಲ್ಲಿ ಅನೇಕ ದೈವಗಳಿವೆ, ನಂಬಿಕೆಗಳಿವೆ, ಆಚರಣೆಗಳಿವೆ. ಏಕೆಂದರೆ ಜೀವನ ನಿರ್ವಹಣೆಗಾಗಿ ಕೃಷಿಯನ್ನು ಅವಲಂಬಿಸಿ ಬದುಕುತ್ತಿದ್ದ ಮನುಷ್ಯರಿಗೆ ಭೂಮಿ ಮತ್ತು ಭೂಮಿಯ ಮೇಲೆ ಬೆಳೆಯುವ ಬೆಳೆ ಮುಖ್ಯವಾಗುತ್ತದೆ. ತಾನು ಬಿತ್ತಿದ ಬೆಳೆ ಸುರಕ್ಷಿತವಾಗಿ ತನ್ನ ಕೈಸೇರಬೇಕೆಂಬ ಅಭಿಲಾಷೆಯನ್ನು ಹೊಂದಿರುವ ಕೃಷಿಕರು ಪ್ರಕೃತಿಯ ಬಗೆಗೆ ನಿರಂತರವಾಗಿ

ಆತಂಕವನ್ನು ಹೊಂದಿದವರಾಗಿರುತ್ತಾರೆ. ಏಕೆಂದರೆ ಮನುಷ್ಯ ಎಷ್ಟೇ ವೈಚಾರಿಕವಾಗಿ ಮುಂದುವರೆದರೂ ನಿಸರ್ಗದ ಕೆಲವು ಕ್ರಿಯೆಗಳು ಅವರ ಕೈ ಮೀರಿದವುಗಳಾಗಿವೆ. ಹಾಗಾಗಿ ಕೃಷಿಕರು ಮಳೆಗಾಗಿ, ಬೆಳೆದ ಬೆಳೆಯ ರಕ್ಷಣೆಗಾಗಿ ಅಥವಾ ಸಮೃದ್ಧವಾದ ಉತ್ತಮಫಸಲು ಬೆಳೆಯಲೆಂದು ನಿಸರ್ಗವನ್ನು ವಿವಿಧ ಮನೋಭಾವದಿಂದಲೆ ನಮ್ಮಲ್ಲಿ ಇಂದು ಅನೇಕ ಕೃಷಿಸಂಬಂಧಿ ದೈವಗಳಿರುವುದು ಕಂಡು ಬರುತ್ತವೆ. 'ನಂಬಿಕೆ ಆಚರಣೆ ಸಾಮಾನ್ಯವಾಗಿ ಒಂದೇ ನಾಣ್ಯದ ಎರಡು ಮುಖಗಳು ಅಂದರೆ ನಂಬಿಕೆಯ ವ್ಯಕ್ತರೂಪ ಆಚರಣೆ, ಆಚರಣೆಯ ಅವ್ಯಕ್ತರೂಪ ನಂಬಿಕೆ. ಹೀಗಾಗಿ ನಂಬಿಕೆಯ ವಿವೇಚನೆಯಲ್ಲಿ ಕೆಲವೊಮ್ಮೆ ಆಚರಣೆಯೂ ಸೇರಿಕೊಳ್ಳುತ್ತದೆ. ನಂಬಿಕೆಗಳಲ್ಲಿ ಮುಖ್ಯವಾಗಿ ಎರಡು ಶಾಖೆಗಳು ಕಂಡುಬರುತ್ತವೆ. ಒಂದು ವಿಧಿ ಇನ್ನೊಂದು ನಿಷೇಧ. ನಂಬಿಕೆ ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ, ಜನಾಂಗದಿಂದ ಜನಾಂಗಕ್ಕೆ ಕೆಲವೊಮ್ಮೆ ವ್ಯತ್ಯಾಸವಾಗಬಹುದು'[೨೪]. ಕೆಲವೊಮ್ಮೆ ನಂಬಿಕೆಗಳ ನಡುವೆ ಸಾಮ್ಯತೆಗಳೂ ಇರುವುದನ್ನು ಕಾಣುತ್ತೇವೆ. ಒಟ್ಟಾರೆ ನಂಬಿಕೆ ಆಚರಣೆಗಳು ಪೂರಕವಾದ ಸಂಬಂಧವನ್ನು ಹೊಂದಿದವುಗಳೇ ಆಗಿವೆ. ನಂಬಿಕೆಗಳನ್ನು ಹೊರತುಪಡಿಸಿದ ಆಚರಣೆಗಳಿರುವುದಿಲ್ಲ. ಏಕೆಂದರೆ ಯಾವುದೇ ಒಂದು ನಂಬಿಕೆ ಇದ್ದಾಗಲೇ ಅದು ಆಚರಣೆಯ ರೂಪಪಡೆಯಲು ಸಾಧ್ಯವಾಗುವುದು.

ಪ್ರಸ್ತುತ ಅಧ್ಯಾಯದಲ್ಲಿ ಕೃಷಿಗೆ ಸಂಬಂಧಿಸಿದಂತಹ ಆಚರಣೆಗಳ ವಿವರ, ಅವು ಆಚರಿಸಲ್ಪಡುವ ರೀತಿ, ಅವುಗಳ ಹಿಂದಿರುವ ತಾತ್ವಿಕತೆ ಮತ್ತು ಬಹುಮುಖ್ಯವಾಗಿ ಆ ಆಚರಣೆಯಲ್ಲಿ ಮಹಿಳೆಯ ಪಾಲುದಾರಿಕೆ ಯಾವ ರೀತಿಯದು? ಎಂಬುದನ್ನು ಗಮನಿಸುತ್ತಲೇ ಕೃಷಿಸಂಸ್ಕೃತಿಯಲ್ಲಿ ಮಹಿಳೆಯನ್ನು ಹೇಗೆ ಕಾಣಲಾಗಿದೆ ಎಂಬುದನ್ನು ಕೃಷಿ ಪರಿಸರದ ಅಥವಾ ಕೃಷಿ ಸಮುದಾಯದ ನಂಬಿಕೆ ಆಚರಣೆಗಳ ಮೂಲಕ ನೋಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಕೃಷಿಆಚರಣೆಯ ಸ್ವರೂಪವನ್ನು ಗಮನಿಸಿದಾಗ ಸಾಮಾನ್ಯವಾಗಿ ಕೃಷಿಕರು ತಾವು ಬಿತ್ತಿಬೆಳೆದ ಭೂಮಿಯ ಕೃತಜ್ಞತೆಯನ್ನು ಸಲ್ಲಿಸುವಂತಹ ಮನೋಭಾವ, ಬೆಳೆಬಂದ ಕಾಲಕ್ಕೆ ತಮ್ಮ ಸಂತಸವನ್ನು ಅಭಿವ್ಯಕ್ತಿಸುವಂತಹದ್ದು, ಕೃಷಿಗೆ ಮುಖ್ಯವಾಗಿ ಬೇಕಾದ ಮಳೆಬಾರದೆ ಇದ್ದಾಗ ಮಳೆಗಾಗಿ ದೈವವನ್ನು ಪ್ರಾರ್ಥಿಸಿರುವಂತಹದ್ದು, ಬೆಳೆ ಮತ್ತು ಜಾನುವಾರುಗಳಿಗೆ ರೋಗರುಜಿನಗಳು ಬಂದಾಗ ಅವುಗಳ ನಿವಾರಣೆಗಾಗಿ ದೈವದಮೊರೆ ಹೋಗಿರುವಂತಹದ್ದು, ತನ್ನ ದುಡಿಮೆಗೆ ಹೆಗಲುಕೊಟ್ಟು ದಣಿಯುವ ಮೂಕ ಪ್ರಾಣಿ ಬಸವಣ್ಣ (ಎತ್ತುಗಳಿಗೆ)ನಿಗೆ ಕೃತಜ್ಞತೆಯನ್ನು ತೋರುವಂತಹದ್ದು ಇತ್ಯಾದಿ ಈ ರೀತಿಯ ಸಂಗತಿಗಳು ಕೃಷಿಸಂಬಂಧಿ ಆಚರಣೆಗಳಲ್ಲಿರುವುದು ಕಂಡು ಬರುತ್ತದೆ. ಕೃಷಿಸಂಬಂಧಿ ಸಾಹಿತ್ಯವನ್ನು ಗಮನಿಸಿದಾಗ ಕೃಷಿಯಲ್ಲಿನ ಮಹಿಳೆಯ ಪಾಲುದಾರಿಕೆಯನ್ನು ಕುರಿತಂತೆ ಕೆಲವು ಮಾಹಿತಿಗಳು ದೊರೆಯುತ್ತವೆ. ಇದರಿಂದ ಕೃಷಿಗೂ ಮಹಿಳೆಗೂ ಇರುವ ಸಂಬಂಧ ಯಾವ ರೀತಿಯದು ಎಂಬುದು ತಿಳಿದುಬರುತ್ತದೆ.

ಪುರುಷನೊಟ್ಟಿಗೆ ಹೊಲದಲ್ಲಿನ ಅನೇಕ ಕೆಲಸಗಳಲ್ಲಿ ಮಹಿಳೆಯು ಭಾಗಿಯಾಗಿದ್ದಾಗಲೂ, ಸಾಮಾಜಿಕವಾಗಿ ಮತ್ತು ಕೌಟುಂಬಿಕವಾಗಿ ಅವಳಿಗೆ ಸಿಗುವ ಸ್ಥಾನಮಾನ ಎರಡನೆಯ ದರ್ಜೆಯದೇ ಎಂಬುದು ತಿಳಿದು ಬರುತ್ತದೆ.

ಮಣ್ಣನ್ನು ನಂಬಿ ನ ಮಣ್ಣಿಂದ ಬದುಕೇನ
ಮಣ್ಣೆನಗೆ ಮುಂದೆ ಹೊನ್ನ ಅಣ್ಣಯ್ಯ
ಮಣ್ಣೇ ಲೋಕದಲ್ಲಿ ಬೆಲೆಯಾದ್ದು॥

ಕೃಷಿಯನ್ನು ಅವಲಂಬಿಸಿ ಬದುಕುತ್ತಿದ್ದ ಮಹಿಳೆ ಮಣ್ಣನ್ನು ಹೊನ್ನನ್ನು ಎಂದಿರುವುದು ಮತ್ತು ಬೆಲೆಯಾದುದು ಎಂದು ಮಣ್ಣಿನಮಹತ್ವವನ್ನು ಕೊಂಡಾಡಿದ ವಿವರ ಈ ತ್ರಿಪದಿಯಲ್ಲಿದೆ. ಇದು ಮಣ್ಣನ್ನು ಆಶ್ರಯಿಸಿ ಮಹಿಳೆಯರೂ ಬದುಕುತ್ತಿದ್ದರು. ಕೃಷಿಯಲ್ಲಿ ಮಹಿಳೆಯರೂ ತೊಡಗಿಕೊಂಡಿದ್ದರು ಎನ್ನುವುದನ್ನು ತಿಳಿಸುತ್ತದೆ.

ರಾಗೀಯ ಹೊಲವನ್ ಬಿಟ್ಟು ರಾಜ್ಯವಾಳೋ ಗಂಡನ್ ಬಿಟ್ಟು
ನಿನಗಾಗಿ ನಾನು ಬಂದೆನೊ। ಗೆಣಕಾರ
ನಿನಗಾಗಿ ನಾನು ಬಂದೆನೊ॥
ಉದ್ದೀನ ಹೊಲವನ್ನು ಬಿಟ್ಟು ಮುದ್ದಾಡೋ ಗಂಡನ್ ಬಿಟ್ಟು
ನಿನಗಾಗಿ ನಾನು ಬಂದೆನೊ। ಗೆಣಕಾರ
ನಿನಗಾಗಿ ನಾನು ಬಂದೆನೊ॥

ಎನ್ನುವ ಮೇಲಿನ ತ್ರಿಪದಿಗಳಲ್ಲಿ ಗೆಳೆಯನೊಟ್ಟಿಗೆ ಬಂದ ಹೆಣ್ಣು ರಾಗಿಯ ಹೊಲವನ್ನು ಬಿಟ್ಟು ರಾಜ್ಯವಾಳೋ ಗಂಡನ್ನ ಬಿಟ್ಟು, ಉದ್ದೀನ ಹೊಲವನ್ನು ಬಿಟ್ಟು ಮುದ್ದಡೋ ಗಂಡನ್ ಬಿಟ್ಟು' ನಿನಗಾಗಿ ಬಂದೇನಿ, ಎನ್ನುವಲ್ಲಿ ಆ ಹೆಣ್ಣು ಮೊದಲು ಹೊಲದೊಟ್ಟಿಗೆ ಸಂಬಂಧ ಹೊಂದಿದ್ದಳು ಅಂದರೆ ಅವಳ ಬದುಕು ಹೊಲವನ್ನು ಅವಲಂಬಿಸಿತ್ತೆಂಬುದು ವ್ಯಕ್ತವಾಗುತ್ತದೆ. ಒಟ್ಟಿನಲ್ಲಿ ಕೃಷಿಯೊಂದಿಗೆ, ಕೃಷಿ ಭೂಮಿಯೊಂದಿಗೆ ಮಹಿಳೆಯ ಒಡನಾಟವಿದೆ ಎನ್ನುವುದು ಇದರಿಂದ ತಿಳಿದು ಬರುತ್ತದೆ. ಕೃಷಿಯಲ್ಲಿ ಮಹಿಳೆಯ ಪಾಲುದಾರಿಕೆ ಇದೆ ಎಂಬುದನ್ನು ಈ ರೀತಿಯ ಆಕರಗಳು ಸ್ಪಷ್ಟಪಡಿಸುತ್ತವೆ.

ಬಿತ್ತುವ ದಿನ ಬಂತು ಎತ್ತು ತಯ್ಯಾರು ಮಾಡೋ
ಮುತ್ತಿನ ಕೂರಿಗಿ ಹದ ಮಾಡೊ ಎಲೆ ರೈತ
ಮುತ್ತೈದಿ ಅಕ್ಕಡಿಗೆ ಬರುತಾಳೆ॥

ಮೇಲಿನ ಪದ ಹೊಲದ ಕೆಲಸವನ್ನು ಕುರಿತು ಇರುವಂತಹದ್ದು, ಇದರಿಂದ ಬಿತ್ತುವ ದಿನದಲ್ಲಿ ಯಾರು ಏನು ಕೆಲಸ ಮಾಡುವರು ಎಂಬುದು ಸೂಚ್ಯವಾಗಿ ಅಭಿವ್ಯಕ್ತಗೊಂಡಿದೆ. ಅಂದರೆ ಈ ಸಾಲುಗಳು ವ್ಯವಸಾಯದಲ್ಲಿ ಬಿತ್ತುವ ಸಂದರ್ಭದಲ್ಲಿ ಎತ್ತನ್ನು ಸಜ್ಜಗೊಳಿಸಿಕೊಳ್ಳುವುದು. ಕೂರಿಗೆಯನ್ನು ಹದಮಾಡಿಕೊಳ್ಳುವುದು, ರೈತನ ಅಂದರೆ ಪುರುಷನ ಕೆಲಸ ಎಂದು ತಿಳಿದು ಬರುತ್ತದೆ. ಹಾಗೆಯೇ 'ಮುತ್ತೈದೆ ಅಕ್ಕಡಿಗೆ ಬರುತಾಳೆ' ಅಂದರೆ ಇಲ್ಲಿ ಮುತ್ತೈದೆ ಎಂದರೆ ಮಹಿಳೆ. ಹೆಣ್ಣುಮಕ್ಕಳು ಅಕ್ಕಡಿಕಾಳು ಬಿತ್ತನೆಗೆ ಬರುತ್ತಾರೆ ಎಂಬುದನ್ನು ಈ ಸಾಲುಗಳು ಧ್ವನಿಸುತ್ತದೆ. ಇದರಿಂದ ಮಹಿಳೆಯರು ಕೃಷಿಯಲ್ಲಿ ಅಕ್ಕಡಿಕಾಳಿನ ಬಿತ್ತನೆಯಲ್ಲಿ ಪ್ರಧಾನ ಪಾತ್ರವಹಿಸುತ್ತಾರೆಂಬುದು ತಿಳಿದು ಬರುತ್ತದೆ.

ಮಹಿಳೆ ಅಕ್ಕಡಿಹಾಕುವಲ್ಲಿ ಭಾಗಿಯಾಗುತ್ತಾಳೆ ಎನ್ನುವುದನ್ನು ತಿಳಿಸುವ ಇದೇ ರೀತಿಯ ಮಾಹಿತಿ ಹೆಂಗಸಿನ ಒಡಪೊಂದರಲ್ಲಿ ಈ ರೀತಿ ಅಭಿವ್ಯಕ್ತಗೊಂಡಿದೆ.

ಮೂಡ್ಲ ಹೋರಿ ಮುರತಾಪದ ಕೂರ್ಗಿ

ಅವರ ಬಿತ್ತವು ನಾ ಅಕ್ಕಡಿ ಹಾಕಾಕಿ....

ಎಂದು ಸ್ವತಃ ಮಹಿಳೆಯೇ ತಾನು ಕೃಷಿಯಲ್ಲಿ ಮಾಡುವ ಕ್ರಿಯೆಯ ಬಗೆಗೆ ಒಡಪಿನಲ್ಲಿ ಹೇಳಿಕೊಂಡಿರುವುದನ್ನು ನಾವು ಗಮನಿಸಬಹುದು. ಇಂದಿಗೂ ಕೂಡ ವ್ಯವಸಾಯದಲ್ಲಿ ಅಕ್ಕಡಿ ಕಾಳುಗಳನ್ನು ಹಾಕುವ ಕೆಲಸದಲ್ಲಿ ಮಹಿಳೆಯರೇ ಪ್ರಮುಖ ಪಾತ್ರವಹಿಸುತ್ತಾರೆ.

ಮುತ್ತಿನ ಕೂರಿಗಿ ನೆತ್ತಿಮ್ಯಾಲೆ ಹೊತಗೊಂಡ

ಉತ್ತಮರ ಮಗಳ ಕರಕೊಂಡ। ಈರಪ್ಪನವರು

ಮುತ್ತ ಬಿತ್ಯಾರ ಹಿರಿ ಹೊಲಕ॥

ಹೊಲಕ್ಕೆ ಕೂರಿಗೆಯನ್ನು ಹೊತ್ತೊಯ್ಯುವ ಜೊತೆಗೆ ಉತ್ತಮರ ಮಗಳನ್ನು ಕರೆದುಕೊಂಡು ಹೋಗಿ ಹಿರಿಹೊಲಕೆ ಬಿತ್ತಿರುವ ವಿಚಾರವು ಕೃಷಿಯಲ್ಲಿ ಮಹಿಳೆ ಬಿತ್ತುವ ಕ್ರಿಯೆಯಲ್ಲಿ ಪುರುಷನೊಟ್ಟಿಗೆ ಭಾಗಿಯಾಗಿರುತ್ತಿದ್ದಳು ಎಂಬುದನ್ನು ತಿಳಿಸುತ್ತದೆ. ಅದೇ ರೀತಿಯಾಗಿ ಹೊಲದಲ್ಲಿ ಜೋಳಬಿತ್ತುವ ಮತ್ತು ಜೋಳಕೊಯ್ಯುವ ಪ್ರಕ್ರಿಯೆಯಲ್ಲಿಯೂ ಮಹಿಳೆಯರು ಭಾಗವಹಿಸುತ್ತಾರೆ. ಅವರು ಆ ಕೆಲಸದಲ್ಲಿ ಭಾಗವಹಿಸುತ್ತಾರೆ ಎಂಬುದಕ್ಕೆ ಜನಪದಸಾಹಿತ್ಯದಲ್ಲಿ ಕೆಲವು ಉಲ್ಲೇಖಗಳು ಸಿಗುತ್ತವೆ.

ಬಿತ್ತ ಕೂರಿಗಿ ಮುಂದೆ ಎಡಿಗಿಂದೆ

ಬಿತ್ತಾಲೋಗ್ಯಾನೆ ಬಿಳಿಜ್ವಾಳ। ಶರಣಪ್ಪ

ಬಿತ್ತ ಕಾಲಿಸ್ಯಾನೆ ಮಡದೀಗೆ॥"

ರೈತ ತನ್ನ ಮಡದಿಗೆ ಜೋಳಬಿತ್ತುವುದನ್ನು ತೋರಿಸಿ ಕಲಿಸುತ್ತಾನೆ ಎಂದರೆ ಬಿತ್ತುವುದನ್ನು ಕಲಿತ ಮೇಲೆ ಮುಂದೆ ಅವಳಿಂದ ಜೋಳಬಿತ್ತನೆಯ ಕೆಲಸ ನಡೆಯುತ್ತದೆಂದರ್ಥ. ಜೋಳಬಿತ್ತುವಲ್ಲಿ ಮಾತ್ರವಲ್ಲದೆ ಜೋಳ ಕೊಯ್ಯುವ ಕ್ರಿಯೆಯಲ್ಲಿ ಮಹಿಳೆಯ ಪಾಲುದಾರಿಕೆ ಇದೆ ಎಂಬುದು ಈ ಕೆಳಗಿನ ತ್ರಿಪದಿಯಿಂದ ತಿಳಿದು ಬರುತ್ತದೆ. ಜ್ವಾಳಾ ಕೊಯ್ಯುವವಳ ನಡುಸಣ್ಣ ಎನ್ನುವ ಸಾಲಿನಲ್ಲಿ ಜೋಳಕೊಯ್ಯುವವಳ ಎನ್ನುವ ಪದದಿಂದ ಮಹಿಳೆ ಜೋಳಕೊಯ್ಯುತ್ತಿದ್ದಳು ಅಥವಾ ಜೋಳ ಮಹಿಳೆಯಿಂದ ಕೊಯ್ಯಲ್ಪಡುತ್ತಿತ್ತು ಎನ್ನುವ ಸಂಗತಿ ತಿಳಿದು ಬರುತ್ತದೆ. ಅಂದರೆ ಇದರಿಂದ ಕೃಷಿಯಲ್ಲಿ, ಜೋಳ ಕೊಯ್ಯುವ ಪ್ರಕ್ರಿಯೆಯಲ್ಲಿ ಮಹಿಳೆಯ ಪಾಲುದಾರಿಕೆ ಇದೆ ಅಥವಾ ಇರುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ತವರಿನಲ್ಲಿ ನಡೆಯುವ ಮದುವೆಗೆ ಆಹ್ವಾನ ಬಂದಿದ್ದರೂ ತನ್ನ ಹೊಲದಲ್ಲಿ ಕೆಲಸವಿರುವ ಕಾರಣ ಹೇಗೆ ಬರಲಿ ಎಂದು ಕೇಳಿರುವ ಮಾತಿನಿಂದ ಮಹಿಳೆ ಹೊಲದಲ್ಲಿನ ಕೆಲಸಗಳನ್ನು ಮಾಡುತ್ತಿದ್ದಳು. ಅದರಲ್ಲೂ ಹತ್ತಿಬಿಡುಸುವಂತಹ ಕೆಲಸದಲ್ಲಿ ಅವಳು ತೊಡಗಿಕೊಂಡಿದ್ದಾಳೆ ಎನ್ನುವುದು ತಿಳಿದುಬರುತ್ತದೆ. ಅಲ್ಲದೆ ಜವಾಬ್ದಾರಿಯಿಂದಲೇ ಆ ಕೆಲಸಗಳನ್ನು ಮಾಡುತ್ತಿದ್ದಳೆಂಬುದು 'ಹತ್ತೀಯ ಮುರಿಬೇಕು ಹರಳನ್ನು ಬಿಡಿಸಬೇಕು. ನಾನ್ಹೆಂಗೆ ಬರಲಿ ತೌರಿಗೆ' ಎಂದು ಹೇಳುವ ಧ್ವನಿಯಿಂದ ವ್ಯಕ್ತವಾಗುತ್ತದೆ.

ಇಷ್ಟಲ್ಲದೆ ಕೃಷಿಗೆ ಪೂರಕವಾದ ಮನೆಯ ಒಳಗಿನ ಮತ್ತು ಮನೆಯ ಹೊರಗಿನ ಕೆಲಸದಲ್ಲಿ ಮಹಿಳೆ ಭಾಗಿಯಾಗಿರುತ್ತಾಳೆಂಬುದಕ್ಕೂ ಮೌಖಿಕಸಾಹಿತ್ಯದಲ್ಲಿ ಉಲ್ಲೇಖಗಳಿವೆ. ಹೊಲಕೆಲಸಗಳ ಜೊತೆಗೆ ಮನೆಯಲ್ಲಿ ಮೊಸರು ಕಡೆಯುವಂತಹ, ಕುಟ್ಟುವ, ಬೀಸುವ ಮತ್ತು ರೊಟ್ಟಿ ಬಡೆಯುವಂತಹ ಕೆಲಸಗಳನ್ನು ಮಹಿಳೆ ಮಾಡಬೇಕಾಗಿತ್ತು (ಆದರೆ ಇಂದು ಆಧುನಿಕ ತಂತ್ರಜ್ಞಾನದಿಂದ ಕುಟ್ಟುವ, ಬೀಸುವ ಕೆಲಸದ ಹೊರೆ ಮಹಿಳೆಯರಿಗೆ ಕಡಿಮೆಯಾಗಿದೆ). ಅಲ್ಲದೆ ಹೊಲಕ್ಕೆ ಹೋದ ಗಂಡನಿಗೆ ಬುತ್ತಿಕಳಿಸುವ ಕೆಲಸವನ್ನು ಮಹಿಳೆ ಮಾಡುತ್ತಿದ್ದಳು ಎಂಬುದು ತಿಳಿದು ಬರುತ್ತದೆ. ಇದೇ ರೀತಿಯಾಗಿ ಕೃಷಿ ಮಹಿಳೆ ಮಾಡುವಂತಹ ಕೆಲಸಗಳ ಬಗೆಗೆ ಗಂಡಸರು ಹೇಳುವ ಒಡಪಿನಲ್ಲಿ ಕೆಲವು ವಿವರಗಳು ಸಿಗುತ್ತವೆ. ಅವು ಈ ಕೆಳಗಿನಂತಿವೆ.

'ಕೋಲಿ ಆರಸ್ತಾಳ / ಹಕ್ಕಿ ಕಾಯ್ತಾಳ / ಹಿಕ್ಕಿ ಆರಸ್ತಾಳ...'

'ಹಳ್ಳದ ಹೊಲದಾಗ ನಿಂತ / ಹಕ್ಕಿ ಕಾಯುತಾಳ...'

'ಮೂಲಿ ಹೊಲದಾಗ ಕುಂತ / ಕೋಲಿ ಆರಸ್ತಾಳ...'

'ಹಾದಿ ಹೊಲದಾಗ ನಿಂತ / ಗೋದಿ ಕೀಳ್ತಾಳ...'

'ಅಡ್ಡಳಾಗಿ ಮ್ಯಾಗ ಕುಂತ ಗೊಡ್ಡೆಮ್ಮೆ ಹಿಂಡತಾಳ...'

ಮಹಿಳೆ ಹೊಲದಲ್ಲಿ ಕೋಲಿಆರಿಸುವ ಬೆಳೆ ಬಂದಾಗ ತೆನೆಯಲ್ಲಿನ ಹಾಲುಗಾಳು ತಿನ್ನಲು ಬರುವ ಪಕ್ಷಿಗಳನ್ನು ಕಾಯುವ, (ಈ ಕೆಲಸಕ್ಕೆ ರೈತರು ಆಡುಮಾತಲ್ಲಿ ಗುಬ್ಬಿ ಕಾಯೋದು ಅಂತಾರೆ) ಹಿಕ್ಕಿಆರಿಸುವ, ಕುಳ್ಳು ಆರಿಸುವ ಮತ್ತು ಕಾಳುಕಡಿಗಳನ್ನು ಹಸನುಮಾಡುವ, ದನಗಳನ್ನು ಹಿಂಡುಕೊಳ್ಳುವ (ಹಾಲು ಕರೆಯುವ) ಕೆಲಸವನ್ನು ಮಹಿಳೆ ಮಾಡುತ್ತಿದ್ದಳು ಎನ್ನುವುದನ್ನು ಈ ಮೇಲಿನ ಒಡಪುಗಳು ತಿಳಿಸುತ್ತವೆ. ಈಗಲೂ ಮಹಿಳೆ ಈ ಎಲ್ಲ ಕೆಲಸಗಳನ್ನು ನಿರ್ವಹಿಸುವುದನ್ನು ನಾವು ನೋಡುತ್ತೇವೆ.

ಹೊಲದಲ್ಲಿ ಗುಬ್ಬಿ (ಹಕ್ಕಿ) ಕಾಯುತ್ತಿದ್ದ ಮಹಿಳೆ ತೀರಾ ಸ್ವಾರ್ಥಿ ಮತ್ತು ಸಂಕುಚಿತ ಮನೋಭಾವವನ್ನು ಹೊಂದಿದವಳಾಗಿರದೆ ಪ್ರಾಣಿಪಕ್ಷಿಗಳ ಬಗೆಗೆ ದಯೆಯನ್ನು ಕಾಳಜಿಯನ್ನು ಹೊಂದಿದವಳಾಗಿರುತ್ತಾಳೆಂಬುದು ತಿಳಿದು ಬರುತ್ತದೆ. ಪ್ರಾಣಿಗಳ ಬಗೆಗೆ ಹೆಣ್ಣು ಅನುಕಂಪ ವ್ಯಕ್ತಪಡಿಸಿರುವುದನ್ನು ಇಲ್ಲಿ ಕಾಣುತ್ತೇವೆ. ಅಲ್ಲದೆ ಬೆಳೆಬಂದ ಹೊಲದಲ್ಲಿ ಬೆಳೆಯನ್ನು ಪ್ರಾಣಿಪಕ್ಷಿಗಳಿಂದ ಕಾಯುವ ಕೆಲಸವನ್ನು ಮಹಿಳೆ ಮಾಡುತ್ತಿದ್ದಾಳೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ಬೆಳೆಬಂದಾಗ ಗುಬ್ಬಿಕಾಯುವ ಕೆಲಸವನ್ನು ಮಕ್ಕಳು, ಮಹಿಳೆಯರು ಮಾಡುವುದು ಕಂಡು ಬರುತ್ತದೆ. ಕೃಷಿ ದೇಶದ ಬೆನ್ನೆಲುಬು ಎನ್ನುವಂತೆ ಕೃಷಿಕನಿಗೆ ಆತನ ಕೃಷಿಚಟುವಟಿಕೆಗಳಿಗೆ ಮಹಿಳೆ ಬೆನ್ನೆಲುಬಾಗಿದ್ದಾಳೆ. ಏಕೆಂದರೆ ಕೃಷಿಯ ಪ್ರತಿಹಂತದಲ್ಲಿ ಕೃಷಿಕನಿಗೆ ಅವಳು ಸಹಾಯ ಸಹಕಾರ ನೀಡುವುದಲ್ಲದೆ, ಆತನ ಕೆಲಸಗಳ ಬಗೆಗೆ ವಿಚಾರಿಸುವ, ಸಲಹೆಸೂಚನೆಗಳನ್ನು ನೀಡುವ ಕೆಲಸವನ್ನು ಮಹಿಳೆ ಮಾಡುತ್ತಾ ಬಂದಿದ್ದಾಳೆ.

ಬೆದೆ ನೋಡಿ ಬಿತ್ತಣ್ಣ ಹದ ನೋಡಿ ಹರಗಣ್ಣ
ತುಂಬು ತೆನಿ ನೋಡಿ ಒಕ್ಕಣ್ಣ! ಸುತ್ತೆಲ್ಲ
ಜನಕ ನೀ ನೀಡಿ ನಲಿಯಣ್ಣ॥

ಮೇಲಿನ ಈ ಮಾತುಗಳಿಂದ ಕೃಷಿಕನಿಗೆ ತನ್ನ ದುಡಿಮೆಯ ಹಿಂದೆ ಮಹಿಳೆಯ ಪ್ರೋತ್ಸಾಹವೂ ಇರುತ್ತದೆ ಎನ್ನುವುದು ತಿಳಿದು ಬರುತ್ತದೆ. ಕೃಷಿಜನಪದ ಸಾಹಿತ್ಯದಲ್ಲಿ ಮಹಿಳೆಯ ಅಭಿವ್ಯಕ್ತಿಯಂತೆ ಕಂಡುಬರುವ ಅವಳು ವ್ಯಕ್ತಪಡಿಸಿರುವ ಸಂಗತಿಗಳಲ್ಲಿ ತನ್ನ ಬಗೆಗೆ ಹೇಳಿಕೊಂಡಿದ್ದು ಅತ್ಯಂತ ವಿರಳ. ಹಾಗೆ ಅವಳಿಂದ ಅಭಿವ್ಯಕ್ತಗೊಂಡ ಸಾಹಿತ್ಯ ಪುರುಷನ ಬಗೆಗಿರುವ ಯೋಚನೆಗಳಾಗಿವೆ. ಪುರುಷನ ಬಗೆಗಿರುವ ಕಾಳಜಿ ಮತ್ತು ಹಿತಾಸಕ್ತಿಗಳೇ ಈ ಸಾಹಿತ್ಯದಲ್ಲಿ ವಿಪುಲವಾಗಿರುವುದು ಕಂಡುಬರುತ್ತದೆ. ಕುಟುಂಬದಲ್ಲಿ ತನಗಾಗಿ ಯಾವುದಕ್ಕೂ ಹಕ್ಕೊತ್ತಾಯ ಮಾಡದೆ ಕುಟುಂಬದ ಸದಸ್ಯರುಗಳ ನಡುವಿನ ಬಾಂಧವ್ಯಕ್ಕೆ ಕುಟುಂಬದ ಸದಸ್ಯರುಗಳ ಸಂಬಂಧಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟು ಹೆಚ್ಚಾಗಿ

ಸಾಮರಸ್ಯದ ಬದುಕನ್ನು ಅಪೇಕ್ಷಿಸಿರುವುದನ್ನು ನಾವು ಕಾಣುತ್ತೇವೆ. ಕೃಷಿವಲಯದ ಮಹಿಳೆ ರೈತನ ಹೆಂಡತಿಯಾಗಿ ರೈತಾಪಿ ಮಗನ ತಾಯಿಯಾಗಿ, ತವರಿಗೆ ಮಗಳಾಗಿ ಹೆಣ್ಣು ತನ್ನ ಗಂಡನ, ಮಗನ, ಅಣ್ಣ-ತಮ್ಮಂದಿರ ಕೃಷಿ ಮತ್ತು ಅವರ ಕುಟುಂಬ ಬೆಳೆಯಲಿ, ಬಾಳಿ ಬದಕುಲಿ ಎಂದು ನಿಸ್ವಾರ್ಥದಿಂದ ಹಾಡಿಹರಸಿದ ಹೆಣ್ಣಿನ ಮನೋಭಾವ, ಅವರ ಬಗೆಗಿದ್ದ ಕಾಳಜಿ. ಮೆಚ್ಚುಗೆ, ಪ್ರಶಂಸೆಯ ಮಾತುಗಳು ಜನಪದ ಆಕರಗಳಲ್ಲಿ ಈ ರೀತಿಯಾಗಿ ದಾಖಲಾಗಿರುವುದನ್ನು ನಾವು ನೋಡಬಹುದು.

ಊರಿಗೆ ಮಳೆ ಹೋದೊ ಏರುಕಟ್ಟೊ ಕಂದಯ್ಯ।
ಊರ ಮುಂದಿನ ಬಸವಣ್ಣೆ। ಕೈ ಮುಗಿದು।
ಏರುಕಟ್ಟೊ ಮುದ್ದು ಮುಖದವನೇ॥
ಗಾಳಿಗೋಡುವ ಮೋಡ ಮಳೆಯಾಗಿ ಸುರಿಬ್ಯಾಡ
ನನ್ನವರು ಹಸಿದು ಹೊಲದಿಂದ। ಬರುತಾರ
ನನಗಾಗಿ ಓಡಿ ಎಚ್ಚರಿಕೆ॥
ಬೋರಾಡೋ ಮಳೆರಾಯ ಬರಬ್ಯಾಡ ತಡಯಣ್ಣ
ಪುರುಷರಿಗೆ ಬೇಕು ತಿಳಿನೀರು। ಅವರೆಗು
ತೌರೂರ ಹೊಲಕ ಸುರಿ ಹೋಗು॥

ಅಣ್ಣ ತಮ್ಮನ ಹಸುವಿನ ಬಗೆಗೆ ಯೋಚಿಸುತ್ತ ಉಂಡೀಯ ಮಾಡೀನಿ ಉಂಡರ ಹೋಗೋ ನನತಮ್ಮ, ತೋಟಕ್ಕೆ ಹೋದಣ್ಣ ಊಟಕ್ಕೆ ಬರಲಿಲ್ಲ, ಊಟದ್ದಂಬಲ ಮರೆತಾನ ಎನ್ನುವ ಧ್ವನಿಯಲ್ಲಿ ಮಹಿಳೆಗಿದ್ದ ಅಣ್ಣತಮ್ಮರ ಹಸುವಿನ ಬೆಗೆಗಿರುವ ಕಾಳಜಿ ವ್ಯಕ್ತವಾಗಿದೆ. ಎಲ್ಲಾದರೂ ಇರಲಿ ಮಗ ಜಯವಂತನಾಗಿ ಬೆಳೆಯಲಿ ಎನ್ನುವಂತಹದ್ದು ಮಗನ ಬಗೆಗಿರುವ ಕಾಳಜಿಯನ್ನು ಸೂಚಿಸುತ್ತದೆ. ಮೋಡಗಳಿಗೆ ನನ್ನವರು ಹೊಲದಿಂದ ಹಸಿದುಬರುತ್ತಾರೆ. ಮಳೆಯಾಗಿ ಸುರಿಯಬೇಡ ಎನ್ನುವಂತಹದ್ದು, ನನ್ನಾತ ಊರಮುಂದಿನ ಹೊಲಹರಗಿ ಬಿಸಲಲ್ಲಿ ಹಸಿದು ಬರುವ ತಂಪು ನೀಡಣ್ಣ. ಎಂದು ತಂಗಾಳಿಗೆ ಕೇಳಿರುವುದರಲ್ಲಿ ಮಹಿಳೆಗಿದ್ದ ದುಡಿದುಬರುವ ಗಂಡನ ಬಗೆಗಿದ್ದ ಕಾಳಜಿವ್ಯಕ್ತವಾಗಿದೆ. ಅಂತೆಯೇ ತವರೂರ ಹೊಲಕ್ಕೂ ಮಳೆ ಸುರಿಯಬೇಕು ಎಂದು ಆಶಿಸುವುದು, ಅಣ್ಣಯ್ಯ ಸುಖವಾಗಿರಲಿ, ತವರೂರಿನ ಒತ್ತಲಬಾಳಿ ಬೆಳೆಯಲಿ, ರಸಬಾಳಿ ಕಬ್ಬು ಬೆಳೆಯಲಿ, ಅತ್ತಿಗಿ ಬಸುರಾಗಿ ಹಡಿಯಲಿ, ಅವಳು ಹತ್ತೆಮ್ಮೆ ಕರೆಯುವಂತಾಗಲಿ, ಅತ್ತಿಗೆಯ ಮಗಳು ಅತ್ತೆಮ್ಮ ಎಂದು ಕರೆಯಲಿ ಎಂದು ಹಾರೈಸುವ ಈ ಹಸಿದುಬರುವ ತಂಪು ನೀಡಣ್ಣ' ಎಂದು ತಂಗಾಳಿಗೆ ಕೇಳಿರುವುದರಲ್ಲಿ ಮಹಿಳೆಗಿದ್ದ ದುಡಿದು ಬರುವ ಗಂಡನ ಬಗೆಗಿದ್ದ ಕಾಳಜಿವ್ಯಕ್ತವಾಗಿದೆ. ಅಂತೆಯೇ ತವರೂರ ಹೊಲಕ್ಕೂ

ಮಳೆಸುರಿಯಬೇಕು ಎಂದು ಆಶಿಸುವುದು. ಅಣ್ಣಯ್ಯ ಸುಖವಾಗಿರಲಿ, ತವರೂರಿನ ಓತ್ತಲಬಾಳೆ ಬೆಳೆಯಲಿ, ರಸಬಾಳಿ ಕಬ್ಬುಬೆಳೆಯಲಿ, ಅತ್ತಿಗಿ ಬಸುರಾಗಿ ಹಡಿಯಲಿ, ಅವಳು ಹತ್ತೆಮ್ಮೆ ಕರೆಯುವಂತಾಗಲಿ, ಅತ್ತಿಗೆಯ ಮಗಳು ಅತ್ತೆಮ್ಮ ಎಂದು ಕರೆಯಲಿ ಎಂದು ಹಾರೈಸುವ ಈ ನುಡಿಗಳಲ್ಲಿ ತವರಿನ ಬಗೆಗಿದ್ದ ಮಹಿಳೆಯ ಕನಸು ಮತ್ತು ಕಾಳಜಿಗಳು ವ್ಯಕ್ತಗೊಂಡಿವೆ. ಇದನ್ನೆಲ್ಲ ಗಮನಿಸಿದರೆ ಕೃಷಿವಲಯದ ಮಹಿಳೆ ತನಗಿಂತಲೂ ತನ್ನ ಗಂಡ, ಮಗ, ಅಣ್ಣತಮ್ಮಂದಿರು ಮತ್ತು ತವರಿನ ಇತರೆ ಸಂಬಂಧಿಗಳ ಏಳಿಗೆಯನ್ನು ಕುರಿತು, ಅವರೆಲ್ಲರ ಒಳಿತನ್ನು ಕುರಿತು ವ್ಯಕ್ತಪಡಿಸಿದ ಕಾಳಜಿಗಳೇ ಹೆಚ್ಚು ಕಂಡು ಬರುತ್ತವೆ. ಕೃಷಿಯಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಮಹಿಳೆ ಸಕ್ರಿಯವಾಗಿ ಭಾಗಿಯಾಗಿದ್ದಾಗಲೂ ಕೃಷಿಯು ಪುರುಷಕೇಂದ್ರಿತವಾಗಿಯೇ ಗುರುತಿಸಲ್ಪಡುತ್ತಾ ಬಂದಿವೆ. ಬಿತ್ತಿಬೆಳೆಯುವ ಹೊಲ, ಕೃಷಿಯಲ್ಲಿ ಬಳಕೆಯಾಗುವ ವಸ್ತುಗಳು, ಕೃಷಿ ಕೆಲಸಕ್ಕೆ ನೆರವಾಗುವ ಪ್ರಾಣಿಗಳು, ಪುರುಷರ ಹೆಸರಿನಿಂದಲೇ ಗುರುತಿಸುತ್ತಾ ಬಂದಿವೆ ಎನ್ನುವುದಕ್ಕೆ ಮೌಖಿಕ ಆಕರಗಳಲ್ಲಿ ಉಲ್ಲೇಖಗಳಿವೆ. ಅವುಗಳೆಲ್ಲ ಪುರುಷನಸ್ವತ್ತು ಎನ್ನುವ ಮನೋಭಾವ ಹಿಂದಿನಿಂದಲೂ ಬೆಳೆದುಕೊಂಡು ಬಂದಿವೆ ಎನ್ನುವುದು ತಿಳಿದುಬರುತ್ತದೆ.

ಅಣ್ಣ ಮಾಡಿದ ಹೊಲ। ತಮ್ಮ ನೋಡಲಿ ಹ್ವಾದ

ಬನ್ನಿಗಿಡದ ಹೊಲ ಬಲುಜ್ವಾಳ। ಶೀತಲ

ಬಂಡೀಲ ಮದನಾ ಹೊಡೆದಾನ॥

ಅಣ್ಣನ ಹೊಲದಾಗ ಬೆಳ್ಳನ ಬಿಳಿಜೋಳ

ಮೆಲ್ಲಕ ಮೆಲಿಯೊ ಗಿಣಿರಾಮ। ನನ್ನಣ್ಣನ

ಕಲ್ಲ ಬಂದಾವು ಕಡಿಗಾಗೋ॥

ಕುಟುಂಬದ ಆಸ್ತಿ ಅಥವಾ ಹೊಲ ಯಾರ ಹೆಸರಲ್ಲಿ ಗುರುತಿಸಲ್ಪಡುತ್ತಿತ್ತು ಎಂಬುದನ್ನು 'ಅಣ್ಣ ಮಾಡಿದ ಹೊಲ ಅಣ್ಣನ ಹೊಲದಾಗ' ಎನ್ನುವ ಈ ಉಲ್ಲೇಖಗಳು ತಿಳಿಸುತ್ತವೆ. ಹೊಲಮಾಡುವವರು ಯಾರಾಗಿದ್ದರು? ಹೊಲ ಯಾರಿಂದ ಮಾಡಲ್ಪಡುತ್ತಿತ್ತು ಅಂದರೆ ಕೃಷಿ ಯಾರಿಂದ ಮಾಡಲ್ಪಡುತ್ತಿತ್ತು? ಅಥವಾ ಕೃಷಿ ಯಾರು ಮಾಡುತ್ತಾರೆ ಎನ್ನುವ ಬಗ್ಗೆ ಜನಪದದ ಗ್ರಹಿಕೆ ಏನಾಗಿತ್ತು ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಅಂತೆಯೇ,

"ಹಂತೀಯ ನಮ್ಮೆತ್ತು ಹಂತೀಲಿ ಬಂದರ।

ಸೆರಗೀಲಿ ವರಸೇನ। ತಮ್ಮನ।

ಹಂತೀಯ ಎತ್ತು ಹದಿನಾರ॥"

ಹೆಣ್ಣೊಬ್ಬಳು ಹೇಳಿದಂತೆ ಕಾಣುವ ಈ ತ್ರಿಪದಿಯಲ್ಲಿ ಹಂತೀಯ ನಮ್ಮೆತ್ತು ಎಂದು ಹೇಳಿಕೊಳ್ಳುವ ಮನೋಭಾವದಲ್ಲಿ ಅವಳ ಹೃದಯವೈಶಾಲತೆ ವ್ಯಕ್ತವಾಗಿದೆ. ಏಕೆಂದರೆ ತಮ್ಮನ ಹಂತೀಯ ಎತ್ತು ಎಂದು ಕೊನೆಯಲ್ಲಿ ಅವಳೇ ಹೇಳಿಕೊಂಡಿದ್ದರಿಂದ ವಾಸ್ತವವಾಗಿ ತನ್ನದಲ್ಲದಿದ್ದರೂ ತಮ್ಮನ ಎತ್ತುಗಳನ್ನು ನಮ್ಮೆತ್ತು ಎನ್ನುವುದರಲ್ಲಿ ಒಂದು ಕೌಟುಂಬಿಕತೆಯನ್ನು ಸೂಚಿಸುತ್ತದೆ. ಅಲ್ಲದೆ ಅಂತಿಮವಾಗಿ ಆ ಕುಟುಂಬದಲ್ಲಿ ಪುರುಷನ ಅಧಿಕಾರ ಒಡೆತನಗಳಿರುವುದನ್ನು ಇದು ಪ್ರಸ್ತಾಪಿಸುತ್ತದೆ ಮತ್ತು ವ್ಯವಸ್ಥೆಯನ್ನು ಸಹಜವಾಗಿಯೇ ಆಕೆಯು ಒಪ್ಪಿಕೊಂಡಿರುವಳು ಎಂಬುದು ತಿಳಿದುಬರುತ್ತದೆ. ಒಟ್ಟಿನಲ್ಲಿ ತಮ್ಮನ ಹಂತೀಯ ಎತ್ತು ಹದಿನಾರು ಎನ್ನುವಲ್ಲಿ ಹಂತೀಯ ಎತ್ತುಗಳು ತನ್ನದಲ್ಲ ತಮ್ಮನವು ಎಂಬುದು ರೈತಾಪಿ ಮಹಿಳೆಯ ಈ ಧ್ವನಿಯಲ್ಲಿ ವ್ಯಕ್ತವಾಗುತ್ತದೆ.

ಅಣ್ಣನ ಅರೆತ್ತು ತಮ್ಮನ ಮೂರೆತ್ತು
ನಮ್ಮಪ್ಪನೆತ್ತು ಹದಿನಾರು। ಬರುವಾಗ
ನನ್ನೂರ ಭೂಮಿ ನಡುಗ್ಯಾವ॥

ಎನ್ನುವ ಈ ತ್ರಿಪದಿಯಲ್ಲಿ ಕೂಡ ಎತ್ತುಗಳು ಅಣ್ಣನವು, ತಮ್ಮನವು ಮತ್ತು ಅಪ್ಪನವು ಆಗಿರುವುದು ತಿಳಿದು ಬರುತ್ತದೆ. ಹೀಗೆ ಕೃಷಿದುಡಿಮೆಯಲ್ಲಿ ಬಳಕೆಯಾಗುವ ಎತ್ತುಗಳು ಆ ಕುಟುಂಬದ ಪುರುಷನ ಹೆಸರಿನಿಂದಲೇ ಗುರುತಿಸಲ್ಪಡುತ್ತಿದ್ದವು ಎಂಬುದು ಇದರಿಂದ ತಿಳಿದು ಬರುತ್ತವೆ.

ಹಿಂದೆ ಕೃಷಿ ಕುಟುಂಬದಲ್ಲಿ ಎಷ್ಟು ಎತ್ತುಗಳನ್ನು ಹೊಂದಿದ್ದಾರೆ ಎನ್ನುವುದರ ಮೇಲೆ ಅವರ ಕುಟುಂಬದ ಸ್ಥಿತಿಗತಿಗಳನ್ನು ಕುಟುಂಬದ ಸಾಮಾಜಿಕ ಅಂತಸ್ತನ್ನು, ಸ್ಥಾನಮಾನಗಳನ್ನು ಗುರುತಿಸಲಾಗುತ್ತಿತ್ತು. ಉದಾ: ಅವನದು ಎರಡೆತ್ತಿನ ಕಮತ, ನಾಲ್ಕೆತ್ತಿನ ಕಮತ, ಆರೆತ್ತಿನ ಕಮತ, ಎಂಟೆತ್ತಿನ ಕಮತ... ಎಂದು ಕೃಷಿ ಕುಟುಂಬಗಳನ್ನು ಗುರುತಿಸಲಾಗುತ್ತಿತ್ತು. ಹೀಗೆ ಹೆಚ್ಚು ಹೆಚ್ಚು ದನಕರುಗಳನ್ನು ಎತ್ತುಗಳನ್ನು ಹೊಂದಿದಷ್ಟು ಅವರದು ದೊಡ್ಡ ಮನೆತನ ಎಂದು ಹೇಳಲಾಗುತ್ತಿತ್ತು. ಆದರೆ ಈ ಹಿಂದೆ ಹೇಳಿದಂತೆ ಕೃಷಿಯಲ್ಲಿ ಎತ್ತುಗಳು ಪುರುಷನ ಹೆಸರಲ್ಲಿ ಗುರುತಿಸಲ್ಪಡುತ್ತಿದ್ದವಾದ್ದರಿಂದ ಎತ್ತುಗಳನ್ನು ಅಳತೆಗೋಲಾಗಿಟ್ಟುಕೊಂಡು ಗುರುತಿಸುವ ಸ್ಥಾನಮಾನಗಳು ಕೂಡ ಆ ಕುಟುಂಬದ ಪುರುಷನಿಗೆ ಸಲ್ಲುತ್ತಿದ್ದವು. ಹಾಗಾಗಿ ಮಹಿಳೆ ಆ ಕುಟುಂಬದ ಒಬ್ಬ ಸದಸ್ಯಳಾಗಿರುತಿದ್ದಾಳೇ ಹೊರತು ನೇರವಾಗಿ ಕುಟುಂಬಕ್ಕೆ ಸಂಬಂಧಿಸಿದ ವಸ್ತುಗಳು ಮತ್ತು ಸ್ಥಾನಮಾನಗಳು ಅವಳ ಹೆಸರಿನಲ್ಲಿ ಗುರುತಿಸಲ್ಪಡುತ್ತಿರಲಿಲ್ಲ. ಅವಳೇನಿದ್ದರು ಅಂಥ ಕುಟುಂಬದ ಸೊಸೆ ಎಂದೂ, ಮಗಳೆಂದೂ ಗುರುತಿಸಲ್ಪಡುತ್ತಿದ್ದಳು. ಅಲ್ಲದೆ ಕುಟುಂಬದಲ್ಲಿ ಕೊಡುವಕೊಳ್ಳುವ ಅಧಿಕಾರ ಪುರುಷನದ್ದೇ ಆಗಿತ್ತು. ಅದೇ ಕುಟುಂಬದಲ್ಲಿ ಹುಟ್ಟಿದರೂ ಮಹಿಳೆಗೆ ಯಾವವಸ್ತುಗಳ ಮೇಲೂ

ಅಧಿಕಾರಯುತವಾದ ಹಕ್ಕಿರಲಿಲ್ಲ. ಆಕೆಯದು ಪುರುಷರ ಅಧೀನದ ಬದುಕಾಗಿತ್ತು. ತನಗೆ ಬೇಕೆನಿಸಿದ್ದನ್ನು ತಂದೆಯಲ್ಲಿಯೋ ತನ್ನ ಅಣ್ಣತಮ್ಮರಲ್ಲಿಯೋ ಕೇಳಿ ಬೇಡಿ ಪಡೆಯುವ ಇಲ್ಲವೆ ಅವರು ಕೊಟ್ಟಿದ್ದನ್ನು ಪಡೆಯುವ ಸ್ಥಿತಿಯಲ್ಲಿ ಮಹಿಳೆ ಇದ್ದಳು. ಆ ರೀತಿ ಕೇಳುವಂತಹ ಅವಳ ಧ್ವನಿ ಕೂಡ ಅಧಿಕಾರಯುತವಾದಂತಹದ್ದಲ್ಲ.

ಹಟ್ಟೀಲಿ ಹತ್ತೆಮ್ಮೆ ಕೊಟ್ಟಿಗೇಲಿ ನಾಕೆಮ್ಮೆ
ಕೊಟ್ಟಿಯೇನೂ ಅಣ್ಣಯ್ಯ ನನಗೊಂದು। ಎಮ್ಮೆಯ
ನಿನ್ನ ಹೆಸರ್ಹೇಳಿ ಮೊಸರ ಕಡೆದೇನು॥

'ನನಗೊಂದು ಎಮ್ಮೆಯ ಕೊಟ್ಟರೆ, ಅಣ್ಣಯ್ಯ ನಿನ್ನ ಹೆಸರ್ಹೇಳಿ ಮೊಸರ ಕಡೆದೆನು' ಎನ್ನುವ ಈ ಧ್ವನಿಯಲ್ಲಿ ತುಂಬಾ ದೈನ್ಯತೆ ಇದೆ. ಈ ದೈನ್ಯತೆಯ ಧ್ವನಿ ಕೃಷಿ ಕುಟುಂಬದೊಳಗಿನ ಹೆಣ್ಣಿನ ಸ್ಥಾನ ಎಂತಹದ್ದು ಎಂಬುದನ್ನು ಮತ್ತು ಕುಟುಂಬದಲ್ಲಿ ಅವಳ ಅಸ್ಥಿತ್ವ ಯಾವ ಬಗೆಯದು ಎನ್ನುವುದನ್ನು ತಿಳಿಸುತ್ತದೆ.

ಹಾಗೊಂದು ವೇಳೆ ಮಹಿಳೆಯೇ ಕೃಷಿಯಲ್ಲಿ ಪ್ರಧಾನವಾಗಿ ತೊಡಗಿಕೊಂಡಿದ್ದರೆ ಅಥವಾ ಮಹಿಳೆಯಿಂದಲೇ ಸಂಪೂರ್ಣ ಕೃಷಿ ಪ್ರಕ್ರಿಯೆ ನಡೆಯುತ್ತಿದ್ದರೆ ಮಹಿಳೆ ಮಾಡುವ ಅಂತಹ ಕೃಷಿಯ ಬಗೆಗೆ ಸಮಾಜದಲ್ಲಿ ಒಳ್ಳೆಯ ಮನೋಭಾವವಿದ್ದಂತೆ ಕಂಡು ಬರುವುದಿಲ್ಲ. ಆ ಕಾರಣಕ್ಕಾಗಿಯೇ 'ಒಡೆಯನಿಲ್ಲದ ಭೂಮಿ ಕೆಡಕಿಗೆ ಕಾರಣ' ಎಂದು ಭಾವಿಸಲಾಗಿದೆ. ಗಂಡುಮಾಡಿದ ಒಕ್ಕಲುತನ ಶ್ರೇಷ್ಠ ಎಂದು ಕೊಂಡಿದ್ದರಿಂದ 'ಮಗನ ಒಕ್ಕಲುತನ ಇದ್ದರೆ ಬಡತನ ಇಲ್ಲ' ಎನ್ನುವ ನಂಬಿಕೆ ಉಳ್ಳವರಾಗಿದ್ದಾರೆ. ಇದರಿಂದ ಗಂಡು ಮಾಡುವ ಕೃಷಿಯ ಬಗೆಗೆ ಸಮಾಜದಲ್ಲಿ ಮಾನ್ಯತೆ ಇದ್ದು ಹೆಣ್ಣು ಮಾಡುವ ಕೃಷಿಯ ಕನಿಷ್ಠವಾಗಿ ಮತ್ತು ಕೇವಲವಾಗಿ ಕಾಣುವ ಪ್ರವೃತ್ತಿ ಇರುವುದು ಈ ಸಾಹಿತ್ಯಿಕ ಅಂಶದಿಂದ ತಿಳಿದು ಬರುತ್ತದೆ. ಈಗಲೂ ಸಮಾಜದಲ್ಲಿ 'ಅವಳೇನು ಮಾಡತಾಳೆ ಹೆಣ್ಣ ಹೆಂಗ್ಸು' ಎಂದು ಅವಳ ಕತೃತ್ವ ಶಕ್ತಿಯನ್ನು ಅಪಮೌಲ್ಯಕ್ಕೊಳಪಡಿಸುವುದು ಕಂಡು ಬರುತ್ತದೆ. ಈ ರೀತಿಯ ಮನೋಭಾವ ನಾಗರೀಕ ಸಮಾಜದಲ್ಲಿ ಮಾತ್ರವೇ ಕಂಡುಬರುತ್ತದೆ. ಆದರೆ ಬುಡಕಟ್ಟು ಸಮುದಾಯುಗಳಲ್ಲಿ ಈಗಲೂ ಮಹಿಳೆಯರೇ ಕೃಷಿಯಲ್ಲಿ ಪ್ರಧಾನವಾಗಿ ತೊಡಗಿಕೊಂಡಿರುವುದನ್ನು ನಾವು ನೋಡುತ್ತೇವೆ. ಇದಲ್ಲದೆ 'ಆರಿದ್ರ ಮಳಿ ಆದಾಗ ಖರೆ, ಹಿರೆಸೊಸಿ ನಡೆದಾಗ ಖರೆ' ಎನ್ನುವಂತೆ ಹೆಣ್ಣಿನ ಬಗೆಗೆ ಕೆಲವು ಸಂದೇಹ ಅನುಮಾನಗಳು ವ್ಯಕ್ತವಾಗಿವೆ. ಅಲ್ಲದೆ ಹೆಣ್ಣು ಮತ್ತು ಮಣ್ಣಿನ ಬಗೆಗೆ ಭಯ ಆತಂಕಗಳು ವ್ಯಕ್ತವಾಗಿರುವುದನ್ನು ನಾವು ನೋಡುತ್ತೇವೆ. ಮಣ್ಣಿಗಾಗಿ ಕೌರವ ಸತ್ತ, ಹೆಣ್ಣಿಗಾಗಿ ರಾವಣ ಸತ್ತ, ಎನ್ನುವ ಪೌರಾಣಿಕ ಸಂಗತಿಗಳಿಂದ ಹೆಣ್ಣು ಮತ್ತು ಮಣ್ಣಿನಿಂದಾದ ಅಪಾಯಗಳನ್ನು

ತಮ್ಮ ಸ್ಮೃತಿ ಪಟಲದಲ್ಲಿರಿಸಿಕೊಂಡಿರುವುದು ತಿಳಿದುಬರುತ್ತದೆ. ಅಂದರೆ ಮಣ್ಣು ಮತ್ತು ಹೆಣ್ಣಿನ ವ್ಯಾಮೋಹ ಅಪಾಯಕಾರಿಯಾದದ್ದೆಂಬ ಭಾವ ಈ ಗಾದೆ ಮಾತಿನಲ್ಲಿ ಅಡಗಿರುವುದೆಂದು ಹೇಳಬಹುದು.

ಹೀಗೆ ಕೃಷಿ ಸಮುದಾಯದ ಜನರಿಗೆ ಗಂಡು ಶ್ರೇಷ್ಠ ಎಂಬ ಕಲ್ಪನೆ ಇದೆ ಎಂಬುದು ಕೆಲವು ನಿದರ್ಶನಗಳಿಂದ ತಿಳಿದು ಬರುತ್ತದೆ.

ಸಾವಿರ ಹೊನ್ನಿದ್ದರೇನು ಸಂತಾನಿಲ್ಲದ ಮೇಲೆ
ಹಂತೀಲಿ ಉಣ್ಣೋ ಮಗನಿಲ್ಲ (ಮಗರಾಯ) ಇಲ್ಲದ ಮೇಲೆ
ಸಾವಿರೊನ್ನಿದ್ದು ಫಲವೇನು॥
ಖಂಡಗಕ್ಕಿ ಇದ್ದರೇನು ಜಾಜಿ ಹೂವಿದ್ದರೇನು
ಮನೇಲಿ ಉಣ್ಣೋ ಗಂಡನಿಲ್ಲ (ದ) ಮೇಲೆ
ಖಂಡಗಕ್ಕಿ ಇದ್ದು ಫಲವೇನು॥
'ಗಂಡು ಹಡೆದವನು ತೆಂಗು ಬೆಳೆದವನು ದರಿದ್ರನಲ್ಲ'
'ಮಳೆ ಬಂದರೆ ಕೆಟ್ಟದಲ್ಲ ಮಗ ಉಂಡರೆ ಕೆಟ್ಟದಲ್ಲ'

ಮೇಲಿನ ಉದಾಹರಣೆಗಳಲ್ಲಿ ಗಂಡುಸಂತಾನದ ಬಗೆಗೆ ಅಪೇಕ್ಷೆ ಮತ್ತು ಗಂಡುಶ್ರೇಷ್ಠ ಎನ್ನುವ ಮನೋಭಾವ ವ್ಯಕ್ತವಾಗುತ್ತದೆ. 'ಹಂತೀಲಿ ಉಣ್ಣೋ ಮಗನಿಲ್ಲದ ಮೇಲೆ ಸಾವಿರ ಹೊನ್ನಿದ್ದರೂ ಫಲವಿಲ್ಲ' 'ಮನೇಲಿ ಗಂಡನಿಲ್ಲದ ಮೇಲೆ ಖಂಡಗಕ್ಕಿ ಇದ್ದರೂ ಫಲವಿಲ್ಲ' ಎನ್ನುವ ಧ್ವನಿಯಲ್ಲಿ ಗಂಡು ನಿರೀಕ್ಷಿತ ಹಾಗೂ ಅಪೇಕ್ಷಿತ ಅತಿಥಿಯಾಗಿರುವುದು ತಿಳಿದು ಬರುತ್ತದೆ. 'ಗಂಡು ಹಡೆದವನು ತೆಂಗು ಬೆಳೆದವನು ದರಿದ್ರನಲ್ಲ' ಎನ್ನುವುದಾದರೆ ಅದು ಪರೋಕ್ಷವಾಗಿ ಹೆಣ್ಣು ಹಡೆದವರು ದರಿದ್ರರು ಎಂಬುದನ್ನು ಸೂಚಿಸುತ್ತದೆ. ಗಂಡು ಹಡೆದರೆ ಮುಂದೆ ಆತ ತಮ್ಮ ಕುಟುಂಬಕ್ಕಾಗಿ ದುಡಿಯುತ್ತಾನೆ. ಮತ್ತು ಆತನಿಂದ ತಮ್ಮ ವಂಶ ಬೆಳೆಯುತ್ತದೆ ಎಂದು ಭಾವಿಸಲಾಗಿದೆ. ಆದರೆ ಅದೇ ಒಂದು ಹೆಣ್ಣಾದರೆ ಅವಳು ಅನ್ಯರ ಮನೆಗೆ ಹೋಗುವ ಸೊತ್ತೆಂದೂ ಮತ್ತವಳ ಮದುವೆಗೆ ಹಣಖರ್ಚಾಗುತ್ತದೆ ಎನ್ನುವ ಹಿನ್ನೆಲೆಯಲ್ಲಿ ಗಂಡು ಹಡೆದವನು ದರಿದ್ರನಲ್ಲ ಎಂದು ಹೇಳಲಾಗಿದೆ. ಇನ್ನೂ ಊಟದವಿಷಯದಲ್ಲಿ ಮಗ ಮುಖ್ಯನಾಗುತ್ತಾನೆಯೇ ಹೊರತು ಮಗಳಲ್ಲ. ಹಾಗಾಗಿಯೇ ಅವರು ಹಂತೀಲಿ ಉಣ್ಣೋ ಮಗನಿಲ್ಲವೆಂದೊ, ಮನೇಲಿ ಉಣ್ಣೊ ಗಂಡನಿಲ್ಲವೆಂದೂ ನಿರಾಶರಾಗುತ್ತಾರೆ. ಮತ್ತೊಂದೆಡೆ ಮಳೆಬಂದರೆ ಕೆಟ್ಟಲ್ಲ ಎಂದು ಮಗ ಮುಖ್ಯ ಎನ್ನುವ ಅಭಿಲಾಷೆಯನ್ನು ವ್ಯಕ್ತಪಡಿಸುತ್ತಾರೆ.

ಈ ರೀತಿ ಗಂಡುಮಗುವಿಗಾಗಿ ಅಪೇಕ್ಷಿಸಿದಂತೆ ಹೆಣ್ಣಿಗಾಗಿ ಅಪೇಕ್ಷಿಸಿದ, ಹಂಬಲಿಸಿದ ನಿದರ್ಶನಗಳು ಕೃಷಿಸಂಬಂಧಿ ಸಾಹಿತ್ಯದಲ್ಲಿ ಕಂಡು ಬರುವುದಿಲ್ಲ. ಹಾಗಾಗಿ ಇದರಿಂದ ಹೆಣ್ಣು ಕನಿಷ್ಟ ಗಂಡು ಶ್ರೇಷ್ಠ ಎಂಬ ಭಾವನೆ ಕೃಷಿಸಮುದಾಯದಲ್ಲೂ ಇದೆ ಎಂಬುದು ತಿಳಿದು ಬರುತ್ತದೆ. ಕೃಷಿಸಮುದಾಯಕ್ಕೆ ಹೆಣ್ಣಿನ ಬಗೆಗಿರುವ ನಿರೀಕ್ಷೆ ಅಪೇಕ್ಷೆಗಳೇ ಬೇರೆಯಾದಂತವುಗಳು. ಹೆಣ್ಣು ಹೇಗೆ ಇರಬೇಕು ಮತ್ತು ಹೇಗೆ ಇರಬಾರದು ಎನ್ನುವ ಆ ಸಮುದಾಯದ ನಿರೀಕ್ಷೆಗಳು ಪುರುಷಪ್ರಧಾನ ವ್ಯವಸ್ಥೆಯ ನಿರೀಕ್ಷೆಗಳೇ ಆಗಿವೆ. ಹಾಗಾಗಿ ಹೆಣ್ಣಿಗೆ ಕೆಲ ಗುಣ ಮತ್ತು ಕರ್ತವ್ಯಗಳನ್ನು ಮೌಲ್ಯಗಳಾಗಿ ಆರೋಪಿಸಲಾಗಿದೆ. ಕೃಷಿ ಸಮುದಾಯಕ್ಕೆ ಹೆಣ್ಣಿನ ಫಲವಂತಿಕೆಗೆ ಹೆಚ್ಚು ಮಹತ್ವವಿರುವುದು ತಿಳಿದು ಬರುತ್ತದೆ.

'ಬೆಳಿ ಬಂದ ಹೊಲ ನೋಡು, ಮಲಿ ಬಂದ ಹೆಣ್ಣು ನೋಡು'

'ಸಕಾಲಕ್ಕೆ ಬಿತ್ತಿದ ಬೆಳೆ ಮೈತುಂಬಿದ ಹೆಣ್ಣಿನಂತೆ'

'ಗೆಡ್ಡೆಯ ಹೊಲ ಹೀನ, ಗೊಡ್ಡ ಹೆಂಡತಿ ಹೀನ'

'ಉತ್ತಲ್ಲದೆ ಹೊಲವಲ್ಲ, ಹೆತ್ತಲ್ಲದೆ ಹೆಣ್ಣಲ್ಲ'

ಎಂದು ಹೆಣ್ಣಿನ ಫಲವಂತಿಕೆ ಮತ್ತು ತಾಯ್ತನಕ್ಕೆ ಹೆಚ್ಚು ಮಾನ್ಯತೆ ನೀಡಲಾಗಿದೆ. ಫಲಕೊಡದ ಮಣ್ಣು ಮತ್ತು ಹೆಣ್ಣನ್ನು ಅನುಪಯುಕ್ತ ಎಂದು ಭಾವಿಸಲಾಗಿದೆ. ಈ ರೀತಿಯ ಫಲ ನೀಡುವಿಕೆಯಲ್ಲಿಯೇ ಹೆಣ್ಣು ಮತ್ತು ಮಣ್ಣಿನ ಅಸ್ಥಿತ್ವವಿದೆ ಎಂದು ತಿಳಿಯಲಾಗಿದೆ. ತಾಯ್ತನವನ್ನು ಉದಾತ್ತೀಕರಿಸಿದ ಈ ಮಾತುಗಳ ಹಿಂದಿರುವ ಮನೋಭಾವದಲ್ಲಿ ಮಕ್ಕಳಾಗದವರನ್ನು ನಿರುಪಯುಕ್ತ ವಸ್ತುಗಳಂತೆ ಹೀನಾಯವಾಗಿ ಪರಿಗಣಿಸಲಾದ ಸಾಮಾಜಿಕ ಸ್ಥಿತಿಯನ್ನು ಕಾಣುತ್ತೇವೆ. ಹೆಣ್ಣಿನ ತಾಯ್ತನದ ಕೆಲವು ಗುಣಸ್ವಭಾವಗಳನ್ನು ಹೊಗಳಿ ವೈಭವೀಕರಿಸಲಾಗಿದೆ. 'ತಾರತಮ್ಯ ತೋರಿಸದೆ ಇರುವುದು ತಾಯಿ ಮತ್ತು ಭೂಮಿಯ ಸ್ವಭಾವ', 'ಹದವಾದ ತೇವ ತಾಯಿಯ ಮಮತೆಯಂತೆ ಪ್ರತಿಕ್ರಿಯಿಸುತ್ತದೆ'. ಈ ಗಾದೆಮಾತುಗಳು ಮೇಲುನೋಟಕ್ಕೆ ತಾಯಿಯ ಗುಣಸ್ವಭಾವಗಳನ್ನು ಹೊಗಳಿದಂತೆ ಕಂಡರು ಅವಳು ಹಾಗೇ ಇರಬೇಕೆಂಬ ಆಶಯವನ್ನು ಅವಳಿಗೆ ಆರೋಪಿಸಿದಂತೆ ತೋರುತ್ತದೆ.

'ಗುಣ ಇಲ್ಲದ ಹೆಣ್ಣು ರುಚಿ ಇಲ್ಲದ ಹಣ್ಣು'

'ಸುಳಿ ನೋಡಿ ಎತ್ತು ತಾ, ತಳಿ ನೋಡಿ ಹೆಣ್ಣು ತಾ'

ಎನ್ನುವ ಈ ಮಾತುಗಳ ಹಿಂದೆ ಹೆಣ್ಣಿಗೆ ಗುಣ ಎನ್ನುವುದು ಮುಖ್ಯ ಎನ್ನುವ ತಾತ್ವಿಕತೆ ಹುದುಗಿದೆ. ಸಾಂಪ್ರದಾಯಿಕವಾಗಿ ಮಹಿಳೆ ಎಂದರೆ ಅವಳಿಗೆ ತ್ಯಾಗ, ಸಹನೆ, ತಾಳ್ಮೆ, ಕರುಣೆ... ಇತ್ಯಾದಿ ಗುಣಗಳಿರಬೇಕೆಂಬ ನಿರೀಕ್ಷೆಯಿರುವುದನ್ನು ನಾವು ಕಾಣುತ್ತೇವೆ. ವೈವಾಹಿಕ ಸಂದರ್ಭದಲ್ಲಿ ಹೆಣ್ಣಿನ

ಗುಣದಂತೆ ಗಂಡಿನ ಗುಣ ಕೂಡ ಪರೀಕ್ಷೆಗೆ ಒಳಪಡುವ ಸಂಗತಿಯಾಗುತ್ತದೆ ಎಂಬುದನ್ನು ಜಾಗನೋಡಿ ಬಿತ್ತಬೇಕು, ಗುಣನೋಡಿ ಹೆಣ್ಣು ಕೊಡಬೇಕು ಎನ್ನುವ ಗಾದೆಮಾತಿನಿಂದ ತಿಳಿದು ಬರುತ್ತದೆ.

ಕೃಷಿಯಲ್ಲಿ ಅಥವಾ ಕೃಷಿಸಮುದಾಯದಲ್ಲಿ ಪುರುಷನೇ ಏಕೆ ಮುಖ್ಯವಾಗುತ್ತಾನೆಂದರೆ ಕಾಲಕ್ರಮೇಣ ಕೃಷಿಯು ಪುರುಷಪ್ರಧಾನ ವ್ಯವಸ್ಥೆಯಲ್ಲಿನ ಕಸುಬಾಗಿದ್ದುದಕ್ಕೆ ಎನ್ನಬಹುದು. ಕೃಷಿ ಪುರುಷ ಪ್ರಧಾನತೆಯ ಭಾಗವಾಗಿಯೇ ಗುರುತಿಸಿಕೊಂಡು ಬಂದಿರುವಂತಹದ್ದು ಎನ್ನುವುದನ್ನು ಖಚಿತಪಡಿಸಿಕೊಳ್ಳುವುದಕ್ಕೆ ಉತ್ತರಕರ್ನಾಟಕದ ಜನಪದಸಾಹಿತ್ಯದಲ್ಲಿನ ಒಂದು ತ್ರಿಪದಿಯನ್ನು ನಿದರ್ಶನವಾಗಿ ತೆಗೆದುಕೊಳ್ಳಬಹುದು.

ಮಳೆಯೇ ನೀನಳಬ್ಯಾಡ ಶಲ್ಯ ತೋದಿತೆಂದು

ಹಿಡಿದಾರ ನನ ಪುರುಷ ನನ್ನಪ್ಪ! ಕೊಟ್ಟ

ಸಿಡಿಲನ್ನೇ ನಡುಗಿಸುವ ಕೊಡಿಯ॥ (ಸಂ.ಸಿ.ಕೆ .ನಾವಲಗಿ, ೨೦೦೬,ಪು.೩೫)

ಮಳೆಬರುವ ಕ್ರಿಯೆಯನ್ನೆ ಮಹಿಳೆ ಇಲ್ಲಿ ಅಳುವುದಕ್ಕೆ ಹೋಲಿಕೆಕೊಟ್ಟಿರುವುದು ತಿಳಿದುಬರುತ್ತದೆ. ಮುಖ್ಯವಾಗಿ ಇಲ್ಲಿ ಗಮನಿಸಬೇಕಾದ ಅಂಶ ಎಂದರೆ "ಹಿಡಿದಾರ ನನ ಪುರುಷ ನನ್ನಪ್ಪ ಕೊಟ್ಟ ಸಿಡಿಲನ್ನೆ ನಡುಗಿಸುವ ಕೊಡಿಯ" ಎನ್ನುವ ಈ ಸಾಲು ಮಾವ ಅಳಿಯನಿಗೆ ಕೊಡಿಯನ್ನು ಉಡುಗೊರೆಯಾಗಿ ನೀಡಿರುವುದು ತಿಳಿದು ಬರುವುದು. ಅಳಿಯನಿಗೆ ಮಾವ ಉಡುಗೊರೆಕೊಡುವ ಪದ್ಧತಿ ಪುರುಷಪ್ರಧಾನ ಕುಟುಂಬದಲ್ಲಿ ರೂಢಿಯಲ್ಲಿದ್ದ ಒಂದು ಸಾಮಾಜಿಕಪದ್ಧತಿ ಅಥವಾ ಸಂಪ್ರದಾಯ. ಹಾಗಾಗಿ ಕೃಷಿಸಮುದಾಯದ ಹಿನ್ನೆಲೆಯಲ್ಲಿ ಅಭಿವ್ಯಕ್ತಗೊಂಡ ಈ ಮಾತು ಪರೋಕ್ಷವಾಗಿ ಕೃಷಿ ಪುರುಷಪ್ರಧಾನ ವ್ಯವಸ್ಥೆಯ ಭಾಗವಾಗಿಯೇ ಬೆಳೆದುಕೊಂಡು ಬಂದಿದೆ ಎಂಬುದು ಈ ಮೌಖಿಕ ಆಕರದ ಮೂಲಕ ತಿಳಿದು ಬರುತ್ತದೆ.

ಕೃಷಿಯಲ್ಲಿ ಮಹಿಳೆಯ ಪಾಲುದಾರಿಕೆ ಇದ್ದಾಗಲೂ ಕೂಡ ಕೃಷಿಸಂಬಂಧಿ ಸಾಹಿತ್ಯ ಮಹಿಳೆಯ ಬಗೆಗಿನ ಕಾಳಜಿಗಿಂತ ಹೆಚ್ಚಾಗಿ ಪುರುಷರನ್ನು ಕುರಿತು ಕಾಳಜಿಗಳನ್ನು ಮತ್ತು ಪುರುಷರ ಹಿತಾಸಕ್ತಿಗಳನ್ನೇ ಒಳಗೊಂಡಿರುವುದು ಕಂಡು ಬರುತ್ತದೆ. ಹಾಗೆಂದ ಮಾತ್ರಕ್ಕೆ ಕೃಷಿಸಂಬಂಧಿ ಸಾಹಿತ್ಯದಲ್ಲಿ ಮಹಿಳೆಯ ಬಗೆಗೆ ಮತ್ತು ಆಕೆಯ ದುಡಿಮೆಯ ಬಗೆಗೆ ಪ್ರಸ್ತಾಪಗಳೇ ಇಲ್ಲವೆಂದಲ್ಲ. ಆದರೂ ಮಹಿಳಾ ಪಾಲುದಾರಿಕೆಯ ಕುರಿತು ಮತ್ತು ಮಹಿಳೆಯ ಪರ ಕಾಳಜಿಯ ಅಭಿವ್ಯಕ್ತಿಯ ಪ್ರಮಾಣ ಕಡಿಮೆಯಿರುವುದು ತಿಳಿದು ಬರುತ್ತದೆ.

ಕೃಷಿಜನಪದ ಸಾಹಿತ್ಯವನ್ನು ಅವಲೋಕಿಸಿದಾಗ ತುಂಬಾ ಅಪರೂಪ ಎನ್ನುವಂತೆ ಮಹಿಳೆಯ ಬಗೆಗೆ ಒಳ್ಳೆಯ ವಿಚಾರವನ್ನು ಅಭಿವ್ಯಕ್ತಿಸಿದ್ದು ಕೂಡ ಕಂಡು ಬರುತ್ತದೆ. ಉದಾ: 'ಒಣ ಭೂಮಿಯನ್ನು ವಿಧವೆ ಹೆಣ್ಣನ್ನು ನಿರ್ಲಕ್ಷಿಸಬಾರದು ಎನ್ನುವಲ್ಲಿ ಆ ಅಪರೂಪತೆ ಕಂಡು ಬರುತ್ತದೆ. ಹೆಣ್ಣು ಮತ್ತು ಭೂಮಿಯ ಬಗೆಗೆ ಫಲ ನಿರೀಕ್ಷೆಯ ಮನೋಭಾವ ಇದ್ದಾಗಲೂ ಅವುಗಳ ಬಗೆಗೆ ಗೌರವ ಭಾವನೆಗಳಿರುವುದು ಇಂತಹ ಕೆಲವು ಅಭಿವ್ಯಕ್ತಿಗಳಿಂದ ತಿಳಿದು ಬರುತ್ತದೆ. ಇನ್ನು ಕೃಷಿಕರ ದಾಂಪತ್ಯದ ಬಗೆಗಿನ ವಿವರಗಳಿರುವ ಸಾಹಿತ್ಯವೂ ನಮಗೆ ದೊರೆಯುತ್ತದೆ. ಕೃಷಿಕರದು ಸರಸ-ವಿರಸಗಳೆರಡರಿಂದಲೂ ಕೂಡಿದ ಬದುಕು ಎಂಬುದು ಅವರಿಂದಲೇ ರಚನೆಗೊಂಡ ಒಡಪುಗಳಿಂದ ತಿಳಿದು ಬರುತ್ತದೆ.

'ಕಟಕ ರೊಟ್ಟಿ ಕಾರದ ಚಟ್ನಿ ಕಟಗೊಂಡ
ಹೋಗಂದರ ಸೆಟಗೊಂಡ ಹೋಗತಾರ...'
'ಅವರಿಕಾಳ ಗುಗ್ಗರಿ ಅರದ ಕಾರ
ಕಟ್ಟಿಕೊಡತೇನಂದ್ರ
ಸಿಟ್ಟು ಮಾಡತಾರ...'
'ಹೆಗಲಮ್ಯಾಲ ಹುಳ್ಳಿ ಬಳ್ಳಿ
ನನ್ನ ಹೇಣ್ತಿ ಮೆತ್ತನ್ನ ಮಳ್ಳಿ...'
'ಹಚ್ಚನ್ನ ಹೊಲದಾಗ ಇಡೂದ ಬೆಚ್ಚ
ನನ್ನ ಹೇಣ್ತಿಗೆ ನಂದ ಹುಚ್ಚ...'
'ಮ್ಯಾಟ ಹತ್ತೇನಿ ತೂರಾಕ
ನನ್ನ ಹೆಣ್ತಿ ಬಂದಾಳ ಕರ್‍ಯಾಕ'
'ತೆಲಿಮ್ಯಾಲ ಹುಲ್ಲಹೊರಿ
ನಮ್ಮಾಕಿ ಕೂಡ ಬಾಳೆ ಬಾಳ ಬಿರಿ...
'ಎತ್ತಿನ ಕೊಳ್ಳಾಗ ಗಳ್ಳಾ ಗಂಟೆ
ನನ್ನ ಹೆಣ್ತಿ ಬಾಳ ಗುಲ್ಲಾಗಂಟೆ'
'ಹೋರಿ ಕೊಳ್ಳಾಗ ಹುರಿಗೆಜ್ಜೆ
ನಮ್ಮ ಪೋರಿ ಕಾಲಾಗ ಸರಗೆಜ್ಜೆ...'

ಈ ರೀತಿಯಾಗಿ ಸರಸದಾಂಪತ್ಯದಲ್ಲಿಯೂ ಗಂಡಸಿನ ಹುಸಿಮುನಿಸನ್ನು ಕುರಿತುಹೇಳುವ, ಸಂಗಾತಿಯ ಮೇಲಿನ ಪ್ರೀತಿ ಮತ್ತು ಮೆಚ್ಚುಗೆಯನ್ನು ವ್ಯಕ್ತಪಡಿಸುವ, ಅವರ ಗುಣಸ್ವಭಾವವನ್ನು ಕುರಿತು ಕಾವ್ಯಾತ್ಮಕವಾಗಿ ಹೇಳುವ, ಗಂಡ ಹೆಂಡತಿಗೆ ರೇಗಿಸುವ, ಹೆಂಡತಿ ಗಂಡನಿಗೆ ರೇಗಿಸುವ ಸಂಗತಿಗಳು ಒಡಪಿನಲ್ಲಿ ವ್ಯಕ್ತವಾಗಿರುವುದು ಕಂಡುಬರುತ್ತದೆ. ಈ ಒಡಪುಗಳಲ್ಲಿ ಒಡಮೂಡಿದ ರೈತಾಪಿ ದಂಪತಿಗಳ ದಾಂಪತ್ಯ ಸರಸ ವಿರಸಗಳಿಂದ ಕೂಡಿತ್ತೆಂಬುದು ತಿಳಿದುಬರುವುದು. ಕೆಲವೊಮ್ಮೆ ಹಾಸ್ಯಕ್ಕಾಗಿ ಒಡಪುಗಳು ಬಳಕೆಯಾಗುತ್ತಿದ್ದರೂ ಈ ಹಾಸ್ಯಗಳಲ್ಲಿ ಕೂಡ ನೈಜ ಬದುಕಿನ ಅಂಶಗಳು ಇರುತ್ತಿದ್ದವು. ಮಹಿಳೆಯ ಅಭಿವ್ಯಕ್ತಿಗೆ ಒಡಪುಗಳು ಒಂದು ಅವಕಾಶ ಕಲ್ಪಿಸಿಕೊಟ್ಟಿವೆ ಎಂಬ ಅಂಶ ಕೂಡ ಗಮನಾರ್ಹವಾದದ್ದು.

ಇಷ್ಟೆಲ್ಲಾ ಹೇಳಿ ಕೃಷಿ ಸಂಬಂಧಿ ಸಾಹಿತ್ಯದಲ್ಲಿ ಪುರುಷನ ಪಾಲುದಾರಿಕೆಯ ಬಗೆಗೆ ಏನು ಹೇಳದಿದ್ದರೆ ಈ ಒಟ್ಟು ಚರ್ಚೆಯು ಪಾರ್ಶ್ವಮುಖ ಚರ್ಚೆಯೆನಿಸಬಹುದು. ಅಧ್ಯಾಯವು ಕೃಷಿಯಲ್ಲಿ ಮಹಿಳೆಯನ್ನು ಕೇಂದ್ರವಾಗಿರಿಸಿಕೊಂಡಿದ್ದರೂ ಪುರುಷನ ಬಗೆಗೆ ಸಾಹಿತ್ಯದಲ್ಲಿರುವ ಧೋರಣೆಗಳು ಯಾವ ರೀತಿಯವು ಎನ್ನುವುದನ್ನು ಅರಿಯುವ ಮೂಲಕ ಮಹಿಳೆಯ ಬಗೆಗಿನ ಧೋರಣೆಗಳೇನು? ಕೃಷಿಯಲ್ಲಿನ ಅವಳ ಪಾಲುದಾರಿಕೆ ಮತ್ತು ಪ್ರಾಮುಖ್ಯತೆ ಯಾವರೀತಿಯದು ಎಂದು ತಿಳಿದುಬರುತ್ತದೆ. ಅಲ್ಲದೆ ಪುರುಷನ ಪಾಲುದಾರಿಕೆ ಯಾವರೀತಿಯದು ಎಂದು ನೋಡುವ ಮೂಲಕ ಆ ರೀತಿಯ ಚಟುವಟಿಕೆಗಳಲ್ಲಿ ಮಹಿಳೆಯ ಪಾಲುದಾರಿಕೆ ಇದೆಯೋ ಇಲ್ಲವೋ ಎಂಬುದನ್ನು ನೋಡುವ ಮತ್ತು ಆ ಚಟುವಟಿಕೆಗಳು ಮಹಿಳೆ ಮಾಡದಿರುವ ಕೆಲಸಗಳಾಗಿದ್ದರೆ ಕೃಷಿಯಲ್ಲಿ ಪುರುಷನಿಂದಷ್ಟೆ ಅಥವಾ ಹೆಚ್ಚಾಗಿ ಪುರುಷರೇ ಮಾಡುವಂತಹ ಕೆಲಸಗಳಾವುವು ಎಂಬುದರ ಬಗೆಗೆ ಸ್ಪಷ್ಟತೆ ಸಿಗುತ್ತದೆ. ಈ ಎಲ್ಲ ಹಿನ್ನೆಲೆಯಲ್ಲಿ ಈ ಕೆಳಗೆ ಕೃಷಿಯಲ್ಲಿ ಪುರುಷನ ಕುರಿತಿರುವ ಸಾಹಿತ್ಯಿಕ ವಿವರಗಳ ಕುರಿತು ಪ್ರಸ್ತಾಪಿಸಲಾಗಿದೆ.

**ಭೂಮಿತತ್ವ ಮತ್ತು ಲೈಂಗಿಕತ್ವ**

ಕೃಷಿಕರು ದೈವರೂಪದಲ್ಲಿ ಆರಾಧಿಸುವ ಬಹುಪಾಲು ದೈವಗಳು ಹೆಣ್ಣು ದೈವಗಳಾಗಿವೆ. ಏಕೆಂದರೆ ಆದಿಮಮಾನವರು ಹೆಣ್ಣಿನಲ್ಲಿರುವ ಜೈವಿಕಶಕ್ತಿಯೇ ಪ್ರಕೃತಿಯ ಪ್ರಕ್ರಿಯೆಗಳಿಗೂ ಕಾರಣ ಎಂದು ಭಾವಿಸಿರುವ ಕಾರಣಕ್ಕಾಗಿ ಹೆಣ್ಣಿನಸ್ವರೂಪದಲ್ಲಿ ದೈವವನ್ನು ಪೂಜಿಸುವ ಆರಾಧಿಸುವ ರೂಢಿ ಬೆಳೆದುಬಂದಿದೆ. ಆ ಕಾರಣಕ್ಕಾಗಿಯೇ ಈಗಲೂ ಕೃಷಿಕರು ಹೊಲದಲ್ಲಿ ಪತ್ರಿಗಿಡದ ಅಥವಾ ಬೇವಿನಮರದ ನೆರಳಿಗೆ ದೊಡ್ಡ ಕಲ್ಲಿನ್ನಿಟ್ಟು ಅದನ್ನು ತಮ್ಮ ಹೊಲಕಾಯುವ ಲಕ್ಷ್ಮಿ ಎಂದು ಪೂಜಿಸುತ್ತಾರೆ. ಕೆಲವು ಕೃಷಿಕರು ತಮ್ಮ ಹೊಲದಲ್ಲಿರುವ ಬನ್ನಿಮರವನ್ನು ಲಕ್ಷ್ಮಿಸ್ವರೂಪದಲ್ಲಿ ಭಾವಿಸಿ

ಪೂಜಿಸುತ್ತಾರೆ. ರೈತಾಪಿಗಳು ತಮ್ಮ ದನಕರುಗಳನ್ನು ರೋಗರುಜಿನಗಳಿಂದ ರಕ್ಷಿಸುವಳೆಂಬ ನಂಬಿಕೆಯಿಂದ ತಮ್ಮ ದನದಕೊಟ್ಟಿಗೆಯ ಒಂದು ಗೂಣಿನಲ್ಲಿ (ಮಾಡಿನಲ್ಲಿ) ಒಂದು ಸಣ್ಣಗುಂಡಕಲ್ಲಿನ್ನಿಟ್ಟು ಇಲ್ಲವೆ ಒಂದು ತೆಂಗಿನಕಾಯಿ ಇಟ್ಟು ಆದನ್ನು ಕರಿಯವ್ವ (ದನದ ಕೊಟ್ಟಿಗೆಯಲ್ಲಿನ ಹೆಣ್ಣು ದೇವರು) ಎಂದು ಪೂಜಿಸುವರು.

ಮಳೆ ಬಾರದಿದ್ದರೆ ಹೆಣ್ಣುದೈವವಾದ ಊರಿನ ಗ್ರಾಮದೇವತೆಗೆ ಮೊರೆಹೋಗಿ ಬೇಡಿಕೊಳ್ಳುವ ಮತ್ತು ದೇವಿಗೆ ಉಡಿ ತುಂಬುವಂತಹದ್ದು, ಗ್ರಾಮದೇವತೆಯ ಅಥವಾ ಊರಮ್ಮನಜಾತ್ರೆಯನ್ನು ಮಾಡುವಂತಹದ್ದು, ಕೆಲವು ಊರುಗಳಲ್ಲಿ ಈಗಲೂ ಸರಕಾರ ಬಲಿಯನ್ನು ನಿಷೇಧಿಸಿದರೂ ಕೂಡ ಊರದೇವಿಯ ಸಂತೃಪ್ತಳಾಗಲೆಂದು ಕದ್ದುಮುಚ್ಚಿಯಾದರೂ ಕುರಿ, ಕೋಣ, ಕೋಳಿಯಂತಹ ಪ್ರಾಣಿಗಳನ್ನು ಬಲಿಕೊಡುವಂತಹ ಆಚರಣೆಗಳು ನಡೆಯುತ್ತವೆ.ಅಂತೆಯೇ ಕೃಷಿಕರು ಭೂಮಿಯ ಬಗೆಗಿರುವ ಕೃತಜ್ಞತಾ ಮನೋಭಾವದಿಂದ ಆಚರಿಸುವ ಸೀಗಿ ಹುಣ್ಣಿಮೆಯ ಆಚರಣೆಯಲ್ಲಿ ಭೂಮಿಯನ್ನು ಒಂದು ಹೆಣ್ಣು ಎನ್ನುವ ಪರಿಕಲ್ಪನೆಯಲ್ಲಿಯೇ ಪೂಜಿಸುತ್ತಾರೆ. ಕೃಷಿಕರು ಮಾನವಸಹಜವಾದ ಗರ್ಭಿಣಿ ಸ್ತ್ರೀಯ ಬಯಕೆ ಊಟವನ್ನು ಭೂಮಿಗೂ ಉಣಬಡಿಸುವ ರೀತಿಯನ್ನು ಚರಗಚಲ್ಲುವ ಕ್ರಿಯೆಯಲ್ಲಿ ನೋಡಬಹುದು. ಈ ದಿನ ದೈವಿಧ್ಯಮಯವಾಗಿ ಮಾಡಿದ ಎಳ್ಳುಹಚ್ಚಿದ ಜೋಳದರೊಟ್ಟಿ, ಸಜ್ಜಿರೊಟ್ಟಿ, ಗೋಧಿಹುಗ್ಗಿ, ಅಕ್ಕಿಹುಗ್ಗಿ, ಕುಂಬಳಕಾಯಿಪಲ್ಯ, ಪುಂಡಿಪಲ್ಯ, ಎಣ್ಣಗಾಯಿ, ಹುರಕ್ಕಿಹೋಳಿಗೆ, ಕರ್ಚಿಕಾಯಿ, ಉಂಡಗಡಬು, ಕುಚ್ಚಿದ ಕಾರಾ, ಕರಿಗಡಬು, ಚಕ್ಕುಲಿ, ಕೋಡಬಳೆ, ಬಜಿ, ಗಾರ್ಗಿ, ಕರೆದಮೆಣಸಿನಕಾಯಿ, ಸಂಡಿಗೆ, ಕೋಸಂಬರಿ ಈ ಎಲ್ಲ ಪದಾರ್ಥಗಳನ್ನು ಸ್ವಲ್ಪ ಸ್ವಲ್ಪ ತೆಗೆದುಕೊಂಡು ಎಲ್ಲವನ್ನು ಸೇರಿಸಿ ಹೊಲದ ತುಂಬೆಲ್ಲ 'ಉಲಿಗೋ...... ಉಲಿಗೋ...... ಎಂದು ಎರಚುವರು. ಇದನ್ನು ಚರಗಚೆಲ್ಲುವುದು ಎನ್ನುವರು. ಒಟ್ಟಿನಲ್ಲಿ ಈ ಆಚರಣೆಯಿಂದ ರೈತರಿಗೆ ಭೂಮಿಯ ಬಗೆಗೆ ದೈವಿಭಾವನೆ ಇರುವುದು ಮತ್ತು ಭೂಮಿಯನ್ನು ಹೆಣ್ಣುರೂಪದಲ್ಲಿ ಆರಾಧಿಸುವುದು ತಿಳಿದು ಬರುತ್ತದೆ.

ಕೃಷಿಕರು ತಾವು ಬೆಳೆದಬೆಳೆಯನ್ನು ಉಪಯೋಗಿಸುತ್ತಿದ್ದ ಕೃಷಿಉಪಕರಣಗಳನ್ನು ಕೂಡ ಹೆಣ್ಣಿನ ಸ್ವರೂಪದಲ್ಲಿ ಕಾಣುತ್ತಾರೆ ಮತ್ತು ಅವುಗಳನ್ನು ಹೆಣ್ಣು ರೂಪದಲ್ಲಿ ಪೂಜಿಸುತ್ತಾರೆ. ಇದಕ್ಕೆ ಕೃಷಿ ಬದುಕಿನೊಂದಿಗೆ ಹಾಸುಹೊಕ್ಕಾಗಿರುವ ಕೆಲವು ಸಂಗತಿಗಳನ್ನು ನಿದರ್ಶನಗಳನ್ನಾಗಿ ನೋಡಬಹುದು. ರಾಶಿ ಪೂಜೆಯ ಸಂದರ್ಭದಲ್ಲಿ ರಾಶಿಗೆ ಸೀರೆ ಏರಿಸುವ ಕ್ರಿಯೆ ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸೀರೆ ಇದು ಸ್ತ್ರೀ ಸಂಕೇತ. ಹಾಗಾಗಿ ಇದು ಕೃಷಿಕರು ತಾವು ಬೆಳೆದಬೆಳೆಯನ್ನು ಹೆಣ್ಣಾಗಿ ಪರಿಭಾವಿಸಿರುವುದನ್ನು ತಿಳಿಸುತ್ತದೆ. ಗಣೇಶ ಚತುರ್ಥಿಯ ಸಂದರ್ಭದಲ್ಲಿ ಮಾಡುವ ಅಷ್ಟಮಿ ಎನ್ನುವ

ಆಚರಣೆಯಲ್ಲಿ ಕುಂಬಳ ಅಥವಾ ಬಾಳೆಲೆಯ ಮೇಲೆ ತಾವು ಬೆಳೆದ ಹತ್ತಿಯನ್ನಿಟ್ಟು ಎಳೆಲಕ್ಷ್ಮಿ ಎಂದು ಪೂಜಿಸುವರು. ಅಂತೆಯೇ ವೀಳ್ಯದೆಲೆಯನ್ನು ತುಳಿಯಬಾರದು, ವೀಲ್ಯದೆಲೆಯನ್ನು ಆರಿಸಿಕೊಂಡು ಹಾಕಿಕೊಳ್ಳಬಾರದು; ಅದು ಲಕ್ಷ್ಮಿಗೆ ಸಮಾನ ಎಂದು ಭಾವಿಸಿರುವರು. ಇದರಿಂದ ಕೃಷಿಕರು ಬೆಳೆಯನ್ನು ಹೆಣ್ಣುರೂಪದಲ್ಲಿ ಕಂಡಿರುವುದು ತಿಳಿದು ಬರುತ್ತದೆ. ಅಲ್ಲದೆ ಮೊದಲ ಬಿತ್ತನೆಯ ಸಂದರ್ಭದಲ್ಲಿ ಬಿತ್ತುವ ಕೂರಿಗೆಗೆ ಸೀರೆ ಉಡಿಸಿ ಅಲಂಕರಿಸಿ ಪೂಜಿಸಿ ನಂತರ ಹೊಲಬಿತ್ತುವ ಕ್ರಿಯೆಯಲ್ಲಿ ತೊಡಗುವರು. ಇಲ್ಲಿ ಕೃಷಿಕರು ಕೃಷಿಉಪಕರಣಗಳನ್ನು ಕೂಡ ಹೆಣ್ಣುರೂಪದಲ್ಲಿಯೇ ಕಾಣುವ ರೀತಿಯನ್ನು ಗಮನಿಸಬಹುದು.

ಈ ಎಲ್ಲ ಆಚರಣೆಗಳಿಂದ ತಿಳಿದುಬರುವ ಸಂಗತಿ ಎಂದರೆ ಮಳೆ ಬೀಳುವ, ಬೆಳೆ ಬೆಳೆಯುವ, ಬಂದಬೆಳೆಯನ್ನು ಸಂರಕ್ಷಿಸುವ, ತಮ್ಮ ದನಕರುಗಳನ್ನು ರೋಗರುಜಿನಗಳಿಂದ ಕಾಪಾಡುವ ಮಾಂತ್ರಿಕತೆಗೂ ಹೆಣ್ಣಿನ ಸೃಷ್ಟಿಕ್ರಿಯೆಗೂ ಸಂಬಂಧವಿದೆ ಎಂದು ಭಾವಿಸಿದ್ದರಿಂದ ಹೆಣ್ಣಿನಸ್ವರೂಪವನ್ನು ಸಾಂಕೇತಿಸಿಕೊಂಡು, ಇಲ್ಲವೆ ಸ್ವತಃ ಹೆಣ್ಣನ್ನೇ ಭಾಗಿಯಾಗಿಸಿಕೊಂಡು ಆಚರಣೆಗಳು ನಡೆದುಕೊಂಡು ಬಂದಿವೆ. ಅಲ್ಲದೆ ಕೃಷಿಕರು ದೈವವನ್ನು ಹೆಣ್ಣುರೂಪದಲ್ಲಿ ಪೂಜಿಸುತ್ತಿರುವುದು ಮತ್ತು ತಮ್ಮ ಸುತ್ತಲಿನ ವಸ್ತುಗಳಲ್ಲಿ ಹೆಣ್ಣುರೂಪವನ್ನು ಕಾಣುವುದಕ್ಕೂ ಕೂಡ ಹೆಣ್ಣು ಒಂದು ಅದ್ಭುತ ಶಕ್ತಿ ಎಂದು ಭಾವಿಸಿರುವ ಮನೋಭಾವವೇ ಕಾರಣವಾಗಿದೆ.

ನೆಲದ ಫಲಶಕ್ತಿಯನ್ನು ಹೆಚ್ಚಿಸಲು, ಖಾತರಿಗೊಳಿಸಲು, ಹಲವಾರು ರೀತಿಯ ಧಾರ್ಮಿಕ ವಿಧಿಗಳು ಹುಟ್ಟಿಕೊಂಡಿದ್ದವು. ಇವೇ ಮುಖ್ಯವಾಗಿ ಹೆಣ್ಣಿನಲ್ಲಿ ಹುದುಗಿದೆ ಎಂದು ನಂಬಲಾಗುತ್ತಿದ್ದ ನಿಗೂಢ ಮಾಂತ್ರಿಕ ಶಕ್ತಿಯನ್ನು ಗೌರವದಿಂದ ಆರಾಧಿಸುವಂಥವು. ಭಿನ್ನ ಭಿನ್ನ ಬುಡಕಟ್ಟು ಜನರಲ್ಲಿ ರೂಡಿಯಲ್ಲಿರುವುದು ಇಂದಿಗೂ ಕಂಡುಬರುವ ಧಾನ್ಯ-ನೃತ್ಯ ಸುಗ್ಗಿ ಕುಣಿತಗಳಲ್ಲದೆ ಮಳೆಬರಿಸಲೆಂದು ನಡೆಯುವ ಮಾಂತ್ರಿಕ ವಿಧಿಗಳಲ್ಲೂ ಹೆಂಗಸರೇ ಮುಖ್ಯ ಪಾತ್ರ ವಹಿಸುತ್ತಾರೆ. ಈ ಕ್ರಿಯಾವಿಧಿಗಳಲ್ಲಿ ಹೆಣ್ಣಿನ ಬತ್ತಲೆ ಮೈಯನ್ನು ಅಥವಾ ಆಕೆಯ ಜನನೇಂದ್ರಿಯವನ್ನು ಹೊಲಗದ್ದೆಗಳಿಗೆ ತೋರಿಸುವುದು, ಬೆತ್ತಲೆಹೆಣ್ಣಿನ ಹೆಗಲಿಗೆ ನೇಗಿಲು ಹೂಡಿಊಳುವಂತೆ ವಿಧಿಯನ್ನು ಆಚರಿಸುವುದು ಸೇರಿರುತ್ತವೆ. ಇವುಗಳೊಂದಿಗೆ ಹಾಡುಕುಣಿತಗಳೂ ಪ್ರಾಚೀನಕಾಲದ ಫಲವಂತಿಕೆಯ ಆರಾಧನಾ ವಿಧಿಗಳಾಗಿದ್ದವು. ( ಡಾ.ಬಿ.ಎನ್.ಸುಮಿತ್ರಾಬಾಯಿ, ೨೦೦೪, ಪು.೯೪).

ಚಾಮರಾಜನಗರ ಜಿಲ್ಲೆಯ ಕೊಳ್ಳಗಾಲ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಆದಿವಾಸಿಗಳಲ್ಲಿ ಇಂದಿಗೂ ರೂಢಿಯಲ್ಲಿದ್ದು ವಿಶಿಷ್ಟವಾಗಿ ಆಚರಿಸಲ್ಪಡುತ್ತ ಬಂದಿರುವ ಮಳೆಸಂಬಂಧಿ ಆಚರಣೆಯೊಂದನ್ನು ಗಮನಿಸಬಹುದು. ಬೇಸಿಗೆಕಾಲ ಆರಂಭವಾಗಿ ಕೆರೆ, ಹಳ್ಳ-ಕೊಳ್ಳದಲ್ಲಿನ ನೀರು

ಬತ್ತಿಹೋಗಿ ಭೂಮಿಯ ಮೇಲೆ ನೀರು ಕಡಿಮೆಯಾದಾಗ, ಮನುಷ್ಯರಿಗೆ, ಪ್ರಾಣಿಗಳಿಗೆ ತೊಂದರೆಯಾಗುತ್ತದೆ ಎಂದು ಮಳೆ ಆಚರಣೆಯನ್ನು ಮಾಡಬೇಕೆಂದು ಗ್ರಾಮದಲ್ಲಿ ನಿರ್ಧರಿಸಿ ಆಸಕ್ತರೆಲ್ಲರೂ ಸೇರಿ ಮನೆಮನೆಗೆ ಹೋಗಿ ರಾಗಿಹಿಟ್ಟು ಪಲ್ಯದಕಾಳು ಮತ್ತು ಅವರು ಕೊಟ್ಟಷ್ಟು ಹಣವನ್ನು ಸಂಗ್ರಹಿಸುತ್ತಾರೆ. ರಾಗಿಹಿಟ್ಟು ಮತ್ತು ಕಾಳನ್ನು ಒಂದುಕಡೆ ಕೂಡಿಟ್ಟು ಸಂಗ್ರಹವಾದ ಹಣವನ್ನು ಅಗತ್ಯ ಪೂಜಾಸಾಮಗ್ರಿಗಳನ್ನು ಕೊಳ್ಳಲುಬಳಸುತ್ತಾರೆ.

ಆಚರಣೆಮಾಡುವ ದಿನದಂದು ಇಡೀ ಗ್ರಾಮದ ವಿವಿಧ ಸಮುದಾಯಗಳ ವಿವಾಹಿತ ಮಹಿಳೆಯರೆಲ್ಲರೂ ಒಂದೆಡೆ ಸೇರುವರು. ಅದರಲ್ಲೇ ಓರ್ವ ಹಿರಿಯಹೆಣ್ಣುಮಗಳು ಮುಖಂಡತ್ವವನ್ನು ವಹಿಸುವಳು. ತಮಟೆಯನ್ನು ಬಾರಿಸುವ ಕೆಲಸವನ್ನು ಮಾದಿಗಸಮುದಾಯದ ಓರ್ವ ಹೆಣ್ಣುಮಗಳು ನಿರ್ವಹಿಸುವಳು. ಎಲ್ಲರೂಕೂಡಿ ಮಳೆಆಚರಣೆಗೆ ಬೇಕಾದ ಪೂಜಾಸಾಮಗ್ರಿಗಳೊಂದಿಗೆ ಮಳೆಗುಡ್ಡದ ಕಡೆಗೆ ಬೆಳಿಗ್ಗೆ ಹತ್ತು ಹನ್ನೊಂದು ಗಂಟೆ ಸುಮಾರಿಗೆ ಹೊರಡುವರು. ಆಚರಣೆಗಾಗಿ ಊರಿನಿಂದ ಒಂದು ಕಿಲೋಮೀಟರ್ ದೂರದಲ್ಲಿರುವ ಒಂದು ಗುಡ್ಡದಲ್ಲಿನ ಸಮತಟ್ಟಾದ ಜಾಗದಲ್ಲಿ ಗುರುತಿಸಿ ಕಲ್ಲುಗಳಿಂದ ಎರಡು ಕಟ್ಟೆಯನ್ನು ಕಟ್ಟುತ್ತಾರೆ. ಕಟ್ಟೆಯ ಒಳಗೆ ಕಾಡುಜಾತಿಯ ಮರಗಳು ಬೆಳೆದಿರುತ್ತವೆ. ಮರದ ಬುಡದಲ್ಲಿ ದೇವರ ಸಂಕೇತವಾಗಿ ಐದು ಅಥವಾ ಮೂರು ಕಲ್ಲುಗಳನ್ನು ಇಟ್ಟಿರುತ್ತಾರೆ. (ಐದು ಕಲ್ಲುಗಳು ಪಂಚಭೂತಗಳ ಸಂಕೇತವಾದರೆ, ಮೂರು ಕಲ್ಲುಗಳು ಬ್ರಹ್ಮ, ವಿಷ್ಣು, ಮಹೇಶ್ವರರ ಸಂಕೇತವಾಗಿರುತ್ತವೆ). ಆಚರಣೆಯ ಹಿಂದಿನ ದಿನವೇ ಗಿಡಗಂಟೆಗಳನ್ನೆಲ್ಲ ಕಿತ್ತು ನೀರುಹಾಕುವುದರ ಮೂಲಕ ಪೂಜೆಗೆ ಅಣಿಗೊಳಿಸುತ್ತಾರೆ.

ಆಚರಣೆಯನ್ನು ಸೋಮವಾರದಂದು ಮಾಡಲಾಗುತ್ತದೆ. ಮಾದಿಗರಜಾತಿಗೆ ಸೇರಿದ ಒಬ್ಬ ಹೆಂಗಸು ತಮಟೆಯನ್ನು ಬಡಿಯುವಳು. ಈ ಹೆಂಗಸಿನ ತಂಬಡಿಯ ಹಿಂದೆ ಅಂದಿನ ಪೂಜಾಕಾರ್ಯಕ್ಕೆ ನೇಮಕವಾದ ಕುರುಬ, ಹಾಲುಕುರುಬ, ತೆಲುಗುಶೆಟ್ಟಿ, ಒಕ್ಕೈಕುರುಬ ಸಮುದಾಯದ ಹಿರಿಯಹೆಂಗಸರೆಲ್ಲ ಹೊರಡುತ್ತಾರೆ. ಇವರೆಲ್ಲ ಸ್ನಾನಮಾಡಿ, ಬಿಳಿ ಉಡುಗೆ ತೊಟ್ಟು ಆಚರಣೆಯಲ್ಲಿ ಭಾಗಿಯಾಗುತ್ತಾರೆ. ತಂಬಡಿಯ ಮುಂದಾಳತ್ವದಲ್ಲಿ ಪೂಜಾಕಾರ್ಯ ನೆರವೇರಿದ ಬಳಿಕ ಉಳಿದ ಎಲ್ಲ ಹೆಂಗಸರು ಪೂಜೆ ಮಾಡುವರು. ಅನಂತರ ಎಲ್ಲರೂ ಕಕ್ಕೆಯಸೊಪ್ಪನ್ನು ಮುರಿದು ಎರಡುಕೈಗಳಲ್ಲೂ ಹಿಡಿದುಕೊಳ್ಳುವರು. ತಮಟೆಯ ನಾದಕ್ಕೆ ಹೆಜ್ಜೆಹಾಕುತ್ತ ಕಲ್ಲುಗುಡ್ಡಗಳ ಸುತ್ತಕುಣಿಯಲು ಆರಂಭಿಸುವರು. ಆರಂಭದಲ್ಲಿ ಸೀರೆಯನ್ನು ಮಂಡಿಯವರೆಗೆ ಎತ್ತಿಕಟ್ಟುವರು. ತಮಟೆನಾದ ಏರುತ್ತಿದ್ದಂತೆಲ್ಲ ಕುಣಿತದಗತಿಯು ಏರುವುದು. ಆರಂಭದಲ್ಲಿ ಕೆಲವರು ಸೀರೆಯನ್ನಷ್ಟೆ ಬಿಚ್ಚಿಡುವರು. ವಯಸ್ಸಾದ ಹೆಂಗಸರು ಬಟ್ಟೆಯನ್ನೆಲ್ಲ ಬಿಚ್ಚಿಟ್ಟು ತಮಟೆಯ ನಾದಕ್ಕೆ ತಕ್ಕಂತೆ ಹಾಡುತ್ತ ಕುಣಿಯುವರು.

"ಮಕ್ಕಳು ಮರಿಗೆ ಹಿಟ್ಟಿಲ್ಲ, ಸಾಯುತ್ತಿದ್ದಾರೆ ಮಳೆ ಹುಯ್ಯೋ ದೇವೇಂದ್ರ" ಎಂದು ಅಳುತ್ತಾ ಕುಣಿಯುವರು. ತಮಟೆಗತಿ ಕುಣಿತ, ಮಿಳಿತಗೊಂಡು ಆವೇಶಗೊಂಡು ಉಳಿದವರು ಬಟ್ಟೆಯನ್ನು ಸಂಪೂರ್ಣ ತೆಗೆದು ಕುಣಿಯುವರು. ಅವರು ದಣಿಯುವಷ್ಟು ಕುಣಿದು ಕೊನೆಯ ಪೂಜೆ ಮಾಡುವರು.

ಈ ಪೂಜಾಕಾರ್ಯ ಮತ್ತು ಬೆತ್ತಲೆಕುಣಿತವು ಸುಮಾರು ಎರಡುಮೂರು ಗಂಟೆಗಳು ನಡೆಯುತ್ತದೆ. ನಂತರ ಪೂಜೆಯನ್ನು ಸಲ್ಲಿಸಿದ ಬಳಿಕ ತಮ್ಮ ತಮ್ಮ ಬಟ್ಟೆಗಳನ್ನು ಧರಿಸಿಕೊಳ್ಳುವರು ಹಾಗೂ ತೆಗೆದುಕೊಂಡು ಹೋಗಿರುವ ಕೆಡಲೆಪುರಿ (ಮಂಡಾಳು), ತೆಂಗಿನಕಾಯಿ, ಬಾಳೆಹಣ್ಣನ್ನು ಎಲ್ಲರೂ ಪ್ರಸಾದವಾಗಿ ಸ್ವೀಕರಿಸುವರು. ಅನಂತರ ಮಳೆಗುಡ್ಡದಿಂದ ಊರಿನಕಡೆಗೆ ಇಳಿದುಬರುವರು. (ಈವರೆಗೂ ನಡೆದ ಆಚರಣೆಯ ವಿಧಿಕ್ರಿಯೆಗಳಲ್ಲಿ ಕೇವಲ ಮಹಿಳೆಯರು ಮಾತ್ರ ಭಾಗವಹಿಸುವರು. ಯಾವುದೇ ಕಾರಣಕ್ಕೂ ಗಂಡುಮಕ್ಕಳು ಹತ್ತಿರಸುಳಿಯುವ ಹಾಗಿಲ್ಲ ಎಂದು ನಿಷೇಧವಿದೆ. ಹಾಗೊಂದು ವೇಳೆ ಗಂಡುಮಕ್ಕಳು ಆಚರಣೆ ನಡೆದ ಸ್ಥಳಕ್ಕೆ ಹೋದರೆ ಕಲ್ಲಾಗುತ್ತಾರೆ ಎಂಬ ನಂಬಿಕೆ ಇದೆ) ಇವರು ಬರುವುದನ್ನು ನಿರೀಕ್ಷಿಸುತ್ತಿದ್ದ ಗ್ರಾಮದ ಜನರೆಲ್ಲಾ ಇವರನ್ನು ಬರಮಾಡಿಕೊಳ್ಳುವರು. ಪೂಜಾಆಚರಣೆಯನ್ನು ಮುಗಿಸಿ, ಹೋದಬಳಿಕ ಹಿಂದಿನ ದಿನ ಮನೆಮನೆಯಲ್ಲಿ ಸಂಗ್ರಹಿಸಿರುವ ರಾಗಿಹಿಟ್ಟಿನಿಂದ ಅಂಬಲಿಯನ್ನು ಮತ್ತು ಕಾಳಿನಿಂದ ಸೊಪ್ಪು ಸೇರಿಸಿದ ಪಲ್ಯವನ್ನು ಸಿದ್ಧಪಡಿಸಿರುತ್ತಾರೆ. ಮಣ್ಣಿನಮಡಕೆಯಲ್ಲಿ ಅಂಬಲಿಯನ್ನು ಮತ್ತು ಬಿದಿರಿನ ಬುಟ್ಟಿಯಲ್ಲಿ ಕಾಳುಸೊಪ್ಪಿನ ಪಲ್ಯವನ್ನು ತುಂಬಿಸಿಕೊಂಡು ಊರಿನ ಸಣ್ಣ ಮಕ್ಕಳೆಲ್ಲರನ್ನು ಕೂಡಿಸಿಕೊಂಡು ಊರಿನ ಹೊರಗೆ ಪ್ರಯಾಣ ಮಾಡುತ್ತಾರೆ. ಹೋಗುವಾಗ 'ಊರಲ್ಲಿ ಮಳೆ ಇಲ್ಲ ಬೆಳೆಯಿಲ್ಲ, ದನಕರುಗಳಿಗೆ ನೀರಿಲ್ಲ, ಮಕ್ಕಳಿಗೆ ಹಿಟ್ಟಿಲ್ಲ, ಅದಕ್ಕೆ ಊರು ಬಿಟ್ಟು ದೇಶಾಂತ್ರ ಹೋಗ್ತೇವೆ' ಎಂದು ಹೇಳುವರು. ಮಕ್ಕಳೆಲ್ಲಾ ಅವ್ವ ಅಂಬಲಿ, ಅವ್ವ ಅಂಬಲಿ ಎಂದು ಅಳುತ್ತಿರುತ್ತಾರೆ. ಆಗ ಅಂಬಲಿ ಹೊತ್ತವಳು ಸೌಟಿನಿಂದ ಮಕ್ಕಳ ತಲೆಯ ಮೇಲೆ ಹೊಡೆಯುವಳು. ಆಗ ಊರಿನ ಯಜಮಾನರು ಹೋಗಿ ಅಯ್ಯೋ ಊರು ಬಿಟ್ಟು ಹೋಗಬೇಡಿ ಮಳೆ ಬೆಳೆ ಆಗುತ್ತೆ ದನಕರುಗಳಿಗೆ ನೀರು ಮಕ್ಕಳಿಗೆ ಹಿಟ್ಟು ಸಿಗುತ್ತೆ ಬನ್ನಿ' ಎಂದು ಮನ ಒಲಿಸುತ್ತಾರೆ. ಇದೇ ರೀತಿ ನಾಟಕೀಯವಾಗಿ ಬಹಳಷ್ಟು ದೂರದವರೆಗೆ ಸಂಭಾಷಣೆ ನಡೆಯುತ್ತದೆ.

ಕೊನೆಗೆ 'ಯಜಮಾನರು ಮಳೆ ಆಗುತ್ತೆ ಮಕ್ಕಳುಮರಿಗೆ ಹಿಟ್ಟುಸಿಗುತ್ತದೆ ಎಂದು ಹೇಳ್ತಾ ಇದ್ದಾರೆ. ಬನ್ನಿ ಹಾಗಾದ್ರೆ ವಾಪಾಸ್ಸು ಊರಿಗೆ ಹೋಗೋಣ' ಎಂದು ಎಲ್ಲರೂ ವಾಪಾಸ್ಸಾಗುತ್ತಾರೆ. ಕೊನೆಯದಾಗಿ ಅಂದು ಗ್ರಾಮದ ಜನರೆಲ್ಲರೂ ಊರಿನ ಗುಡಿಗೆಹೋಗಿ ಪೂಜೆಸಲ್ಲಿಸಿ ತಮ್ಮ ತಮ್ಮ ಮನೆಗೆ ಹೋಗುತ್ತಾರೆ. ಜನರೆಲ್ಲ ಮನೆ ಸೇರುತ್ತಿದ್ದಂತೆ ಆಕಸ್ಮಿಕವೋ, ಅನಿರೀಕ್ಷಿತವೋ, ಆಚರಣೆಯ

ಫಲವೊ ಒಟ್ಟಿನಲ್ಲಿ ಮಳೆಯು ಬರುತ್ತದೆ'[೨೫]. ಈ ಆಚರಣೆಯಿಂದ ಹೆಣ್ಣುಮಕ್ಕಳು ಬೆತ್ತಲಾಗಿ ಕುಣಿದರೆ ಮಳೆಬರುತ್ತದೆಂಬ ನಂಬಿಕೆ ಬುಡಕಟ್ಟು ಮಹಿಳೆಯರಲ್ಲಿದೆ ಎಂಬುದು ತಿಳಿದುಬರುತ್ತದೆ. ಅಂತೆಯೇ ದಕ್ಷಿಣಕನ್ನಡಜಿಲ್ಲೆಯ ಹಾಲಕ್ಕಿ ಒಕ್ಕಲಿಗರ ಹೆಣ್ಣು ಮಕ್ಕಳು ಮಳೆಗಾಗಿ ಪ್ರಾರ್ಥಿಸುತ್ತ 'ತಾರಲೆ ಬಾರಲೆ' ಎಂದು ಮಳೆಯನ್ನು ಆಹ್ವಾನಿಸುತ್ತ ಗುಂಪು ಗುಂಪಾಗಿ ನರ್ತಿಸುತ್ತಾರೆ'[೨೬]. ಇದೇ ರೀತಿ ನೆರೆಯ ರಾಜ್ಯವಾದ ತಮಿಳುನಾಡಿನಲ್ಲಿಯೂ ಇಂತಹ ಅಚರಣೆ ರೂಢಿಯಲ್ಲಿರುವುದು ಕಂಡು ಬರುತ್ತದೆ. 'ತಮಿಳುನಾಡಿನ ಸೇಲಂ ಜಿಲ್ಲೆಯ ಅತ್ತೂರಿನ ಬಳಿಯಿರುವ ಪೇಳೂರಿನಲ್ಲಿ ಮಳೆಯನ್ನು ಬಯಸಿ ಕನ್ಯೆಯರು ಮತ್ತು ಮಕ್ಕಳನ್ನು ಸುತ್ತುಗಟ್ಟಿ ಏಳು ಜನ ಹಿರಿಯ ಮುತ್ತೈದೆಯರು ಸೇರಿ ವೃತ್ತಾಕಾರದಲ್ಲಿ ನಗ್ನರಾಗಿ ನಿಂತು ತಮ್ಮ ಹಿಂಬದಿಯಲ್ಲಿ ಕೊಡವನ್ನು ತಟ್ಟುತ್ತಾ ನರ್ತನ ಮಾಡುತ್ತಾರೆ. ಈ ವಿಧಿನಡೆಯುವ ಪ್ರದೇಶಕ್ಕೆ ಗಂಡಸರಿಗೆ ಪ್ರವೇಶವಿಲ್ಲ. ಹೆಂಗಸರು ಮತ್ತು ಚಿಕ್ಕಮಕ್ಕಳು ಭಾಗವಹಿಸಬಹುದು. ಹೆಣ್ಣಿನ ಅಂಗ, ಕುಲವೃದ್ಧಿಯ ಮತ್ತು ಸಮೃದ್ಧಿಯಚಿಹ್ನೆ ಅದನ್ನು ನೆಲಕ್ಕೆ ಕಾಣಿಸಿದರೆ ನೆಲವು ಸಮೃದ್ಧಿಯ ಶಕ್ತಿಯನ್ನು ಪಡೆದು ಮಳೆಯನ್ನು ಆಕರ್ಷಿಸುತ್ತದೆ ಎಂಬ ನಂಬಿಕೆ ಇವರಲ್ಲಿದ್ದಂತೆ ಕಾಣುತ್ತದೆ'[೨೭].

ಬೇಸಾಯವೇ ಪ್ರಧಾನ ಉತ್ಪಾದನಾ ವಿಧಾನವಾಗಿದ್ದ ಜನಾಂಗಗಳು ಮನುಷ್ಯರ ಫಲವಂತಿಕೆ, ಹೆಣ್ಣಿನ ಫಲವಂತಿಕೆ ಮತ್ತು ನಿಸರ್ಗದ ಸೃಷ್ಟಿ ಶಕ್ತಿಗಳನ್ನೆಲ್ಲ ಒಂದು ದೊಡ್ಡ ಸ್ತ್ರೀಶಕ್ತಿಗೆ ಅಧೀನವೆಂದು ಗಾಢವಾಗಿ ನಂಬಲಾಗುತ್ತಿತ್ತು. ಬೇಸಾಯದ ಯಶಸ್ಸು, ಶಿಶುವಿಗೆ ಜನ್ಮಕೊಡುವ ಶಕ್ತಿಯ ಹಾಗೆ ಹೆಣ್ಣಿನ ಮಾಂತ್ರಿಕ ಶಕ್ತಿಯನ್ನೆ ಆಧರಿಸಿದೆ ಎಂದು ನಂಬಿದ್ದ ಜನರು ಕೃಷಿಸಂಬಂಧಿತ ಮಾಂತ್ರಿಕಆರಾಧನಾ ವಿಧಿಗಳನ್ನು ಬೆಳೆಸಿದರು. ಇಂಥ ಆರಾಧನೆಗಾಗಿ ಮಾತೆ, ಹೆಣ್ಣು ಭೂಮಿಗಳ ಸಾಂಕೇತಿಕಶಕ್ತಿಯ ರೂಪದಲ್ಲಿ ಹೆಣ್ಣಿನ ಆಕಾರದ ಮೂರ್ತಿಗಳನ್ನು ಬಳಸುತ್ತಿದ್ದರು. ಪ್ರಾಚೀನ ನಾಗರೀಕತೆಗಳ ಪುರಾತತ್ವ ಉತ್ಖನನಗಳಲ್ಲಿ ಜಗತ್ತಿನ ಅನೇಕ ಭಾಗಗಳಲ್ಲಿ ಇಂಥ ನಗ್ನಸ್ತ್ರೀಮೂರ್ತಿಗಳು ದೊರೆತಿವೆ. ಭಾರತದ ಹರಪ್ಪ ಮೆಹೆಂಜೋದಾರೋಗಳಲ್ಲಿ ಇಂಥ ನಗ್ನಸ್ತ್ರೀಮೂರ್ತಿಗಳು ದೊರೆತಿವೆ. ಅವುಗಳಲ್ಲಿ ಹೆಣ್ಣಿನ ಜೀವದಾಯಕ, ಜೀವಪೋಷಕ ಶಕ್ತಿಯನ್ನು ಎತ್ತಿ ತೋರಿಸುವಂತೆ ದಪ್ಪಸ್ತನಗಳು, ದೊಡ್ಡನಿತಂಬಗಳು, ದಪ್ಪತೊಡೆಗಳು, ಉಬ್ಬಿದ ಹೊಟ್ಟೆಗಳೇ ಢಾಳಾಗಿ ರೂಪುಗೊಂಡಿವೆ. ಆಸ್ಟ್ರೀಯಾ ಮತ್ತು ಫ್ರಾನ್ಸ್ ಸಮೀಪ ದೊರೆತಿರುವ ಹೆಣ್ಣು ಮೂರ್ತಿಗಳು ಹೆಣ್ತನದ ಲೈಂಗಿಕಅಂಶವನ್ನು ಪ್ರಕಟಿಸುವಂತಿದ್ದು, ಅವು ವಿನಸ್‌ಗಳೆಂದು ಪ್ರಸಿದ್ಧವಾಗಿವೆ. ಫಲವಂತಿಕೆಯ ಉಪಾಸನೆಗಾಗಿ ಬಳಸಲಾಗುತ್ತಿದ್ದ ಈ ಮೂರ್ತಿಗಳನ್ನು ನೆಲದಲ್ಲಿ ಹೂಳಲಾಗುತ್ತಿತ್ತು. ನೆಲದ ಬೆಳೆಸುವಶಕ್ತಿಗೆ ಹೆಚ್ಚಿನ ಸತ್ವ ಬರಲಿ ಎಂಬ ಉದ್ದೇಶ ಇದರ ಹಿಂದೆ ಇದ್ದಿರಬೇಕು ಎಂದು ಸುಮಿತ್ರಬಾಯಿ ಅಭಿಪ್ರಾಯಪಡುತ್ತಾರೆ.ಈ ಎಲ್ಲ ಸಂಗತಿಗಳು ಸ್ತ್ರೀಶಕ್ತಿಯ ಬಗೆಗೆ

ಜನರಲ್ಲಿ ಅಗಾಧ ನಂಬಿಕೆ ಇರುವುದನ್ನು ತಿಳಿಸುತ್ತವೆ. ಅಲ್ಲದೆ ಆ ಮೂಲಕ ಕೃಷಿ ಸಮೃದ್ಧಿ ಹೆಚ್ಚುತ್ತದೆ ಎಂದು ನಂಬಿದ್ದ ಅವರು ಹೆಣ್ಣನ್ನು ತಮ್ಮ ಆಚರಣೆಯ ಭಾಗವಾಗಿಸಿಕೊಂಡಿರುವುದು ತಿಳಿದು ಬರುತ್ತದೆ.

ಕೃಷಿಕರು ಸಾಮಾನ್ಯವಾಗಿ ಹೊಲದಲ್ಲಿ ಹೊಸ ಬೋರವೆಲ್ (ಕೊಳವೆಬಾವಿ) ಹಾಕಿಸಿದಾಗ ಮನೆಯ ಮಗಳನ್ನು ಕರೆಯಿಸಿ ಅವಳ ಕೈಯಿಂದಲೇ ಪೂಜೆಮಾಡಿಸಿ ಅವಳಿಗೆ ಅರಿಸಿಣ-ಕುಂಕುಮ, ಸೀರೆ-ಕುಪ್ಪಸಗಳನ್ನು ಕೊಡುತ್ತಾರೆ. ಕೆಲವು ಸಮುದಾಯಗಳಲ್ಲಿ ಬೆಳೆಯನ್ನು ಕೊಯ್ಲುಮಾಡುವಾಗ ಮತ್ತು ಬಿತ್ತುವಾಗ ಮೈನೆರೆದ ಹೆಣ್ಣಿನಿಂದ ಪೂಜೆಮಾಡಿಸುತ್ತಾರೆ. ಜೊತೆಗೆ ನೇಮಕ್ಕಾದರೂ ಅವರ ಕೈಯಿಂದ ಸ್ವಲ್ಪ ಬಿತ್ತಿಸುತ್ತಾರೆ ಮತ್ತು ಕೊಯ್ಲುಮಾಡುವಾಗ ಶಾಸ್ತ್ರಕ್ಕಾದರೂ ಸ್ವಲ್ಪ ಅವರ ಕೈಯಿಂದ ಬೆಳೆಯನ್ನು ಕೊಯ್ಯಿಸುತ್ತಾರೆ. ಮನೆಯ ಹೆಣುಮಕ್ಕಳು ಹೊಲದಲ್ಲಿ ನಡೆದಾಡಿದರೆ ಫಸಲು ಚೆನ್ನಾಗಿಬರುತ್ತದೆ ಎಂಬ ನಂಬಿಕೆ ಇದೆ. ಮುತ್ತೈದೆಯರು ಧಾನ್ಯದ ರಾಶಿಯನ್ನು ಪೂಜಿಸಿದರೆ ಅವರ ಹುಲ್ಸು (ಅದರ ಪ್ರಮಾಣ) ಹೆಚ್ಚಾಗುತ್ತದೆ ಎಂಬ ನಂಬಿಕೆಯೂ ಇದೆ. ಆ ಕಾರಣಕ್ಕಾಗಿಯೇ ಉತ್ತರಕರ್ನಾಟಕದ ಭಾಗದಲ್ಲಿ ಸುಗ್ಗಿಯ ಕಾಲದಲ್ಲಿ ರೈತರು ಆಚರಿಸುವ ಕಣಬ್ಬ ಎಂಬ ಆಚರಣೆಯಲ್ಲಿ ಐದು ಜನ ಮುತ್ತೈದೆಯರಿಗೆ ಒಂದತ್ತಿಟ್ಟು ಅವರಿಗೆ ಉಡಿತುಂಬಿ ಅವರಿಂದ ರಾಶಿ ಪೂಜೆ ಮಾಡಿಸುವರು.

ಕೃಷಿ ಸಮುದಾಯದ ಆಚರಣೆಗಳಲ್ಲಿ ಹೆಣ್ಣಿಗೆ ಹೆಚ್ಚು ಪ್ರಾಮುಖ್ಯತೆ ನೀಡಿದಂತೆ ಕಂಡು ಬರುತ್ತದೆ. ಆದರೂ ಬಹುಪಾಲು ಆಚರಣೆಯಲ್ಲಿ ಮುತ್ತೈದೆಯರಿಗೆ ಮಾತ್ರ ಪ್ರಾತಿನಿಧ್ಯವಿರುವುದು ಈ ಕೃಷಿ ಸಮುದಾಯದೊಳಗೆ ಇರುವ ಕೆಲವು ನಂಬಿಕೆಗಳಿಂದ ತಿಳಿದುಬರುತ್ತದೆ. 'ಬಂಜೆ ನಡೆದ ಹೊಲ ಹೀನ: ಗೊಡ್ಡಿ ಹೆಂಡತಿ ಹೀನ' ಎಂದು ನಂಬಿರುವ ಮನೋಭಾವದ ಹಿಂದೆ ಬಂಜೆಯನ್ನು ಕನಿಷ್ಠವಾಗಿಯೂ ಮುತ್ತೈದೆಯನ್ನು ಶ್ರೇಷ್ಠವಾಗಿಯೂ ಭಾವಿಸಿರುವುದು ತಿಳಿದುಬರುತ್ತದೆ. ಅಂದರೆ ಮುತ್ತೈದೆಯರು ಮಾತ್ರ ಸಾಮಾಜಿಕ ಗೌರವಕ್ಕೆ ಪಾತ್ರರಾಗಿದ್ದು ಮಕ್ಕಳಾಗದ ಹೆಣ್ಣು (ಬಂಜೆ) ಕೃಷಿಯ ಸಾಂಸ್ಕೃತಿಕ ವಲಯದಲ್ಲಿ ನಿಷೇಧಕ್ಕೊಳಪಟ್ಟಿರುವಳು. ಅಲ್ಲದೆ ಹೊರಗಾದ ಹೆಣ್ಣಿನ ರಕ್ತ ಫಲಸಮೃದ್ಧಿಯ ಸಂಕೇತವೆಂದು ನಂಬಿರುವುದು ಒಂದೆಡೆ ಕಂಡುಬಂದರೆ, ಮತ್ತೊಂದೆಡೆ 'ಹೊರಗಾದ ಹೆಂಗಸರು ಹೂಬಳ್ಳಿಗಳನ್ನು ಫಲ ಬಿಡುವ ಮರ ಗಿಡಗಳನ್ನು ಮುಟ್ಟಬಾರದು ಎಂಬ ನಿಷೇಧಗಳಿರುವುದು ಕಂಡು ಬರುತ್ತದೆ'[೨೮]. ಸಂಸ್ಕೃತಿಯೊಳಗಿನ ಈ ಬಗೆಯ ವೈರುಧ್ಯಗಳನ್ನು ನೋಡಿದಾಗ ಅಚ್ಚರಿ ಎನಿಸಿದರೂ ಈ ಬಗೆಯ ಸಂಗತಿಗಳು ಜನಪದ ಮತ್ತು ಶಿಷ್ಟ ಸಂಸ್ಕೃತಿಯ ನಡುವಿರುವ ಭಿನ್ನಮನೋಭಾವವನ್ನು ಪ್ರತಿನಿಧಿಸುತ್ತವೆ. ಇದನ್ನು ಜನಪದ ಸಂಸ್ಕೃತಿಗೆ ಆದ ಶಿಷ್ಟ ಸಂಸ್ಕೃತಿಯ ಪ್ರಭಾವವೆಂತಲೂ ಇಲ್ಲವೆ ಜನಪದ ಮತ್ತು ಶಿಷ್ಟ ಸಂಸ್ಕೃತಿಯ ನಡುವಿನ ಸಂಘರ್ಷವೆಂತಲೂ ಇದರಿಂದ ತಿಳಿದುಬರುತ್ತದೆ.

**ಕೃಷಿ ಮತ್ತು ಕಥನಗಳ ಸಂಬಂಧ ತಾತ್ವಿಕತೆ**

ಈ ಹಿಂದೆ ಜನಪದಸಾಹಿತ್ಯ ಎಂದರೇನು? ಅದರ ಸ್ವರೂಪ ಯಾವ ರೀತಿಯದು ಎಂಬುದನ್ನು ನೋಡಿದ್ದೇವೆ. ಈ ಒಟ್ಟು ಜನಪದಸಾಹಿತ್ಯದಲ್ಲಿ ಕೃಷಿಗೆ ಸಂಬಂಧಿಸಿದಂತೆ ರಚನೆಗೊಂಡ ಅಥವಾ ಕೃಷಿಗೆ ಸಂಬಂಧಿಸಿದ ವಸ್ತುವಿಷಯಗಳನ್ನು ಒಳಗೊಂಡು, ಜನಪದರಿಂದ ರಚನೆಗೊಂಡ ಸಾಹಿತ್ಯವನ್ನು ಕೃಷಿ ಜನಪದಸಾಹಿತ್ಯ ಅಥವಾ ಕೃಷಿಸಂಬಂಧಿ ಜನಪದಸಾಹಿತ್ಯ ಎಂದು ಅಧ್ಯಯನದಲ್ಲಿ ಗುರುತಿಸಿಕೊಳ್ಳಲಾಗಿದೆ.

'ಕೋಟಿವಿದ್ಯೆಗಿಂತ ಮೇಟಿ ವಿದ್ಯೆಯೇ ಮೇಲು'

'ಒಕ್ಕಲಿಲ್ಲದ ಊರು, ಮಕ್ಕಳಿಲ್ಲದ ಮನಿ ವ್ಯರ್ಥ'

'ಹೊಲ ನೋಡದೆ ಕೆಟ್ಟಿತು, ಸಾಲ ಕೇಳದೆ ಮುಳುಗಿತು'

'ಅಂಗೈ ಹಾಗೆ ಹೊಲ ಮಾಡಿದರೆ ಮುಂಗೈ ತುಂಬ ತುಪ್ಪ'

'ಗಂಡು ಹಡೆದವನು, ತೆಂಗು ಬಿತ್ತಿದವನು ದರಿದ್ರನಲ್ಲ'

'ಉತ್ತಲ್ಲದೆ ಹೊಲವಲ್ಲ, ಹೆತ್ತಲ್ಲದೆ ಹೆಣ್ಣಲ್ಲ'.

**ಹಾಡಿನ ರೂಪದ ಸಾಹಿತ್ಯ:**

ಒಕ್ಕಲಿಗ ಹುಡುಗನ ಒಲ್ಲೆ ನಾ ಕಾಣಮ್ಮ

ಎಕ್ಕೆಯ ಸಾಲಿಗೆ ಮನೆಮಾರು। ಮಾಡ್ಕೊಂಡು।

ದುಃಖ ಮಾಡವ್ನೆ ಕಣದಲ್ಲಿ॥

ಸುಗ್ಗಿಯ ಕಣ ಕೇಳೂ ಸಗ್ಗವದು ರೈತನಿಗೆ।

ಹಿಗ್ಗು ಹಾಡುದಕೆ ಬೆಳವಲವು। ಮಲ್ಲಯ್ಯ

ಬುಗ್ಗೆ ಕುಣಿವುದಕೆ ಶಿವರೂಪ॥

ಅಂಬು ಕೊಡುವವನೆ, ಗೊಂಬೆ ಹಚ್ಚಡದವನೆ।

ರಂಭೆ ತೊಡೆಯ ಮೇಲಿರುವ ಮಳೆರಾಯ

ಅಂಬರದಿಂದ ಕರುಣಿಸು॥

**ಒಡಪಿನ ರೂಪದ ಸಾಹಿತ್ಯ:**

"ಕಟಕ ರೊಟ್ಟಿ ಕಾರದ ಚಟ್ನಿ ಕಟಗೊಂಡ

ಹೋಗಂದರ ಸೆಟಗೊಂಡು ಹೋಗತಾರ..."

'ಹೆಗಲಮ್ಯಾಲ ಹುಳ್ಳಿ ಬಳ್ಳಿ

ನನ್ನ ಹೇಣ್ತಿ ಮೆತ್ತನ್ನ ಮಳ್ಳಿ..."

ಕೃಷಿಗೆ ಸಂಬಂಧಿಸಿದ ವಿಷಯವಸ್ತುಗಳನ್ನು ಒಳಗೊಂಡು ವಿವಿಧರೂಪದಲ್ಲಿ ರಚನೆಗೊಂಡ ಸಾಹಿತ್ಯವನ್ನು ಕೃಷಿಸಂಬಂಧಿ ಜನಪದಸಾಹಿತ್ಯ ಅಥವಾ ಕೃಷಿ ಜನಪದಸಾಹಿತ್ಯ ಎಂದು ಪರಿಭಾವಿಸಲಾಗಿದೆ.

ಕೃಷಿಸಂಬಂಧಿ ಜನಪದಸಾಹಿತ್ಯವು ಕಥೆ, ಗಾದೆ, ಗೀತೆ, ಒಡಪು, ಒಗಟು, ಶಿಶುಪ್ರಾಸಗಳ ರೂಪದಲ್ಲಿ ದೊರೆಯುತ್ತದೆ. ಹೀಗೆ ದೊರೆತ ಕೃಷಿಸಂಬಂಧಿಸಿದ ಹಾಡು, ಕತೆ, ಒಗಟು, ಒಡಪು, ಶಿಶುಪ್ರಾಸ ಇತ್ಯಾದಿಗಳನ್ನು ಸೃಷ್ಟಿಸಿದವರು ರೈತರ ವರ್ಗದವರೇ. ಹಾಗಾಗಿ ಅವರ ಜನಪದ ಸಾಹಿತ್ಯದ ಹಾಡು ಗಾದೆ ಒಗಟುಗಳಲ್ಲಿ ಕೃಷಿಕೇಂದ್ರಿತ ಅವರ ಜೀವನಚಿತ್ರಗಳೇ ಚಿತ್ರಿತವಾಗಿವೆ (ಸಿ.ಕೆ.ನಾವಲಗಿ, ೨೦೦೬, ಪು.೨೦). ಆದ್ದರಿಂದ ಕೃಷಿಅವಲಂಬಿಸಿ ಬದುಕು ಸಾಗಿಸುತ್ತಿದ್ದ ಕೃಷಿಸಮುದಾಯದ ಜೀವನವನ್ನು ಅಥವಾ ಕೃಷಿ ಸಂಸ್ಕೃತಿಯನ್ನು ಅರಿಯಬೇಕಾದರೆ ಅವರಿಂದಲೇ ರಚಿತವಾದ ಜನಪದಸಾಹಿತ್ಯ ಉತ್ತಮ ಆಕರಗಳಾಗಬಲ್ಲವು. ಕಾರಣ ಈ ಅಧ್ಯಾಯದಲ್ಲಿ ಕೃಷಿ ವಸ್ತುವಿಷಯವನ್ನು ಹೊಂದಿರುವ ಅಥವಾ ಕೃಷಿಕರಿಂದ ರಚಿಸಲ್ಪಟ್ಟ ಜನಪದಸಾಹಿತ್ಯವನ್ನು 'ಕೃಷಿ ಜನಪದಸಾಹಿತ್ಯ' ಎಂದು ಗುರುತಿಸಿಕೊಂಡು ಅದರಲ್ಲಿ ಕೃಷಿಗೆ ಸಂಬಂಧಿಸಿದ ಯಾವ ಯಾವ ವಿಷಯಗಳು ಪ್ರಸ್ತಾಪವಾಗಿವೆ. ಆ ವಿಷಯಗಳು ಏನನ್ನು ಹೇಳುತ್ತವೆ? ಯಾರನ್ನು ಕುರಿತು ಹೇಳುತ್ತೇವೆ? ಎಂಬುದರ ಬಗೆಗೆ ವಿವೇಚಿಸಲಾಗಿದೆ.

ಊರಿಗೆ ಮಳೆ ಹೋದೊ ಏರು ಕಟ್ಟೊ ಕಂದಯ್ಯ।

ಊರ ಮುಂದಿನ ಬಸವಣ್ಣಗೆ। ಕೈ ಮುಗಿದು।

ಏರುಕಟ್ಟೊ ಮುದ್ದು ಮುಖದವನೆ॥

ಉತ್ತು ಬಂದಣ್ಣ ಮುತ್ತಿನ್ಕಂಭ ಸೇರಿ।

ಉತ್ತು ಬಂದೆ ಶಿವನೆ ಮಳೆಯಿಲ್ಲ। ಎಂದರೆ।

ಮುತ್ತಿನ ಮಂಜು ಹರಿದಾವು॥

ಬಿತ್ತುವ ತಮ್ಮಯ್ಯ ಎತ್ತಿಗೇನಂದಾನ।
ಹತ್ತು ಖಂಡಗ ಬೆಳೆಲೆಂದ। ಭೂಮಿತಾಯಿ।
ಮುತ್ತಿನುಡಿಯಕ್ಕಿ ನಿನಗೆಂದ॥

ಬನ್ನಿ ಗಿಡದ ಬುಡಕ ಕೂರಿಗಿ ತುಂಬಿ
ಸಣ್ಣ ಶೆಲ್ಯದಲ್ಲಿ ಉಡಿಕಟ್ಟಿ। ಶೀತಲ
ಹೊನ್ನ ಬಿತ್ತ್ಯಾನ ಹೊಳಿಸಾಲ॥

ಬಿತ್ತುವ ಕೂರೀಗಿ ಬಗಲಾಗ ಹಿಡಿದಾರ
ಸುತ್ತ ನೋಡ್ಯಾರ ಮಳಿಮಾಡ। ಬಮ್ಮಣ್ಣ
ಹೊನ್ನ ಬಿತ್ತ್ಯಾನ ಹೊಳಿಸಾಲ॥

ಎತ್ತು ನಿಂತ ಗದ್ದೆಯಲ್ಲಿ ಬಿತ್ತೂತ ನಿಂತಾತನಾರೆ
ಮುತ್ತಿನಂಥ ಕಾಲು ನೀಡಿದೊಳು। ಅಣ್ಣಯ್ಯ।
ಖಂಡಗ ಬಿತ್ತಿ ಕಾಡ ಬೆಳೆದಾನ॥

ಸುವ್ವೆಂದರ ಸುರಿದಾವೆ ಸುಪ್ಪೆಂದರೆ ಸುರಿದಾವೆ
ಆನೆಯ ಪಾದಕೆ ಸುರಿದಾವೆ। ಭತ್ತವ
ಯಾವಣ್ಣ ಬಿತ್ತಿ ಬೆಳೆದಾನ॥

ಹನ್ನೆರೆಡೆತ್ತಿನ ಬಾರಿ ಹೊನ್ನ ಮೇಟಿ ಕಂಬ
ಬಾಸಿಂಗ ಕೊಳಗ ಬಲಗೈಯ। ಅಣ್ಣಯ್ಯ।
ರಾಶಿ ಅಳೆಯೋದು ಬೆಳಗಾಯ್ತು॥

ಮೇಲಿನ ತ್ರಿಪದಿಯಲ್ಲಿ ಉಲ್ಲೇಖವಾಗಿರುವ 'ಊರಿಗೆ ಮಳೆ ಹೋದೊ ಎರು ಕಟ್ಟೋ ಕಂದಯ್ಯ' ಎನ್ನುವುದರಲ್ಲಿ ಏರುಕಟ್ಟುವ ಕೆಲಸ ಪುರುಷನಿಂದ ಮಾಡಲ್ಪಡುವಂತಹದ್ದು ಎಂಬುದು ತಿಳಿದು ಬರುತ್ತದೆ. ಅಂತೆಯೇ ಬಿತ್ತ್ಯಾನ ಹೊಳಿಸಾಲ 'ಎತ್ತು ನಿಂತ ಗದ್ದೆಯಲ್ಲಿ ಬಿತ್ತುತ ನಿಂತಾತನಾರೆ; 'ಅಣ್ಣಯ್ಯ ಖಂಡಗ ಬಿತ್ತಿ ಕಾಡ ಬೆಳಿದಾನ; 'ಭತ್ತನ ಯಾವಣ್ಣ ಬಿತ್ತಿ ಬೆಳೆದಾನ' ಎನ್ನುವ ಉಲ್ಲೇಖಗಳು ಕೃಷಿಯಲ್ಲಿ ಕೃಷಿಕ ಉತ್ತುವ ಮತ್ತು ಬಿತ್ತುವಕೆಲಸದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿರುವುದು ತಿಳಿದುಬರುತ್ತದೆ. ಅಲ್ಲದೆ ಬಿತ್ತಿಬೆಳೆದ ದವಸದಾನ್ಯಗಳನ್ನು ರಾಶಿಮಾಡಿ ಅವುಗಳನ್ನು ಅಳೆಯುವ ಕೆಲಸವು ಪುರುಷನದೇ ಆಗಿದೆ ಎನ್ನುವುದನ್ನು ಅಣ್ಣಯ್ಯ ರಾಶಿ ಅಳೆಯೋದು ಬೆಳಗಾಯ್ತು ಎನ್ನುವ

ಮಾತಿನಲ್ಲಿ ವ್ಯಕ್ತವಾಗಿದೆ. ಇವತ್ತಿಗೂ ಕೃಷಿಕ್ಷೇತ್ರದಲ್ಲಿ ಉತ್ತಿ-ಬಿತ್ತುವ ಕೆಲಸದಲ್ಲಿ ಪುರುಷನೇ, ಪ್ರಧಾನವಾಗಿ ತೊಡಗಿಕೊಂಡಿರುವುದು ಕಂಡು ಬರುತ್ತದೆ. ಇದನ್ನು ಹೊರತುಪಡಿಸಿದ ಕೃಷಿಚಟುವಟಿಕೆಗಳಲ್ಲಿ ಮಹಿಳೆಯ ಪಾಲುದಾರಿಕೆ ಅಧಿಕವಾಗಿರುವುದು ಕಂಡುಬರುತ್ತದೆ.

ಕೃಷಿಸಂಬಂಧಿ ಜನಪದಸಾಹಿತ್ಯವನ್ನು ಗಮನಿಸಿದಾಗ ದೊಡ್ಡ ಪ್ರಮಾಣದ ಸಾಹಿತ್ಯ ಸಿಗುವುದು ಹಾಡು ಮತ್ತು ಗಾದೆಗಳಲ್ಲಿ. ಆದರೆ ಮಹಿಳೆಯ ವಿಷಯಕ್ಕೆ ಬಂದಾಗ ತ್ರಿಪದಿ ರೂಪದ ಹಾಡಿನ ಪ್ರಕಾರದಲ್ಲಿ ಹೆಚ್ಚು ಸಾಹಿತ್ಯ ದೊರೆಯುತ್ತದೆ. ಅಲ್ಲದೆ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಗಮನಕ್ಕೆ ಬರುವ ಇನ್ನೊಂದು ಅಂಶವೆಂದರೆ ಹಾಡಿನರೂಪದ ಸಾಹಿತ್ಯದಲ್ಲಿ ಸ್ವತಃ ಮಹಿಳೆಯೇ ಹೇಳಿಕೊಂಡಂತಿರುವ ಸಾಹಿತ್ಯ ವಿಪುಲವಾಗಿ ದೊರೆಯುತ್ತದೆ. ಅಂದರೆ ಹಾಡು ಕೃಷಿ ವಲಯದ ಮಹಿಳೆಯ ಅಭಿವ್ಯಕ್ತಿ ಮಾಧ್ಯಮವಾಗಿತ್ತು ಅಥವಾ ಹಾಡಿನ ಮಾಧ್ಯಮ ಮಹಿಳೆಗೆ ಹೆಚ್ಚು ಪ್ರಿಯವಾಗಿತ್ತು ಎಂಬುದು ಇದರಿಂದ ತಿಳಿದು ಬರುತ್ತದೆ. ಹೀಗೆ ಹಾಡಿನ ರೂಪದ ಸಾಹಿತ್ಯದಲ್ಲಿ ಕೃಷಿಯಲ್ಲಿನ ಮಹಿಳೆಯ ಪಾಲುದಾರಿಕೆಯನ್ನು ಕುರಿತು ಹೇಳಿರುವುದು ಕಂಡು ಬರುತ್ತದೆ. ಅಲ್ಲದೆ ಮಹಿಳೆಯಅಭಿವ್ಯಕ್ತಿ ಎಂದು ಕಂಡುಬರುವ ಹಾಡುಗಳಲ್ಲಿ ಮಹಿಳೆ ತನ್ನ ಬಗೆಗೆ ಹೇಳಿಕೊಂಡಿದ್ದು ಕಡಿಮೆ. ಹಾಗೆ ಮಹಿಳೆಯಿಂದ ವ್ಯಕ್ತವಾದ ಅಭಿವ್ಯಕ್ತಿಯಲ್ಲಿ ಬಹುಪಾಲು ಗಂಡನ, ಮಗನ, ತವರಿನವರ ಕುರಿತು ಹೇಳಿರುವುದು ಕಂಡು ಬರುತ್ತದೆ. ಆದರೆ ಇಲ್ಲಿ ಮಹಿಳೆಗೆ ಅಭಿವ್ಯಕ್ತಿ ಸ್ವಾತಂತ್ರ್ಯವಿತ್ತು. ಆದರೆ ಅವಳು ವ್ಯವಸ್ಥೆಯ ಒಂದು ಭಾಗವಾಗಿದ್ದರಿಂದ ಒಟ್ಟು ವ್ಯವಸ್ಥೆಯ ಕಾಳಜಿಗಳು ಯಾರ ಪರವಾಗಿದ್ದವೊ ಅವರ ಪರವಾಗಿಯೇ ಹೆಚ್ಚು ಸಾಹಿತ್ಯ ರೂಪಗೊಂಡಿದೆ ಎಂಬುದು ತಿಳಿದುಬರುತ್ತದೆ. ಮತ್ತು ಇರುವ ವ್ಯವಸ್ಥೆಯನ್ನು ಒಪ್ಪಿಕೊಂಡು ನಡೆಯುವ ರೀತಿ ಕೆಲವು ತ್ರಿಪದಿಗಳಿಂದ ತಿಳಿದು ಬರುತ್ತದೆ.

ಕೃಷಿಗೆ ಸಂಬಂಧಿಸಿದಂತೆ ಗಾದೆರೂಪದಲ್ಲಿ ವಿಪುಲಸಾಹಿತ್ಯ ದೊರೆತರೂ ಅದರಲ್ಲಿ ಬಹುಪಾಲು ಮಳೆಗೆ ಸಂಬಂಧಿಸಿದಂತೆ, ಬೆಳೆಗೆ ಸಂಬಂಧಿಸಿದಂತೆ ಕೃಷಿಕರ ಅನುಭವ ವ್ಯಕ್ತವಾಗಿರುವುದು ಕಂಡು ಬರುತ್ತದೆ. ಅಂದರೆ ಇಲ್ಲಿ ಯಾವ ಮಳೆ ಹೇಗೆ ಬರುತ್ತೆ, ಯಾವ ಮಳೆಯಿಂದ ರೈತನಿಗೆ ಒಳ್ಳೆಯದಾಗುತ್ತೆ, ಯಾವ ಮಳೆಯಿಂದ ಕೇಡಾಗುತ್ತೆ, ಯಾವ ಮಳೆಗೆ ಏನು ಬಿತ್ತಬೇಕು, ಯಾವ ಮಳೆ ಹೇಗಿರಬೇಕು ಮತ್ತು ಹೀಗಿರಬಾರದು ಎನ್ನುವ ವಿಚಾರದ ಬಗೆಗೆ ಹಾಗೂ ಯಾವ ಬೆಳೆಯಿಂದ ರೈತನಿಗೆ ಲಾಭವಾಗುತ್ತೆ, ಯಾವ ಬೆಳೆಯಿಂದ ನಷ್ಟವಾಗುತ್ತೆ, ಬೆಳೆಬೆಳೆಯುವ ಕ್ರಮ ಯಾವ ರೀತಿ ಇರಬೇಕು ಮತ್ತು ಯಾವ ರೀತಿ ಇರಬಾರದು ಎನ್ನುವ ಬಗ್ಗೆ ಬೆಳೆಯ ಯಾವ ರೋಗಕ್ಕೆ ಏನು ಮಾಡಬೇಕು, ಬೆಳೆಯನ್ನು ಹೇಗೆ ಸಂರಕ್ಷಿಸಿ ಪೋಷಿಸಿ ಬೆಳೆಸಬೇಕು ಎನ್ನುವುದರ ಬಗೆಗೆ ಕೆಲವು ಉಪಯುಕ್ತ ವಿವರಗಳು ಗಾದೆಮಾತುಗಳಲ್ಲಿ ದೊರೆಯುತ್ತವೆ. ಅಲ್ಲದೆ ಕೃಷಿ ಬದುಕಿನ ಇತರೆ

ಅನುಭವದ ವಿವರಗಳನ್ನು ಒಳಗೊಂಡಿರುವ ವಿಷಯಗಳು ಗಾದೆಯಲ್ಲಿ ಒಡಮೂಡಿರುವುದು ಕಂಡುಬರುತ್ತದೆ.

ಒಡಪಿನರೂಪದ ಸಾಹಿತ್ಯದಲ್ಲಿ ಕೃಷಿ ಮಹಿಳೆಯ ಕೆಲಸದ ಬಗೆಗೆ, ಗುಣಸ್ವಭಾವದ ಬಗೆಗೆ ಪುರುಷ ಹೇಳಿಕೊಂಡ ವಿವರಗಳು ಸಿಗುತ್ತವೆ. ಜೊತೆಗೆ ಕೃಷಿ ಮಹಿಳೆ ತನ್ನ ಗಂಡನ ಗುಣ-ಸ್ವಭಾವದ ಬಗೆಗೆ ಹೇಳಿಕೊಂಡಿರುವ ವಿವರಗಳು ದೊರೆಯುತ್ತವೆ. ಅಲ್ಲದೆ ಕೃಷಿಕರ ದಾಂಪತ್ಯ ಬದುಕಿನ ಸರಸ-ವಿರಸದ ಎಳೆಗಳು ಒಡಪಿನಲ್ಲಿ ಕಾಣಿಸಿಕೊಳ್ಳುತ್ತವೆ. ಕಥೆ, ಐತಿಹ್ಯ, ಪುರಾಣ ರೂಪದಲ್ಲಿ ಕೃಷಿಗೆಸಂಬಂಧಿಸಿದ ಮಾಹಿತಿಗಳು ದೊರೆಯುವುದು ಕಡಿಮೆ. ಹಾಗೆ ದೊರೆತ ಸಾಹಿತ್ಯ ಕೃಷಿಯ ಹುಟ್ಟು ಬೆಳವಣಿಗೆ ಭೂಮಿಯ ಉಗಮ ವಿಕಾಸಕ್ಕೆ ಸಂಬಂಧಿಸಿದ ವಿಷಯವನ್ನು ಹೊಂದಿರುವುದು ತಿಳಿದುಬರುತ್ತದೆ. ಈ ಪ್ರಕಾರಗಳ ಸಾಹಿತ್ಯದಲ್ಲಿ ಕೃಷಿ ಮಹಿಳೆಯ ವಿಷಯಕ್ಕೆ ಸಂಬಂಧಿಸಿದಂತೆ ಅಧ್ಯಯನದ ಸಂದರ್ಭದಲ್ಲಿ ಮಾಹಿತಿಗಳು ಲಭ್ಯವಾಗಿರುವುದಿಲ್ಲ. ಇನ್ನು ಶಿಶುಪ್ರಾಸ ಅಥವಾ ಶಿಸುಗೀತೆಗಳನ್ನು ಆರಾಧನೆಗೆ ಸಂಬಂಧಿಸಿದ ಅಂದರೆ ಹಿರಿಯರಂತೆ ಮಕ್ಕಳು ಅಲ್ಲಿ ಮಳೆಯನ್ನು ಕರೆಯುವಂತಹ ಸಾಹಿತ್ಯಿಕವಿವರಗಳು ಸಿಗುತ್ತವೆ. ಅಲ್ಲದೆ ಶಿಶುಪ್ರಾಸಗಳು ಬಹುಮುಖ್ಯವಾಗಿ ಮನೋರಂಜನೆಯ ಹಿನ್ನೆಲೆಯಲ್ಲಿ ಸೃಷ್ಟಿಯಾದಂತವುಗಳಾಗಿದ್ದು ಅದರಲ್ಲಿ ಕೃಷಿಮಹಿಳೆಗೆ ಸಂಬಂಧಿಸಿದಂತೆ ಗಂಭೀರ ವಿವರಗಳು ಕಾಣಿಸುವುದಿಲ್ಲ.

ಕೃಷಿಸಂಬಂಧಿ ಜನಪದಸಾಹಿತ್ಯ ಎಂದು ಗುರುತಿಸುವ ಕ್ರಮದಲ್ಲಿ ಕೆಲವು ಮಿತಿಗಳಲಿರಬಹುದು. ಏಕೆಂದರೆ ನಾವು ಕೃಷಿ ವಸ್ತುವಿಷಯಗಳನ್ನು ಹೊಂದಿದ ಸಾಹಿತ್ಯವನ್ನು ಮಾತ್ರ ಕೃಷಿಸಂಬಂಧಿ ಜನಪದ ಸಾಹಿತ್ಯ ಎಂದು ಗುರುತಿಸಿಕೊಂಡಿದ್ದೇವೆ. ಆದರೆ ಒಟ್ಟು ಕೃಷಿಕ ಅಥವಾ ಕೃಷಿಮಹಿಳೆ ಅವರು ವೃತ್ತಿಯಿಂದ ಕೃಷಿಕರಾಗಿದ್ದರೂ ಜೊತೆಗೆ ಅವರು ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕುವ ಒಬ್ಬ ಸಾಮಾನ್ಯ ಮನುಷ್ಯನೂ/ಳೂ ಆಗಿರುತ್ತಾರೆ. ಹಾಗೆ ಸಾಮಾನ್ಯ ಮನುಷ್ಯಳು/ನು ಆಗಿ ಅಭಿವ್ಯಕ್ತಿಸಿದ ಸಾಹಿತ್ಯವನ್ನು ಇಲ್ಲಿ ಗಮನಸಿಲ್ಲ. ಏಕೆಂದರೆ ಆ ಬಗೆಯ ಅಭಿವ್ಯಕ್ತಿ ಸಾರ್ವಜನಿಕವಾಗಿರುವುದರಿಂದ ಅವುಗಳನ್ನು ಕೃಷಿಕರಿಗೆ ಸಂಬಂಧಿಸಿದ್ದು ಎಂದು ಖಚಿತವಾಗಿ ಹೇಳಲಿಕ್ಕಾಗದು. ಹಾಗಾಗಿ ಅಂತಹ ಸಾಹಿತ್ಯವನ್ನು ಉದ್ದೇಶಪೂರ್ವಕವಾಗಿಯೇ ಕೈಬಿಡಲಾಗಿದೆ. ಆದರೆ ಅದು ಕೃಷಿಕರ ಬದುಕಿನ ಸಂವೇದನೆಯೂ ಆಗಿರುವ ಸಾಧ್ಯತೆ ಇದೆ ಎಂದು ಹೇಳಬಹುದು.

ಕೃಷಿಸಂಬಂಧಿ ಜನಪದಸಾಹಿತ್ಯವನ್ನು ಅಧ್ಯಯನಕ್ಕೊಳಪಡಿಸಿದಾಗ ತಿಳಿದು ಬರುವ ಬಹುಮುಖ್ಯ ಸಂಗತಿ ಎಂದರೆ ಈ ಸಾಹಿತ್ಯದಲ್ಲಿ ಮಹಿಳಾ. ದುಡಿಮೆಯ ಬಗೆಗೆ ವಿರಳವಾಗಿಯಾದರೂ ದಾಖಲೆಗಳು ದೊರೆಯುತ್ತವೆ. ಹೀಗೆ. ಕೃಷಿಯ ವಿವಿಧ ಪ್ರಕ್ರಿಯೆಗಳಲ್ಲಿ ಮಹಿಳೆಯ ಪಾಲುದಾರಿಕೆಯ

ಕುರಿತ ವಿವರಗಳನ್ನು ಮೌಖಿಕಪರಂಪರೆಯು ಒಳಗೊಂಡಂತೆ, ಶಿಷ್ಟಚರಿತ್ರೆಯಲ್ಲಿ ಕೃಷಿಮಹಿಳೆಯಂತಹ ಜನಸಾಮಾನ್ಯರ ದುಡಿಮೆಯ ಸಂಗತಿಗಳ ವಿವರಗಳು ಕಾಣಿಸಿಕೊಳ್ಳುವುದಿಲ್ಲ. ಸಮಾಜದಲ್ಲಿ ಹೆಣ್ಣು ಎನ್ನುವ ಕಾರಣಕ್ಕೆ ನಿರ್ಲಕ್ಷ್ಯಕ್ಕೆ ಒಳಪಟ್ಟ ಮಹಿಳೆಯ ದುಡಿಮೆಯ ಬಗೆಗೆ ಲಿಖಿತ ದಾಖಲೆಯಲ್ಲಿ ವಿವರಗಳು ಸಿಗುವುದು ಕಷ್ಟದಾಯಕವೇ ಸರಿ. ಹಾಗಾಗಿ ಸಾಮಾನ್ಯವರ್ಗದ ದುಡಿಯುವ ಮಹಿಳೆಯ ಅನನ್ಯತೆಯನ್ನು ಕಟ್ಟಿಕೊಡುವುದಕ್ಕೆ ಜನಪದಸಾಹಿತ್ಯ ನೆರವಿಗೆ ಬರುತ್ತದೆ. ಕೃಷಿಮಹಿಳೆಯ ಬದುಕಿನ ಬಗೆಗಿನ ಹಲವು ಹತ್ತು ವಿವರಗಳು ಕೃಷಿಸಂಬಂಧಿ ಜನಪದಸಾಹಿತ್ಯದಲ್ಲಿ ದೊರೆತಿದ್ದು ಅವು ಅವಳ ಕೌಟುಂಬಿಕ ಮತ್ತು ಸಾಮಾಜಿಕ ಬದುಕಿನ ಸ್ಥಿತಿಗತಿಗಳನ್ನು ಅನಾವರಣಗೊಳಿಸುತ್ತವೆ.

ಸಾಹಿತ್ಯದಲ್ಲಿ ಅನಾವರಣಗೊಂಡ ಕೃಷಿಮಹಿಳೆಯ ಬದುಕು ಪುರುಷನಿಗೆ ಅಧೀನವಾಗಿರುವಂತಹದ್ದು, ವ್ಯವಸ್ಥೆಗೆ ಹೊಂದಿಕೊಂಡು ನಡೆಯುವಂತಹದ್ದು, ತಂದೆ, ಗಂಡ, ಮಕ್ಕಳ ಬಗೆಗೆ ತುಡಿತಗಳನ್ನು ಹೊಂದಿರುವಂತಹದ್ದು, ಸಂಯಮದಿಂದ ತನ್ನ ಕೆಲಸಕಾರ್ಯಗಳನ್ನು ನಿಷ್ಠೆಯಿಂದ ಮಾಡಿ ಮುಗಿಸುವಂತಹದ್ದು ತನ್ನ ಬಂಧುಬಳಗದವರ ಬದುಕು ಒಳ್ಳೆಯದಾಗಲೆಂದು ಹಾಡಿ ಹಾರೈಸುವಂತಹದ್ದಾಗಿದೆ. ಇಲ್ಲಿಯೂ ಮಹಿಳೆ ವ್ಯವಸ್ಥೆಯೊಂದಿಗೆ ತ್ಯಾಗ, ತಾಳ್ಮೆ, ಸಹನೆಗಳೊಂದಿಗೆ ಅನುಸಂಧಾನಗೊಳ್ಳುವುದು ಕಂಡು ಬರುತ್ತದೆ. ವಾಸ್ತವ ಸಮಾಜದಲ್ಲಿ ಕೃಷಿ ಮಹಿಳೆಯ ದುಡಿಮೆಗೆ ಸಿಗಬೇಕಾಗಿದ್ದ ಬೆಲೆ ಸಿಗದಿದ್ದರೂ, ಮೌಖಿಕಪರಂಪರೆಯಲ್ಲಿ ಕೃಷಿ ಮಹಿಳೆಯ ದುಡಿಮೆಯ ಬಗೆಗೆ ವಿವರಗಳು ದೊರೆಯುವುದರಿಂದ, ಮೌಖಿಕಪರಂಪರೆಗೆ ಮಹಿಳೆಯ ದುಡಿಮೆಯನ್ನು ಸ್ಮರಿಸುವ ಗುಣವಿದೆ ಎಂಬುದು ತಿಳಿದುಬರುತ್ತದೆ. ಅಲ್ಲದೆ ಈ ವಿಷಯಕ್ಕೆ ಸಂಬಂದಿಸಿದಂತೆ ಗಮನಕ್ಕೆ ಬರುವ ಮತ್ತೊಂದು ಸಂಗತಿಯೆಂದರೆ, ಕೃಷಿ ಜನಪದಸಾಹಿತ್ಯದ ವಿಷಯಗಳಿಗೂ ವಾಸ್ತವದಲ್ಲಿನ ದುಡಿಮೆಯ ಪಾಲುದಾರಿಕೆಗಳಿಗೂ ಸಾಮ್ಯತೆಗಳಿರುವುದು ಕಂಡು ಬರುತ್ತದೆ. ಆದರೂ ಕೃಷಿ ಮಹಿಳೆಯ ಎಲ್ಲ ದುಡಿಮೆಯ ಬಗೆಗೆ ಲಭ್ಯವಿರುವ ಜನಪದ ಸಾಹಿತ್ಯದಲ್ಲಿ ಸಂಪೂರ್ಣ ವಿವರಗಳು ದೊರೆಯುವುದಿಲ್ಲ. ಈ ಅಂಶವನ್ನು ನಾವು ಹೀಗೂ ಪರಿಭಾವಿಸಲು ಸಾಧ್ಯತೆಗಳಿವೆ. ಈಗಾಗಲೇ ಸಂಗ್ರಹಿತವಾಗಿರುವ ಸಾಹಿತ್ಯವನ್ನು ಸಂಗ್ರಹಿಸಿದವರು ಪುರುಷರೇ ಆಗಿದ್ದರಿಂದ ಅವರು ತಮ್ಮ ದೃಷ್ಟಿಕೋನಗಳಿಗೆ ಅನುಗುಣವಾಗಿ ಸಂಗ್ರಹ ಕಾರ್ಯ ಮಾಡಿದ ಸಾಧ್ಯತೆಗಳಿವೆ. ಈ ಕಾರಣಕ್ಕಾಗಿಯೇ ಕೃಷಿಜನಪದಸಾಹಿತ್ಯದಲ್ಲಿ ಮಹಿಳೆಯ ಬಗೆಗಿನ ವಿವರಗಳಿಗಿಂತ ಪುರುಷರ ಬಗೆಗಿನ ವಿವರಗಳು ವಿಫುಲವಾಗಿ ದೊರೆಯುತ್ತವೆ ಎಂದು ಹೇಳಬಹುದು.

## ಸಂಖ್ಯಾ ಟಿಪ್ಪಣಿಗಳು

೧. ನಾರಾಯಣಸ್ವಾಮಿ. ಕೆ.ವೈ. ನೀರದೀವಿಗೆ. ಪುಟ,೨೦

೨. ಈಶ್ವರಪ್ಪ. ಎಂ.ಜಿ. ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ. ಪುಟ,೨೫

೩. ತಿಪ್ಪೇರುದ್ರಸ್ವಾಮಿ. ಹೆಚ್. ಕರ್ನಾಟಕ ಸಂಸ್ಕೃತಿ ಸಮೀಕ್ಷೆ. ಪುಟ. ೨೮

೪. ಈಶ್ವರಪ್ಪ. ಎಂ.ಜಿ. ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ. ಪುಟ,೨೫

೫. ಪುನರುಕ್ತ. ಪುಟ, ೨೬

೬. ಈಶ್ವರಪ್ಪ. ಎಂ.ಜಿ. .ಜಾನಪದ ಇಬ್ಬನಿಗಳು. ಪುಟ, ೧೬

೭. ಈಶ್ವರಪ್ಪ. ಎಂ.ಜಿ. ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ. ಪುಟ,೪೬-೪೭

೮. ಪುನರುಕ್ತ. ಪುಟ ೦೮

೯. ಭೈರೇಗೌಡ. ಎಂ. ಜಾನಪದ ವೈವಿಧ್ಯ. ಪುಟ.೯೦

೧೦. ದೇವಿಪ್ರಸಾದ್ ಚಟ್ಟೋಪಾಧ್ಯಾಯ. ಮಾತೆಯರು ಮಾನ್ಯರಾಗಿದ್ದಾಗ. ಪುಟ. ೨೬

೧೧. ಬಾಲಗೋಪಾಲ್. ಕೆ. ಪ್ರಾಚೀನ ಭಾರತದ ಚರಿತ್ರೆ; ಡಿ.ಡಿ.ಕೊಸಾಂಬಿಯವರ ಚಿಂತನೆಗಳು. ಪುಟ.೨೭

೧೨. ಪುನರುಕ್ತ. ಪುಟ. ೨೬-೨೭

೧೩. ಬೋರಲಿಂಗಯ್ಯ. ಹಿ.ಚಿ. ಬುಡಕಟ್ಟು ದೈವಾರಾಧನೆ. ಪುಟ, ೧೦೬

೧೪. ಮೊಗಳ್ಳಿ ಗಣೇಶ್. ಹಂಪಿ ಜೀವಜಾಲ ಜಾನಪದ. ಪುಟ. ೧೪

೧೫. ಪುರುಷೋತ್ತಮ ಬಿಳಿಮಲೆ. ಕೂಡುಕಟ್ಟು. ಪುಟ, ೬೪

೧೬. ನಾರಾಯಣಸ್ವಾಮಿ. ಕೆ.ವೈ. ನೀರದೀವಿಗೆ. ಪುಟ,೨೬

೧೭. ಪುನರುಕ್ತ. ಪುಟ. ೨೬

೧೮. ಪುನರುಕ್ತ. ಪುಟ. ೪೪

೧೯. ಪುಟ್ಟಪ್ಪ . ಕೆ. ವಿ. ಸಂ. ಯುಗಯಾತ್ರಿ ಭಾರತೀಯ ಸಂಸ್ಕೃತಿ. ಪುಟ, ೧೪೯

೨೦. ನಾಗರಾಜ್. ಡಿ.ಆರ್. ಶಕ್ತಿಶಾರದೆಯ ಮೇಳ. ಪುಟ, ೨೪

೨೧. ನಾರಾಯಣಸ್ವಾಮಿ. ಕೆ.ವೈ. ನೀರದೀವಿಗೆ. ಪುಟ,೧೦೩-೧೦೪

೨೨. ಪುನರುಕ್ತ. ಪುಟ. ೧೦೪-೧೦೫

೨೩. ನರಸಿಂಹಮೂರ್ತಿ. ಎಂ.ಎಲ್, ಜಾನಪದ ಪರಾಗ. ಪುಟ, ೧೨೬-೧೨೭

೨೪. ಉಧೃತ: ಸುಮಂಗಲಾ ಅತ್ತಿಗೇರಿ. ಕೃಷಿ ಜಾನಪದ ಮತ್ತು ಮಹಿಳೆ. ಪುಟ. ೭೯

೨೫. ಕೇಶವನ್ ಪ್ರಸಾದ್, ಆದಿವಾಸಿಗಳ ಮಳೆ ಕರೆಯುವ ಆಚರಣೆ. ಪುಟ. ೨೨೦

೨೬ ಈಶ್ವರಪ್ಪ. ಎಂ.ಜಿ. .ಜಾನಪದ ಇಬ್ಬನಿಗಳು. ಪುಟ, ೫೭

೨೭ ಶ್ರೀನಿವಾಸ ಮೂರ್ತಿ. ಅನು; ಪ್ರಾಚೀನ ಭಾರತದಲ್ಲಿ ಶೂದ್ರರು.೧೪೦

೨೮ಉಧೃತ; ಸುಮಂಗಲಾ ಅತ್ತಿಗೇರಿ. ಕೃಷಿ ಜಾನಪದ ಮತ್ತು ಮಹಿಳೆ.ಪುಟ. ೪೧

## ಅಧ್ಯಾಯ. ಐದು

# ಜನಪದ ಆಚರಣೆಗಳು ಮತ್ತು ಮಳೆಯ ಕಥನಗಳು.

### ಆಚರಣೆಗಳ ಆದಿಮಪ್ರಜ್ಞೆ

ಆಚರಣೆಗಳನ್ನು ಗಮನಿಸಿದಾಗ ನಿಸರ್ಗದತ್ತವಾದ ಮನುಷ್ಯರ ಲೈಂಗಿಕಕ್ರಿಯೆಗೂ ಬೆಳೆಯ ಸಮೃದ್ಧಿಗೂ ಅಥವಾ ಬೆಳೆಬೆಳೆಯುವ ಕ್ರಮಕ್ಕೂ ಸಂಬಂಧವಿದೆ ಎಂದು ನಮ್ಮ ಪೂರ್ವಜರು ಭಾವಿಸಿದಂತೆ ಕಂಡುಬರುತ್ತದೆ. ಈ ಕಾರಣಕ್ಕಾಗಿಯೇ ಅನೇಕ ಬುಡಕಟ್ಟುಗಳಲ್ಲಿ ಉತ್ತಮ ಫಸಲು ಪಡೆಯುವುದಕ್ಕಾಗಿ ಗಂಡು ಹೆಣ್ಣು ಸಂಭೋಗಕ್ರಿಯೆಯಲ್ಲಿ ತೊಡಗುವಂತಹ ವಿಧಿಯಾಚರಣೆಗಳು ಇರುವುದು ತಿಳಿದುಬರುತ್ತದೆ.

'ಕಚ್ಚೆಗೌಳಿಗರಲ್ಲಿ ಪ್ರಸ್ತದ ಮೊದಲು ಭೂಮಿಗೆ ಗೆರೆ ಎಳೆದು ಭತ್ತ, ರಾಗಿ ಬಿತ್ತುವ ಸಾಗುವಳಿ ಮಾಡುವ ಶಾಸ್ತ್ರವನ್ನು ಆಚರಿಸುವ ಪದ್ಧತಿ ಇದೆ'[1]. ಇದನ್ನು ನಾಗೋಲಿಶಾಸ್ತ್ರವೆಂದು ಕರೆಯುತ್ತಾರೆ. ಕಚ್ಚೆಗೌಳಿಗರು ಪ್ರಸ್ತದ ದಿನವೆ ಭತ್ತ/ರಾಗಿ ಬಿತ್ತುವ ಶಾಸ್ತ್ರ ಮಾಡುವುದರ ಹಿಂದೆ ಅವರು ಪ್ರಸ್ತಕ್ಕೂ ಭೂಮಿಯಲ್ಲಿನ ಬಿತ್ತಿಬೆಳೆಯುವ ಕ್ರಿಯೆಗೂ ಸಂಬಂಧವಿದೆ ಎಂದು ನಂಬಿರುವುದು ಸ್ಪಷ್ಟವಾಗುತ್ತದೆ. ನಮ್ಮಲ್ಲಿ ಈಗಲೂ ಹೆಚ್ಚು ಪ್ರಚಲಿತದಲ್ಲಿರುವ ಕಾಮನಹಬ್ಬ, ಜೋಕುಮಾರನ ಆಚರಣೆ, ಗ್ರಾಮದೇವಿಗೆ ಬಲಿಕೊಟ್ಟು ಆ ಬಲಿಯನ್ನು ಹುಲ್ಸು ಎಂದು ಬೆಳೆ ಬೆಳೆಯುವ ಹೊಲಗಳಿಗೆ ಎರಚುವ ಆಚರಣೆ, ಕುಂತಿ ಆಚರಣೆ ಈ ಎಲ್ಲ ಆಚರಣೆಗಳು ಕೂಡ ಮನುಷ್ಯಸಹಜ ಲೈಂಗಿಕಕ್ರಿಯೆಯ ಸಾಂಕೇತಿಕಸ್ವರೂಪದಲ್ಲಿ ನಡೆಯುವುದು ಆ ಆಚರಣೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ತಿಳಿದುಬರುತ್ತದೆ.

ಹೋಳಿಹುಣ್ಣಿಮೆಯ ಸಂದರ್ಭದಲ್ಲಿ ಕಾಮನನ್ನು ಸುಟ್ಟದಿನ ಮಳೆಬರುತ್ತದೆಂಬ ನಂಬಿಕೆ ಜನರಲ್ಲಿದೆ. ಹಾಗೆ ಮಳೆ ಬಂದರೆ ಅದನ್ನು ಕಾಮನಕಣ್ಣೀರು ಎಂದು ಭಾವಿಸುವರು. ಕಾಮಸುಟ್ಟ ನಂತರ ಅವನ ರುಂಡ (ತಲೆಯ ಭಾಗ) ಯಾವ ದಿಕ್ಕಿಗೆ ಬೀಳುತ್ತದೆ ಆ ದಿಕ್ಕಿನ ಕಡೆಗೆ ಹೆಚ್ಚು ಮಳೆ ಬರುತ್ತದೆ ಎಂದು ನಂಬುತ್ತಾರೆ. ಅಲ್ಲದೆ ಕಾಮನನ್ನು ಸುಟ್ಟ ಬೂದಿಯನ್ನು ಹೊಲದಲ್ಲಿ ಹಾಕಿದರೆ ಬೆಳೆ ಸಮೃದ್ಧವಾಗಿ ಬೆಳೆಯುತ್ತದೆಂದು ಮತ್ತು ಬಿತ್ತುವ ಕಾಳಿನಲ್ಲಿ ಕಾಮನ ಬೂದಿಯನ್ನು ಬೆರೆಸಿದರೆ ಕಾಳು ಹುಸಿಯಾಗಲಾರದೆಂಬ ನಂಬಿಕೆ ಇದೆ. ಹಾಗೂ ಕಾಮನ ಬೂದಿಯನ್ನು ಬೆರೆಸಿ ಮನೆಯಲ್ಲಿ ಸಂಗ್ರಹಿಸಿಟ್ಟ ಕಾಳಿಗೆ ಹುಳುಹತ್ತುವುದಿಲ್ಲವೆಂಬ ನಂಬಿಕೆ ಇದೆ. ಜನಪದರು ಭೂಮಿಯನ್ನು ಹೆಣ್ಣು ಎಂದು ಭಾವಿಸಿರುವುದರಿಂದ ಇಲ್ಲಿ ಬೆಳೆಬೆಳೆಯುವ ಭೂಮಿಗೆ ಕಾಮನಬೂದಿ ಹಾಕುವ ಕ್ರಿಯೆ ಗಂಡು ಹೆಣ್ಣಿನ ಮಿಲನದ ಸಾಂಕೇತಿಕರೂಪವೇ ಆಗಿದೆ. ಹೊಲಕ್ಕೆ ಕಾಮನ ಬೂದಿಹಾಕಿದರೆ ಅಥವಾ

ಬಿತ್ತುವಬೀಜಕ್ಕೆ ಕಾಮನಬೂದಿಯನ್ನು ಬೆರೆಸಿದರೆ ಬೀಜ ಹುಸಿಹೋಗದೆ ಬೆಳೆ ಸಮೃದ್ಧವಾಗಿ ಬರುತ್ತದೆ ಎನ್ನುವ ನಂಬಿಕೆಯ ಹಿಂದೆ ಸ್ತ್ರೀ-ಪುರುಷರ ಮಿಲನ ಕ್ರಿಯೆಗೂ ಭೂಮಿಯ ಬೆಳೆ ಬೆಳೆಯುವ ಕ್ರಿಯೆಗೂ ಸಂಬಂಧವಿದೆ ಎಂದು ತಿಳಿದಿರುವ ಮನೋಭಾವ ವ್ಯಕ್ತವಾಗುತ್ತದೆ.

ಕಾಮನಂತೆ ಜೋಕುಮಾರನು ಒಬ್ಬ ಸಮೃದ್ಧಿ ದೇವತೆಯಾಗಿದ್ದು ಮಳೆ ಬೆಳೆ ಕೊಡುವ ದೇವತೆ ಎಂದು ಈ ದೈವಗಳ ಆಚರಣೆಯನ್ನು ಮಾಡುವರು. ಗಂಗಮತದ ಅಥವಾ ಕಬ್ಬ್ಯಾರ ಸಮುದಾಯದ ಹೆಂಗಸರು ಮಣ್ಣಿನಲ್ಲಿ ಮಾಡಿದ ಜೋಕುಮಾರನ ಮೂರುತಿಯನ್ನು ಬೇವಿನಸೊಪ್ಪು ತುಂಬಿದ ಬುಟ್ಟಿಯಲ್ಲಿಟ್ಟುಕೊಂಡು ಮನೆಮನೆಗೆ ಹಾಡು ಹೇಳಿಕೊಂಡು ತಿರುಗುವರು. ಹೀಗೆ ತಾವು ಭೇಟಿ ನೀಡಿದ ಪ್ರತಿಮನೆಗೂ ಕುಂಬಳ ಎಲೆಯಲ್ಲಿ ಜೋಕುಮಾರನ ಅಂಬಲಿಯನ್ನು ಕೊಡುವರು. ಈ ಅಂಬಲಿಯನ್ನು ಹೊಲಗದ್ದೆಗಳಿಗೆ ಎರಚಿದರೆ ಹೊಲ ಹುಲುಸಾಗುತ್ತದೆ (ಅಂದರೆ ಸಮೃದ್ಧವಾಗುತ್ತದೆ) ಎಂಬ ನಂಬಿಕೆ ಜನರಲ್ಲಿದೆ. ಇಲ್ಲಿ ಕೊಡಲ್ಪಡುವ ಅಂಬಲಿಯು ಜೋಕುಮಾರನ ವೀರ್ಯದ ಸಾಂಕೇತಿಕರೂಪವಾಗಿದ್ದು, ಭೂಮಿಯನ್ನು ಹೆಣ್ಣು ಎಂದು ಭಾವಿಸಿದ್ದ ಆ ಅಂಬಲಿಯನ್ನು ಎರಚುವುದರಿಂದ ಭೂಮಿ ಗರ್ಭಧರಿಸಿ ಬೆಳೆಗಳ ಮೂಲಕ ಫಲ ನೀಡುತ್ತಾಳೆಂಬ ಆಶಯ ಈ ಆಚರಣೆಯ ಹಿಂದಿರುವುದು.

ಕಾಮ ಮತ್ತು ಜೋಕುಮಾರ ದೈವಗಳನ್ನು ಕುರಿತು ಹೇಳುವಾಗ 'ಮಾತೃ ಅಧಿಕಾರವಿದ್ದ ಆದಿಮಕರಷಿ ಸಮಾಜದಲ್ಲಿ ಗೌರಿ, ಎಲ್ಲಮ್ಮ ಮುಂತಾದ ಹೆಣ್ಣು ದೇವರುಗಳು ಪ್ರಾಬಲ್ಯವಿದ್ದುದರಿಂದ ಗಂಡು ದೇವರಗಳು ತಮ್ಮ ಶಕ್ತಿಯನ್ನು ದಯಪಾಲಿಸಿ ಸಾಯಬೇಕಾಯಿತು ಎಂದು ಹೇಳಿದ ಅವರ ಧ್ವನಿಯಲ್ಲಿ ಕಾಮ ಮತ್ತು ಜೋಕುಮಾರರು ಕೂಡ ಅದೇ ರೀತಿಯ ಹಿನ್ನೆಲೆಯಲ್ಲಿ ಬಲಿಯಾದ ದೇವತೆಗಳೆಂದು ಹೇಳಿದಂತಿದೆ.

'ಆಚರಣೆಯ ವಿಧಿಕ್ರಿಯೆಗಳಿಗೆ ಸಂಬಂಧಿಸಿದಂತೆ ರಂಗಾರೆಡ್ಡಿ ಕೋಡಿರಾಂಪುರ ಅವರು ಮಾತೃ ಪ್ರಧಾನ ಸಮಾಜ ವ್ಯವಸ್ಥೆಯಿದ್ದ ಕಾಲದಲ್ಲಿ ಮತ್ತು ಕೃಷಿಯ ಬೆಳವಣಿಗೆಯಲ್ಲಿ ಪ್ರಧಾನ ಪಾತ್ರವಹಿಸಿದ್ದ ಮಹಿಳೆಯರು ಭೂಮಿಫಲವತ್ತಾಗಿರಲು ಬೆಳೆಸಮೃದ್ಧವಾಗಿರಲು ಪುರುಷಶಕ್ತಿಯ ಬಲಿಯನ್ನು ನೀಡಿರುವರು. ಇದರ ಕುರುಹಾಗಿ ಈ ಕಾಮ ಮತ್ತು ಜೋಕುಮಾರರ ಆರಾಧನೆಗಳು ಉಳಿದುಕೊಂಡು ಬಂದಿವೆ ಎಂದು ತರ್ಕಿಸಬಹುದು'[೨]. ಅದೇ ರೀತಿ ಊರಿನ ಗ್ರಾಮದೇವತೆಗೆ ಜಾತ್ರೆಯ ಸಂದರ್ಭದಲ್ಲಿ ಕೊಡುವ ಬಲಿಯನ್ನು ಊರಿನ ರೈತರು ತಮ್ಮ ಹೊಲಗಳಿಗೆ ಹುಲ್ಸು ಎಂದು ಚರಗ ಚೆಲ್ಲುವರು. ಇದರಿಂದ ಭೂಮಿಯ ಸಮೃದ್ಧಿ ಹೆಚ್ಚಾಗಿ ಬೆಳೆ ಚೆನ್ನಾಗಿ ಬರುತ್ತದೆ ಎಂಬುದು ಜನರ ನಂಬಿಕೆ. ಗ್ರಾಮದೇವತೆಗೆ ಕೊಡುವ ಬಲಿಯ ಪ್ರಾಣಿ ಗಂಡಾಗಿರುವುದರಿಂದ ಬಲಿರೂಪದಲ್ಲಿ

ಪುರುಷಶಕ್ತಿಯನ್ನು ಭೂಮಿತಾಯಿಗೆ ಎರಚುವ ವಿಧಾನ ಸ್ತ್ರೀ ಮತ್ತು ಪುರುಷಶಕ್ತಿಯನ್ನು ಒಂದಾಗಿಸುವ ಪರಿಕಲ್ಪನೆಯನ್ನು ಸಾಂಕೇತಿಸುತ್ತದೆ.

ಕಾರ್ತಿಕ ಮಾಸದ ಬೆಳದಿಂಗಳ ರಾತ್ರಿಯಲ್ಲಿ ಆಚರಿಸಲ್ಪಡುವ ಪ್ರಾದೇಶಿಕಭಿನ್ನತೆಯನ್ನು ಹೊಂದಿದ ಕುಂತಿ ಆಚರಣೆ ಒಂದು ಫಲವಂತಿಕೆಯ ಆಚರಣೆಯಾಗಿದೆ. ಕುಂತಿಯನ್ನು ಪೂಜಿಸಿ ಕೊನೆಯ ದಿನ ವಿಸರ್ಜನೆ ಮಾಡುವಾಗ ಹುಡುಗರಿಗೆ ಪಾಂಡು, ಕುಂತಿಯ ವೇಷ ಹಾಕಿ ಮೆರವಣಿಗೆಮಾಡಿ ರಾಗಿಯ ಹೊಲಕ್ಕೆ ಬಂದು ಒಸಗೆ ಮಾಡುವರು. ಈ ಆಚರಣೆಯನ್ನು ಕುರಿತಂತೆ ಎಸ್.ಎಸ್.ಹಿರೇಮಠ ಅವರು ಉತ್ತಮ ಫಸಲಿಗಾಗಿ ಹೊಲಗದ್ದೆಗಳಲ್ಲಿ ಗಂಡುಹೆಣ್ಣು ಸಂಭೋಗಕ್ರಿಯೆಯಲ್ಲಿ ತೊಡಗುವ ವಿಧಿಯಾಚರಣೆಯ ಸಾಂಕೇತಿಕ ರೂಪವೇ ಪಾಂಡು ಕುಂತಿಯರ ಒಸಗೆಯಾಗಿದೆ ಎಂದು ಊಹಿಸಿದರೆ ತಪ್ಪಾಗಲಾರದು ಎಂದು ಅಭಿಪ್ರಾಯಪಡುತ್ತಾರೆ.

ಈ ರೀತಿಯ ಅಚರಣೆಗಳನ್ನು ನೋಡಿದಾಗ ಒಂದು ಕಾಲದಲ್ಲಿ ಅತ್ಯಂತ ಪ್ರಬಲವಾಗಿದ್ದ ಶಾಕ್ತ, ತಾಂತ್ರಿಕ ಪಂಥದತತ್ವಗಳು ಜನರಜೀವನದ ಭಾಗವಾಗಿ ಮತ್ತು ಸಂಸ್ಕೃತಿಯ ಅಂಗವಾಗಿ ಹಾಸುಹೊಕ್ಕಾಗಿದ್ದವು ಎಂಬುದು ತಿಳಿದು ಬರುತ್ತದೆ. ಆದರೆ ಅನೈತಿಕವಾಗಿ, ಸ್ವೇಚ್ಛಾಚಾರಕ್ಕಾಗಿ ಜನ ಈ ಆಚರಣೆಗಳನ್ನು ಅನುಸರಿಸುತ್ತಿರಲಿಲ್ಲ ಅದು ಒಂದು ಪದ್ಧತಿಯಾಗಿ ಅವರ ಬದುಕಿನಲ್ಲಿ ಬೆಳೆದುಕೊಂಡು ಬಂದ ಸಾಂಸ್ಕೃತಿಕ ಮೌಲ್ಯವಾಗಿತ್ತು. ಮೈಥುನ ಮತ್ತು ಅದರಿಂದುಂಟಾಗುವ ಪ್ರಜೋತ್ಪತ್ತಿಗೂ ಹಾಗೂ ಕೃಷಿಯಲ್ಲಿನ ಬೀಜೋತ್ಪತ್ತಿ ಅಥವಾ ಸಸ್ಯಗಳ ಬೆಳವಣಿಗೆಗೂ ಸಾಮ್ಯತೆ ಇದೆ ಎಂದು ಕೊಂಡಿದ್ದರಿಂದ ಮನುಷ್ಯರ ಲೈಂಗಿಕತೆ ಪರೋಕ್ಷವಾಗಿ ಸಸ್ಯಗಳ ಬೆಳವಣಿಗೆಗೆ ಉತ್ತೇಜಿಸುತ್ತದೆ ಎಂಬ ಕಲ್ಪನೆ ಜನರಲ್ಲಿದ್ದಿದ್ದರಿಂದ ಈ ರೀತಿಯ ಕೆಲವು ಆಚರಣೆಗಳು ಬೆಳೆದುಬಂದಿರುವುದಾಗಿ ಊಹಿಸಬಹುದು. ಈ ರೀತಿಯ ವಿಚಾರವನ್ನು ಸೈದ್ಧಾಂತಿಕವಾಗಿ ದೇವಿಪ್ರಸಾದ ಚಟ್ಟೋಪಾಧ್ಯಾಯ, ಗೌರೀಶ ಕಾಯ್ಕಿಣಿ, ಎಸ್.ಎಸ್.ಹಿರೇಮಠ ಮುಂತಾದ ವಿದ್ವಾಂಸರು ಈಗಾಗಲೇ ವ್ಯಕ್ತಪಡಿಸಿರುವುದನ್ನು ನಾವು ಗಮನಿಸಬಹುದು.

ಆಚರಣೆಗಳು ಆದಿಮ ಮಾನವ ಪ್ರಜ್ಞೆಯ ಪ್ರತೀಕಗಳು. ಮಾನವ ಭೀತಿ, ಪ್ರೀತಿ, ಭಯ, ಕರುಣೆ ಭಾವನಾತ್ಮಕ ಅಂಶಗಳ ಸಕಾರಾತ್ಮಕ ಅಥವಾ ಗುಣಾತ್ಮಕ ಪ್ರಕ್ರಿಯೆಗಳೆಂದರು ಸರಿಯೇ. ಯಾವಾಗ ಮನುಷ್ಯ ಪರಿಸರವನ್ನು ಜೈಸಲಾರೆನೆಂಬ ಬಲವಾದ ನಂಬಿಕೆ ಅಸಾಯಕತೆಯನ್ನು ತನ್ನಲ್ಲಿ ಕಂಡುಕೊಂಡನೋ ಆಗಲೇ ಅವನು ಪರಿಸರಕ್ಕೆ ಶರಣಾಗಿ ತನ್ನ ಅಂತರಾಳದ ಅನೇಕ ಆತಂಕಗಳಿಗೆ ಕ್ರಿಯಾತ್ಮಕ ಸ್ವರೂಪ ನೀಡಿದನು. ಅವು ಆಚರಣೆಗಳಾಗಿ ಆತನ ಅಲೌಕಿಕ ಮನಸ್ಥಿತಿಗೆ ಹತ್ತಿರವಾಗಿರಬೇಕು. ತನ್ನ ಆಗು ಹೋಗುಗಳಿಗೆ ಅವೇ ನೇರವಾದ ಸಂಬಂಧ ಪ್ರಕ್ರಿಯಾತ್ಮಕಗಳೆಂದು

ಅನ್ನಿಸಿರಬೇಕು. ಅವುಗಳ ಪ್ರತಿಫಲನಗಳು ಆತನಿಗೆ ಪ್ರೀತಿ ಭಯಗಳ ದ್ವಂದ್ವನಿಲುವುಗಳೊಂದಿಗೆ ಸಕ್ರಿಯಾತ್ಮಕವಾದವುಗಳಾಗಿರಬೇಕು. ಯಾಕೆಂದರೆ, 'ನಂಬಿಕೆ ಆಚರಣೆಯ ಬೆನ್ನಲುಬು. ನಂಬಿಕೆಯ ಸಿದ್ಧಾಂತ ಆಚರಣೆಗಳನ್ನು ಕೈಬಿಡದೆ ಮುಂದುವರೆಸಿಕೊಂಡು ಹೋಗುವಂತೆ ಮಾಡುತ್ತದೆ. ಆಚರಣೆಯು ಹುಟ್ಟುವಮುನ್ನ ಅಥವಾ ನಂತರ ಪುರಾಣಗಳು ಹುಟ್ಟಕೊಳ್ಳುತ್ತವೆ. ಹೀಗೆ 'ನಂಬಿಕೆ, ಆಚರಣೆ, ಪುರಾಣ ಜೊತೆಯಾಗಿಯೇ ಇರಬಹುದು. ನಿರ್ದಿಷ್ಟ ಸಮಾಜದಲ್ಲಿ ಒಂದು ಜಾತಿ ಅಥವಾ ಉಪ ಜಾತಿಯಲ್ಲಿ ಬಳಕೆಯಲ್ಲಿರುವ ಆಚರಣೆಗಳ ಹುಟ್ಟಿಗೆ ಪ್ರಬಲವಾದ ಕಾರಣಗಳು ಇರಲೇಬೇಕು. ಅದು ಆರ್ಥಿಕ, ಸಾಮಾಜಿಕ, ಭಾವನಾತ್ಮಕ ಹೀಗೆ ಏನಾದರೂ ಆಗಿರಬಹುದು. ಒಬ್ಬ ವ್ಯಕ್ತಿ ಇಷ್ಟಪಟ್ಟು ಒಂದು ಆಚರಣೆಯನ್ನು ಸೃಷ್ಟಿ ಮಾಡಲು ಸಾಧ್ಯವಿಲ್ಲ. ಒಂದು ಜನಾಂಗದ ಜೀವನ ವಿಧಾನದ ಬೇಡಿಕೆಯ ಅಂಗವಾಗಿ ಆಚರಣೆ ರೂಪು ಪಡೆಯುತ್ತದೆ. ಪ್ರಕೃತಿಯಲ್ಲಿ ಮತ್ತು ಮಾನವನ ದೇಹದಲ್ಲಿ ಉಂಟಾಗುವ ಬದಲಾವಣೆಯನ್ನು ಆಚರಣೆಗಳ ಮೂಲಕ ಗುರುತಿಸಲಾಗುತ್ತದೆ. ಮಾನವನ ಬದುಕಿಗೆ ಮತ್ತು ಅವನ ಭಾವ ಪ್ರಪಂಚಕ್ಕೆ ಸಂಬಂಧಿಸಿದ ಹಾಗೂ ಸಾಮಾಜಿಕ ರಚನೆಗಳಿಗೆ ಸಂಬಂಧಿಸಿದ ಆಚರಣೆಗಳೆಂದು ಇವನ್ನು ಸ್ಥೂಲವಾಗಿ ವಿಂಗಡಿಬಹುದು. ಮನುಷ್ಯನ ಮನಸ್ಸಿನಪರಿವರ್ತನೆಯ ಬಗೆ ಬಗೆಯ ವಿನ್ಯಾಸಗಳನ್ನು ಆಚರಣೆಗಳು ವ್ಯಕ್ತಗೊಳಿಸುತ್ತವೆ'೩

ಮಳೆಗೆ ಅದು ಕಾಣಿಸಿಕೊಳ್ಳುವುದಕ್ಕಿಂತಲು ಬೆರೆಯದೇ ರೂಪ ಇದೆ ಎಂಬ ಮುಗ್ದತೆಯೊಂದಿಗೆ ಆರಾಧನೆಗೆ ಅಡಿಯಿಟ್ಟರೆ ಆಗ ಅರಿವಾದಿತು ಪ್ರಕೃತಿಯ ಅಗಾದತೆ. ಮಳೆಯ ಶಕ್ತಿಗೊಂದು ಭಕ್ತಿಯ ಲೇಪ ಹಚ್ಚಿ ಧನ್ಯರಾದ, ಆ ಧನ್ಯತೆಯಲ್ಲಿ ಬದುಕು ಕಂಡುಕೊಂಡ ನಮ್ಮ ಪೂರ್ವಿಕರ ಅನುಭಾವಗಳೆ ನಮ್ಮಿರುವಿಕೆಗೆ ಆಧಾರ ಅದಿಲ್ಲದಿದ್ದರೆ ಬದುಕೆ ದುರ್ಬರ. ಬದುಕನ್ನು ಅದು ನಿರ್ಧರಿಸುವ ಆಯಾಮಗಳು ಅನನ್ಯವಾದುವುಗಳಾಗಿವೆ. ಆ ಕಾರಣಕ್ಕೆ ಮಳೆ ಆಚರಣೆಗಳಲ್ಲಿ ಕಾಣಬರುವ ಸಮಷ್ಟಿಯ ನೆಲೆಗಳು ವಿಭಿನ್ನ ಸ್ವರೂಪಗಳಲ್ಲಿ ಅಧ್ಯಯನಕ್ಕೆ ಸಾಮಾಗ್ರಿಗಳಾಗುತ್ತವೆ.

ಪ್ರಾಚೀನಕಾಲದ ಮನುಷ್ಯ ತಾನು ಬದುಕುತ್ತಿರುವ ಪ್ರಪಂಚಕ್ಕಿಂತ ದೂರವಿರುವ ಮತ್ತೊಂದು ಪ್ರಪಂಚದ ಬಗೆಗೆ ತನ್ನದೇ ರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾನೆ. ಪ್ರಕೃತಿಯಲ್ಲಿ ಕಾಣಿಸುವ ಶಕ್ತಿಗಳಾದ ಮಳೆ, ಗಾಳಿ, ಬೆಂಕಿ, ನೀರು, ಆಕಾಶ, ಭೂಮಿ ಇಂಥವುಗಳಿಂದ ಅವನು ಬಹಳಷ್ಟು ಉಪಕೃತನಾಗಿರುವಂತೆ ಕೆಲವೊಮ್ಮೆ ತೊಂದರೆಗೂ ಒಳಗಾಗಿದ್ದಾನೆ. ಆದರೆ ಇದಾವುದರ ನಿಯಂತ್ರಣವೂ ತನ್ನ ಕೈಯಲ್ಲಿಲ್ಲ ಎಂಬುದನ್ನು ಅರಿತನಂತರ ಅವುಗಳಿಗೆ ಒಂದು ಅತಿಮಾನುಷವಾದ ರೂಪಕೊಟ್ಟು ಅವುಗಳನ್ನು ಭಯ ಭಕ್ತಿಯಿಂದ ಕಂಡಿದ್ದಾನೆ. ಹೀಗೆ ಈ ಪ್ರಾಕೃತಿಕ ಶಕ್ತಿಗಳ ಹಿಂದೆ ಅವು ಕಾಣಿಸಿಕೊಳ್ಳುವುದಕ್ಕಿಂತ ಬೇರೆಯೇ ಆದ ರೂಪವಿದೆ ಎಂದು ಅವರವರ ಪರಿಸರ, ಅನುಭವಕ್ಕೆ ತಕ್ಕಹಾಗೆ ಇಂಥ ರೂಪಗಳನ್ನು ಕಲ್ಪಿಸಿಕೊಂಡಿದ್ದಾರೆ. ತಮಗೆ ತುಂಬ ಉಪಕಾರಿಯಾದ ಶಕ್ತಿಯ ಬಗ್ಗೆ

ಅತೀವಕಾಳಜಿ ವಹಿಸಿದ್ದಾರೆ. ಈ ಶಕ್ತಿ ಪ್ರಸನ್ನವಾಗಿದ್ದರೆ ಮಾತ್ರ ತಮಗೆ ಅನುಕೂಲ ಎಂಬುದನ್ನು ಕಂಡುಕೊಂಡು ಅದನ್ನು ಶಾಂತಗೊಳಿಸುವ, ಸಂತೋಷಗೊಳಿಸುವ ವಿವಿಧ ರೀತಿಯ ಆಚರಣೆಗಳನ್ನು ರೂಢಿಸಿಕೊಂಡಿದ್ದಾರೆ.

ಇಂಥ ಸತ್ಯಗಳನ್ನು ಅರಿತ ಭಾರತೀಯರು ಪ್ರಾಕೃತಿಕ ವ್ಯಾಪಾರದಲ್ಲಿ ಮಳೆಗೆ ಅತ್ಯುನ್ನತ ಸ್ಥಾನ ನೀಡಿದ್ದಾರೆ. ಅದಕ್ಕೆ ದೈವತ್ವವನ್ನು ಆರೋಪಿಸಿ ಪೂಜಿಸಿದ್ದಾರೆ. ಜಾನಪದರ ಬದುಕಿನಲ್ಲಿ ಇಂಥ ಅನೇಕ ಆಚಾರ ವಿಚಾರಗಳು ಹಾಸುಹೊಕ್ಕಾಗಿವೆ. ಆದಿ ಮಾನವನಿಂದ ಆರಂಭಿಸಿ ಆಧುನಿಕ ಕೃಷಿಯ ಈ ದಿನಗಳವರೆಗೂ ಜನಪದೀಯ ನಂಬಿಕೆನಡಾವಳಿಗಳು ಮುಕ್ಕಾಗಿಲ್ಲದಿರುವುದಕ್ಕೆ ಮಳೆಯ ಅವಲಂಬನೆಯ ಪರಿಯೆ ಕಾರಣ. ಕಾಲದೇಶಗಳ ವ್ಯಾಪ್ತಿಯಲ್ಲಿ ಮಳೆ ದೇವನ ಆರಾಧನೆ ವಿಭಿನ್ನಸ್ವರೂಪಗಳನ್ನು ಪಡೆದುಕೊಂಡರು ಉದ್ದೇಶ ಮಾತ್ರ ಒಂದೇ ಆಗಿದೆ. ಭಾರತೀಯ ವೈಧಿಕ ಸಂಸ್ಕೃತಿಯಲ್ಲಿ ಮಳೆಯನ್ನು ವರುಣ ದೇವೇಂದ್ರನ ಹೆಸರಿನಲ್ಲಿ ಆರೋಪಿಸಲಾಗಿದ್ದರೆ ಗ್ರೀಕರು ರೋಮನ್ನರು ಜ್ಯೂದೇವನೆಂದು ಆರಾಧಿಸಿದ್ದಾರೆ. ಶೈವಾರಾಧಕರು ಪರ್ಜನ್ಯದಿಂದ ಮಳೆಯನ್ನು ಹೋಲಿಸಿಕೊಳ್ಳುವುದು ಪ್ರತೀತಿ. ಪರ್ಜನ್ಯಾರಾಧನೆಯಂತು ವಿಶಿಷ್ಟ ಪರಂಪರೆಯನ್ನು ಹೊಂದಿದೆ.

ಮಳೆಯಿಲ್ಲದೆ ಜಲ ಬತ್ತಿ, ಬಾವಿ ಬರಡಾದ ದಿನಗಳಲ್ಲಿ ಊರ ಮಂದಿಯೆಲ್ಲ ಶಿವಮಂದಿರದಲ್ಲಿ ನಡೆಸುವ ಪರ್ಜನ್ಯ ಇಂತವುಗಳಲ್ಲೊಂದು. ಹತ್ತಾರು ಕಿಲೋಮೀಟರ್ ದೂರದಿಂದ ಕೆರೆಯ ನೀರನ್ನು ಕೊಡದಲ್ಲಿ ಹೊತ್ತು ತಂದು 'ರುದ್ರ ನಮಕ ಚಮಕ'ಗಳೊಂದಿಗೆ ಶಿವನಿಗೆ ಅಭಿಷೇಕ ನಡೆಸಲಾಗುತ್ತದೆ. ಆಗೆ ಅಭಿಷೇಕ ಮಾಡಿದ ನೀರು ಪುನಃ ಅದೆ ಕೆರೆಗೆ ಕಾಲುವೆಯ ಮೂಲಕ ಹೋಗಿ ಸೇರುವವರೆಗು ಇದು ಮುಂದುವರೆಯುತ್ತದೆ. ಒಮ್ಮೆ ಅಭಿಷೇಕದ ನೀರು ಮೂಲಸ್ಥಾನವನ್ನು ಮುಟ್ಟಿತ್ತೆಂದರೆ ಮಳೆ ಬಂದೇ ಬರುತ್ತದೆ ಎಂಬ ಪ್ರತೀತಿ ಇದೆ.

ಮನುಷ್ಯನ ಬದುಕು ನಿಂತಿರುವುದೇ ನಂಬಿಕೆಗಳ ಮೇಲೆಂಬುದು ಸರ್ವ ವಿಧಿತ. ಯಾವುದನ್ನು ಮನುಷ್ಯ ಹೆಚ್ಚಾಗಿ ನಂಬುತ್ತಾನೋ ಭಯ, ಆತಂಕ ತಾನೇ ತಾನಾಗಿ ಬರುತ್ತದೆ. ಅದು ಕೈಬಿಟ್ಟರೆ ಎಲ್ಲಿ ಗತಿ ಎಂದು ಅದನ್ನು ಆಚರಣೆಗೆ ತಂದುಬಿಡುತ್ತವೆ. ಹಾಗೆಯೇ ಅದು ನಮ್ಮ ಜೀವನದ ಅನಿವಾರ್ಯ ಗತಿಯಾಗಿರುವುದರಿಂದ ಅದನ್ನು ಸಮಪ್ರಮಾಣದಲ್ಲಿ ಕಾಪಾಡಿಕೊಳ್ಳುವುದು ಅನಿವಾರ್ಯವಾಗುತ್ತದೆ. ಸಮತೋಲನತೆಯನ್ನು ಕಾಪಾಡಲು ನಮಗೆ ಆಚರಣೆಗಳು ಅನಿವಾರ್ಯವಾಗುತ್ತವೆ. ಗಮನಿಸಬೇಕಾದ ಸಂಗತಿಯೆಂದರೆ ಆಚರಣೆಗಳು ನಂಬಿಕೆಗಳು ಮಾತ್ರವಾಗಿರದೆ ಮಾನವ ಆದಿಮ ಕುರುಹುಗಳ ಚರಿತ್ರೆಗಳಾಗಿರುತ್ತವೆ. ಆ ಮೂಲಕ ಚರಿತ್ರೆಯ ಕ್ರಮಗಳನ್ನು ನಿರ್ಣಯಿಸಿಕೊಳ್ಳಲು ಸಾಧ್ಯವಾಗುತ್ತದೆ. ಮಳೆಯನ್ನು ಕುರಿತ ನಂಬಿಕೆಗಳು ಮತ್ತು ಆಚರಣೆಗಳು ಈ ನೆಲೆಯವೇ ಆಗಿವೆ. ಮಳೆಯನ್ನು ಕುರಿತ ನಂಬಿಕೆ ಮತ್ತು ಆಚರಣೆಗಳನ್ನು ಪ್ರತ್ಯೇಕವಾಗಿ ನೋಡಲು ಸಾಧ್ಯವಾಗದೆ ಇರುವ ಕಾರಣಕ್ಕೆ ಇವರೆಡನ್ನು

ಏಕತ್ರವಾಗಿ ಅಧ್ಯಯನ ಮಾಡಲಾಗುತ್ತದೆ. ಮಳೆಯ ಆಚರಣೆಗಳಲ್ಲಿ ನಾವು ಹಲವು ಬಗೆಗಳನ್ನು ಕಂಡುಕೊಳ್ಳಲು ಸಾಧ್ಯ.

**ಮಳೆ ಕರೆಯುವ ಆಚರಣೆಗಳು**

ಮಳೆಯ ಬಗ್ಗೆ ಒಂದಷ್ಟು ಸವಿವರವಾದ ಮಾಹಿತಿ ಹಾಗೂ ಆಕರ ಗ್ರಂಥವನ್ನು ರಚಿಸಿದ ಪದ್ಮಪ್ರಸಾದ್‌ರವರು ಮಳೆಆಚರಣೆಗಳನ್ನು ಈ ಕೆಳಗಿನಂತೆ ವಿಭಾಗಿಸಿ ಪ್ರತಿಯೊಂದು ವಿಭಾಗಕ್ಕೂ ಜಗತ್ತಿನಾದ್ಯಂತ ಪ್ರಚಲಿತವಿದ್ದ ಆಚರಣೆಗಳನ್ನು ಕೊಟ್ಟಿದ್ದಾರೆ. ಮಳೆಬರುವಂತೆ ಮಾಡಲು ಅದೇ ರೀತಿ ಬೇಡವಾದ ಮಳೆ ನಿಲ್ಲುವಂತೆ ಮಾಡಲು ಜಗತ್ತಿನಾದ್ಯಂತ ಸಾವಿರಾರು ಬಗೆಯ ಸಾಂಪ್ರದಾಯಿಕ ವಿಧಿಗಳು ರೂಢಿಯಲ್ಲಿವೆ. ಇವುಗಳನ್ನೆಲ್ಲಾ ಅವಲೋಕಿಸಿದಾಗ ಇವೆಲ್ಲವನ್ನು ಕೆಲವು ನಿರ್ದಿಷ್ಟ ಗುಂಪುಗಳಲ್ಲಿ ವರ್ಗೀಕರಿಸಲು ಸಾಧ್ಯವೆನಿಸುತ್ತದೆ. ಹೀಗೆ ವರ್ಗೀಕರಿಸಿದ ಬಳಿಕ ಪ್ರತೀ ಗುಂಪಿನಲ್ಲೂ ಕೆಲವಾರು ಆಚರಣೆಗಳ ವಿವರಗಳನ್ನು ಗಮನಿಸಿ ಮುಂದೆ ಹೋಗಬಹುದು. ಹೀಗೆ ವರ್ಗಿಕರಿಸುವ ಆಚರಣೆಗಳ ಮುಖ್ಯಲಕ್ಷಣಗಳನ್ನು ಗಣನೆಗೆ ತೆಗೆದುಕೊಳ್ಳುವುದು ಉತ್ತಮ. ಇದರಿಂದ ವರ್ಗೀಕರಣ ಸುಲಭವಾಗುತ್ತದೆ. ಈ ಅಂಶವನ್ನು ಆಧಾರವಾಗಿಟ್ಟುಕೊಂಡು ನಾವು ಮಳೆ ಆಚರಣೆಗಳನ್ನು ಮಳೆ ಕುರಿತಾದ ಮಾಹಿತಿ ಸಂಗ್ರಹಣೆಯಲ್ಲಿ ಉಲ್ಲೇಖಿಸಬಹುದಾದ ಕಾರ್ಯ ಮಾಡಿದವರಲ್ಲಿ ಪದ್ಮಪ್ರಸಾದ್ ಉಲ್ಲೇಖಾರ್ಹರು. ಮಳೆಆಚರಣೆಗಳ ಬಗ್ಗೆ ವಿಸ್ತೃತವಾದ ಮಾಹಿತಿಕೊಡುತ್ತಾರೆ. ಅಧ್ಯಯನದ ಅನುಕೂಲಕ್ಕಾಗಿ ಅನುಷಂಗಿಕ ಹಾಗೂ ಪ್ರಾಥಮಿಕ ಆಕರಗಳನ್ನು ಬಳಸಿಕೊಂಡು ಈ ಕೆಳಕಂಡಂತೆ ವಿಭಾಗಿಸಿಕೊಂಡಿದ್ದಾರೆ.

೧. ಸಸ್ಯಗಳನ್ನೊಳಗೊಳ್ಳುವ ಮಳೆ ಆಚರಣೆಗಳು

೨. ಪ್ರಾಣಿಗಳನ್ನೊಳಗೊಳ್ಳುವ ಆಚರಣೆಗಳು

೩. ಅನುಕರಣೆಯ ಮಳೆ ಆಚರಣೆಗಳು

೪. ಆರಾಧನಾ ವಿಧಾನಧ ಮಳೆ ಆಚರಣೆಗಳು

೫. ಅಪಚಾರರೂಪದ ಮಳೆ ಆಚರಣೆಗಳು

೬. ಅನ್ಯವರ್ಗದ ಮಳೆ ಆಚರಣೆಗಳು

ಈ ವರ್ಗೀಕರಣ ಸಂಕೀರ್ಣವಾದುದು ಹಾಗೆಯೇ ಪ್ರಶ್ನಾರ್ಹವೂ ಕೂಡ. ಯಾಕೆಂದರೆ ಕೆಲವು ಆಚರಣೆಗಳ ವಿವರಣೆ ನೋಡಿದಾಗ ಅವನ್ನು ಬೇರೊಂದು ವಿಭಾಗದಲ್ಲಿ ಸೇರಿಸಿದ್ದರೆ ಹೆಚ್ಚು ಉಚಿತ ವಾಗುತ್ತಿತ್ತು ಎಂದು ಭಾವಿಸಲು ಅವಕಾಶವಿದೆ. ಇನ್ನೂ ಕೆಲವು ಆಚರಣೆಗಳಲ್ಲಿ ಎರಡು ಮೂರು

ಗುಂಪಿನ ಲಕ್ಷಣಗಳು ಸಮಾನ ಪ್ರಾಮುಖ್ಯತೆ ಕಾಣುವುದುಂಟು ಅಂತಹ ಸಂದರ್ಭದಲ್ಲಿ ಯಾವುದೇ ಒಂದು ಗುಂಪಿಗೆ ಆ ಸಂಪ್ರದಾಯದ ಸೇರ್ಪಡೆ ಪ್ರಶ್ನಾರ್ಹವಾದುದು ಅಂತಹ ಕಡೆಗಳಲ್ಲೆಲ್ಲ ಹೀಗೆ ಸರಿ ಎಂದು ವಾದಿಸುವುದು ಸಾಧ್ಯವಿಲ್ಲ. ಯಾವುದೋ ಒಂದು ಆಲೋಚನಾಲಹರಿಗೆ, ತರ್ಕಸರಣಿಗೆ ಸರಿ ಎಂದು ಕಂಡಿರುವುದರಿಂದ ಅದು ಅಲ್ಲಿದೆ ಎಂದು ಭಾವಿಸುವುದೇ ಸೂಕ್ತ. ಆರಂಭಿಕ ಅಧ್ಯಯನ ಒಂದರಲ್ಲಿ ಈ ರೀತಿ ತೊಡಕು ಉಳಿಯುವುದು ಅನಿವಾರ್ಯ. ಮೇಲಿನ ಪ್ರತಿಯೊಂದು ವರ್ಗದಲ್ಲಿಯೂ ಕೆಲವು ಉಪವರ್ಗವನ್ನು ಸೃಷ್ಟಿಸಿಕೊಳ್ಳಲು ಅವಕಾಶವಿದೆ. ಅಗತ್ಯವೆನಿಸಿದ ಆ ರೀತಿಯ ಉಪವರ್ಗವನ್ನು ಸೃಷ್ಟಿಸಿಕೊಂಡು ಅದನ್ನು ಆಯಾವಿಭಾಗದಲ್ಲಿ ಸೂಚಿಸಬಹುದು.

ಸಸ್ಯವರ್ಗ ಮಳೆ ಆಚರಣೆಗಳಲ್ಲಿ ಒಂದು ಮುಖ್ಯಪಾತ್ರವಾಗಿದೆ. ಇದು ಎಲ್ಲಾ ದೇಶಗಳಲ್ಲೂ ಕಂಡು ಬರುವ ಮುಖ್ಯ ಅಂಶ ಮಳೆ ಆಚರಣೆಗಳಲ್ಲಿ ಕೆಲವೆಡೆ ನಿರ್ದಿಷ್ಟ ಸಸಿ ಅಥವಾ ಅದರ ಭಾಗವನ್ನೇ ಉಪಯೋಗಿಸಬೇಕೆಂದಿದೆ. ಇನ್ನು ಕೆಲವೆಡೆ ನಿರ್ದಿಷ್ಟತೆಯಿಲ್ಲ. ಯಾವುದೇ ಸಸ್ಯದ ಭಾಗವಾದರೂ ಆದೀತು. ನೀರನ್ನು ಚಿಮುಕಿಸುವ ಅನುಕರಣಮಾತ್ರವಾದ ಇರುವೆಡೆಗಳಲ್ಲಿ ಸಾಮಾನ್ಯವಾಗಿ ಯಾವುದಾದರೊಂದು ಸಸ್ಯವನ್ನು ಉಪಯೋಗಿಸಿದರೆ ಸಾಕಾಗುತ್ತದೆ. ಹಾಗಲ್ಲದೆ ಅನ್ಯರೀತಿಯ ಆಚರಣೆಗಳಲ್ಲಿ ನಿರ್ದಿಷ್ಟ ಸಸ್ಯವೇ ರೂಢಿಯಿದೆ. ಕರ್ನಾಟಕದಲ್ಲಿ ಈ ಆಚರಣೆಗಳಲ್ಲಿ ಬಳಕೆಯಾಗುವ ಸಸ್ಯಗಳೆಂದರೆ ಗರಿಕೆ ತೆಂಗು ಇಂತವು. ಚಿತ್ರದುರ್ಗದ ಹಿರಿಯೂರು, ನಾಯಕನಹಟ್ಟಿ, ಓಬಯ್ಯನಹಟ್ಟಿ, ಮುಂತಾದ ಕಡೆಗಳಲ್ಲಿ ತಂಗಟೆ ಗಿಡಕ್ಕೆ ಈ ಪ್ರಾಶಸ್ತ್ಯವಿದೆ. 'ಮರಗಳಲ್ಲಿ ದೇವರು ವಾಸಿಸುತ್ತಾನೆಂದು ಅವನ್ನು ಕಡಿದರೆ ದೇವರುಮುನಿಸಿ ಮಳೆಬರುವುದಿಲ್ಲ ಎಂಬುದು ಜಗತ್ತಿನ ಎಲ್ಲಾ ಕಡೆಯೂ ಪ್ರಚಲಿತವಿರುವ ಜನರ ಭಾವನೆ. ರೋಮ್ ಲಿಥುವಾನಿಯಾದಲ್ಲಿ ಜನರು ಪವಿತ್ರವೆಂದು ಭಾವಿಸಿಕೊಂಡಿದ್ದ ತೋಪವನ್ನು ಕಡೆಯಲು ಜನರನ್ನು ಮಹಿಳೆಯರ ಗುಂಪೊಂದು ರಾಜಕುಮಾರನ ಬಳಿಹೋಗಿ ಆ ತೋಪು ತಾವು ಮಳೆಯನ್ನು ಸೂರ್ಯನ ಬೆಳಕನ್ನು ಪಡೆಯುವ ದೇವತೆಗಳ ಆವಾಸವೆಂದು ಅದರ ನಾಶವನ್ನು ತಡೆಯುವಂತೆ'' ಪ್ರಾರ್ಥಿಸುತ್ತಿದ್ದ ಉಲ್ಲೇಖಗಳು ಸಿಗುತ್ತವೆ.

೧. ಓಕ್‌ಮರದಕೊಂಬೆಯನ್ನು ನೀರಿನಲ್ಲಿಮುಳುಗಿಸಿದರೆ ಮಳೆ ಬರುತ್ತದೆಂಬ ನಂಬಿಕೆ ಗ್ರೀಸ್ ನಲ್ಲಿತ್ತು.

೨. ಹಾಸನಜಿಲ್ಲೆಯಲ್ಲಿ ಮಳೆಬರದೆ ತೊಂದರೆಯಾದಾಗ ಜನಮೆರವಣಿಗೆಯಲ್ಲಿ ಊರಾಚೆಗೆ ಹೋಗಿ ಒಂದು ಗುಂಡಿತೆಗೆದು ಒಂದು ತೆಂಗಿನಕಾಯಿಯನ್ನು ಸಿಪ್ಪೆತೆಗೆದು ಹೂಳುತ್ತಾರೆ. ಅದು ಸಿಡಿದು ಮಳೆ ಬರುತ್ತದೆಂಬ ನಂಬಿಕೆ.

೩. ನಿರ್ದಿಷ್ಟ ಮರವೊಂದರ ತೊಗಟೆಯನ್ನು ಭೂತಗಳಿಗೆ ಅರ್ಪಿಸಿ ಅದನ್ನು ನೀರಿನಲ್ಲಿ ಇಡುವ ಮೂಲಕ ಮಳೆಕರೆವ ಸಂಪ್ರದಾಯ ಕೆಲವುದೇಶಗಳಲ್ಲಿದೆ.

೪. ತೆಂಗಿನಗರಿಯನ್ನು ಅಡಿಕೆಗಳ ಒಂದುಪದರದ ಮೇಲೆ ಉಜ್ಜಿದರೆ ಮಳೆಬರುವುದೆಂಬ ನಂಬಿಕೆ ಜಾವ ಜನರಲ್ಲಿದೆ.

ಮೇಲಿನ ಎರಡೂ ಅನುಕರಣ ಸಂಪ್ರದಾಯಗಳೇ, ಮೊದಲಿನದರಲ್ಲಿ ತೇವಗೊಳಿಸುವುದು ಅನುಕರಣೆಯಾದರೆ ಎರಡನೆಯದು ಹನಿಗಳು ಬೀಳುವಶಬ್ದದ ಅನುಕರಣೆ. ಇದು ಮಾಟದ ಅನುಕರಣೆಯೂ ಹೌದು.

೫.ಮ್ಯಾಬ್ರೀಟನ್ ಮಳೆತರಿಸುವ ಮಂತ್ರವಾದಿ ಕೆಂಪು ಹಸಿರು ಪಟ್ಟಗಳುಳ್ಳ ಕೆಲವು ಎಲೆಗಳನ್ನು ಬಾಳೆ ಎಲೆಯಲ್ಲಿ ಕಟ್ಟಿ ನೀರಲ್ಲಿ ಅದ್ದಿ ನೆಲದಲ್ಲಿ ಹೂಳುತ್ತಾರೆ. ಆ ನಂತರ ಅವನು ಬಾಯಲ್ಲಿ ತುಂಬಿಕೊಂಡು ನೀರನ್ನು ಮಳೆಯಂತೆ ಸುರಿಸುತ್ತಾನೆ.

೬.ಸೆಂಟ್ರಲ್ ಆಂಗೋನಿ ಲ್ಯಾಂಡ್‌ನಲ್ಲಿ ಮಳೆಕರೆಯುವ ಸಂಪ್ರದಾಯವೊಂದರಲ್ಲಿ ಕೂಡ ಮಳೆದೇವರ ಪೂಜೆಮಾಡಿ ಕೈಯಲ್ಲಿ ಒಂದೊಂದು ಕೊಂಬೆಹಿಡಿದು ನರ್ತಿಸುತ್ತಾರೆ. ಮನೆಗೆ ಮರಳುವ ಹೊತ್ತಿಗೆ ಬಾಗಿಲಲ್ಲಿ ಮುದುಕಿಯೊಬ್ಬಳು ಪಾತ್ರೆಯಲ್ಲಿ ನೀರಿಟ್ಟಿರುತ್ತಾಳೆ. ಕೈಯಲ್ಲಿನ ಕೊಂಬೆಯನ್ನು ಅದ್ದಿ ಅದನ್ನು ಜೊರಾಗಿ ಬೀಸುತ್ತಾರೆ. ನೀರಿನ ಹನಿಗಳು ಬೀಳಲೆಂದು ಆನಂತರ ಜೋರಾಗಿ ಮಳೆಬೀಳುವುದು ಖಚಿತವೆಂದು ಅವರ ನಂಬಿಕೆ. ಇದುಕೂಡ ಅನುಕರಣಕ್ರಿಯೆಯೇ

೭.ಅಸ್ಸಾಮಿನ ಮುಂಡಾರಿ ಜನ ವಾಸಿಸುವ ಪ್ರದೇಶಗಳಲ್ಲಿ ಮರಗಳ ಒಂದು ಪವಿತ್ರತೋಪು ಇರುತ್ತಿತ್ತು ಈ ತೋಪಿನ ಯಾವುದಾದರೂ ಮರಕಡಿಯುವುದು ದೇವತೆಗಳು ಕೋಪಗೊಂಡು ಮಳೆಯನ್ನು ತಡೆಯುವರೆಂದು ಭಾವಿಸಿದ್ದರು.

೮.ಕಾಂಬೋಡಿಯಾದಲ್ಲಿ ಪ್ರತಿಹಳ್ಳಿ ಪ್ರದೇಶಕ್ಕೂ ಒಂದು ಪವಿತ್ರಮರ ಇದ್ದು ಮಳೆತಡವಾದರೆ ಜನ ಆ ಮರಕ್ಕೆ ಮಳೆ ಅರ್ಪಿಸುತ್ತಾರೆ.

೯.ಉತ್ತರ ಬರ್ಮಾದ ಹಳ್ಳಿಗಳಲ್ಲಿ ಜನ ಮಳೆಬಾರದಿದ್ದಾಗ ಸಮೀಪದ ಅತಿದೊಡ್ಡ ಹುಣಸೇ ಮರವನ್ನು ಆರಿಸಿಕೊಂಡು ಅದಕ್ಕೆ ಮಳೆನಿಯಂತ್ರಿಸುವ ಮ್ಯಾಟ್ ಎಂಬ ಭೂತದ ಹೆಸರಿಟ್ಟು ಪೂಜಿಸಿ ಹಗಲು ರಾತ್ರಿ ಮಳೆಸುರಿಸುವಂತೆ ಪ್ರಾರ್ಥಿಸುತ್ತಾರೆ. ಆ ನಂತರ ಶೃಂಗಾರಿತ ಹಿರಿ ಮಹಿಳೆಯರು ನರ್ತಿ ಹಾಡು ಹಾಡುತ್ತಾರೆ.

೧೦.ಪೂರ್ವ ಆಫ್ರಿಕಾದ ವಾಕಂಬಾ ಪ್ರದೇಶದ ಜನ ಮಳೆ ತಡವಾದರೆ, ಸಿಡಾರ್ ವೃಕ್ಷದ ಕೊಂಬೆಯನ್ನು ಒಂದು ಹೋತವನ್ನು ತೆಗೆದುಕೊಮಡು ಬೇಜಬಾಬ್ ಎಂಬ ಮರದ ಬಳಿ ಹೋಗುತ್ತಾರೆ ಅಲ್ಲಿ ಹೋತವನ್ನು ಬಲಿ ಕೊಡುತ್ತಾರೆ ಆದರೆ ಅದನ್ನು ತಿನ್ನಲ್ಲ.

೧೧ ಆಫ್ರಿಕಾದ ಓಡಾಂಬೋ ಪ್ರದೇಶದ ಸ್ತ್ರೀಯರು ಹೊಲದಲ್ಲಿ ಕಾಳು ಬಿತ್ತುವ ಮೊದಲು ಒಂದು ನಿರ್ದಿಷ್ಟ ಜಾತಿಯ ಮರದ ಕೊಂಬೆಯೊಂದನ್ನು ತಾವು ಬಿತ್ತುವ ಮೊದಲು ಬೀಜದ ಜೊತೆಗೇ ಹೊಲದಲ್ಲಿ ನೆಡುತ್ತಾರೆ. ಇದು ಮಳೆ ತರಿಸುತ್ತದೆ ಎಂದು ನಂಬಿ ಇದನ್ನು ಮಳೆಪೊದೆಎಂದೇ ಕರೆಯುತ್ತಾರೆ.

೧೨. ಬ್ರಿಟೀಷ್ ಈಸ್ಟ್ ಆಫ್ರಿಕಾದ ಆಕಿಕುಯು ಪ್ರದೇಶದಲ್ಲಿ 'ಮುಗುಮು' ಎಂಬ ಒಂದು ಜಾತಿಯ ಮರವಿದೆ. ಇದು ತನ್ನ ಗಾತ್ರ ಹಾಗೂ ಒಳ್ಳೆಯ ನೋಟದಿಂದಾಗಿ ಪವಿತ್ರ ಎಂದು ಪರಿಗಣಿಸಲ್ಪಟ್ಟಿದೆ. ಆದ್ದರಿಂದ ಇವನ್ನು ಊನಗೊಳಿಸಬಾರದೆಂದು ಜನರ ನಂಬಿಕೆ. ಈ ಮರದ ತೋಪುಗಳಲ್ಲಿ ಮಳೆಗಾಗಿ, ಒಳ್ಳೆಯ ಹವೆಗಾಗಿ, ರೋಗಿಷ್ಟ ಮಕ್ಕಳ ಕ್ಷೇಮಕ್ಕಾಗಿ ಜನ ಕುರಿ, ಹೋತಗಳನ್ನು ಬಲಿಕೊಡುತ್ತಾರೆ.

೧೩. ಸುಗ್ಗಿಯಲ್ಲಿ ಕೊನೆಯದಾಗಿ ಕೊಯ್ದು ಧಾನ್ಯದ ಕಂತೆಯ ಮೇಲೆ, ಅದನ್ನು ಮನೆಗೆ ತರುವ ವ್ಯಕ್ತಿಯ ಮೇಲೆ ನೀರು ಚಿಮುಕಿಸುವ ಸಂಪ್ರದಾಯಗಳಲ್ಲೂ ಬಳಕೆಯಲ್ಲಿತ್ತು.

ಇದರ ಹಿಂದಿನ ಆಶಯ ಕೂಡಾ ಮರುವರ್ಷವೂ ಒಳ್ಳೆಯ ಮಳೆಬಂದು ಧಾನ್ಯ ಅದೇ ರೀತಿ ಮನೆಗೆ ಬರುವಂತಾಗಲಿ ಎಂಬುದೇ. ಹೀಗೆ ಮಾಡದಿದ್ರೆ ಮರು ವರ್ಷ ಮಳೆ ಬರುವುದಿಲ್ಲ, ಎಂಬ ನಂಬಿಕೆ ಜರ್ಮನಿಯ ಕೆಲವು ಪಂಗಡಗಳಲ್ಲಿದೆ. ಕೆಲವೆಡೆ, ಈ ಕೊನೆಯ ಕಂತೆಯನ್ನು ಹೆಣ್ಣುಮಗಳೇ ತರಬೇಕೆ'ಂಬ ನಿಯಮವೂ ಇದೆ. ಪ್ರಕೃತಿಯೊಂದಿಗಿನ ಬೆಸುಗೆಯಿಂದಾಗಿ ಮನುಷ್ಯಆಚರಣೆಗಳು ಆ ನೆಲೆಗಳಲ್ಲಿಯೇ ಪ್ರಕ್ರಿಯಾತ್ಮಕವಾಗಿರುವುದು ಸ್ಪಷ್ಟ. ಮೇಲಿನ ವಿವರದಂತೆ ಜಗತ್ತಿನಾದ್ಯಂತ ಮಳೆ ಕುರಿತ ಆಚರಣೆಗಳಲ್ಲಿ ಆದಿಮಪ್ರಜ್ಞೆ ಕಂಡುಬರುತ್ತಿರುವುದು. ಜನಾಂಗೀಯದೃಷ್ಟಿಯಲ್ಲಿ ಏಕತೆಯನ್ನು ಹೇಳುವಂತಿದೆ. ಜಗತ್ತನ್ನು ನಿಯಂತ್ರಿಸುವ ಮಳೆಯಕ್ರಿಯಾಚರಣೆಗಳು ಎಲ್ಲೆಲ್ಲಿಯೂ ಕಾಣಸಿಗುತ್ತವೆಯೆಂಬುದು ಸ್ಪಷ್ಟವಾಗುತ್ತದೆ. ಮೇಲಿನ ವಿವರವನ್ನು ಗಮನಿಸಿದ ಮೇಲೆ ಮಳೆಗೆಸಂಬಂಧಿಸಿದ ಆಚರಣೆಗಳನ್ನು ಸ್ಥೂಲವಾಗಿ;

೧. ಆಹ್ವಾನ ಪ್ರಕ್ರಿಯಾತ್ಮಕ ಆಚರಣೆಗಳು

೨. ನಿಷೇಧ ಪ್ರಕ್ರಿಯಾತ್ಮಕ ಆಚರಣೆಗಳು

ಗಳೆಂದು ವಿಭಾಗಿಸಿ ಅವುಗಳಲ್ಲಿ ಉಪವಿಭಾಗಗಳಾಗಿಸಿಕೊಂಡು ಅಧ್ಯಯನ ಮಾಡಬಹುದಾಗಿದೆ.

**ಆಹ್ವಾನ ಪ್ರಕ್ರಿಯಾತ್ಮಕ ಆಚರಣೆಗಳು**

ಪ್ರಕ್ರಿಯಾತ್ಮಕ ಆಚರಣೆಗಳು ಜೀವನ ವರ್ತನಾಗಳಿಗೆ ಸಂಬಂಧಿಸಿದರೆ, ನಿಷೇಧಾತ್ಮಕ ಪ್ರಕ್ರಿಯೆ ಜೀವನಾಶ ಸಂದರ್ಭಕ್ಕೆ ಅಪಾಯದಿಂದ ಪಾರಾಗಲುಕೈಗೊಳ್ಳುವ ಆಚರಣೆಯಾಗಿದೆ. ಅನಾವೃಷ್ಟಿಯಾದಾಗ ಮಳೆಯನ್ನು ಕರೆಯುವ ಆಚರಣೆಗಳು ನಡೆಯುತ್ತವೆ. ಅಂತೆಯೇ ಅತಿವೃಷ್ಟಿಯಾದಾಗ ಜೀವಪೋಷಕವಾದ ಮಳೆಯೇ ಜೀವಕಂಟಕವಾದಾಗ ಅದನ್ನು ತಡೆಯಲು ಸಹ ಮಾನವ ಆಚರಣೆಗಳನ್ನು ಕೈಗೊಳ್ಳಬೇಕಾಗುತ್ತದೆ. ಇಂತಹವುಗಳ ಪರಿಣಾಮ ಫಲಿತಾಂಶ ಏನೇ ಆದರೂ ನಂಬಿಕೆ ಮಾತ್ರ ಆಚರಣೆಗೆ ಬರುವಂತಹುದಾಗಿದೆ.

ಮಳೆಯನ್ನು ನಂಬಿ ಜೀವನಸಾಗಿಸುವ ಜನಪದರು ಮಳೆ ಬರದಿದ್ದಾಗ ಆಗುವ ದಿಗಿಲು, ಸಂಕಟ, ದಿಕ್ಕುತೋಚದ ಸ್ಥಿತಿ ಮುಂತಾದವುಗಳನ್ನು ಜನಪದಸಾಹಿತ್ಯದಲ್ಲಿ ವಿಪುಲವಾಗಿ ಗುರುತಿಸಬಹುದಾಗಿದೆ. ಮಳೆಯು ದೂರವಾದಾಗ ಮೃತ್ಯುವು ಹತ್ತಿರವಾಗುವ ಚಿತ್ರಣವನ್ನು ಮಳೆರಾಯನಹಾಡು ಕಟ್ಟಿಕೊಡುತ್ತದೆ. ಮುಂಗಾರುಮಳೆಗೆ ಎಂದು ಆಮೆಗಳಿಗೆ ಮದುವೆಮಾಡುವ ಸಂಪ್ರದಾಯ ಹುಬ್ಬಳಿ ಕಡೆ ಚಾಲ್ತಿಯಲ್ಲಿದೆ. ನೀರಿನಲ್ಲಿರುವ ಆಮೆಗಳನ್ನು ಹೊರತೆಗೆದು ಅವಕ್ಕೆ ಮದುವೆ ಮಾಡಿದರೆ ಮಳೆ ಸುರುಸುತ್ತಾನೆ ಎಂಬ ನಂಬಿಕೆಯ ಆಧಾರದ ಮೇಲೆ ಹುಬ್ಬಳ್ಳಿ ಸುತ್ತಮುತ್ತ ಆಮೆಗಳಿಗೆ ಮದುವೆ ಮಾಡುತ್ತಾರೆ. ಮಹಾಂಕಾಳಿ ಬನ್ನಿಗಿಡದ ಕೆಳಗೆ ವಧು-ವರರನ್ನು ಇಟ್ಟು ಹನುಮಂತ ಹಾಗು ನಾಗದೇವತೆಯ ಸನ್ನಿದೆಯಲ್ಲಿ ಶಾಸ್ತ್ರೋಕ್ತವಾಗಿ ಮದುವೆ ಮಾಡುವರು. ಹೆಣ್ಣು ಆಮೆಗೆ ಮಂಗಳ ಸೂತ್ರ ಕಟ್ಟುವರು. ಸುಮಂಗಲೆಯರು ಆರತಿ ಬೆಳಗಿ, ಅಕ್ಷತೆ ಹಾಕುವರು.

**ಹಾಡು ಒಂದು:**

'ಹಸುವಿನ ಸೊಸಿಮುಗಲು ಎದ್ದವೆ
ಬಾಣಂತಿ ಕಪ್ಪು ಬಳದಂಗೆ । ಮಳಿರಾಯ
ಬೋರಾಡುತವನೆ ಮುಗುಲಿಲ್ಲ
ಅಪ್ಪನಿಲ್ಲದೆ ಸೋಪ್ಪಾದೋ । ಈ ಭೂಮಿ
ಸಪ್ಪೆದಂಟಾದೊ ದನಕರು । ದೇವಿಂದ್ರರಾಯ
ಅಪ್ಪ ಕಾತಿರಿಕೆ ಕರುಣಾಗೋ
ಅಣ್ಣನಿಲ್ಲದ ಹಣ್ಣಾದೋ ಈ ಭೂಮಿ
ಅಣ್ಣೆಸೊಪ್ಪಾದೊ ದನಕರ । ದೇವಿಂದ್ರರಾಯ

ಅಣ್ಣ ಕಾತಿರಿಕೆ ಕರುಣಾಗೊ

ಬಿತ್ತಿ ಬಂದ ತಮ್ಮಯ್ನ ಬಿತ್ತಿದ ಸುದ್ದಿಯ ಕೇಳಿ

ಬಿತ್ತಿ ಬಂದೆವ್ವ ಮಳಿಯಿಲ್ಲ ನಿನ್ನ ಕೊರಳೊಳ್ಳಿ

ಮುತ್ತೀನಂಗವೆ ತೆನಿಜೋಳ

ಹರಗಿ ಬಂದ ಅಣ್ಣಯ್ನ ಹರಗಿದ ಸುದ್ದಿಯ ಕೇಳಿ

ಹರಗಿ ಬಂದೆವ್ವ ಮಳೆಯಿಲ್ಲ । ನಿನ್ನ ಕೊರಳೊಳ್ಳ

ಹವಳದಂಗವೆ ತೆನಿಜೋಳ

ಅಂಬಾರದಲ್ಲಿ ತುಂಬ್ಯಾಡೊ ಮಳಿರಾಯ

ಗೊಂಬೆ ಹಚ್ಚುಡದ ದೊರಿಮಗನೆ।ನೀನಿಲ್ಲದೆ

ನಿಸ್ತ್ರೆ ಹಾಕಿದ ಪೈರು ಉರಿದ್ಹೋದೊ

ಆಕಾಸದಲಿ ಆತಾಡೊ ಮಳಿರಾಯ

ತೋಪಿನ್ಹಚ್ಚುಡುವ ದೊರಿಮಗನೆ । ನೀನಿಲ್ಲದೆ

ನಿಸ್ತ್ರೆ ಹಾಕಿದ ಪೈರು ಉರಿದ್ಹೋದೋ

ಗುಡುಗಿದ ಗುಡುಗಿದ ಗುಬ್ಜೀಲಿ ಮಿಂಚಿದ

ಹೆಬ್ಬೂರಿನ ಮ್ಯಾಲೆ ಮಳಿ ಬಿದ್ಯೊ । ನಂಜನಗೂಡು

ತೇರಿನ ಮ್ಯಾಲೆ ಹನಿಬಿದ್ಯೊ।

ಕುಂಟೆ ಹುಣಸೇಲಿ ಕುಟ್ಯಾನೆ ಮಳಿರಾಯ

ಹತ್ತು ಸಾವಿರದ ಹಡಗಿನ । ಏರಿಯ ಮ್ಯಾಲೆ

ನಿಸ್ತ್ರೀರ ಸೆರಗ ನೆನಸ್ಯಾಲೆ।

ಸಾಲಹುಣಸೇಲಿ ಸಾರಿಸ್ಯಾನೆ ಮಳೆರಾಯ

ಆರುಸಾವಿದ ಹಡಗಿನ । ಏರಿಯ ಮ್ಯಾಲೆ

ನಾರೀರ ಸೆರಗ ನೆನಿಸ್ಯಾನೆ

ಒಂದು ಬಂಡೀಲಿ ಹೂವು ಒಂದು ಬಂಡೀಲಿ ಕಾಯಿ

ಮುಂದಲ ಬಂಡೀಲು ಮಳಿರಾಯ । ಕೂತಗಂಡು

ಕಾಲ ನೀಡ್ಯವನೆ ಮುಗುಲಿಗೆ

ಆರು ಬಂಡೀಲಿ ಹೂವು ಹತ್ತು ಬಂಢೀಲಿ ಕಾಯಿ

ಮುಂದಲ ಬಂಡೀಲ ಮಳಿರಾಯ । ಕೂತುಗಂಡು

ಕತ್ತ ನೀಡ್ಯವನೆ ಮುಗುಲಿಗೆ

ಚಿಕ್ಕ ಚಿಕ್ಕ ಸೌತೆಕಾಯಿ ಚಿಕ್ಕ ಮೂಟೆ ಕಟ್ಟಿ

ಕಿಕ್ಕೇರಿ ಮ್ಯಾಲೆ ಬರುವೋನೆ । ದೇವೇಂದ್ರನ

ಕಿಕ್ಕೇಲೆ ಸೂಳೆ ತಡದಾಳೆ

ದೊಡ್ಡ ದೊಡ್ಡ ಸೌತೆಕಾಯಿ ದೊಡ್ಡ ಮೂಟೆ ಕಟ್ಟಿ

ದೊಡ್ಡೇರಿ ಮ್ಯಾಲೆ ಬರುವೊನೆ । ದೇವೇಂದ್ರನ

ದೊಡ್ಡೇರಿ ಸೂಳೆ ತಡದಾಳೆ

ಮೂಡಲಾಗಿ ಹುಯ್ಯೋ ಮುತ್ತಿನ ಸಾಲೆ ಮಳೆ

ಹೆಗ್ಗಯ್ಯ ಕುಂತಿ ನನ್ನವ್ವೆ । ಊರಿಗೆ

ಜಗ್ಗಿಸಿ ಹುಯ್ಯೋ ಮಳೆರಾಯ

ಮಳೆರಾಯನ ಹೆಂಡತಿ ಮಕ್ಕಳೊಂದಿಗಿತ್ತಿ

ಮಳಿ ಬಂದರೆಲ್ಲಿ ತಳಿಗ್ಯಾಳೆ । ಹೆರಗನ್ಹಳ್ಳಿ

ಎಳಿಯ ಹೊಂಬಾಳೆ ಸುಳಿ ಒಳಗೆ ।

ಮಳಿರಾಯ ಹುಯ್ಯಾಲಿ ಕೆರಿರಾಯ ತುಂಬಲಿ

ಹನ್ನೆರಡು ಕೋಡಿ ಹರಿಯಾಲಿ । ಹೆರಗನ್ಹಳ್ಳಿ

ಸಣ್ಣಕ್ಕಿ ಬೈಲು ಬೆಳೀಯಾಲಿ

**ಹಾಡು ಎರಡು:**

ಯಾತಕ್ಕೆ ಮಳೆ ಹೋದವೋ – ಶಿವ ಶಿವ

ಲೋಕ ತಲ್ಲಣಿಸುತಾವೋ

ಬೇಕಿಲ್ಲದಿದ್ದರೆ ಬೆಂಕಿಯ ಮಳೆ ಸುರಿದು

ಉರಿಸಿ ಕೊಲ್ಲಲು ಬಾರದೇ

ಹೊಟ್ಟೆಗೆ ಅನ್ನ ಇಲ್ಲದಲೇ

ನಡೆದರೆ ಜೋಲಿ ಹೊಡೆಯುತಲೇ

ಪಟ್ಟೆದಾನೆಯಂಥ ಸ್ತ್ರೀಯರು ಸೊರಗಿ

ಸೀರೆ ನಿಲ್ಲದಾಗಿದೆ ಸೊಂಟದಲೆ

ಹಸುಗೂಸು ಹಸಿವಿಗೆ ತಾಳದಲೆ

ಅಳುತಲಿವೆ ರೊಟ್ಟಿ ಕೇಳಿ ಕೇಳಿ

ಹಡದ ಬಾಣಂತಿಗೆ ಅನ್ನವಿಲ್ಲದಲೆ
ಏರುತಲಿವೆ ಮುಂಗೈಗೆ ಬಳಿ
ಯಾವ ಕಡೆ ಹೋದರೂ ವನವಾಸ
ತಾಣ ನದಿ ಇಲ್ಲಿ ಯಾವ ದೇಶ
ಎಲ್ಲಿ ನೋಡಿದರೂ ಒಂದೇ ಶಬ್ದ
ದಯಮಾಡೋ ನೀ ಜಗದೀಶಾ
ಒಕ್ಕಲು ಮಕ್ಕಳಂತೇ ಅವರಿನ್ನು
ಮಕ್ಕಳ ಮಾರಿ ಉಂಡಾರೋ
ಮಕ್ಕಳನು ಮಾರ್‍ಯುಂಡು ದುಃಖ ಮಾಡ್ತಾರ
ಮುಕ್ಕಣ್ಣ ಮಳೆ ಕರುಣಿಸೋ[೨೫]

ಇಂಥ ಇಕ್ಕಟ್ಟು ಮತ್ತು ಧಾರುಣ ಸ್ಥಿತಿಗಳು ನಮ್ಮನ್ನು ಕಂಗಾಲಾಗಿಸಿದಾಗ ಆಕಸ್ಮಿಕವಾಗಿ ಆಚರಣೆಗಳಿಗೆ ವ್ಯಕ್ತಿ ಮೊದಲಾಗುತ್ತಾನೆ. ದೈವ ತನ್ನನ್ನು ನಾಶದ ಹಂಚಿಗೆ ತರುತ್ತಿದೆ ಎಂಬ ಚಿಂತೆ ಬದುಕಬೇಕೆಂಬ ಆಶಾಭಾವನೆ ಆಚರಣೆಗಳ ಹಿಂದಿನ ಒತ್ತಡವಾಗಿರುತ್ತದೆ. ಮೇಲಿನ ಎರಡು ಗೀತೆಗಳು ಆಚರಣೆಯ ಒತ್ತಡಕ್ಕೆ ಮೊದಲಾಗುವ ಪೂರ್ವದ ಸನ್ನಿವೇಶವನ್ನು ಕಟ್ಟಿಕೊಳ್ಳುವುದಷ್ಟೇ ಅಲ್ಲದೆ ಆಚರಣೆಗಳಿಗೆ ಒತ್ತಾಯಿಸುತ್ತವೆ. ಮಾನವಚರಿತ್ರೆಯಲ್ಲಿ ಕೃಷಿಯೂ ಒಂದು ಪ್ರಮುಖ ಘಟ್ಟವಾಗಿದ್ದು, ಅದು ಅವಲಂಬಿತವಾಗಿರುವುದು ಮಳೆಯನ್ನು ಎಂಬುದನ್ನು ಮರೆಯುವಂತಿಲ್ಲ. ಜೀವನವಿಧಾನಗಳನ್ನು ನಿರ್ವಚಿಸುವಲ್ಲಿ ನಮಗೆ ಸಿಗುವ ಚಾರಿತ್ರಿಕ ಸಂಗತಿಗಳಲ್ಲಿ ಮಳೆಯನ್ನು ಹೊರತುಪಡಿಸಿ ನಿರ್ವಚಿಸಲಾಗುವುದಿಲ್ಲ. ಜೀವಪೋಷಕವಾದ ಮಳೆಯು ಸರ್ವನಾಶಿನಿಯಾಗಿಯೂ ಪ್ರವೃತ್ತವಾಗುತ್ತದೆ. ಇಂಥ ಬರ್ಭರತೆಯನ್ನು ಈ ಹಾಡುಗಳು ನಿರೂಪಿಸುತ್ತವೆ. ಆಶಾಭಾವನೆಯು ಕಮರಿದ ಜೀವನ ಚಿತ್ರಣ ಇಲ್ಲಿದೆ. ಮನುಕುಲದ ಮುಂದುವರಿಕೆಗೆ ಮಳೆಯ ಮಹತ್ವವನ್ನು ಈ ಗೀತೆಯು ಸಾದರಪಡಿಸುತ್ತದೆ.

ಈ ಧಾರುಣ ಸ್ಥಿತಿ ಮಾನವಕುಲ ನಾಶಕ್ಕೆ ಕಾರಣವಾಗುವ ಅಂಶವಾಗಿರುವುದರಿಂದ ವಿನಾಶದ ದುರಂತವನ್ನು ಅರಿತ ಜನಪದರು ಅದಕ್ಕೆ ಕಾರಣವಾಗುವ ದೈವಕ್ಕೆ ಮೊರಹೋಗುವ ಮೂಲಕ ಜೀವ ಸಂಕುಲದ ಮುಂದುವರೆಕೆಗೆ ಆಚರಣೆಗಳನ್ನು ಒಪ್ಪಿಕೊಳ್ಳುತ್ತಾರೆ. ಮಳೆಯನ್ನು ಕುರಿತ ಆಚರಣೆಗಳಲ್ಲಿ ಕೆಲವನ್ನು ಈ ಮುಂದಿನಂತೆ ನೋಡಬಹುದು.

## ಸೌಮ್ಯ ಆಚರಣೆಗಳು

### ಮಳೆರಾಯನ ಪೂಜೆ

ಮಳೆ ಸಂಬಂಧಿಯಾದ ಅತಿಮುಖ್ಯವಾದ ಆಚರಣೆಯಲ್ಲಿ ಮಳೆರಾಯನಪೂಜೆ ಕೂಡ ಗಮನಾ ರ್ಹವಾದುದು. 'ಮಳೆಯನ್ನು ಕುರಿತ ವಿಶೇಷ ಪೂಜೆಯೇ ಈ ಮಳೆರಾಯನ ಪೂಜೆ. ಈ ಪೂಜೆಯು ಪ್ರಪಂಚದಾದ್ಯಂತ ಪ್ರಚಲಿತದಲ್ಲಿದೆ. 'ಮಳೆಯಿಲ್ಲದೆ ಬೆಳೆಯಿಲ್ಲ; ಬೆಳೆಯಿಲ್ಲದೆ ಬಾಳಿಲ್ಲ' ಎನ್ನುವಂತೆ ರೈತನಿಗೆ ಮಳೆರಾಯನೇ ದೊಡ್ಡ ದೇವರು. ಅವನೇ ಸರ್ವಸ್ವ. ಮಳೆಯ ಅಭಾವದಿಂದ ಬರಗಾಲದಬವಣೆಗೆ ಸಿಲುಕಿದ ರೈತ ಮಳೆರಾಯನನ್ನು ಒಲಿಸಿಕೊಳ್ಳಲು ಅವನ ಆರಾಧನೆಯಲ್ಲಿ ತೊಡಗುತ್ತಾನೆ'[1]. ಮಳೆರಾಯನ ಪೂಜೆಯನ್ನು ಸಾಮಾನ್ಯವಾಗಿ ಮುಂಗಾರು ಪ್ರಾರಂಭದ ಏಪ್ರಿಲ್-ಮೇ ತಿಂಗಳ ಸಮಯದಲ್ಲಿ ಆಚರಿಸುತ್ತಾರೆ. ಊರಿನ ಎಲ್ಲರೂ ನಿಗದಿಯಾದ ಒಂದು ದಿನ ಒಂದೆಡೆ ಸೇರುತ್ತಾರೆ. ಮಣ್ಣಿನಲ್ಲಿ ಬಸವನನ್ನು ಮಾಡುತ್ತಾರೆ. ಆ ಮಣ್ಣಿನ ಬಸವನಮೂರ್ತಿಯ ಹೊಟ್ಟೆಯಭಾಗಕ್ಕೆ ಒಂದು ಕಪ್ಪೆಯನ್ನು ಸೇರಿಸುತ್ತಾರೆ. ಮಳೆರಾಯನ ಸಂಕೇತವಾದ ಈ ಕಪ್ಪೆ ಅರಚಿದರೆ ಮಳೆಯಾಗುತ್ತದೆಯೆನ್ನುವ ನಂಬಿಕೆಯ ಹಿನ್ನೆಲೆಯಲ್ಲಿ ಈ ರೀತಿ ಮಾಡಿರಲು ಸಾಧ್ಯ. ಬಸವನ ಮೂರ್ತಿಗೆ ಬೇವಿನಸೊಪ್ಪನ್ನು ಸಿಕ್ಕಿಸುತ್ತಾರೆ. ಗಂಧದಕಡ್ಡಿ, ಕರ್ಪೂರ, ಹಣ್ಣುಕಾಯಿಗಳಿಂದ ಪೂಜೆ ಮಾಡುತ್ತಾರೆ. ಆ ಮಣ್ಣಿನ ಬಸವನಮೂರ್ತಿಯನ್ನು ಸ್ನಾನ ಮಡಿಯಿಂದ ಶುಚಿಯಾಗಿರುವ ಒಬ್ಬ ಹುಡುಗನ ತಲೆಮೇಲೆ ಹೊರಿಸಿಕೊಂಡು ಊರಿನ ಬೀದಿಬೀದಿಗಳಲ್ಲಿ ಮೆರವಣಿಗೆ ಹೋಗುತ್ತಾರೆ. ಪ್ರತಿ ಮನೆಯಮುಂದೆ ಹುಡುಗರು ಮಳೆರಾಯನಿಗೆ ಸಂಬಂಧಿಸಿದ ಹಾಡುಗಳನ್ನು ಹೇಳುವರು.

> ಮಳೇರಾಯ್ನ ಹೆಂಡ್ತಿಮಕ್ಕಳ ತಾಯಿ
> ವೊಕ್ಕಳ ಜ್ವಾಳ ಒಬ್ಬಳೆ ತಿಂದ್ಲು
> ಉಯ್ಯೋ ಉಯ್ಯೋ ಮಳೆರಾಯ

ಈ ರೀತಿಯಾಗಿ ಮೂರು ದಿನಗಳವರೆಗೆ ಭಿಕ್ಷೆ ಎತ್ತಿ ಆಹಾರ ಪದಾರ್ಥಗಳನ್ನು ಸಂಗ್ರಹಿಸುತ್ತಾರೆ. ಹುಡುಗರು ಬೀದಿಬೀದಿಗಳಲ್ಲಿ ಪದಗಳನ್ನು ಹಾಡುತ್ತಾ ಬಂದಾಗ ಮನೆಯ ಹೆಂಗಸರು ಹುಡುಗನ ತಲೆಯ ಮೇಲೆ ಹರಿಯುವಂತೆ ನೀರು ಹುಯ್ಯುತ್ತಾರೆ. ಬಸವನನ್ನು ಹೊತ್ತಿರುವ ಹುಡುಗ ನೀರು ಹುಯ್ಯುತ್ತಿದ್ದಂತೆಯೇ ನಿಂತಲ್ಲಿಯೇ ತಿರುಗುತ್ತಾನೆ. ಆಕಾಶದಿಂದ ಮಳೆ ಬೀಳುವಂತೆ ನೀರು ತುಂತುರು ಹನಿಹನಿಯಾಗಿ ಬೀಳುವುದು. ಈ ದೃಶ್ಯವು ಮಳೆ ಬೀಳುವಂತೆಯೇ ಕಾಣುತ್ತದೆ. ಇದು ಸಾದೃಶ್ಯತೆಯ ಮೇಲಿನ ಅನುಕರಣ ಮಾಟದ ಒಂದು ನಿದರ್ಶನವಾಗಿದೆ. ದೊಡ್ಡವರು, ಹೆಂಗಸರು, ಮಕ್ಕಳು ಗುಂಪುಗುಂಪಾಗಿ ಮೆರವಣಿಗೆಯಲ್ಲಿ ಒಂದು ಮಳೆರಾಯನ ಕುರಿತು ಹಾಡುಗಳನ್ನು ಹಾಡುತ್ತಾರೆ. ಪ್ರತಿ ಮನೆಯಲ್ಲಿಯೂ ಅಕ್ಕಿ, ರಾಗಿಹಿಟ್ಟು, ಕಾಳು, ತರಕಾರಿ, ಮೆಣಸಿನಪುಡಿ, ಉಪ್ಪು ಇತ್ಯಾದಿ ಅಡುಗೆಗೆ

ಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸಿಕೊಂಡು ಊರಿನ ಹೊರಗಿನ ಬಯಲಲ್ಲಿ ಅಡುಗೆ ಮಾಡುತ್ತಾರೆ. ಪ್ರತಿ ಮನೆಯವರೂ ತಪ್ಪದೇ ಪೂಜೆಯಲ್ಲಿ ಭಾಗವಹಿಸುತ್ತಾರೆ. ಬಯಲಿನಲ್ಲಿ ಕೂತು ಎಲ್ಲರೂ ಊಟವನ್ನು ಮಾಡಿಕೊಂಡು ಸಂತೋಷದಿಂದ ತಮ್ಮ ತಮ್ಮ ಮನೆಗಳಿಗೆ ಹಿಂತಿರುತ್ತಾರೆ. ಮಳೆರಾಯನ ಪೂಜೆ ಮಾಡಿದರೆ ಬರುತ್ತದೆ ಅನ್ನುವ ಬಲವಾದ ನಂಬಿಕೆಯ ಹಿನ್ನೆಲೆಯಲ್ಲಿ ಈ ರೀತಿಯ ಆಚರಣೆಗಳು ಉಳಿದುಕೊಂಡು ಬಂದಿವೆ.

ಕ್ಷೇತ್ರಕಾರ್ಯದಲ್ಲಿ ಸಿಕ್ಕ ಮತ್ತೊಂದು ವಿವರದಂತೆ, 'ಮೂಲವಾಗಿ ಈ ಪೂಜೆಯಲ್ಲಿ ಮಳೆ ಬರದೇ ಇರುವ ಕಾಲಕ್ಕೆ ಒಂದು ಹುಡುಗನನ್ನು ಬೆತ್ತಲೆಗೊಳಿಸಿ ತಲೆಯ ಮೇಲೆ ಮಣೆಯನ್ನು ಇಟ್ಟು ಅದರ ಮೇಲೆ ಸಗಣಿ ಅಥವಾ ಮಣ್ಣಿನ ಹುಂಡೆಯನ್ನು ಮಾಡಿ ಇಟ್ಟು ಅದಕ್ಕೆ ಒಂದಿಷ್ಟು ಕರಿಸಿ ಪತ್ರೆಯನ್ನು ಸಿಗಿಸಿ ಮನೆ ಮನೆಗೆ ಹೋಗುವಂತೆ ಸಲಹೆ ನೀಡುತ್ತಾರೆ. ಆ ಹುಡುಗ ಮನೆಯ ಮುಂದೆ ಬಂದಾಗ ಪ್ರತಿಯೊಂದು ಮನೆಯವರು ಮೇಲಿನಿಂದ ನೀರನ್ನು ಸುರುವುತ್ತಾರೆ. ಆಗಾ ಆ ಹುಡುಗ ಹುಯ್ಯೋ ಹುಯ್ಯೋ ಮಳೆರಾಯ ಎಂದು ತಿರಿಗುತ್ತಾನೆ'[೭]. ಇದರಿಂದ ಮಳೆ ಬರುತ್ತೆ ಎಂಬ ನಂಬಿಕೆ ಇದರ ಒಳಾರ್ಥವನ್ನು ನೋಡುವುದಾದರೇ ಇಲ್ಲಿ ಬೆತ್ತಲೆಯಾಗಿರುವ ಹುಡುಗ ಭೂಮಿಯನ್ನು ಹೊತ್ತ ಆದಿಶೇಷರೂಪ ತಲೆಮೇಲಿರುವ ಮಣೆ ಮತ್ತು ಮಣ್ಣು(ಸಗಣಿ) ಭೂಮಿಯ ರೂಪ, ಇನ್ನೂ ಮೇಲೆ ಸುರಿಯುವ ನೀರು ಮಳೆಯರೂಪ, ಭೂಮಿ ಜೀವಕಳೆ. ಬದಲು ನೀರು ಮುಖ್ಯ. ನೀರಿನ ಮೂಲ ಮಳೆ. ಮಳೆಮಲ್ಲಪ್ಪನ ಪೂಜೆ ವಿಶಿಷ್ಟವಾದದ್ದು ಪ್ರಕೃತಿ ಮತ್ತು ಪುರುಷನ ನಡುವಿನ ಅನುಸಂಧಾನವೇ ಮಳೆ ಮಲ್ಲಪ್ಪನ ಪೂಜೆ.

**ಚಂಬಿನ ಪೂಜೆ**

'ಮಳೆ ಬರದಿರುವ ಸಂದರ್ಭಕ್ಕೆ ಎರಡು ಖಾಲಿಚಂಬುಗಳನ್ನು ತೆಗೆದುಕೊಂಡು ದೂರದ ಹೊಲಗಳಲ್ಲೋ ಯಾವುದೋ ಸ್ಥಳಗಳಲ್ಲೋ ನೆಲದಲ್ಲಿ ಗುಂಡಿತೆಗೆದು ಮುಚ್ಚುವುದು. ಅದರಲ್ಲಿ ಒಂದು ಚಂಬಿನಲ್ಲಿ ನೀರುತುಂಬಿ ಇನ್ನೊಂದು ಖಾಲಿಚಂಬನ್ನು ಮಣ್ಣಿನಲ್ಲಿ ಮುಚ್ಚುವುದು. ಹೀಗೇ ಮುಚ್ಚಿದ ನಂತರ ಊರಿನ ದೇವರಾದ ಭೀರಪ್ಪನನ್ನು ಹೊರಡಿಸುವುದು. ಹೊರಡಿಸಿ ಕುರುಹು ಕೇಳುವುದು ಮುಚ್ಚಿಟ್ಟ ಇಬ್ಬರನ್ನು ಬಿಟ್ಟರೆ ಇನ್ಯಾರಿಗೆ ಈ ವಿಷಯವು ತಿಳಿದಿರುವುದಿಲ್ಲ. ಹೊರಡಿಸಿದ ದೇವರು ತುಂಬಿದಚಂಬನ್ನು ಕಿತ್ತರೆ ಅಥವಾ ಆ ಜಾಗಕ್ಕೆ ಹೋದರೆ ಸದ್ಯದಲ್ಲಿ ಅಂದರೆ ಮೂರುದಿವಸದಲ್ಲಿ ಮಳೆಬರುತ್ತದೆ ಎಂಬ ನಂಬಿಕೆ ಇದೆ. ಖಾಲಿಚಂಬನ್ನು ತೋರಿಸಿದ್ದಾರೆ ಮಳೆ ಇನ್ನೂ ದೂರವಿದೆ ಅಥವಾ ಮಳೆ ಬರುವುದಿಲ್ಲ ಎಂಬ ನಂಬಿಕೆ'[೮]. ತುಂಬಿದಚಂಬನ್ನು ಕಿತ್ತಾಗ ಆ ತಕ್ಷಣಕ್ಕೆ ಮಳೆ ಬಂದು ತೋಯಿಸಿಕೊಂಡ ಉದಾಹರಣೆಗಳಿವೆ ಎನ್ನುತ್ತಾರೆ ಗ್ರಾಮಸ್ಥರು. ಊರ ಹೊರಗಿನ ಮೂಕಬಸಪ್ಪನ

ದೇವಸ್ಥಾನಕ್ಕೆ ಊರಿನ ಭೀರಪ್ಪದೇವರು ಊಲಿಗೆಮ್ಮ ದೇವತೆಯನ್ನು ಹೊರಡಿಸಿಕೊಂಡು ಹಡಿಗೆ ಮಾಡಿಕೊಂಡು ಎಲ್ಲರೂ ಪಿಜೃಂಭಣೆಯಿಂದ ದೇವರನ್ನು ಸ್ಮರಿಸುತ್ತಾ ಹೋಗಿ ಮೂಗಬಸಪ್ಪನ ದೇವಸ್ಥಾನದ ಹತ್ತಿರ ತಾವುತಂದ ಅಡಿಗೆಯನ್ನು ಎಡೆಹಾಕಿ ಆಮೇಲೆ ಅದನ್ನು ಪ್ರಸಾದಮಾಡಿ ಎಲ್ಲರೂ ಒಂದಾಗಿ ಊಟಮಾಡಿ ಊರಿನೊಳಗೆ ಬಂದರೆ ಮೂರುದಿವಸದಲ್ಲಿ ಮಳೆ ಬರುತ್ತದೆ ಎಂಬ ನಂಬಿಕೆ ಉಕ್ಕಡಗಾತ್ರಿಯಲ್ಲಿ ಪ್ರಚಲಿತವಿದೆ. ಊರಿನದೇವತೆಗಳಾದ ದುರುಗಮ್ಮ ಆಂಜನೇಯನನ್ನು ಹೊರಡಿಸಿ ತುಂಬಿದಚಂಬು ಮತ್ತು ಖಾಲಿಚಂಬುಗಳನ್ನು ಬಚ್ಚಿಡಲಾಗುತ್ತದೆ. ತುಂಬಿದಚಂಬನ್ನು ಕಿತ್ತರೆ ಮಳೆ ಬರುವುದಾಗಿಯೂ, ಖಾಲಿಚಂಬನ್ನು ಕಿತ್ತರೆ ಮಳೆ ಬರುವುದಿಲ್ಲ ವೆಂಬುದಾಗಿಯೂ ನಂಬಕೆಗಳಿವೆ.

**ಹಟ್ಟಿ ದೈವದ ಪೂಜೆ**

'ನಮಗೆ ಬರ ಬಿದ್ದ ಸಂದರ್ಭದ ಅರಿವು ಇಲ್ಲ. ಆದರೂ ಮಳೆ ಬರದಿದ್ರೆ ದೈವವಾದ ಜುಂಜಪ್ಪನೇ ಕಾರಣ ಒಂದು ಮಳೆತಡವಾದರೆ ಹಟ್ಟಿದೈವ ಜುಂಜಪ್ಪನನ್ನು ಹೊರಡಿಸುತ್ತೇವೆ. ದೇವರನ್ನು ಕೇಳುತ್ತೇವೆ. ಜುಂಜಪ್ಪ ಮೈ ಮೇಲೆ ಬಂದು ಬಾಯಿ ಅಪ್ಪಣೆ ಮಾಡುತ್ತಾನೆ. ಮಳೆ ಇಷ್ಟೇ ದಿವಸದಲ್ಲಿ ಬರುತ್ತದೆ ಎಂದು. ಅಂದರೆ ೩-೫, ೭-೯ ದಿವಸದೊಳಗೆ ಬರುತ್ತದೆ ಎಂದು ಹೇಳಿಗೆ ಆದರೆ ಅಷ್ಟೇ ದಿವಸದಲ್ಲಿಯೇ ಮಳೆಯಾಗುತ್ತದೆ ಎಂಬ ನಂಬಿಕೆ ಇದೆ. ಇಲ್ಲವೆಂದು ಹೇಳಿಕೆಯಾದರೆ ಮಳೆ ಯಾವುದೇ ಕಾರಣಕ್ಕೂ ಬರುವುದಿಲ್ಲವೆಂದು ಅರ್ಥ. ಗೊಲ್ಲಜನಾಂಗದ ದೈವಪುರುಷ ಮೆಲ್ಲಜ್ಜನನ್ನು ಮಳೆಪುರುಷನೆಂದು ಕರೆಯುತ್ತೇವೆ. ಮೆಲ್ಲಜ್ಜನ ದೇವಸ್ಥಾನಕ್ಕೆ ಹೋಗಿ ಮನೆಯಿಂದ ಕಾಳುಕಡ್ಡಿ ಸಂಗ್ರಹಿಸಿ ದಾಸೋಹಮಾಡಿ ಊರ ಜನಕ್ಕೆ ಊಟ ಹಾಕಿದರೆ ಮಳೆ ಬರುತ್ತದೆ.

ಸುಮಾರು ೨೦-೩೦ ಕಿ.ಮೀ ದೂರದ ಹೊಳೆಗೆ ಜುಂಜಪ್ಪದೇವರನ್ನು ಹೊತ್ತು ನಡೆದುಕೊಂಡು ಹೋಗುತ್ತಾರೆ. ಮಡಿಮೈಲಿಗೆ ಮುಖ್ಯ ಯಾವುದೇ ಕಾರಣಕ್ಕೂ ದೇವರಿಗೆ ಯಾವುದೇ ವಾಹನವನ್ನು ಬಳಸುವಂತಿಲ್ಲ. ದೇವರನ್ನು ಹಿಂದೆ ಹಾಕಿ ಮುಂದೆ ಹೋಗಿ ಹೊಳೆ ಮುಟ್ಟುವಂತಿಲ್ಲ. ಜುಂಜಪ್ಪನನ್ನು ಹೊತ್ತವರು ಮುಂದೆ ಮುಂದೆ ಹೋದಂತೆ ಹಿಂದೆ ಹಿಂದೆ ಬರಿಗಾಲಲ್ಲಿ ನಡೆದು ಹೋಗಬೇಕು. ಬೆಳಿಗ್ಗೆ ಹೊತ್ತುಟ್ಟೊಕ್ಕೂ ಮುಂಚೆ ಪ್ರಯಾಣ ಸುರುಮಾಡಬೇಕು ಹೊತ್ತುಇಳಿಮುಖ ಸಂದರ್ಭಕ್ಕೆ ಪೂಜೆಮುಗಿದು ಊರುಸೇರುವಷ್ಟರಲ್ಲಿ ಕತ್ತಲಾಗಿರುತ್ತದೆ. ಇದರಿಂದ ನಮ್ಮ ಊರಿಗೆ ಯಾವುದೇ ರೀತಿಯ ತೊಂದರೆ ಇಲ್ಲ ಮತ್ತು ಮಳೆಗಾಗಿಯೇ ವರ್ಷಕ್ಕೊಂದು ಸಾರಿ ತುಂಬಿರದ ಹೊಳೆಯನ್ನು ದೇವರಿಗೆ ತೋರಿಸುವ ಪ್ರಯತ್ನ ಮಾಡುತ್ತೇವೆ ಒಂದುವರ್ಷ ಊರಿನಲ್ಲಿ ಗಲಾಟೆಯಾಗಿ ಹೊಳೆ ಪೂಜೆ ಮಾಡದೇ ಇದ್ದಾಗ, ಕೆಲವು ಗ್ರಾಮಸ್ಥರು ದೇವರನ್ನು ಹೊರಡಿಸಿ ಕೇಳಿದರು ಆಗ ಮೈಮೇಲೆ ಬಂದ ದೇವರು ಹೇಳಿತ್ತು 'ಇನ್ನೂ ಕುತ್ತಿಗೆಗೆ ಬಂದಿಲ್ಲವಲ್ಲ ಏಕೆ ಯೋಚನೆ ಮಾಡುತ್ತೀರಾ'

ಎಂದು. ಆಗ ಆ ಮಾತಿನ ಅರ್ಥವಾಗದ ಜನ ಸುಮ್ಮನಾದರು. ನಂತರ ಬೆಳೆ ಹುಟ್ಟಿತ್ತು ಮೊಣಕಾಲುವರೆಗೂಬಂತು, ಸೊಂಟದವರೆಗೂಬಂತು ಎದೆಯ ವರೆಗೂಬಂತು ಕುತ್ತಿಗೆಗೆಬಂತು ಇನ್ನೇನು ಕಾಳುಕಟ್ಟಬೇಕೆಂಬ ಸಂದರ್ಭಕ್ಕೆ ಮಳೆಹೋಗಿ ಬೆಳೆಒಣಗಿ ಜನರ ಕುತ್ತಿಗೆಗೆಬಂತು ಆಗದೇವರ ಮಾತನ್ನು ನೆನಸಿಕೊಂಡ ಜನ ಮತ್ತೇ ಗೇವರನ್ನು ಹೊರಡಿಸಿ ಕೇಳಿದರೆ ಹೊಳೆ ಪೂಜೆ ಮಾಡದಿರುವುದೇ ಇದಕ್ಕೆ ಕಾರಣ ಎಂದು ತಿಳಿದು ನಂತರ ಚಾಚೂ ತಪ್ಪದೇ ಪ್ರತಿ ವರ್ಷ ಹೊಳೆ ಪೂಜೆ ನಡೆಯುತ್ತದೆ". ಈ ಆಚರಣೆ ಹರಪ್ಪನಹಳ್ಳಿ ಮತ್ತು ಜಗಳೂರು ತಾಲ್ಲೂಕುಗಳ ಗೊಲ್ಲರಹಟ್ಟಿಯಲ್ಲಿ ಕಂಡು ಬರುತ್ತದೆ.

**ಮಳೆಬೀಗ ತರುವುದು**

ಮಳೆರಾಯನ ಅರಮನೆಗೆ ಬೀಗ ಬಿದ್ದಿವೆ. ಆ ಬೀಗವನ್ನು ತಂದು ಅರಮನೆಯ ಬಾಗಿಲುತೆರೆದರೆ ಮಳೆ ಬರುತ್ತದೆ ಎಂಬ ನಂಬಿಕೆ ಹಲವರದು. 'ಮಳೆಬೀಗ ತರುವ ಸಂಪ್ರದಾಯ ಉಜ್ಜಿನಿಯಲ್ಲಿ ಜರುಗುತ್ತದೆ. ಮಳೆಬೀಗ ಇರುವುದು ಉಜ್ಜಿನಿಯಿಂದ ಸುಮಾರು ೧೦೦ ಕಿ.ಮೀ ದೂರದ ಕೊಪ್ಪಳತಾಲ್ಲೂಕು ಸಿಂದೋಗಿಯಲ್ಲಿ. 'ಒಂಬತ್ತು ಮಂದಿ ಆಯಾಗಾರರು ಉಜ್ಜಿನಿ ಗ್ರಾಮದಿಂದ ಹೊರಬಿದ್ದು ಜಿದ್ದಿಗೆ ಬಿದ್ದವರಂತೆ ಓಡೋಡಿ ಹೋಗಿ ಮಳೆಬೀಗ ತರಬೇಕು. ಮಳೆಬೀಗ ತರುವ ಒಂಬತ್ತುಮಂದಿಯನ್ನು ಆಯಗಾರರು ಎನ್ನುತಾರೆ. ಆಯಗಾರರಲ್ಲಿ ವರ್ಣಭೇದವಿಲ್ಲ, ಮಡಿವಾಳರು, ವಾಲ್ಮೀಕಿ, ಕುರುಬರು, ಕೂರವರು, ಇವರಲ್ಲಿರುತ್ತಾರೆ. ಇಲ್ಲಿ ಮಾನವರೆಲ್ಲ ಒಂದೇ ಎಂಬ ತತ್ವಪ್ರತಿಪಾದಿತವಾಗುತ್ತದೆ. ಗುಂಪಿನ ಮುಖ್ಯಸ್ಥನಿಗೆ ವಿಭೂತಿಉಂಡೆಗಳನ್ನು ಅರ್ಪಿಸುತ್ತಾರೆ. ಪವಿತ್ರವಾದ ಕರಿಶಿಖರದ ಮೇಣದಉಂಡಿಯನ್ನು ನೀಡಲಾಗುತ್ತದೆ. ಅನಂತರ ಹೊಚ್ಚಹೊಸ ಕರಿಕಂಬಳಿ ಕೊಡುವರು. ಆಯಾಗಾರರಿಗೆ ಅಲ್ಲಿನ ಸದ್ಧರ್ಮಪೀಠ ಮತ್ತು ಗ್ರಾಮಸ್ಥರು ಕೆಲವು ಷರತ್ತುಗಳನ್ನು ಹಾಕುತ್ತಾರೆ. ಇದು ನಿಷ್ಠೆಯಿಂದ ಜರುಗುವ ಪಾದಯಾತ್ರೆ. ಕಣ್ಣಿಗೆ ನೇರವಾಗಿ ಕಂಡದ್ದೆ ದಾರಿ. ಹೊಲ, ಕಾಡು ಮೇಡುಗಳನ್ನು ನಡದೇ ಸಾಗಬೇಕು. ಯಾರು ಚಪ್ಪಲಿ ಮೆಟ್ಟುವಂತಿಲ್ಲ. ಯಾವಕಾರಣಕ್ಕೂ ಗ್ರಾಮಗಳ ಮಧ್ಯೆಸಂಭಾಷಣೆ ನಡೆಯಬಹುದು.

ಶನಿವಾರವೇ ಹೊರಡಬೇಕು ಎಂಬ ನಿಯಮವಿದೆ. ಅಂದು ರಾತ್ರಿ ಕಾಡಿನಲ್ಲಿ ತುಂಗಭದ್ರೆ ನದಿಯಲ್ಲಿ ಹರಿಗೋಲಿನಲ್ಲಿ ಸಾಗಿ ಮುಂದೆ ಹೋಗುತ್ತಾರೆ. ಮುಂಜಾಗ್ರತಾಕ್ರಮವಾಗಿ ಶ್ರೀಪೀಠದಿಂದ ಮುದ್ರೆಯೊತ್ತಿದ ಪತ್ರವನ್ನು ಹೊಯ್ಯುತ್ತಾರೆ. ಇದರ ಜೊತೆ ಊರ ಗ್ರಾಮಪಂಚಾಯ್ತಿ ಮತ್ತು ಪೋಲಿಸಠಾಣೆ ಹಾಗೂ ತಹಶೀಲ್ದಾರರು ಕೊಟ್ಟಪತ್ರಗಳೂ ಇರುತ್ತವೆ. ಪೂರ್ವಕಾಲದಿಂದಲೂ ನಡೆದುಕೊಂಡು ಬಂದ, ಮಳೆಬೀಗ ತರುವ ಪದ್ಧತಿಗೊತ್ತಿರುವುದರಿಂದ ದಾರಿಮಧ್ಯದಲ್ಲಿ ಸಿಗುವ ಹಳ್ಳಿಗರು ಇವರನ್ನು ಕಾಣುತ್ತಿದ್ದಂತೆ ಪೂಜ್ಯ ಭಾವನೆಯಿಂದ ದಾರಿಬಿಟ್ಟು ಸರಿಯುತ್ತಾರೆ. ಸತತ

ಎರಡುದಿನ ಪದಯಾತ್ರೆಯಿಂದಾಗಿ ಅಂಗಾಲಿನಲ್ಲಿ ಬೊಬ್ಬೆ ಬರುವ ಸಂಭವವೂ ಉಂಟು. ನಡೆಯಲಾಗದಷ್ಟು ನಿತ್ರಾಣಗೊಳ್ಳುವುದೂ ಉಂಟು. ಹಾಗೆಂದು ಯಾತ್ರೆ ಮೊಟಕುಗೊಳಿಸಿ ಹಿಂದಿರುಗುವಂತಿಲ್ಲ. ಆಸ್ಪತ್ರೆಗೂ ಸೇರುವಂತಿಲ್ಲ. ಭಾನುವಾರ ರಾತ್ರಿ 'ಮಳೆಬೀಗ' ತರುವ ತಂಡವನ್ನು ಸಿಂದೋಗಿ ಗ್ರಾಮಸ್ಥರು ಸ್ವಾಗತಿಸಿ, ಮೆರವಣಿಗೆಯಲ್ಲಿ ಮರುಳಸಿದ್ದಪ್ಪನ ದೇವಸ್ಥಾನಕ್ಕೆ ಕರೆತರುತ್ತಾರೆ. ಇದು ಉಜ್ಜಿನಿಸದ್ಧರ್ಮಪೀಠದ ಶಾಖಾಮಠ, ಇಲ್ಲಿದೆ 'ಮಳೆ'. ಮಲ್ಲಿಕಾರ್ಜುನ ಜಗದ್ಗುರುಗಳ ಗದ್ದುಗೆ, ನೂರಾರೂವರ್ಷಗಳ ಹಿಂದೆ 'ಮಳೆ' ಮಲ್ಲಿಕಾರ್ಜುನರು ಉಜ್ಜಿನಿಪೀಠದಲ್ಲಿ ಜಗದ್ಗುರುಗಳಾಗಿದ್ದರು. ವೀರಶೈವಧರ್ಮ ಪ್ರಚಾರಕ್ಕೆಗೊಂಡು ಶ್ರೀಗಳು ಸಂಚರಿಸುತ್ತಾ ಸಿಂದೋಗಿಗೆ ಬಂದರಂತೆ. ಶಿವತತ್ವಕ್ಕೆ ಮಾರು ಹೋದ ಚರ್ಮಕಾರರಿಗೂ ಅವರು ಲಿಂಗದೀಕ್ಷೆ ನೀಡಿದರಂತೆ, ಈ ಕರ್ಮಯೋಗಿಗಳು ವೃತ್ತಿಯಲ್ಲಿ ಚರ್ಮ ಕಾರರಾದರೂ ಆಚರಣೆಯಲ್ಲಿ ಶೈವರಾದರು. ಶ್ರೀಗಳು ಸಿಂದೋಗಿಯಿಂದ ಹಿಂದೆ ಮರಳುವಾಗ 'ಮಳೆಬೀಗ' ಮರೆತು ಬಂದರು ಎಂಬ ನಂಬಿಕೆ ಉಜ್ಜಿನಿ ಗ್ರಾಮಸ್ಥರದು. ಈ ಘಟನೆ ಘಟಿಸಿ ಶತಮಾನಗಳು ಉರುಳಿವೆ.

ಅಂದಿನಿಂದಲೂ ಐದುವರ್ಷಕ್ಕೊಮ್ಮೆ 'ಮಳೆಬೀಗ' ತರುವ ಸಂಪ್ರದಾಯ ನಡೆಯುತ್ತಾ ಬಂದಿದೆ. ಸಿಂದೋಗಿಯಲ್ಲಿರುವ 'ಮಳೆ' ಮಲ್ಲಿಕಾರ್ಜುನರ ಗದ್ದುಗೆಯನ್ನು, ಲಿಂಗದೀಕ್ಷೆ ಪಡೆದ ವಂಶಸ್ಥರೇ ಪೂಜಿಸುತ್ತಾ ಬಂದಿದ್ದಾರೆ. ಇಲ್ಲಿಂದ ಒಯ್ದಿದ್ದ ಕಂಬಳಿ ಮತ್ತು ವಿಭೂತಿಗಳನ್ನಿ ಅಲ್ಲಿ ಅರ್ಪಿಸುತ್ತಾರೆ. ಸೇರುಜೋಳದ ಬೀಜ ಅಲ್ಲಿ ಅದಲಿ ಬದಲಿಯಾಗುತ್ತವೆ. ಗದ್ದುಗೆಗೆ ವಿಶೇಷಪೂಜೆ ಉತ್ಸವ ನಡೆಯುತ್ತದೆ. ನಂತರ ಸಿಂದೋಗಿಯನ್ನು ಆಯಾಗಾರರು ಸೋಮವಾರ ಬಿಟ್ಟು ಮಂಗಳವಾರ ರಾತ್ರಿ ಉಜ್ಜಿನಿ ತಲುಪುತ್ತಾರೆ.

'ಮಳೆಬೀಗ' ತಂದ ಆಯಾಗಾರರನ್ನು ಉಜ್ಜಿನಿಗ್ರಾಮಸ್ಥರು ಆದರಿಸಿ ಸ್ವಾಗತಿಸಿ, ಮೆರವಣಿಗೆಯೊಂದಿಗೆ ಊರೊಳಗೆ ಕರೆತರುತ್ತಾರೆ. ವರುಣದೇವನ ಪ್ರತಿನಿಧಿಗಳಂತೆ ಆಯಾಗಾರರು ಗ್ರಾಮವನ್ನು ಪ್ರವೇಶಿಸುತ್ತಾರೆ. ಮರುದಿನ ರೈತರುಮನೆಯಿಂದ ಸೇರು ಎರಡುಸೇರು ಜೋಳ ತಗೊಂಡು ಪೀಠಕ್ಕೆ ಧಾವಿಸುತ್ತಾರೆ. ಸಿಂದೋಗಿಯಿಂದ ತಂದಿದ್ದ ಜೋಳದಲ್ಲಿ ಇದನ್ನು ಮಿಶ್ರಮಾಡಿ ಅದರಲ್ಲಿಂದ ಹಿಡಿ, ಇಲ್ಲವೆ ಬೊಗಸೆ ಜೋಳವನ್ನು ಮನೆಗೆತಂದು, ಮನೆಯ ಜೋಳದಲ್ಲಿ ಮಿಶ್ರಮಾಡಿ ಬಿತ್ತುತ್ತಾರೆ. ಹೀಗೆ ಜೋಳದ ಬದಲಾವಣೆ ಮಾಡುವುದರಿಂದ ಉತ್ತಮಬೆಳೆ, ಸಕಾಲಕ್ಕೆಮಳೆ,ಅಧಿಕ ಇಳುವರಿ ಬರುತ್ತದೆ ಎಂಬುದು ಗ್ರಾಮಸ್ಥರ ನಂಬಿಕೆ. ನಂತರ ಪೀಠದಗದ್ದೆಯಲ್ಲಿರುವ ಮಸಲಟ್ಟಿಬಸವಣ್ಣನಿಗೆ ವಿಶೇಷಪೂಜೆ. ವರುಣನ ಆರಾಧನೆ, ಅನ್ನ ಸಂತರ್ಪಣೆ[೧೦]. ಹೀಗೆ 'ಮಳೆಬೀಗ' ತರವ ಆಚರಣೆ ಕೊನೆಯಾಗುತ್ತದೆ.

**ಭೈರ ಸಿದ್ದೇಶ್ವರನ ಪರುವು**

ಊರಲ್ಲಿ ಅಕ್ಕಿ, ಬೇಳೆ, ಬೆಲ್ಲ ಎತ್ತಿಕೊಂಡು ಗುಡ್ಡದ ಭೈರಸಿದ್ದೇಶ್ವರನ ದಾಸೋಹಮಾಡಿದರೆ ಊಟ ಮುಗಿಯುವುದರೊಳಗೆ ಊಟ ಮಾಡುವವರು ಊಟ ಮಾಡಲಾಗದಷ್ಟು ಮಳೆ ಬರುತ್ತದೆ. ಎಂಬ ನಂಬಿಕೆ ಹರಪ್ಪನಹಳ್ಳಿ ತಾಲೂಕಿನ ಸತ್ತೂರಿನಲ್ಲಿದೆ.

**ಗಣಪನ ಎಡಬರವು**

'ಗಣಪನ ಹಬ್ಬವಾದ ನಂತರ ಅಳಲುಹುಣ್ಣಿವಿ ಬರುತ್ತದೆ. ಆ ಹುಣ್ಣಿವಿಯಲ್ಲಿ ತಾವು ಬೆಳೆದಬೆಳೆಗಳ ಸ್ವಲ್ಪ ಸ್ವಲ್ಪ ಧ್ಯಾನ್ಯಗಳನ್ನು ತಂದು ಅಡಿಗೆಮಾಡಬೇಕು. ಸೂರ್ಯ ಉದಯಕ್ಕೆ ಮುನ್ನ ಹೊಲಕ್ಕೆಹೋಗಿ ಪೂಜೆ ಮಾಡಿ ಚರುಗಹೊಡೆಯಬೇಕು ಮಧ್ಯಾಹ್ನ ಊಟ ಮಾಡಬೇಕು ಅದೇ ಸಂದರ್ಭದಲ್ಲಿ ಜೋಕುಮಾರಿಗೆ ಮಧ್ಯರಾತ್ರಿಯಲ್ಲಿ ಅಗಸರಮನೆಯಲ್ಲಿ ಚೂರಿ ಹಾಕುತ್ತಾರೆ. ಬೆಳಕು ಅರಿಯವುದರೊಳಗಾಗಿ ಮಳೆಬರುತ್ತದೆ'[೧೧]. ಈ ಆಚರಣೆಗಳು ಹರಪ್ಪನಹಳ್ಳಿ ತಾಲ್ಲೂಕು ಸತ್ತೂರಿನಲ್ಲಿ ಕಂಡು ಬರುತ್ತವೆ.

**ಪಾಪನಾಯಕನ ಮಳೆದೇವರು**

ಚಿತ್ರದುರ್ಗಜಿಲ್ಲೆಯಲ್ಲಿ ವಿಪುಲವಾಗಿ ಕಾಣಿಸಿಕೊಳ್ಳುವ ಮ್ಯಾಸಬೇಡರು, ಮೂಲತಃ ಆಂದ್ರ ಪ್ರದೇಶದಿಂದ ಬಂದು ನೆಲಸಿದವರೆನ್ನುತ್ತಾರೆ. ಇವರು ಈಗ ಕುರಿಸಾಕಿಕೊಂಡು ಜೀವನಸಾಗಿಸುತ್ತಾರೆ. ಶತಮಾನಗಳ ಹಿಂದೆ ಇವರು ಪಶುಪಾಲನೆ ಮಾಡುತ್ತಿದ್ದರಂತೆ .ಕುರಿ ಸಾಕಾಣೆ, ಪಶುಪಾಲನೆಮಾಡಲಿ, ವ್ಯವಸಾಯವನ್ನೇಮಾಡಲಿ ಮಳೆಯಂತು ಬೇಕೇ ಬೇಕು. ಭೂಮಿಗೆಮಳೆ ಬರದಿದ್ದರೆ ಪಶುಗಳಿಗೆ ಮೇವು ದೊರೆಯುವುದಾದರೂ ಎಂತು. ಆದ್ದರಿಂದ ಮಳೆಗಾಗಿ ಮ್ಯಾಸಬೇಡರು ಅನೇಕ ರೀತಿಯ ಆಚರಣೆಗಳನ್ನು ನಡೆಸುತ್ತಾರೆ. ಜಗಳೂರು ಸುತ್ತಿನ ಕೆಲವರಲ್ಲಿ ಮಳೆಗಾಗಿ ಪಾಪನಾಯಕದೇವರನ್ನು ಹೊರಡಿಸುವ ಪದ್ಧತಿಯಿದೆ.

'ಶ್ರಾವಣಮಾಸದ ಮೊದಲನೆಯ ಇಲ್ಲವೇ ಎರಡನೆಯ ಸೋಮವಾರದಂದು ಮಳೆಗಾಗಿ ಪಾಪನಾಯಕದೇವರನ್ನು ಹೊರಡಿಸುವ ಆಚರಣೆ ನಡೆಯುತ್ತದೆ. ಈ ಕಾರ್ಯಕ್ರಮದಲ್ಲಿ ಬೇಡರೊಡನೆ ಗೊಲ್ಲರೂ ಸೇರಿಕೊಳ್ಳುವುದುಂಟು. ಪೂಜಾರಿ ಬೋಡಪಾಲಿನವರ ಮನೆಯಲ್ಲಿ ಸುರಕ್ಷಿತೆಗಾಗಿ ಇರಿಸಿದ ಪಾಪೇದೇವರವಿಗ್ರಹ ಮತ್ತು ಅದರ ಸಂಬಂಧದ ಬೆಳ್ಳಿಯ ಮೆರೆವಿಗ್ರಹಗಳನ್ನು ಹೊರತಂದು ಗುಡಿಯನ್ನು ಸ್ಥಾಪಿಸಿ ಅಲ್ಲಿಂದ ಮೆರವಣಿಗೆ ಹೊರಡುತ್ತದೆ. ಜಗಳೂರಿನಿಂದ ಸುಮಾರು ಎಂಟುಹತ್ತು ಕಿ.ಮೀ ದೂರದಲ್ಲಿರುವ ಗುಹೇಶ್ವರನಗುಡ್ಡಕ್ಕೆ ನಾಯಕರ ಮತ್ತು ಬೇಡರಸಮೂಹ ಪ್ರಯಾಣ ಬೆಳೆಸುತ್ತದೆ. ಗುಡ್ಡದ ಕೆಳಭಾಗದಲ್ಲಿ ಕಾಟೇಮಲ್ಲಿನಾಯಕನ ಸಮಾಧಿಯ ಸುತ್ತಲೂ ಎತ್ತುಗಳ

ಸಮಾಧಿಗಳೂ ಇವೆ. ಇವಕ್ಕೆಲ್ಲಾ ಪೂಜೆನೆರವೇರಿಸುವರು. ಪೂಜೆಯ ಜೊತೆಯಲ್ಲೇ ಭಜನೆಯ ಮೇಳವೂ ನಡೆಯುವುದು. ಭಜನೆಯೊಂದಿಗೆ ಅಲ್ಲಿ ನೂರೊಂದು ಪೂಜೆಯಾದ ಮೇಲೆ ರಾತ್ರಿ ಮೂರುಘಂಟೆಯ ಹೊತ್ತಿಗೆ ಭಕ್ತಸಮೂಹವೆಲ್ಲಾ ಮಾತುಕತೆಯಿಲ್ಲದೆ ನಿಶ್ಶಬ್ದವಾಗಿ ಗುಡ್ಡದತುದಿಗೆ ಏರಿ ಬರುತ್ತದೆ. ಗುಡ್ಡದತುದಿಯಲ್ಲಿ ಸಣ್ಣಗುಡಿಯೊಂದಿದ್ದು ಅದರೊಳಗೆ ಲಿಂಗವಿದೆ. ಅಲ್ಲಿಗೆ ಜಂಗಮರು ಬೇಡರಿಗಿಂತ ಮೊದಲೇ ಹೋಗಿ ಗುಹೇಶ್ವರಲಿಂಗಕ್ಕೆ ಅಭಿಷೇಕ ಮಾಡಿ, ಪೂಜೆಸಲ್ಲಿಸಿ ಸಿದ್ಧರಾಗಿ ಭಕ್ತಪಡೆಗಾಗಿ ಕಾದಿರುತ್ತಾರೆ. ಬೇಡರು ನಾಯಕರು ಅಲ್ಲಿಗೆ ಬಂದ ಮೇಲೆ ಮತ್ತೆ ಪೂಜೆನಡೆಯುತ್ತದೆ. ಬೇಡಿಕೆಗಳ ನಿವೇದನೆಯಾಗುತ್ತದೆ. ನಂತರ ಗೊಲ್ಲರು, ಬೇಡರು, ಜಂಗಮರು ಎಲ್ಲರೂಸೇರಿ ಗುಡ್ಡಇಳಿಯುವಾಗ ತಮತಮಗೆ ಸಿಕ್ಕ ಹಸಿರುಗಿಡಗಳನ್ನು ಆ ಭಕ್ತ ತಂಡ ಕಿತ್ತು ತರುತ್ತದೆ. ಅದನ್ನು ತಂದು ಮನೆಗಳಲ್ಲಿ ಬೆಂಕಿಗೆಹಾಕಿ ಹೊಗೆಏಳಿಸುವರು. ಎಲ್ಲರೂ ಹೊರಳಿ ಬರುವಾಗ ಅರಿಶಿಣಗುಂಡಿ ಎಂಬ ಗ್ರಾಮವನ್ನು ಹಾದು ಬರಬೇಕು. ಅಲ್ಲಿ ಅವರಿಗೆ ದಾಸೋಹದ ಅತಿಥ್ಯ ಲಭಿಸುತ್ತದೆ. ಹಾಗೆಯೇ ಮುಂದಿನ ಲಿಂಗಾನಹಳ್ಳಿ ಎಂಬ ಊರಿನಲ್ಲೂ ದಾಸೋಹವಾಗುವುದು. ಆಮೇಲೆ ಪಾಪೇದೇವರ ಗುಡಿಯಲ್ಲಿ ಪಾಪೇದೇವರ ಮನೆತನದವ'ರೆನಿಸಿಕೊಂಡ ಪಡ್ಲವರ ಬೆಡಗಿನನಿವಾಸಿಗಳು ದಾಸೋಹ ನಡೆಸುವರು. ಈ ದಾಸೋಹಕ್ಕೆ ಗೊಲ್ಲರೇ ವಿಶೇಷವಾಗಿ ಜೋಳದನುಚ್ಚಿನ, ಬೆಲ್ಲದಹಾಲು ತಂದುಕೊಟ್ಟಿರುತ್ತಾರೆ. ಇದು ಗುಹೇಶ್ವರಗುಡ್ಡಕ್ಕೆ ಹೋಗಿಬರುವ ಭಕ್ತಾದಿಗಳಿಗೆ ದೊರೆಯುವ ಮೂರನೆಯ ಹಾಗೂ ಕೊನೆಯ ದಾಸೋಹ. ಇಷ್ಟನ್ನು ನಡೆಸಿ ಬೇಡರು, ಗೊಲ್ಲರು ಊರು ಸೇರಿದರೆ ಸಾಕು ಶ್ರಾವಣದಮಳೆ ತಪ್ಪದೆ ಬಂದೇ ಬರುತ್ತದೆ.'[೧೨].

**ಅನಾದಿ ಪರುವು**

'ಪಟ್ಟೆ ಎತ್ತಿ ಜೋಳ ಅಕ್ಕೆ ಧಾನ್ಯಗಳನ್ನು ಸಂಗ್ರಹಮಾಡಿ ಅವುಗಳ ಹಿಟ್ಟನ್ನನಾದಿ ಕಡುಬು ಮಾಡಬೇಕು, ಕಡುಬು ಹೋಳುಮಾಡಿ ಬೇಲೆ ಬೇಯಿಸಿ ಬೆಲ್ಲಹಾಕಿ ಸಿಹಿ 'ತೊಗಿಕಡುಬು' ಮಾಡಬೇಕು ಬೆಳಲುಹಣ್ಣು ಚಟ್ನಿಮಾಡಿ ಕೋಡುಸಿದ್ದೇಶಲಿಂಗೇಶ್ವರ ದೇವಸ್ಥಾನದ ಹತ್ತಿರ ಶಾಂತಿಯಿಂದ ಊಟ ಮಾಡಿ ಬಂದರೆ ಮಳೆ ಬರುತ್ತೆ ಇದನ್ನ ಅನಾದಿಪರುವು ಎನ್ನುವರು. ಅನಾದಿಪರುವು ಮಾಡಿದರೆ ತೊನ್ನು 'ಇದ್ದರೂ ಹೋಗುವುದು'[೧೩].

**ಮುಖ ತೊಳೆಯುವುದು**

'ಪೂಜಾರಿಗೆ ಧಾನ್ಯಕೊಟ್ಟು ಎಡೆಮಾಡಿ ಕೆರೆಗೆ ಊರದೇವತೆಯನ್ನು ತಂದು ಮುಖತೊಳೆದು ಕೆರೆ ಪೂಜೆಮಾಡಿ ಹುಡಿ ತುಂಬಿಸಿ ಇಡೀರಾತ್ರಿ ಊರನ್ನು ಪ್ರದಕ್ಷಿಣೆ ಮಾಡಿ ಬೆಳಿಗ್ಗಿನ ಜಾವ ಗುಡಿ ತುಂಬಿಸುತ್ತಾರೆ. ಹೀಗೇ ಮಾಡುವುದರಿಂದ ಕಾಲಕಾಲಕ್ಕೆ ಮಳೆ ಬರುತ್ತದೆ'[೧೪].

### ಸ್ಮಶಾನ ಬಗೆಯುವುದು

'ತೊನ್ನು ಇರುವ ಮನುಷ್ಯ ಸತ್ತ ಸಂದರ್ಭಕ್ಕೆ ಅವನನ್ನು ಸುಡದೇ ಹಾಗೇ ಹೂತರೆ ಆ ಹೆಣ ಕೊಳೆಯುವುದಿಲ್ಲ ಎಂಬನಂಬಿಕೆ ಇದೆ. ಕೂದಲು ಉಗುರು ಬೆಳೆಯುತ್ತವೆ ಈ ಕೊಳೆಯದ ಹೆಣಗಳು ಬಾಯಿ ತೆರೆಯುತ್ತವೆ. ತೆರೆದ ಬಾಯಿಯಿಂದ ಮೋಡದನೀರನ್ನು ಭೂಮಿಗೆ ಬೀಳದಾಗೆ ಹಾಗೇಕುಡಿದು ಬಿಡುತ್ತವೆ. ಹೀಗಾಗಿ ಗ್ರಾಮದ ಊರದೈವಗಳ ಸಮ್ಮುಖದಲ್ಲಿ ಆ ಶವಗಳನ್ನು ಹೊರತೆಗೆದು ಸುಡುವಪದ್ಧತಿ ಇದೆ. ಒಂದುವೇಳೆ ಶವಕ್ಕೆ ಸಂಬಂಧಿಸಿದ ಜನರು ಒಪ್ಪಿಗೆ ನೀಡದೇ ಇದ್ದರೆ ಒಂದುಚೀಲ ಸುಣ್ಣವನ್ನು ಶವದ ಮೇಲೆ ಸುರಿದು ಮತ್ತೆ ಮುಚ್ಚಲಾಗುತ್ತದೆ'[೧೫]. ಈ ಆಚರಣೆ ಕರೂರು ಸೇರಿದಂತೆ ಕರ್ನಾಟಕ ಎಲ್ಲೆಡೆ ಕಂಡು ಬರುತ್ತದೆ.

### ಮಳೆ ಮಲ್ಲಪ್ಪನ ಪೂಜೆ

'ಮಳೆ ಬರದಿರುವ ಕಾಲಕ್ಕೆ ೭-೮ ವರ್ಷದ ಒಬ್ಬ ಹುಡುಗನನ್ನು ಬೆತ್ತಲೆಗೊಳಿಸಿ ತಲೆಯಮೇಲೆ ಮಣೆಯನ್ನು ಇಟ್ಟು ಅದರಮೇಲೆ ಸಗಣಿ ಅಥವಾ ಮಣ್ಣಿನಹುಂಡೆಯನ್ನು ಮಾಡಿಟ್ಟು ಅದಕ್ಕೆ ಒಂದಿಷ್ಟು ಗರಿಕೆ, ಪತ್ರೆಯನ್ನು ಸಿಕ್ಕಿಸಿ ಮನೆಮನೆಗೆ ಹೋಗಬೇಕು. ಆ ಹುಡುಗನಿಗೆ ಪಕ್ಕದಲ್ಲಿಯೇ ಎರಡು ಸಗಣಿ ಹುಂಡೆಗಳಿಗೆ ಬ್ಯಾನಪ್ಪನನ್ನು ತಯಾರಿಸುವರು. ಬ್ಯಾನಪ್ಪನಿಗೆ ತಲೆಭಾಗದಲ್ಲಿ ಗರಿಕೆಯನ್ನು ಸಿಕ್ಕಿಸುವರು. ಈ ಬ್ಯಾನಪ್ಪಗಳನ್ನು ಮಣೆಯಮೇಲಿಟ್ಟು ಅರಶಿನಕುಂಕುಮ, ಗಂಧದ ಕಡ್ಡಿ, ಕರ್ಪೂರ, ಹಣ್ಣುಕಾಯಿಗಳಿಂದ ಪೂಜಿಸುತ್ತಾರೆ. ನಂತರ ಬ್ಯಾನಪ್ಪಗಳಲ್ಲಿರುವ ಮಣೆಯನ್ನು ಆ ಹುಡುಗ ಹೊತ್ತುಕೊಂಡು ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಹೋಗುವನು. ಈ ಆಚರಣೆಯಲ್ಲಿ ಸಣ್ಣಪುಟ್ಟ ಹುಡುಗಹುಡುಗಿಯರು ಮಾತ್ರ ಭಾಗವಹಿಸುವರು. ಆ ಹುಡುಗ ಮನೆ ಮುಂದೆ ಬಂದಾಗ ಮನೆಯವರು ಮೇಲಿಂದ ನೀರನ್ನು ಸುರಿಯಬೇಕು. ಆಗ ಆ ಹುಡುಗ ಹುಯ್ಯೋ ಹುಯ್ಯೋ ಮಳೆರಾಯ ಎಂದು ತಿರುಗುತ್ತಾನೆ. ಇದರಿಂದ ಮಳೆ ಬರುತ್ತದೆ'[೧೬].

ಬಯಲುನಾಡಿನಲ್ಲಿ ಪ್ರಚಲಿತವಿರುವ ಮಳೆಯನ್ನು ಕುರಿತ ಒಂದು ಆಚರಣೆ ಮಳೆಮಲ್ಲಪ್ಪನ ಪೂಜೆ. ಸಾಮಾನ್ಯವಾಗಿ ಈ ಪೂಜೆಯನ್ನು ಕೆಳವರ್ಗದವರು ಮಾತ್ರ ಆಚರಿಸುವ ಪದ್ಧತಿ ಇದೆ. ವಿಶೇಷವೆಂದರೆ ಇದರ ಒಳಾರ್ಥವನ್ನು ಈ ಮಾಹಿತಿಯನ್ನು ನೀಡಿ ವಕ್ತೃವೇ ವಿವರಣಾರ್ಥವನ್ನೂ ನೀಡಿದರು. ಬೆತ್ತಲೆಯಾಗಿರುವ ಹುಡುಗ ಭೂಮಿಯನ್ನು ಹೊತ್ತ ಹುಡುಗ ಆದಿಶೇಷನರೂಪ ತಲೆಯ ಮೇಲಿರುವ ಮಣೆ ಸಗಣಿಹುಂಡೆಗಳು ಫಲವತತ್ತೆಯನ್ನು ಸಂಕೇತಿಸುತ್ತವೆ. ಈ ಬ್ಯಾನಪ್ಪಗಳು ಮಳೆಮಲ್ಲಪ್ಪನ ಪ್ರತೀಕ. ಮತ್ತು ಮಣ್ಣು, ಸಗಣಿ ಭೂಮಿಯರೂಪ, ಮೇಲೆ ಸುರಿಯುವ ನೀರು ಮಳೆಯರೂಪ ಭೂಮಿಗೆ ಜೀವಕಳೆ ಬರಲು ನೀರು ಮುಖ್ಯ. ನೀರಿನ ಮೂಲಮಳೆ ಹೀಗಾಗಿ

ಮಳೆಮಲ್ಲಪ್ಪನಪೂಜೆ ವಿಶಿಷ್ಟವಾದುದು. ಪ್ರಕೃತಿ ಮತ್ತು ಪುರುಷನ ನಡುವಿನ ಅನುಸಂಧಾನವೇ ಮಳೆಮಲ್ಲಪ್ಪನಪೂಜೆ.

**ಕತ್ತೆ ಪೂಜೆ**

'ಊರಿನಲ್ಲಿರುವ ಯಾವುದಾದರೂ ಒಂದು ಕತ್ತೆಯನ್ನು ತಂದು ಅದಕ್ಕೆ ಸ್ನಾನ ಮಾಡಿಸಿ. ವಿಭೂತಿ, ಕುಂಕುಮಹಚ್ಚಿ ಮೈಮೇಲೆಲ್ಲಾ ಬಣ್ಣವನ್ನು ಸಿಂಪಡಿಸಿ ಕೊರಳಿಗೆ ಬೇವಿನತಪ್ಪಲು, ಮಾವಿನತಪ್ಪಲು, ಕೊಬ್ಬರಿ ಬಟ್ಟಲುಗಳನ್ನು ಕಟ್ಟುತ್ತಾರೆ. ಊರ ಗ್ರಾಮಸ್ಥರೆಲ್ಲ ಸೇರಿ ಪೂಜಿಸಿ ಗ್ರಾಮಸ್ಥರೆಲ್ಲ ಬಂದು ಸೇರಿದ ಮೇಲೆ ಕರಡಿಮೇಳ, ಭಾಜಭಂಜತ್ರಿ ಡೊಳ್ಳುಗಳಂತಹ ವಿವಿಧ ವಾದ್ಯಮೇಳಗಳನ್ನು ಮುಂದುಮಾಡಿಕೊಂಡು ಗ್ರಾಮದ ಊರಿನ ನಗರದ ವಿವಿಧ ಓಣಿ-ಕೇರಿ, ಗಲ್ಲಿಗಳಲ್ಲಿ ಮೆರವಣಿಗೆ ಹೊರಡುತ್ತಾರೆ. ಅವರವರ ಮನೆಯ ಮುಂದೆ ಈ ಕತ್ತೆ ಮೆರವಣಿಗೆ ಬಂದಾಗ ಅವರು ಭಯಭಕ್ತಿಯಿಂದ ಕತ್ತೆಗೆ ನೀರನ್ನುಹಾಕಿ ಪೂಜಿಸಿ ಆರತಿ ಮಾಡಿ ತಿನ್ನಲು ಕಾಳು-ಕಡ್ಡಿ ರೊಟ್ಟಿ ಪದಾರ್ಥ ತಂದು ಕೊಡುವರು. ಹೀಗೆ ಊರಿನ ಜನರು ಕತ್ತೆಗೆ ಮಳೆತರಿಸು ಎಂದು ಬೇಡಿಕೊಳ್ಳುತ್ತಾರೆ. ಕೊನೆಗೆ ಊರ ಕೊನೆಯಲ್ಲಿರುವ ದೇವಸ್ಥಾನದ ಎದುರು ದೈವದ ಪರವಾಗಿ ಪೂಜೆಸಲ್ಲಿಸಿ ಕತ್ತೆಯನ್ನು ಹೊರಗೆ ಕೈಬಿಡುತ್ತಾರೆ.

ಮಳೆರಾಯನನ್ನು ಕರೆಯಲು ಕತ್ತೆಯನ್ನು ಯಾಕೆ ಬಳಸಿಕೋತೀವಂದ್ರೆ, ಒಮ್ಮೆ ಶಿವನ ಮೂರ್ತಿಯನ್ನು ಕತ್ತೆಯ ಮೇಲೆ ಹೊರಿಸಿ ಮೆರವಣಿಗೆ ಮಾಡುವಾಗ ಜನ ಭಯಭಕ್ತಿಯಿಂದ ನಮಸ್ಕರಿಸುತ್ತಿದ್ದರಂತೆ, ಈ ನಮಸ್ಕಾರ ತನಗೆ ಎಂದು ಭಾವಿಸಿದ ಕತ್ತೆ ಗರ್ವದಿಂದ ಶಿವನಮೂರ್ತಿಯನ್ನು ಬೀಳಿಸಿ ಓಡಿದಾಗ ಶಿವನು ನೀನು ಹಾಳುಬೀಳಿನಲ್ಲಿ ವಾಸಮಾಡು ಜನ ನಿನ್ನನ್ನು ಕತ್ತೆ ಎಂದು ಹೀಯಾಳಿಸಲಿ ಎಂದು ಶಾಪಕೊಟ್ಟನಂತೆ, ಕತ್ತೆ ನೊಂದುಕೊಂಡು ಶಿವನ ಮೊರೆಹೋದಾಗ ಮಳೆಬಾರದಾಗ ಜನ ನಿನ್ನನ್ನು ಪೂಜಿಸಲಿ ಆಗ ಮಳೆಯಾಗುತ್ತದೆ ಎಂದು ವರವಿತ್ತನಂತೆ. ಹೊತ್ತು ಬಂದಾಗ ಕತ್ತೆಕಾಲು ಓಡಿ ಎಂಬ ಗಾದೆ ಮೂಲತಃ ಈ ಹಿನ್ನೆಲೆಯಿಂದಲೇ ಬಂದಿರಬೇಕು. ಕತ್ತೆ ಎಂದರೆ ಮಾಣಿಕ್ಯ ಎನ್ನುತ್ತಾರೆ. ಕತ್ತೆಗಳು ಮಡಿವಾಳರ ಬಟ್ಟೆಹೊತ್ತೊಯುವ ವಾಹನ ಹಾಗಾಗಿ ಮಳೆಗಾಗಿ ಪ್ರಾರ್ಥಿಸಿ ಮದುವೆಮಾಡಿ ಮೆರವಣಿಗೆ ಮಾಡಿದರೆ ಮಳೆ ಬರುತ್ತದೆ. ಜಗತ್ತಿನ ಮೊದಲ ಸೃಷ್ಟಿಯೇ ಕತ್ತೆ ಎಂಬುದು ಜನಪದರ ನಂಬಿಕೆ ಇದಕ್ಕೆ ಸಂಬಂಧಿಸಿದ ಕತ್ತೆಯ ವಿವರ ಹೀಗಿದೆ, 'ದೇವರು ಮೊದಲು ಕತ್ತೆಯನ್ನು ಸೃಷ್ಟಿಸಿ ಅದಕ್ಕೆ ೬೦ವರ್ಷ ಆಯಸ್ಸುಕೊಟ್ಟ ಆದರೆ ಕತ್ತೆ ಅದನ್ನು ನಿರಾಕರಿಸಿ ೩೦ವರ್ಷ ತೆಗೆದುಕೊಂಡಿತ್ತು. ನಾಯಿಗೆ ೪೦ವರ್ಷಕೊಟ್ಟ ಅದು ೨೦ವರ್ಷ ಸಾಕೆಂದಿತ್ತು. ಮಂಗನಿಗೆ ೨೦ವರ್ಷ ಆಯಸ್ಸುಕೊಟ್ಟ ಆದರೆ ಅದು ೧೦ವರ್ಷ ಸಾಕೆಂದಿತ್ತು. ಇನ್ನೂ ಗೂಗಿಗೆ

೨೦ವರ್ಷ ಆಯಸ್ಸನ್ನುಕೊಟ್ಟ ಅದು ೧೦ವರ್ಷ ಸಾಕೆಂದಿತ್ತು. ನಂತರ ಮನುಷ್ಯನನ್ನು ಸೃಷ್ಟಿಮಾಡಿ ೩೦ವರ್ಷ ಆಯಸ್ಸುಕೊಟ್ಟ ಮನುಷ್ಯ ಅದನ್ನು ನಿರಾಕರಿಸಿ ಕತ್ತೆ ನಿರಾಕರಿಸಿದ ೩೦ವರ್ಷ, ನಾಯಿಯ ೨೦ವರ್ಷ, ಮಂಗನ ೧೦ವರ್ಷ, ಗೂಗಿಯ ೧೦ವರ್ಷದ ದಿವಸಗಳನ್ನು ಸೇರಿಸಿ ಒಟ್ಟು ೧೦೦ ವರ್ಷಗಳನ್ನಾಗಿ ಮಾಡಿಕೊಡು ಎಂದಾ, ದೇವರು ಹಾಗೇಮಾಡಿದ. ಮನುಷ್ಯನ ೩೦ವರ್ಷಗಳ ಜೀವನತುಂಬಾ ಚನ್ನಾಗಿರುತ್ತದೆ ಗೊಂದಲವಿರುವುದಿಲ್ಲ, ಜವಾಬ್ದಾರಿ ಕಡಿಮೆ ಇರುತ್ತದೆ. ಆದರೆ ಅನಂತರದ ಕತ್ತೆಯ ೩೦ವರ್ಷದಲ್ಲಿ ಜವಾಬ್ದಾರಿಯನ್ನು ಕತ್ತೆ ಹೊತ್ತ ಹಾಗೆ ಹೊರಬೇಕು, ೬೦ವರ್ಷದ ನಂತರದ ಬದುಕು ನಾಯಿಯ ವಯಸ್ಸು ೨೦ವರ್ಷ, ಆ ಜೀವನ ನಾಯಿಯ ಪಾಡು. ಮುಂದೆ ಮಂಗನ ರೀತಿಯಾಗಿ ಮನೆ ಮನೆಗೆ ತಿರುಗುವುದು ಮಂಗನ ರೀತಿಯಲ್ಲಿ ನಡೆದುಕೊಳ್ಳುವುದು. ಅನಂತರ ಮುಂದಿನ ಗೂಗೆ ೧೦ವರ್ಷಗಳಲ್ಲಿ ಹಗಲುನಿದ್ರೆ, ರಾತ್ರಿಎಚ್ಚರ'[೧೭]

ಹಾಸನ, ಮಂಗಳೂರು ಮುಂತಾದೆಡೆ ಇದೇ ರೀತಿಯ ಆಚರಣೆಗಳಿರುವುದನ್ನು ಸಂಧ್ಯಾರೆಡ್ಡಿಯವರು ಪ್ರಸ್ತಾಪಿಸಿದ್ದಾರೆ. ಆಚರಣೆಗಳ ಹಿನ್ನೆಲೆಯಲ್ಲಿ ಜನಾಂಗೀಯಸಾಮ್ಯತೆಯನ್ನು ಕಾಣಲು ಇದು ಆಧಾರಗಳನ್ನು ಒದಗಿಸುತ್ತದೆ. ಜನಪದರು ಪ್ರಕೃತಿ, ಪ್ರಾಣಿ, ಆಕಾಶ, ಸೂರ್ಯ, ಚಂದ್ರ, ನಕ್ಷತ್ರ ಮತ್ತು ಗಿಡ-ಮರ ಅಲ್ಲದೆ ಮನುಷ್ಯನನ್ನುಕೂಡ ದೇವರೆಂದು ನಂಬಿಪೂಜಿಸುತ್ತಾರೆ. ಅದೇ ರೀತಿ, ಪ್ರಾಣಿಗಳಿಗೆ ಹೆಚ್ಚು ಪ್ರಾಧಾನ್ಯತೆ ಕೊಡುತ್ತಾರೆ. ಹೀಗೆ ಜನಪದರು ಬದುಕನ್ನು ನಿರ್ವಚಿಸಿಕೊಳ್ಳುತ್ತಾರೆ.

**ಲಿಂಗಪೂಜೆ**

ಮಳೆಬರದೇ ಇರುವ ಕಾಲಕ್ಕೆ ಇಲ್ಲಿನಜನರು ಒಂದು ವಿಶಿಷ್ಟನಿಯಮವನ್ನು ಪರಿಪಾಲಿಸಿಕೊಂಡು ಬಂದಿದ್ದಾರೆ. ಸೋಮವಾರ ಮತ್ತು ಶುಕ್ರವಾರ ದಿವಸ ಜನರು ಮಡಿಯಿಂದ ಬಂದು ಬಾವಿಯೊಳಗಿನ ನೀರನ್ನು ತಂದು ಮೇಲಿನ ಈಶ್ವರನಲಿಂಗಕ್ಕೆ ಎರೆಯುತ್ತಾರೆ. ಒಂದೆರಡು ಬಾರಿಯಲ್ಲ ತಮಗೆ ಸಾಕಾಗುವೆನಿಸುವಷ್ಟು ನೀರನ್ನು ಎರೆಯುತ್ತಾರೆ. ಇದರಿಂದ ಶಿವಸಂತೃಪ್ತಿಗೊಂಡು ಮಳೆಯನ್ನು ತರುತ್ತಾನೆ ಎನ್ನುವ ನಂಬಿಕೆ ದಾವಣಗೆರೆ ಜಿಲ್ಲೆ ಬಾಡಗ್ರಾಮದ ಜನರಿಗೆ ಇದೆ.

**ಸೀಳಾ ಪಟ್ಟಿ ಅಥವಾ ಉಪ್ಪು ತರುವ ಆಟ**

ಬಸನಾಳ ಗ್ರಾಮದಲ್ಲಿ ಉಪ್ಪುತರುವ ಆಟವೊಂದಿದೆ ಅಥವಾ ಸೀಳಾಪಟ್ಟಿ ಆಟವೆಂದು ಕರೆಯುತ್ತಾರೆ. 'ರಾತ್ರಿ ಊಟವಾದ ನಂತರ ಗಂಡಸರು ಗುಡಿಯ ಮುಂದೆ ಸೇರುತ್ತಾರೆ. ನೀರಿನಿಂದ ಗೆರೆಯನ್ನು ಹಾಕುತ್ತಾರೆ ನಂತರ ಹಿರಿಯರು ಪೂಜೆಸಲ್ಲಿಸುತ್ತಾರೆ. ಆಟಕ್ಕೆ ಅಣಿಗೊಳಿಸುತ್ತಾರೆ. ಊರಿನ ಯುವಕರಲ್ಲಿ ಎರಡು ತಂಡಗಳಾಗಿ ವಿಂಗಡಿಸುತ್ತಾರೆ. ಮದುವೆಯಾದವರು ಸೇರಿಕೊಳ್ಳಬಹುದು. ಅವಿವಾಹಿತರಿಗೆ ಹೆಚ್ಚು ಅವಕಾಶವಿರುತ್ತದೆ. ನೀರಿನಿಂದ ಹಲವಾರು ಪಟ್ಟಿಗಳನ್ನು (ಗೆರೆ) ಹಾಕುತ್ತಾರೆ.

ಎರಡು ತಂಡಗಳಲ್ಲಿ ಒಂದು ತಂಡವು ಇನ್ನೊಂದು ತಂಡವನ್ನು ಎದುರುಗೊಳ್ಳುತ್ತದೆ. ಇನ್ನೊಂದು ತಂಡ ಪೂರ್ವದಿಂದ ಪಶ್ಚಿಮಕ್ಕೆ ಅಂದರೆ ಪಶ್ಚಿಮದಲ್ಲಿರುವ ಕೊನೆಯಗೆರೆಯನ್ನು ಮುಟ್ಟಬೇಕೆಂದು ಆಟದ ನಿಯಮ ಅದನ್ನು ಮುಟ್ಟದಂತೆ ಇನ್ನೊಂದು ತಂಡ ತಡೆಯುತ್ತದೆ. ಎದುರುಗೊಂಡು ತಡೆಯುವ ತಂಡದಿಂದ ತಪ್ಪಿಸಿಕೊಂಡು ಅಥವಾ ಅವರನ್ನು ಎದುರಿಸಿ ಕೊನೆಯಗೆರೆಯನ್ನು ಮುಟ್ಟಬೇಕು. ಹಾಗೇ ಮುಟ್ಟದರೆ ಗೆದ್ದಾ ಹಾಗೇ ಎಲ್ಲರೂ ಕೇಕೆ ಹಾಕುತ್ತಾರೆ'[೧೮]. ಇದು ಮಳೆಬರುವ ಸಂದರ್ಭಕ್ಕೆ ಆಡುವ ಮಾಟದ ಅನುಕರಣೆಯ ಆಟವಾದರೂ ಇದರ ಹಿಂದಿನ ರಹಸ್ಯವನ್ನು ತಿಳಿಯಬೇಕಾಗಿದೆ.

**ವಾರ ಮಾಡುವುದು**

'ಮಳೆಗಾಲದಲ್ಲಿ ಮಳೆರಾಯ ಮುನಿದಾಗ ಮೊದಲ ಕ್ರಮವಾಗಿ ರೈತರು ವಾರ ಪ್ರಾರಂಭಿಸುತ್ತಾರೆ. ಊರಲ್ಲಿ ಢಂಗೂರ ಸಾರಿ ಮಂಗಳವಾರ, ಶುಕ್ರವಾರ ಮಾಡುವಂತೆ ಸಾರುಹಾಕುವರು. ಈ ದಿನದಲ್ಲಿ ಕೃಷಿಕಾರ್ಯ ಮಾಡುವಂತಿಲ್ಲ, ಎತ್ತುಗಳಿಗೂ ಕೆಲಸವಿಲ್ಲ, ಮನೆಯಲ್ಲಿ ಬೀಸುವುದು, ಕುಟ್ಟುವುದು ಅಡಿಗೆ ಮಾಡುವುದು, ರೊಟ್ಟಿ ಸುಡುವುದಿಲ್ಲ ಎಲ್ಲವನ್ನು ನಿಲ್ಲಿಸುತ್ತಾರೆ. ಮನೆಯಲ್ಲಿ ಊರದೇವಾಲಯದಲ್ಲಿ ಪೂಜೆ ಪುನಸ್ಕಾರಗಳು ನಡೆಯುತ್ತವೆ. ಊರಿನ ಪ್ರತಿಯೊಂದು ಕೇರಿಯಲ್ಲಿ ಜನರು ಕೇರಿಯನ್ನು ಸ್ವಚ್ಛಗೊಳಿಸಿ ನೀರನ್ನು ನೆಲಕ್ಕೆ ಹೊಡೆಯುತ್ತಾರೆ. ಆ ಹಿಂದಿನ ದಿನ ಬೆಸಸಂಖ್ಯೆಯಲ್ಲಿ ಜನರು ನೀರನ್ನು ತಂದು ದೇವರಿಗೆ ಎರೆಯುವರು. ಬೆಳಗಿನಜಾವ ಮಕ್ಕಳಿಂದ ನೀರನ್ನು ತರುವ ಕಾರ್ಯಕ್ರಮ ನಡೆಯುತ್ತದೆ. ಮಕ್ಕಳು ಹೊತ್ತು ಮೇಲೆರುವವರೆಗೂ ನೀರು ನೀಡಿ ಮನೆಗೆ ಬರುವ ಮಕ್ಕಳಿಗೆ ದೇವರಿಗೆ ಎಡೆಹಿಡಿದ ಆಹಾರವನ್ನು ನೀಡುವರು. ಸಂಜೆ ದೇವಾಲಯದ ಮುಂದೆ ಕೀರ್ತನೆ ಭಜನೆ ಸಾಗುವುದು ಈ ರೀತಿಯಾದ ವ್ರತ ಮಳೆಯಾಗುವವರೆಗೂ ನಡೆಯುವುದು'[೧೯].

**ಬಾಯಿ ಮೇಲಾಗಿ ಹುಟ್ಟಿದವರ ಸೇವೆ**

'ಬಾಯಿ ಮೇಲಾಗಿ ಹುಟ್ಟಿದವನನ್ನು ದೇವಮಂದಿರಕ್ಕೆ ಕರೆಸುವರು ಅವನನ್ನು ನೀರುತುಂಬಿದ ಕಬ್ಬಿಣದ ಬುಟ್ಟಿಯಲ್ಲಿ ಕೂರಿಸುತ್ತಾರೆ. ಅವನು ತದೇಕಚಿತ್ತದಿಂದ ನೀರಿನ ತಳನೋಡುತ್ತಾ ಇರಲು ಅವನಿಗೆ ಎಲ್ಲಾ ಮಳೆಗಳು ಕಣ್ಮುಂದೆ ಹಾದುಹೋಗುತ್ತವಂತೆ. ಅವನಿಗೆ ಗುಡುಗು, ಸಿಡಿಲು, ಮಿಂಚು ಕಾಣಿಸುವುದು. ಆದರೆ ಉಳಿದವರಿಗೆ ಅದ್ಯಾವುದೂ ಕಾಣಿಸದು'[೨೦].

**ವಾಲಗ ಸೇವೆ**

ಬೀರ ದೇವರು ಮತ್ತು ಕುರುಬರು ಇರುವಕಡೆಗೆ ಡೊಳ್ಳಿನಮೇಳಗಳೂ ಸಾಮಾನ್ಯ ಮಳೆ ಬರದೇ ಇದ್ದಾಗ ಈ ಮೇಳಗಳು ಒಂದೆಡೆಕೂಡಿ ಡೊಳ್ಳನ್ನು ಬಡಿಸುವರು. ಇದರೊಂದಿಗೆ ಕಹಳೆ, ಗಂಟೆ ಜಾಗಟೆಗಳು ಸೇರಿ ರೌದ್ರ ಸನ್ನಿವೇಶವುಂಟಾಗಿ ಮಳೆ ಬರುವುದು[೨೧].

**ಚಂದ್ರಾರಾಧನೆ.**

'ಹುಣ್ಣಿಮೆಯದಿನ ಅಂಗಳಸಾರಿಸಿ ಕಳಶವಿಟ್ಟು ಅದರಸುತ್ತಲು ರಂಗುರಂಗಿನ ರಂಗೋಲಿಬಿಡಿಸಿ ಸಾಕಷ್ಟು ವೈವಿಧ್ಯದ ಹೂಗಳಿಂದ ಪೂಜೆಮಾಡಲಾಗುತ್ತದೆ. ಪೂಜೆಯ ಬಳಿಕ ಪ್ರಸಾದವಾಗಿ ಅಕ್ಕಿ ಅಥವಾ ರಾಗಿರೊಟ್ಟಿಯನ್ನು ನೀಡುತ್ತಾರೆ. ಈ ಸಂಧರ್ಭದಲ್ಲಿ ಯಾರಾದರೊಬ್ಬರು (ಸಾಮಾನ್ಯವಾಗಿ ಹುಡುಗರು) ರೊಟ್ಟಿಯನ್ನು ಕದ್ದು ಯಾರಿಗು ಸಿಗದಂತೆ ತಪ್ಪಿಸಿಕೊಂಡು ಓಡಿಹೋಗಿ ತಿಂದು ಬರುತ್ತಾರೆ. ನಂತರ ಸರದಿಯಲ್ಲಿ ಬಂದು ಪುನಃ ರೊಟ್ಟಿ ಸ್ವೀಕರಿಸುತ್ತಾರೆ. 'ಕದ್ದರೊಟ್ಟಿ ಬೇರೆ ದೇವರಪ್ರಸಾದ ಬೇರೆ ' ಎಂಬ ಗಾದೆ ಮಾತು ಇಲ್ಲಿಂದಲೆ ಹುಟ್ಟಿದ್ದು. ನಂತರ ಎಲ್ಲರು ಸೇರಿ ರಂಗವಲ್ಲಿಯ ಸುತ್ತ ಹಾಡಿಕೊಳ್ಳುತ್ತ ಕುಣಿಯುತ್ತಾರೆ. ಚಿಕ್ಕ ಮಕ್ಕಳ ಮದುವೆ ಆಟವು ನಡೆಯುತ್ತದೆ. ಈ ಆಚರಣೆ ಮುಗಿದ ಮರುದಿನ ಮಳೆಬಂದೆ ಬರುತ್ತದೆ ಎಂಬ ನಂಬಿಕೆ ಇದೆ'[೨೨].

**ಶಿವ ಭಜನೆ ಸಪ್ತಾಹ**

ಮಳೆರಾಯನನ್ನು ಆರಾಧಿಸುವುದಕ್ಕಾಗಿ ಏಳುದಿವಸಗಳ ಕಾಲ ನಿರಂತರವಾಗಿ ಮಾಡುವ 'ಓಂ ನಮಃ ಶಿವಾಯಃ' ಎಂಬ ಶಿವನಾಮ ಸ್ಮರಣೆಯೇ ಸಪ್ತಾಹ ಭಜನೆಯಾಗಿದೆ. ಈ ಭಜನೆಗಳನ್ನು ಗ್ರಾಮಗಳ ಯಾವುದೇ ದೇವಸ್ಥಾನಗಳಲ್ಲಿ ಅದರಲ್ಲಿ ವಿಶೇಷವಾಗಿ ಬಸವನದೇವರಗುಡಿಗಳಲ್ಲಿ ಮಾಡುವ ಸಂಪ್ರದಾಯವಿದೆ. ಭಜನೆಮೇಳಗಳಿರುವ ಊರುಗಳಲ್ಲಿ ಈ ಸಪ್ತಾಹಕಾರ್ಯಕ್ರಮ ನಡೆಯುತ್ತದೆ. ಹಿರೇ ಕೆರೂರು ಮೊದಲಾದ ಕಡೆ ಊರಿನ ಹಿರಿಯರು, ಯುವಕರು ತೊಯ್ದುಬಟ್ಟೆಯಲ್ಲಿ ದೇವಸ್ಥಾನದಲ್ಲಿ ಭಜನೆ ಕೈಗೊಳ್ಳುವರು ಇದು ನಿರಂತರವಾಗಿ ಮುಂದುವರೆಯುತ್ತದೆ. ಇಂತಿಷ್ಟುಗಂಟೆಗಳೆಂದು ಭಜನೆ ಮಾಡುವವರು ಬದಲಾಗುತ್ತಾರೆ. ಶಿವನಾಮವನ್ನು ಸ್ಮರಿಸುವುದು ಇದರ ಮೂಲ ಉದ್ದೇಶ. ೭ ದಿನ ಹೀಗೇ ನಡೆದು ಕೊನೆಯ ದಿನ ಅನ್ನಸಂತಾರ್ಪಣೆ ನಡೆಯುತ್ತದೆ.

ಇದರಲ್ಲಿ ಯಾವುದೇ ಜಾತಿಭೇದವಿಲ್ಲದೆ ಎಲ್ಲರೂ ಪಾಲ್ಗೊಳ್ಳುವರು, ಇವರು ಸ್ನಾನಮಾಡಿ ವಿಭೂತಿ ಧರಿಸಿ ಮೈಮೇಲೆ ಅಂಗಿಧರಿಸದೇ ಧೋತರ, ಲುಂಗಿ, ಚೊಣ್ಣಗಳನ್ನು ಧರಿಸಿದ್ದರೂ ತೊಯ್ದು ಬಟ್ಟೆಯಿಂದ ಈ ಭಜನೆಯಲ್ಲಿ ಭಾಗವಹಿಸಬಹುದಾಗಿದೆ. ದೇವಸ್ಥಾನದ ಮಧ್ಯದಲ್ಲಿ ಅಗ್ನಿಕುಂಡವನ್ನು

ಸ್ಥಾಪಿಸಿ ಈ ಕುಂಡದ ಸುತ್ತ ಭಜನೆಯಲ್ಲಿ ಭಾಗವಹಿಸಿದ ಪುರುಷರು ಕೈಯಲ್ಲಿ ತಾಳ, ತಪ್ಪಡಿ ಹಿಡಿದು 'ಓಂ ನಮಃ ಶಿವಾಯಃ' ಎಂಬ ಮಂತ್ರಾಕ್ಷರವನ್ನು ಪಠಿಸುತ್ತಾ ಭಜನೆ ಮಾಡುವರು. ದಿನದ ೨೪ ಗಂಟೆಯೂ ಈ ಭಜನೆ ನಡೆದೇ ಇರುತ್ತದೆ. ರಾಗದಲ್ಲಿ ಪರಿಳಿತವಾಗಬಹುದು, ಆದರೆ ನಾಮದಲ್ಲಿ ಬದಲಾವಣೆಯಾಗುವುದಿಲ್ಲ. ಹೀಗೆ ನಿತ್ಯನಿರಂತರವಾಗಿ ೭ ದಿನಗಳ ಕಾಲ ಸಪ್ತಾಹಭಜನೆ ನಡೆದುಕೊಂಡು ಬರುತ್ತದೆ. ಗ್ರಾಮದಜನರು ಮನೆ-ಮನೆಗೊಬ್ಬರಂತೆ ಪಾಳೇ ಹಾಕಿಕೊಂಡು ಈ ಸಪ್ತಾಹಭಜನೆಯಲ್ಲಿ ಭಾಗವಹಿಸುತ್ತಾರೆ. ಮುಕ್ತಾಯದ ದಿನದಂದು ಗ್ರಾಮದಲ್ಲಿ ದೊಡ್ಡಹಬ್ಬವೇ ಆದಂತೆಯೇ ಆಗುತ್ತದೆ. ಎಲ್ಲರೂ ತಮ್ಮತಮ್ಮ ಮನೆಗಳನ್ನು, ಊರ ದೇವಾಲಯಗಳನ್ನು ಸಾರಿಸಿ ಶುಚಿಗೊಳಿಸಿ ತಳಿರುತೋರಣ ಕಟ್ಟಿ ಶೃಂಗಾರಿಸುತ್ತಾರೆ. ಎಲ್ಲಾ ದೇವರಿಗೂ ಉಡಿ ತುಂಬುವ ಹಣ್ಣುಕಾಯಿಸಮರ್ಪಿಸಿ ನಮ್ಮಗೆಲ್ಲಾ ಮಳೆಬೆಳೆ ನೀಡಿ ಸಮೃದ್ಧಿಯನ್ನುಕೊಡು. ಊರ ಜನರಿಗೆ ಯಾವುದೇ ರೀತಿಯ ರೋಗಗಳು ಬರದಂತೆ ಕಾಪಾಡು ಎಂದು ಬೇಡಿಕೊಳ್ಳುತ್ತಾರೆ. ಕೊನೆದಿನ ಉಡಿ ತುಂಬುವ ರುದ್ರಾಭಿಷೇಕ, ಮಹಾಪೂಜೆಗಳು ಈ ಹಿನ್ನೆಲೆಯಿಂದಲೇ ನಡೆಯುತ್ತವೆ. ಕ್ಷೇತ್ರಕಾರ್ಯದ ಸಂದರ್ಭ ಗಮನಿಸಿದಾಗ ಎಲ್ಲೆಡೆಯೂ ಇದರ ಆಚರಣೆಯಿದೆ. ಅಂತೆಯೇ ಕರ್ನಾಟಕದ ಎಲ್ಲಾಕಡೆಯೂ ಆಚರಣೆಯಲ್ಲಿರುವುದನ್ನು ಆಯಾಭಾಗದ ಸಂಶೋಧಕರು ಗುರುತಿಸಿದ್ದಾರೆ.

**ತಾರ್ಲೆ ಆಚರಣೆ**

ವ್ಯವಸಾಯಕ್ಕೆ ಸಂಬಂಧಿಸಿದ ಕರಾವಳಿ ಪ್ರದೇಶದ ಆಚರಣೆಯಲ್ಲಿ ಮುಖ್ಯವಾದುದು ತಾರ್ಲೆಆಚರಣೆ ಇದು ಮಳೆಯನ್ನು ಕುರಿತ ಆಚರಣೆಯಾಗಿದೆ. ಕರಾವಳಿಯ ರೈತಾಪಿಗಳು ಒಕಲುತನಕ್ಕೆ ಮಳೆಯನ್ನೇ ಅವಲಂಬಿಸಿದ್ದಾರೆ. ಬೆಳೆಗೆ ಅಗತ್ಯವಿರುವಷ್ಟು ಮಳೆಯಾಗದೇ ಹೋದಾಗ ರೈತಾಪಿಗಳು ವರುಣನ ಕೃಪೆಗಾಗಿ ಕಾಯಬೇಕಾಗುತ್ತದೆ. 'ಮಳೆ ಇಲ್ಲದೆ ಬೆಳೆ ಎಲ್ಲಾ ಒಣಗಿದಾಗ ಜನರ ಸಂಕಟನಿವಾರಣೆಗಾಗಿ ಹಾಲಕ್ಕೆ ಒಕ್ಕಲಿಗರು ಬಯಲಲ್ಲಿ ಸಮಸಂಖ್ಯೆಯಲ್ಲಿ ಸೇರುತ್ತಾರೆ. ಒಬ್ಬರ ಕೈಯನ್ನು ಮತ್ತೊಬ್ಬರು ಹಿಡಿದುಕೊಂಡು ವೃತ್ತಾಕಾರವಾಗಿ ನಿಲ್ಲುತ್ತಾರೆ. ನುರಿತ ಹಾಡುಗಾರ್ತಿಯೊಬ್ಬಳು ಹಾಡನ್ನು ಹೇಳಿ ಮುಗಿಸಿದ ನಂತರ ಉಳಿದವರು ನಿಂತ ಸ್ಥಳದಿಂದ ಮುಂದಕ್ಕೆ ಹಾರಿ ಬಾಗಿ ಪುನಃ ಹಿಂದಕ್ಕೆ ಜೀಕಿ ನಿಂತುಕೊಂಡು ತಾರ್ಲೆ ಎಂದು ಎಲ್ಲಾರು ಗಟ್ಟಿಯಾಗಿ ಹೇಳುತ್ತಾರೆ. ಹಾಡುಗಾರ್ತಿ ಹಾಡಿನ ಒಂದೊಂದು ಸೊಲ್ಲನ್ನು ಹೇಳುತ್ತಾ ಮುಂದುವರೆಸಿದಂತೆ ಉಳಿದ ಹೆಂಗಸರು ತಾರ್ಲೆಹಾಕಿ ಕುಣಿಯುವುದರಿಂದ ಇದು ತಾರ್ಲೆಕುಣಿತವಾಗಿತ್ತೆಂದು ನಂಬಲಾಗಿದೆ. ಮೊದಲುಮಳೆ ತರಲು ವರುಣದೇವತೆಯನ್ನು ಸ್ತುತಿಸುವ ಹಾಡನ್ನು ಹೇಳುವ ಸಂಪ್ರದಾಯವಿದ್ದಂತೆ ಕಾಣುತ್ತದೆ.

ಚಣಮೊಳೆ ಹ್ವೊಯಲೆ ಚಣಕೆರೆ ತುಂಬಲೇ ಬಯ್ಬೀಗಳೆಲ್ಲ ಹಯ್ನಾದೊ / ತಾರ್ಲೆ
ಔಂಜೀಯ ಜೀರೂ ತಳಮಳಗೊಂಡೇ ದೇವತ್ತಗೊಳಮದವೀಯೋ / ತಾರ್ಲೆ[೨೩].

ತಾರ್ಲೆಕುಣಿದ ನಂತರಮಳೆಯನ್ನು ಅನುಕರಿಸಿ ಮೇಲೆ ಮಳೆ ಬರುತ್ತದೆ. 'ಮಳೆ ಬಂದು ಮನಸು ತಣಿಯುತ್ತದೆ. ಬಿತ್ತಿದಬೆಳೆ ಬೆಳೆದು ಸುಖಸಮೃದ್ದಿ ತರುತ್ತದೆ. ಮಗಳು ಮದುವೆವಯಸಿಗೆ ಬರುತ್ತಾಳೆ. ಅವಳು ಸಿಂಗರಿಸಿಕೊಂಡು ಹೂಮುಡಿದು ದೇವರಿಗೆ ನಮಿಸಿ ಅಪ್ಪನ ಕಾಲಿಗೆರಗಿ ಆಶೀರ್ವಾದ ಪಡೆಯುತ್ತಾಳೆ. ಆಕಾಶಕ್ಕೆ ಕೈ ಮುಗಿಯುತ್ತಾ..

ಆಕಾಶಕಕ್ಕೆಕಯ್ಯಮುಗ್ವವೆಲ್ಲ್ಯದಲ್ಲಿ
ಗುಡುಗು ಮಿಂಚೆಂಬ ವಾಧ್ಯ ಬಂದು
ಆಕಾಶದಲ್ಲಿ ಗುಡುಗುಗರನಾಲು ಹೊಡೆದು
ಚಕಚಕಯೆಂಬಲಾರುತೀಯೆ ಬಲುಗೀರು
ಬರಬರನೆ ಮೊಲುಗಾಲು ಶುರುವಾಯ್ತು
ಬರಬರಬನೆ ಮಳೆರಾಯ ಬರ್ವ ಯಾವ್ಯಾದಲ್ಲಿ
ಹಕ್ಕರಣೆ ನೀರು ಕುಡುದೀವು
ಗೌಡ್ಲೂಲ್ ಮಕ್ಲು ಹೊಡುಕೆ ಹೊಟೇರು'[೨೪].

ಎಂದು ಸಂಭ್ರಮಿಸುತ್ತಾಳೆ. ಮೇಲಿನ ಹಾಡಿನಲ್ಲಿ ಮಳೆ ಮತ್ತು ಸಮೃದ್ಧಿಯ ಹಾರೈಕೆ ಇರುವುದನ್ನು ಕಾಣಬಹುದು. ಈ ಹಾಡುಗಳು ಕುಣಿಯುತ್ತಾ ಹಾಡುವ ಹಾಡುಗಳಲ್ಲ. ಗದ್ದೆಯ ಬಯಲಿನಲ್ಲಿ ಲೋಕೋದ್ಧಾರಕ್ಕಾಗಿ ತಾರ್ಲೆಹಾಡಲೆಂದೂ ಊರಿನ ಗೌಡನಿಂದ ವೀಳ್ಯಹಿಡಿದ ಹಾಡುಗಾರ್ತಿಯರು ಹಸೆ ಹಾಸಿಕೊಂಡು ಹಾಡುತ್ತಾರೆ. ಸಮಸಂಖ್ಯೆಯಲ್ಲಿ ಹಾಡು ಹಾಡಬಾರದೆಂಬ ನಿಷೇಧವಿದೆ. ಹಾಡುಗಳಲ್ಲಿ ತನ್ನ ದೇವರಭಕ್ತಿಗೆ ಉದ್ದು, ಗೊಂಡೆ ಬಿತ್ತುವುದು, ತುಳುಸಿ ಬಿದುರು ನೆಡುವ ಪ್ರಸ್ತಾವ ಸಾಮಾನ್ಯವಾಗಿ ಕಂಡು ಬರುತ್ತದೆ. ಬಿತ್ತಿದಬೆಳೆ ಸಮೃದ್ಧಿಯಾಗಿ ಬೆಳೆಯುವ ಸಲುವಾಗಿ ನೀರೋ ನೀರೋ ಎಂದು ಕೂಗುವ ತಳಮುಳದ ಧ್ವನಿ ಕಂಡು ಬರುತ್ತವೆ.

**ನೀರು ಕಟ್ಟುವುದು**

'ಮಳೆಯಾಗದೆ ಇದ್ದಾಗ ಊರಿನ ಪ್ರಮುಖರು ಈಶ್ವರ, ಕಲ್ಲೇಶ್ವರ ಮುಂತಾದ ದೇವಸ್ಥಾನಗಳ ಬಾಗಿಲಿಗೆ ಅಡ್ಡವಾಗಿ ಗೋಡೆಯನ್ನು ನಿರ್ಮಿಸಿ, ಒಳಗಡೆ ನೀರನ್ನು ತುಂಬಿಸಿ, ಲಿಂಗದ ಸುತ್ತಲೂ ನೀರು ತುಂಬುವಂತೆ ಮಾಡುತ್ತಾರೆ. ದೇವರ ಪೂಜೆಯೂ ನಿತ್ಯವೂ ನಡೆಯುತ್ತದೆ ಇದರಿಂದ ಶಿವ ಸಂತುಷ್ಟನಾಗಿ ಮಳೆಕೊಡುವಂತೆ ಭರವಸೆ ನೀಡುತ್ತಾನೆ ನಂತರ ಮಳೆಬರುತ್ತದೆ. ಆಗ ಗೋಡೆಯನ್ನು ಒಡೆದು ನೀರನ್ನು ಹರಿ ಬಿಡುತ್ತಾರೆ'[೨೫]. ನೀರುಕಟ್ಟುವುದು ಅಥವಾ ನೀರುನಿಲ್ಲಿಸುವುದು ಎನ್ನುವ ಈ ಪದ್ಧತಿಯಲ್ಲಿ ಮಳೆ ತಡೆದಾಗ ಗ್ರಾಮದೇವರ ದೇವಾಲಯಗಳ ಗರ್ಭಗುಡಿಯ ಬಾಗಿಲಿಗೆ ಒಂದು

ಅಥವಾ ಒಂದುವರೆ ಘೂಟು ಎತ್ತರದಲ್ಲಿ ತಾತ್ಕಾಲಿಕ ಇಟ್ಟಿಗೆಗೋಡೆ ನಿರ್ಮಿಸುತ್ತಾರೆ. ದೇವರು ನೆಲೆಸಿರುವ ಪೀಠದ ಸುತ್ತ ನೀರುನಿಲ್ಲುವಂತೆ ವ್ಯವಸ್ಥೆ ಮಾಡುತ್ತಾರೆ. ಹೀಗೆ ಸತತವಾಗಿ ಐದು ಹತ್ತು ಹದಿನೈದು ದಿನಗಳವರೆಗೆ ನೀರುನಿಲ್ಲಿಸುವುದರಿಂದ ಮಳೆ ಬರುವುದೆಂಬ ವಾಡಿಕೆ ಈಗಲೂ ಜಮಖಂಡಿ ತಾಲೂಕಿನಲ್ಲಿ ರೂಢಿಯಲ್ಲಿದೆ[೨೬].

**ತಿಂಗಳ ಮಾಮನ ಪೂಜೆ**

ತಿಂಗಳುಮಾವನಪೂಜೆಯ ಮಳೆಯನ್ನು ಕುರಿತು ಆಚರಿಸುವ ಮತ್ತೊಂದು ಸಂಪ್ರದಾಯ. 'ಸರಿಯಾದ ಸಮಯಕ್ಕೆ ಮಳೆಬಾರದೆ ಇದ್ದಾಗ ಮಳೆರಾಯನ ಒಡೆಯನಾದ ತಿಂಗಳು ಮಾವನನ್ನು (ಚಂದ್ರ) ಪೂಜಿಸುವುದು ರೂಢಿ. ಇದನ್ನು 'ಬೆಳ್ದಿಂಗ್ಳಪ್ಪನ ಪೂಜೆ' ಎಂದು ಕರೆಯುತ್ತಾರೆ. ತಿಂಗಳು ಮಾವನಿಗೂ ಮಳೆಗೂ ಹಳ್ಳಿಗರು ಒಂದು ಬಗೆಯ ನಿಕಟಸಂಬಂಧವನ್ನು ಗುರುತಿಸಿದಂತೆ ಕಾಣುತ್ತದೆ. ಮಳೆಯ ಮೇಲೆ ತಿಂಗಳು ಮಾವನ ಪ್ರಭಾವ ಇದೆ ಎಂಬ ಕಲ್ಪನೆಯನ್ನು ಮಳೆಯ ದೈವವನ್ನು ಈ ರೀತಿಯಾಗಿ ಗುರುತಿಸಿಕೊಂಡು ಆರಾಧಿಸುತ್ತಾ ಬಂದಿದ್ದಾರೆ. ಮಳೆಯನ್ನು ತರುವವನು 'ದೇವೇಂದ್ರಾಯ' ಎಂಬ ನಂಬಿಕೆಯೂ ಪ್ರಚಲಿತವಾಗಿದೆ. ಈ ಪೂಜೆಯನ್ನು ಸಾಮಾನ್ಯವಾಗಿ ಚೈತ್ರದಿಂದ ಕಾರ್ತೀಕಮಾಸಗಳವರೆಗಿನ ಶುಕ್ಲಪಕ್ಷದ ದಿನಗಳಲ್ಲಿ ಆಚರಿಸಲಾಗುತ್ತದೆ. ಹಳ್ಳಿಗಳಲ್ಲಿ ತಿಂಗಳು ಮಾವನಪೂಜೆಯು ಇನ್ನು ಒಂದು ತಿಂಗಳು ಇದೆ ಎನ್ನುವಾಗಲೇ ಚಿಕ್ಕ ಮಕ್ಕಳು ಗುಂಪು ಕಟ್ಟಿಕೊಂಡು ಮನೆಮನೆಗೂ ಹೋಗಿ:

'ಉಳ್ಳೀಯ ಹೊಲ್ಲಲಿ

ಹೊಳ್ಳಾಡ್ಕಂಡೆ ಬಂದೀವಿ

ಇಕ್ಕಮ್ಮ ಚಿಕ್ಕಿ ಭಿಕ್ಷಾವ'

ಎಂಬುದಾಗಿ ಹಾಡು ಹಾಡಿಕೊಂಡು ಮನೆಯವರು ಕೊಟ್ಟ ಅಕ್ಕಿ, ರಾಗಿಹಿಟ್ಟು, ಹಣ ಮುಂತಾದುವನ್ನು ಸಂಗ್ರಹಿಸುತ್ತಾರೆ'[೨೭]. ಚಂದ್ರನನ್ನು, ಹುಲಿ, ಹಾವುಗಳನ್ನು ಪೂಜಿಸುತ್ತಿದ್ದ ದ್ರಾವಿಡರು ನಡೆಸುತ್ತಿದ್ದ ಚಂದ್ರನ ಪೂಜೆಯೇ ಈ ಹಬ್ಬವಿರಬೇಕು ಅನಿಸುತ್ತದೆ. ಕರ್ನಾಟಕದ ಪಶ್ಚಿಮಕರಾವಳಿಯಲ್ಲಿ ಚಂದ್ರನ ದೇವಾಲಯವಿತ್ತೆಂದು ಕ್ರಿ.ಶ. ೯ನೇ ಶತಮಾನದ ಗ್ರೀಕ್‌ಪ್ರಹಸನವೊಂದರಲ್ಲಿ ಬರೆದಿರುವುದನ್ನು ಇಲ್ಲಿ ಸ್ಮರಿಸಬಹುದು. ಕಾಲಕ್ರಮದಲ್ಲಿ ಚಂದ್ರನಪೂಜೆ, ಚಂದ್ರಶೇಖರನ ಪೂಜೆಯೊಂದಿಗೆ ಸೇರಿ ಹೋಗಿರಬಹುದು. ಚಂದ್ರನನ್ನು ಪೂಜಿಸುವ ದ್ರಾವಿಡರ ಈ ಹಬ್ಬ ಉಳಿದು ಬಂದಿರುವುದಕ್ಕೆ ತುಮಕೂರು, ಹಾಸನ, ಚಿಕ್ಕಮಗಳೂರು, ಮಂಡ್ಯ ಮತ್ತು ಮೈಸೂರು ಜಿಲ್ಲೆಗಳಲ್ಲಿ ನಡೆಯುವ ಈ

ತಿಂಗಳುಮಾವನಪೂಜೆಯು ಸಾಕ್ಷಿಯಾಗಿದೆ. ಹಳ್ಳಿಯಲ್ಲಿ ಬೆಳ್ದಂಗಳಪ್ಪನ ಪೂಜೆಯನ್ನು ವರ್ಷಕ್ಕೊಮ್ಮೆ ಯುಗಾದಿ ಹಬ್ಬದ ನಂತರ ಬೇಸಿಗೆಯಲ್ಲಿ ಆಚರಿಸುತ್ತಾರೆ. ಯುಗಾದಿ ಕಾಲದ ಬೆಳ್ದಿಂಗಳ ಬೆಳಕು ಶುಭದ ಸಂಕೇತವೆಂದು ಯುಗಾದಿಯೇ ನಮ್ಮ ಹಳ್ಳಿಗರಿಗೆ ಶ್ರೇಷ್ಠವಾದ ಹಬ್ಬ.

ತಿಂಗಳುಮಾಮನಪೂಜೆಯನ್ನು ಮಾಡಲು ಹಳ್ಳಿಯ ಹೆಂಗಸರು ಒಂದು ಸೋಮವಾರದಂದು ದಿನ ಗೊತ್ತುಪಡಿಸಿ ಆ ದಿನದಿಂದ ಐದು, ಒಂಬತ್ತು ಇಲ್ಲವೆ ಹನ್ನೆರಡು ದಿನಗಳವರೆಗೆ ಈ ಪೂಜೆಯನ್ನು ಮಾಡುತ್ತಾರೆ. ಪೂಜೆನಡೆಯುವ ಪ್ರತಿದಿನವೂ ಹೆಣ್ಣುಮಕ್ಕಳು ಸಂಭ್ರಮ, ಸಂತೋಷದಿಂದ ಗುಂಪು ಸೇರುತ್ತಾರೆ. ಇಲ್ಲಿನ ಎಲ್ಲಾ ಕಾರ್ಯಗಳಲ್ಲಿಯೂ ಹೆಣ್ಣುಮಕ್ಕಳದೇ ಮುಖ್ಯಪಾತ್ರ ಮದುವೆಯಾಗದೆ ಇರುವ ಹೆಣ್ಣುಮಕ್ಕಳ ಜೊತೆಗೆ ಮದುವೆಯಾದ ಹೆಂಗಸರು ಕ್ರಿಯಾತ್ಮಕವಾಗಿ ಭಾಗವಹಿಸುತ್ತಾರೆ. ಹಿರಿಯರು ಮಕ್ಕಳಿಗೆ ಮಾರ್ಗದರ್ಶನ ಮಾಡುತ್ತಾರೆ. ಅಂತಹ ಸಮಯದಲ್ಲಿ ಸಣ್ಣಪುಟ್ಟ ಹುಡುಗರೆಲ್ಲ ಮಡಿಬಟ್ಟೆಯನ್ನು ಧರಿಸಿಕೊಂಡು ಕಾತುರದಿಂದ ಎಲ್ಲವನ್ನು ಗಮನಿಸುತ್ತಿರುತ್ತಾರೆ. ಹಳ್ಳಿಯ ಪ್ರತಿಮನೆಯವರೂ ಭಾಗವಹಿಸುವುದರಿಂದ ಹಬ್ಬದ ವಾತಾವರಣರುತ್ತದೆ. ಊರಿನ ಮಧ್ಯೆ ಇರುವ ಬಯಲು ಪ್ರದೇಶದಲ್ಲಿ ಇಲ್ಲವೇ ಮಾರಮ್ಮನದೇವಸ್ಥಾನದ ಮುಂದುಗಡೆ ನೆಲವನ್ನು ಸ್ವಚ್ಛಗೊಳಿಸಿ ಸಗಣಿಯಿಂದಸಾರಿಸಿ ರಂಗವಲ್ಲಿಯನ್ನು ಹಾಕಿ ಸಿಂಗರಿಸುತ್ತಾರೆ. ರಂಗೋಲಿಯಿಂದ ತೇರು, ಹಲುಬೆ, ನೇಗಿಲು, ಸರ್ಪ, ಹನುಮ, ಅರ್ಧಚಂದ್ರ, ಚಂದ್ರಮಂಡಲ, ಹೂವಿನಚಪ್ಪರ ಇತ್ಯಾದಿಗಳನ್ನು ರಂಗೋಲಿಯಿಂದ ಬಿಡುತ್ತಾರೆ. ಅರ್ಧ ಚಂದ್ರಾಕೃತಿಯ ಮೇಲೊಂದು ಮಣೆಯನ್ನು ಇಟ್ಟು ಸದರ ಮೇಲೆ ತಂಬಿಗೆಯನ್ನು ಕಳಸವಾಗಿ ಮಾಡಿ ಇಡುವರು. ಅದರ ಮೇಲೆ ಒಂದು ರಾಗಿಮುದ್ದೆ ಇಲ್ಲವೆ ದರೊಟ್ಟಿಯನ್ನು ಇಡುವರು. ಊರಿನಲ್ಲಿ ಮನೆಮನೆಯಲ್ಲಿ 'ತಿಂಗಳುಮಾವನ ತಂಗಳು ಭಿಕ್ಷೆ ಕೊಡಿರವ್ವಾ' ಎಂದು ಹಾಡಿ ಸಂಗ್ರಹಿಸಿದ ದವಸಧಾನ್ಯದಿಂದ ರೊಟ್ಟಿ ಇಲ್ಲವೆ ಮುದ್ದೆಯನ್ನು ಮಾಡುವರು.

ತಿಂಗಳು ಮಾವನನ್ನು ಪೂಜಿಸುವ ದಿನಗಳಲ್ಲಿ ಸಂಜೆಯ ವೇಳೆಯಲ್ಲಿ ಹೆಣ್ಣುಮಕ್ಕಳು ಮುಮ್ಮೇಳ ಹಿಮ್ಮೇಳಗಳಾಗಿ ಗುಂಪು ಕಟ್ಟಿಕೊಂಡು ತಿಂಗಳುಮಾವನ ಪದಗಳನ್ನು ಹಾಡುತ್ತಾರೆ. ಹೆಣ್ಣುಮಕ್ಕಳು ಮಾತ್ರವೇ ಹಾಡು ಹೇಳುವುದು ವಿಶೇಷ. ಗಂಡುಮಕ್ಕಳು ವೇಷಗಳನ್ನು ಹಾಕಿಕೊಂಡು ಪ್ರದರ್ಶನ ನೀಡುತ್ತಾರೆ. ರೈತರಿಗೆ ಬೇಸರವನ್ನು ಕಳೆಯಲು ಇದೊಂದು ಸುಸಮಯವಾಗಿದೆ. ಮನೆಯ ಬೀದಿಯವರೆಲ್ಲ ಮಾತಾಡಿಕೊಂಡು ತಮ್ಮ ತಮ್ಮ ಅನುಕೂಲಕ್ಕೆ ತಕ್ಕಂತೆ ಅಕ್ಕಿ, ಕಾಯಿ, ಬೆಲ್ಲ, ಹಣಕಾಸು ಮೊದಲಾದವನ್ನು ವಂತಿಗೆಯಾಗಿ ನೀಡಿ ಪೂಜೆಮಾಡಲು ಸಹಕರಿಸುತ್ತಾರೆ. ಈ ಸಂದರ್ಭದಲ್ಲಿ ರೈತಾಪಿ ಕೆಲಸ ಅತ್ಯಂತ ಉಲ್ಲಾಸಕರವಾಗಿರುತ್ತದೆ. ಹುಣ್ಣಿಮೆಯ ಬೆಳದಿಂಗಳಲ್ಲಿ ನೆರೆಯುವ ಈ ಹಬ್ಬವು ದೊಡ್ಡಹಬ್ಬವೆಂದೇ ಹೇಳಬಹುದು. ತಾವು ಸಂಗ್ರಹಿಸಿದ ದವಸಧಾನ್ಯದಿಂದ ಅಡುಗೆಮಾಡಿ ಎಡೆಯನ್ನು

ಮಾಡಿರುತ್ತಾರೆ. ಕರ್ನಾಟಕದ ಕೆಲವು ಭಾಗಗಳಲ್ಲಿ ಚಂದ್ರನನ್ನು ಬೆಳದಿಂಗಳ ರೂಪದಲ್ಲಿ ಇವತ್ತಿಗೂ ಪೂಜಿಸುತ್ತಾರೆ. ಸಾಮಾನ್ಯವಾಗಿ ಈ ರೀತಿಯ ಆಚರಣೆಯನ್ನು ತಿಂಗಳು ಮಾವನಪೂಜೆ, ಬೆಳದಿಂಗಳಪೂಜೆ, ಚಂದ್ರಮ್ಮನಪೂಜೆ, ಬೆಳದಿಂಗಳು ಇಡುವುದು, ಬೆಳ್ಳಿಂಗಪ್ಪನಪೂಜೆ ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

### ಉಗ್ರ ಆಚರಣೆಗಳು

ಊರಿನವರೆಲ್ಲ ಉಪವಾಸವಿದ್ದು ತ್ರಯೋದಶಿಯ ರಾತ್ರಿ ಶಿವನ ಲಿಂಗ ಕ್ಕೆ ಉರಿಮೆಣಸಿನ ಕಾಯಿ ಅರೆದು ಲೇಪಿಸುತ್ತಾರೆ. ಆ ನಂತರ 'ರುದ್ರ ಪಾರಾಯಣ ' ಆರಂಭವಾಗುತ್ತದೆ, ಸತತ ಎರಡು ಅಹೋ ರಾತ್ರಿ ಇದು ಹೀಗೆಯೇ ನಡೆದು ಮೂರನೆಯ ದಿನ ಅಮವಾಸೆಗೆ ಮಳೆ ಬಂದೇ ಬರುತ್ತದೆ ಎಂಬುದು ನಂಬಿಕೆ. ನಂತರ ಶಿವನ ಮೈಗೆ ಮೆಣಸಿನ ಉರಿ ಹಾಕಿದ ತಪ್ಪಿಗೆ ಪ್ರಾಯಶ್ಚಿತ್ತವಾಗಿ ಫಲ ಪಂಚಾಮೃತ ಅಭಿಷೇಕದ ಶಮನಕ್ರಿಯೆ ನಡುು ಸಾಮೂಹಿಕ ಅನ್ನ ಸಂತರ್ಪಣೆ ನಡೆಸಲಾಗುತ್ತದೆ.

ವೇದಗಳಕಾಲದಲ್ಲಿಯೂ ವರುಣಾರಾಧನೆಯ ವಿಭಿನ್ನಸ್ವರೂಪಗಳು ಕಂಡುಬರುತವೆ. ಅಂತರಿಕ್ಷ ದೇವತೆಗಳಲ್ಲೆಲ್ಲಾ ಅತ್ಯಂತ ಬಲಿಷ್ಠ ದೈವಾವಾದ ಇಂದ್ರನೇ ಮಳೆಯಯಜಮಾನ. ವಾಯು ವರುಣರು ಈತನ ಸಹಚರರು. ಮಿಂಚು (ವಜ್ರಾಯುಧ) ಈತನ ಆಯುಧ. ಮೋಡದ ಸ್ವರೂಪದ (ಐರಾವತ) ಆನೆ ಈತನ ವಾಹನವಂತೆ. ಎಲ್ಲಾ ರೀತಿಯ ಫಲವಂತಿಕೆಗೆ ಸಹಸ್ರಾಕ್ಷನೆಂಬ ಈತನೇ ಕಾರಣವೆನ್ನುತ್ತದೆ ವೇದ. ಮಹಾಭಾರತದಲ್ಲಿ ಇಂದ್ರನ ಇಂಥ ಹಲವು ಆಟಾಟೋಪದ ಉದಾಹರಣೆಗಳು ಬರುತ್ತವೆ. ತಕ್ಷಕನ ರಕ್ಷಕನಾಗಿ, ಗೋವರ್ಧನಗಿರಿ ಕಥೆಯಲ್ಲಿ ಪ್ರಣಯಾಂತಕನಾಗಿ ಮೆರೆದ ಇಂದ್ರನ ವರ್ಣನೆ ನಮಗೆ ಗೊತ್ತೇ ಇದೆ, ಇನ್ನು ಋಷ್ಯಶೃಂಗನೆಂಬ ಮುನಿಗೆ ತನ್ನ ತಪಃಶಕ್ತಿಯಿಂದ ಮಳೆತರಿಸುವ ಛಾತಿ ಇತ್ತೆಂಬ ವಿವರ ಮಹಾಭಾರತದಲ್ಲಿ ಕಾಣಸಿಗುತ್ತದೆ,

'ಉತ್ತರ ಕರ್ನಾಟಕದ ಹಲವೆಡೆ ಮಳೆದೇವಮಲ್ಲಪ್ಪನನ್ನು ಬಿಸಿಲಲ್ಲಿ ಒಣ ಹಾಕುತ್ತಾರೆ. ಬಿಸಿಲತಾಪ ತಡೆಯಲಾರದೆ ದೇವನೊಲಿದು ಮಳೆಸುರುಸುತ್ತಾನೆಂಬ ನಂಬಿಕೆ ಇದರ ಹಿಂದೆ ಇರಬಹುದು. ಇನ್ನು ಗುಳ್ಳವ್ವನ ಆಚರಣೆ ಎಂಬುವುದರಲ್ಲಿ ಮುಳ್ಳುಕಂಟಿಯಲ್ಲಿ ಮಳೆದೇವರನ್ನು ಎಸೆದು ಬರಲಾಗುತ್ತದೆ. ಕೋಲಾರಜಿಲ್ಲೆಯ ಹಲವೆಡೆ ಕೆರೆಯ ಅದಿದೇವತೆ ದುಗ್ಗಮ್ಮನಿಗೆ ಕಲ್ಲು ಹೊಡೆಯಲಾಗುತ್ತದೆ, ದೇಗುಲದ ಬಾವಿಗೆ ಸಗಣಿ ಕರಡುವುದು. ದೇವರ ವಿಗ್ರಹಕ್ಕೆ ತಿಗಣೆ, ಚೇಳುಗಳನ್ನು ಬಿಡುವ ಪರಮವಿಚಿತ್ರಗಳು ಇಂಥ ನಂಬಿಕೆಗಳ ಭಾಗವಾಗಿವೆ'[೨೮]. ಪುರಾತನಸಂಸ್ಕೃತಿಗಳಲ್ಲಿ ನದಿದೇವತೆಗಳು ಇರುವಂತೆ ಮಳೆದೇವತೆಗಳು ಇದ್ದರು. ಅವರು ಆಕಾಶದಲ್ಲಿ ವಾಸಿಸುತ್ತಿದ್ದರೆಂದು ತಿಳಿಯಲಾಗಿದೆ. ರೋಮನ್ನರ ಪ್ರಕಾರ ಜುಪಿಟರ್‌ಪ್ಲೂವಿಯಸ್ ಎಂಬ

ಮಳೆದೇವರು ಇದ್ದು ಈತ ತನ್ನ ಕೈಗಳಿಂದ ಮತ್ತು ಗಡ್ಡಗಳಿಂದ ನೀರು ಸುರಿಸುತ್ತಾನೆ ಎಂದು ಕಲ್ಪಿಸಲಾಗಿದೆ. ನದಿಯನ್ನು ಕೃಷಿಗೆ ಆಶ್ರಯಿಸಿದ ಕೇವಲ ಮಳೆಯಿಂದ ಕೃಷಿ ನಡೆಯಬೇಕಿದ್ದ ಪ್ಯಾಲಸ್ಟೈನ್ ದೇಶದಲ್ಲಿ ಮಳೆಯಾದರೆ ಅದು ದೇವರಕೃಪೆ ಎಂದು ಮಳೇ ಆಗದೆ ಹೋದರೆ ಅದನ್ನು ದೇವರ ಶಾಪವೆಂದು ತಿಳಿಯುತ್ತಿದ್ದರು. ನೀರು ದೇವರ(ಆಕಾಶದಲ್ಲಿದೆ)ಲೋಕದಲ್ಲಿದೆ. ಆನ್ಯರಿಗೆ ಉಪಕಾರ ಮಾಡುವಾಗ ದೇವರು ಸ್ವರ್ಗದ ಬಾಗಿಲನ್ನು ತೆರೆದು ಮಳೆಯ ರೂಪದಲ್ಲಿ ನೀರನ್ನು ಭೂಮಿಗೆ ಕಳುಹಿಸುತ್ತಾನೆ ಎಂದು ಅವರು ನಂಬಿದ್ದರು. ಅತಿವೃಷ್ಟಿ ಆದರೆ ಸ್ವರ್ಗದ ಎಲ್ಲ ಬಾಗಿಲುಗಳು ಒಮ್ಮೆಲೆ ತೆರೆದುಕೊಂಡಿವೆ ಎಂದು ಜನ ಭಾವಿಸುತ್ತಿದ್ದರು.

ಮಳೆಯಾಗದ ಸಂದರ್ಭದಲ್ಲಿ ಗುಲಾಮರನ್ನು ಸುಡುವುದರ ಮೂಲಕ ಮಳೆಯನ್ನು ಒಲಿಸಿಕೊಳ್ಳುವ ಆಚರಣೆಗಳು ಚೈನಾದೇಶದಲ್ಲಿ ರೂಡಿಯಲ್ಲಿದ್ದವು. ಉತ್ಖನನವೊಂದರಲ್ಲಿ ದೊರಕಿರುವ ಮೂಳೆಯ ಮೇಲಿನ ಉಲ್ಲೇಖವೊಂದನ್ನು ಚರಿತ್ರೆಕಾರ ಎಫ್. ಕರೋವ್ಕಿನ್ ಹೀಗೆ ಧಾಖಲಿಸಿದ್ದಾರೆ. 'ಭೂಮಿಯ ಮೇಲೆ ಮಳೆಯಾಗಲೆಂದು ನಾವು ಗುಲಾಮನೊಬ್ಬನನ್ನು ಸುಡುತ್ತಿದ್ದೇವೆ.' ಜಲಕ್ಷಾಮ ಪ್ರವಾಹಗಳ ಭಯದಿಂದ ಜನರು ಈ ಪದ್ಧತಿಗಳನ್ನು ಆಚರಣೆಗೆ ತಂದಿದ್ದರೆಂದು ತಿಳಿಯಹುದಾಗಿದೆ. ಮಳೆತರಿಸುವುದಕ್ಕಾಗಿ ಪ್ರಾಚೀನ ಟ್ಯೂಟನ್‌ರು ಬೆತ್ತಲೆಯಾದ ಹುಡುಗಿಯ ಮೇಲೆ ನೀರನ್ನು ಸುರಿಸುವ ವಿಧಿಯೊಂದನ್ನು ಆಚಸುತ್ತಿದ್ದರು. ಪ್ರಾಚೀನ ಸೆಲ್ಟಿಕ್ ಪುರೋಹಿತರಿ ಮಳೆಭರಿಸುವುದಕ್ಕಾಗಿ ಮೆರವಣಿಗೆಯಲ್ಲಿ ಒಂದು ಪವಿತ್ರಬಾವಿ ಅಥವಾ ಮಾಂತ್ರಿಕ ಚಿಲುಮೆಯ ಬಳಿ ಹೋಗುತ್ತಿದ್ದರು, ಹಾಗೂ ನೀರಿನ ಮೇಲ್ಮೈಯನ್ನು ಕೋಲುಗಳಿಂದ ಬಡಿಯುತ್ತಿದ್ದರು ಹೀಗೆ ಮಾಡುವುದರಿಂದ ಮಳೆ ಎಚ್ಚರಗೊಳ್ಳುವುದೆಂದು ಅವರು ನಂಬಿದ್ದರು.

'ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ತಾಲೂಕಿನಲಿ ರೂಢಿಯಲ್ಲಿದ್ದ ಒಂದು ಆಚರಣೆ ಮಳೆಬಾರದಿದ್ದಾಗ ಜೀವಂತ ಹಂದಿಯನ್ನು ಕುತ್ತಿಗೆಯವರೆಗೆ ನೆಲದಲ್ಲಿ ಹೂಳಿ ಬಿಟ್ಟುಬಿಡುತ್ತಿದ್ದರು. ಅದು ನೀರಿಗಾಗಿ ಅರಚಿ ಅರಚಿ ಕೊನೆಗೆ ಸಾಯುತ್ತಿತ್ತು'[೨೯]. ಮಳೆಸಂಪ್ರದಾಯದಲ್ಲಿ ಹಿಂಸಾತ್ಮಕ ಆಚರಣೆಗಳ ಅವಿರ್ಭಾವ ಅನುಕರಣೆಯದೆ ಇನ್ನೊಂದು ಮುಖ ಎನ್ನಬಹುದು. ಮಳೆ ಬರಬೇಕಾದರೆ ಮಳೆಯ ತೇವ, ಗುಡುಗು, ಸಿಡಿಲುಗಳ, ಶಬ್ಧ ಇವುಗಳನ್ನು ಅನುಕರಿಸಬೇಕು ಎಂಬುದನ್ನು ಜನ ನಂಬಿಕೊಂಡಿದ್ದ ಒಂದು ಸೂತ್ರ, ಮನುಷ್ಯ ಪ್ರಾಣಿಗಳಿಗೆ ಸ್ನಾನ ಮಾಡಿಸುವುದು, ದಿಕ್ಕುಗಳಿಗೆ ನೀರನ್ನು ಸಿಂಪಡಿಸುವುದು, ಎಲ್ಲಾ ಒಟ್ಟಾಗಿ ಸೇರಿ ಕೂಗುವುದು, ಇತ್ಯಾದಿ ಈ ಸಂಪ್ರದಾಯಗಳೆಲ್ಲಾ ಒಂದಲ್ಲ ಒಂದು ರೀತಿಯ ಅನುಕರಣೆಯೇ. ಈ ಮೂಲಾಂಶವನ್ನು ಫ್ರೇಸರ್ ಆಗಲೇ ಗುರುತಿಸಿದ್ದಾರೆ. 'ಈ ಅನುಕರಣಾತ್ಮಕ ಆಚರಣೆಗಳ ಉಗ್ರರೂಪದ ಅಭಿವ್ಯಕ್ತಿಗಳೇ ಈ ಹಿಂಸಾತ್ಮಕ ಆಚರಣೆಗಳಲ್ಲಿ ಕಾಣಿಕೊಂಡಿವೆ. ಈ ಹಿಂಸಾತ್ಮಕ ಆಚರಣೆಗಳು ಮಳೆಗಾಗಿ ನಡೆಯುತ್ತವೆ. ಮಳೆ ನಿಲ್ಲಿಸುವ ಆಚರಣೆಗಳಲ್ಲಿ ಇಷ್ಟೊಂದು

ಹಿಂಸಾತ್ಮಕವಾಗಿರುವುದು ಕಾಣದು. ಈ ಹಿಂಸಾತ್ಮಕ ಆಚರಣೆಗಳೂ ಕೂಡ ಕರ್ನಾಟಕದಲ್ಲಿ ಹಿಂದೆ ಅಥವಾ ಹೀಗೆ ಇದ್ದದ್ದು ಅಥವಾ ಇರುವುದು ಈ ಕ್ಷೇತ್ರಕಾರ್ಯದ ವೇಳೆ ಗಮನಕ್ಕೆ ಬಂದಿಲ್ಲ[೩೦]. ಭಾರತದ ಬೇರೆ ಕೆಲವು ಭಾಗಗಳಲ್ಲಿ ಮಾನವನನ್ನು ಒಳಗೊಳ್ಳುವ ಹಿಂಸಾತ್ಮಕ ಆಚರಣೆಗಳಿರುವುದು ದಾಖಲೆಯಾಗಿದೆ. ಉದಾಹರಣೆಗೆ ಹರಿಗಾರ್ಪಾಲದ ಆದಿವಾಸಿಗಳಲ್ಲಿ ಮಳೆ ಬೇಕಾದಾಗ ಯಾವುದಾದರೊಬ್ಬ ವ್ಯಕ್ತಿಗೆ ಚಿತ್ರಹಿಂಸೆ ಕೊಡಲಾಗುತ್ತದೆ. ಅವನ ಕಣ್ಣೀರು ಹಾಗೂ ರಕ್ತಹರಿದ ಹಾಗೆ ಮಳೆ ಬರುತ್ತದೆ ಎಂಬುದು ಅವರ ನಂಬಿಕೆ. ದಕ್ಷಿಣ ಆಫ್ರಿಕಾದ ಬಂಜಾರದಲ್ಲಿ ಮಳೆ ಬಾರದಿದ್ದರೆ, ರಾಜನನ್ನೇ ಹೊಡೆಯುವ ಒಂದು ಸಂಪ್ರದಾಯವಿದೆ. ರಾಜ ಎಂದರೆ ಈ ಜನಾಂಗದ ಮುಖಂಡ. ಇವರಿಗೆ ಪ್ರಕೃತಿ ನಿಯಂತ್ರಣದ ಶಕ್ತಿಯಿದೆ ಎಂದು ಆ ಜನ ನಂಬುವುದು. ಮಳೆ ಬಾರದಿರುವುದಕ್ಕೂ ಇವರು ಅದನ್ನು ಹಿಡಿದಿಟ್ಟುಕೊಂಡಿರುವುದೇ ಕಾರಣ ಎಂಬ ನಂಬಿಕೆಯಿಂದ ಈ ಪದ್ಧತಿ ಉಗಮಿಸಿರಬಹುದು. ಮಳೆ ತರಿಸಬೇಕಾಗಿದ್ದ ಪೂಜಾರಿ ಹಾಗೆ ಮಾಡುವಲ್ಲಿ ವಿಫಲವಾದರೆ ಆ ಪೂಜಾರಿಯನ್ನು ಕಲ್ಲು ಹೊಡೆದು ಸಾಯಿಸುವುದು ಅವಿಸೀನ್ಯದ ಭಾರ್ಯ ಮತ್ತು ಕುನಾಮ ಪಂಗಡದವರ ಪದ್ಧತಿಯಾಗಿತ್ತು. ಮೂರ್ಖತನದಿಂದ ಹೊರಬರುವುದೇ ನಾಗರೀಕತೆಯ ವಿಕಾಸದ ಅರ್ಥವಿರಬೇಕು.

ನೈಲ್‌ನದಿಯ ಉತ್ತರಭಾಗದ ಕೆಲಪಂಗಡಗಳು ಮಳೆ ಬಾರದಿದ್ದರೆ, ತಮ್ಮ ಪಂಗಡದ ಮಳೆ ಮಂತ್ರವಾದಿಯ ಹೊಟ್ಟೆ ಬಗೆದು ಹಾಕುತ್ತಿದ್ದರು. ಇಲ್ಲಿ ಅವನು ಮಳೆ ಬಚ್ಚಿಟ್ಟುಕೊಂಡಿರುತ್ತಾನೆಂಬುದು ಅವರ ನಂಬಿಕೆ. ಆಫ್ರಿಕಾದ ಜೂಲು ಜನ ಮಳೆ ಬಾರದಿದ್ದಾರೆ ತಮ್ಮ ಮಕ್ಕಳನ್ನು ಕುತ್ತಿಗೆಯವರೆಗೂ ಹೂತು ಬಹಳ ಕಾಲ ಹಾಗೇ ಬಿಡುತ್ತಿದ್ದರು. ಸ್ವಲ್ಪ ದೂರ ನಿಂತ ಹರಚುತ್ತಿದ್ದರು. ಇದರಿಂದ ದೇವರು ದಯೆ ಬಂದು ಮಳೆ ಕಳಿಸುತ್ತಾನೆಂದು ನಂಬಿ. ಕೆಲವು ಕಾಲದ ನಂತರ ಮಕ್ಕಳನ್ನು ಹೊರೆತೆಗೆಯುತ್ತಿದ್ದರು. (ಗೋಲ್ಡನ್ ಬೋ ಸಂಪುಟ ೩೯೨.೩) ಮಂತ್ರಹಾಕಿ ಮಳೆ ಭರಿಸುವುದು ಸಾಧ್ಯ ಎಂದು ನಂಬಿಕೊಂಡಿರುವ ಪಂಗಡಗಳು ಆಫ್ರಿಕಾ ಏಷ್ಯಾಗಳಲ್ಲೂ ಉತ್ತರಅಮೇರಿಕಾದ ಇಂಡಿಯನ್ನರ ಪಂಗಡಗಳಲ್ಲೂ ಕಂಡುಬರುತ್ತವೆ. ನಮ್ಮ ಭಾರತದಲ್ಲಿರುವಂತೆ ಸನ್ಯಾಸಿಗಳ ಧೀರ್ಘದ್ಯಾನ ಅಥವಾ ಪೂಜೆಯ ಫಲವಾಗಿ ಮಳೆ ಬರಬಹುದಾದ ರೀತಿಯಂತಲ್ಲ ಇದು. ಅನುವಂಶೀಯವಾಗಿ ಮಾಂತ್ರಿಕ ಶಕ್ತಿಯನ್ನು ಪಡೆದಿರುವಾತನೊಬ್ಬ ಜಟ್‌ಪಟ್ ಎಂದು ಕೆಲವೇ ಕ್ಷಣಗಳ ಸಪೇಕ್ಷವಾಗಿ ತೀವ್ರ ಸರಳವಾದ ವಿಧಿಯೊಂದರ ಮೂಲಕ ಮಳೆ ತರಿಸಬಲ್ಲನೆಂಬ ನಂಬಿಕೆಯಿದು. ಹೀಗೆ ಮಾಡಲು ಇವರು ವಿಫಲವಾದರೆ ಮರಣವೆ ಮಹಾನವಮಿ ಎಂದುಕೊಳ್ಳದೆ ವಿಧಿಯಿಲ್ಲ.

ಇಂತಹ ಪ್ರಸಂಗಗಳಿಂದ ತಪ್ಪಿಸಿಕೊಳ್ಳಲು ಸಹ ಹಲವು ಉಪಾಯ ಹುಡುಕುತ್ತಾರೆ. ಮಾಡಬೇಕಾದ ಕಣ್ಣುಕಟ್ಟು ನಾಟಕಗಳನ್ನೆಲ್ಲಾ ಮಾಡಿ ಕೊನೆಗೆ ಗುಂಪಿನಲ್ಲಿನ ಯಾರೋ ಒಬ್ಬನನ್ನು

ತೋರಿಸಿ "ಇವನ ತಪ್ಪಿಂದ್ಲೆ ಮಳೆ ಬಂದಿಲ್ಲ ಇವನನ್ನು ಕೊಂದು ರಕ್ತತರ್ಪಣ ಕೊಟ್ಟ ಹೋರ್ತು ದೇವರು ಮಳೆಕೊಡಲ್ಲ ಅನ್ನುತ್ತಾರೆ". ಜನ ತಕ್ಷಣ ಅವನ ನರಬಲಿ ಕೊಟ್ಟರೆ ಮಳೆ ಬರುವುದೆಂದು ನಂಬಿ ಹಾಗೆ ಕೊಡುವ ಸಂಪ್ರದಾಯ ಉಗಾಂಡದಲ್ಲೂ ಇತ್ತು. ಮಳೆ ತರಿಸಲು ಹಾಗೂ ಕೆಲವೇಳೆ ಅದನ್ನು ನಿಲ್ಲಿಸಲು ಕೂಡ ಹಲಬಗೆಯ ಹಿಂಸಾತ್ಮಕ ಆಚರಣೆಗಳು ಮನುಷ್ಯನನ್ನೆ ಕೇಂದ್ರವಾಗಿಸಿಕೊಂಡು ನಮಗಿಂದು ಆಶ್ಚರ್ಯಕಾರಿ, ಭಯಾನಕ ಎನಿಸಿದರೂ ಅಷ್ಟೇ ಸತ್ಯವಾದ ವಿಷಯವಾಗಿತ್ತು. ಈ ಮಾನವ ಹಿಂಸೆ ನಿಲ್ಲಿಸಿ ನಂತರ ಇದರ ಬದಲು ಪ್ರಾಣಿಗಳನ್ನು ಬಲಿಕೊಡುವತ್ತಾ ಈ ಸಂಪ್ರದಾಯಗಳು ತಿರುಗಿದವು ಎಂದು ಹೇಳಲು ಖಂಡಿತಾ ಬರುವಂತಿಲ್ಲ. ಏಕೆಂದರೆ ಇವೆಲ್ಲಾ ಸಮಾಂತರವಾಗಿ ಒಂದೇ ಕಾಲದಲ್ಲಿ ವಿವಿಧ ಪ್ರದೇಶದಲ್ಲಿ ಬಳಕೆಯಲ್ಲಿದ್ದದನ್ನು ವಿದ್ವಾಂಸರು ದಾಖಲಿಸಿದ್ದಾರೆ. ಕರ್ನಾಟಕವಷ್ಟೇ ಏಕೆ, ದಕ್ಷಿಣ ಭಾರತದಲ್ಲಿ ಈ ಕ್ರೂರ ಸಂಪ್ರದಾಯ ಬಳಕೆಯಲ್ಲಿರಲಿಲ್ಲವೆಂಬುದು ಇಂತಹ ಸಂಪ್ರದಾಯಗಳಲ್ಲಿ ಎಲ್ಲಿಯೂ ಹೆಣ್ಣನ್ನು ಬಲಿಕೊಡುತ್ತಿರಲಿಲ್ಲವೆಂಬುದು ಸ್ವಲ್ಪ ಸಮಾಧಾನಕರವಾದ ಅಂಶಗಳು.

**ನಿಷೇಧಾತ್ಮಕ ಆಚರಣೆಗಳು**

ಮಳೆ ಬರಿಸುವ ಆಚರಣೆಗಳಿಗೆ ಹೋಲಿಸಿದಾಗ ಮಳೆನಿಲ್ಲಿಸುವ ಆಚರಣೆಗಳು ತೀರಾ ವಿರಳವೆಂದೇ ಹೇಳಬಹುದು. 'ಮಳೆ ಬಂದರೆ ಕೇಡೇ ಮಗ ಉಂಡರೇ ಕೇಡೇ' ಎಂಬ ಗಾದೆಯಂತೆ ಮಳೆ ಹೆಚ್ಚಾಗಿ ಸುರಿದರೂ ಅಷ್ಟೇನೂ ನಷ್ಟವಿಲ್ಲ. ಆದರೂ ತೀರಾ ಬಿರುಸಾಗಿ ಪ್ರವಾಹದೋಪಾದಿಯಲ್ಲಿದ್ದರೆ ನಿಲ್ಲಲಿ ಎಂಬ ಆಶಯದಿಂದ ಕೆಲವು ಆಚರಣೆಗಳು ರೂಢಿಯಲ್ಲಿವೆ. ಮಳೆಯಸಂರಕ್ಷಕ ಎಂದು ಭಾವಿಸಲಾಗುವ ಬೆಣಚುಕಲ್ಲು, ಕಪ್ಪೆ ಮುಂತಾದವನ್ನು ಅತಿವೃಷ್ಟಿಯ ಸಂದರ್ಭದಲ್ಲಿ ಬೆಂಕಿಯ ಬಳಿ ಇಡುವುದು ಒಂದು ರೀತಿ. ಹರಕು ಮೆಟ್ಟಿಗೆ ಬೆಂಕಿ ಹಚ್ಚಿ ಮಳೆಯಲ್ಲಿಡುವ ಸಂಪ್ರದಾಯ ಬೆಳಗಾವಿಜಿಲ್ಲೆಯಲ್ಲಿದೆ. ತಟ್ಟೆ ತುಂಬ ಬೆಂಕಿಕೆಂಡವನ್ನು ತುಂಬಿ ಬಯಲಿಗೆ ಸುರಿದರೆ ಮಳೆನಿಲ್ಲುತ್ತದೆ ಎಂಬ ಭಾವನೆ ಜಗತ್ತಿನ ಎಲ್ಲಾ ಸಮುದಾಯಗಳಲ್ಲೂ ಇದೆ.

ನೆಲವನ್ನು ಉತ್ತು ಬಿತ್ತಿ ಬೆಳೆತೆಗೆಯುವ ಕಾಯಕವನ್ನು ಮನುಕುಲ ಕೈಗೊಂಡು ಅಲ್ಲಲ್ಲೇ ಗುಂಪಾಗಿ ನೆಲಸಲಾರಂಭಿಸಿದಾಗ ಮಳೆಬೇಕಾದಾಗ ಬಾರೆನ್ನಲಾಗದೆಂಬುದು ಬಹುಬೇಗ ಅನುಭವಕ್ಕೆ ಬಂದಿರಬಹುದು. ಆರಂಭದ ಮಳೆ ನಾಲ್ಕುದಿನ ತಡವಾದರೂ ಭೂಮಿ ಹದಗೊಳ್ಳುವಲ್ಲಿ ಆಗುತ್ತಿದ್ದ ವ್ಯತ್ಯಾಸ, ತಡವಾಗಿ ಬಂದ ಮೊದಲಮಳೆಯು ಸಕಾಲಕ್ಕೆ ಬಂದನಂತರ ಮಳೆಯು ಸೇರಿ ಜಮೀನಿನ ಮಣ್ಣು ಅಥವಾ ಬಿತ್ತಿದಬೀಜ ಕೊಚ್ಚಿಹೋಗುತ್ತಿದ್ದುದು. ಇಂಥವೆಲ್ಲ ಸೇರಿ ಮಳೆ ಸಕಾಲಕ್ಕೆ ಬರುವುದನ್ನು ಎದುರು ನೋಡುತ್ತಿದ್ದ ಸ್ಥಿತಿಗೆ ಮನುಷ್ಯನನ್ನು ತಂದಿಟ್ಟವು. ಮಳೆಯ ಆರೈಕೆ ಕೆಲವೇ ದಿನಗಳಲ್ಲಿ

ಹಪಹಪಿಕೆಯಾಗಿ ಅಷ್ಟರಲ್ಲೇ ಫಲ ಕಾಣದಾದಾಗ ಅಥವಾ ರಕ್ಷಣಾತ್ಮಕ ಮುಂದಾಲೋಚನೆಯಿಂದ ಮಳೆಗಾಗಿ ಕೋರಿಕೊಳ್ಳುವ ಹಲವು ಚಟುವಟಿಕೆಗಳು ಈಗ ನಾವು ಆಚರಣೆ ಎಂದು ಕರೆಯಲ್ಪಡುವಂತಹವು, ಹುಟ್ಟಿದವು. ಅದೇ ರೀತಿ ಮಳೆ ಹೆಚ್ಚಾದಾಗ ಸಾಕು ನಿಲ್ಲಿಸೆಂದು ಬೇಡಿಕೊಳ್ಳುವ ಆಚರಣೆಗಳು ಹುಟ್ಟಿದವು.

ಮಳೆಗೆ ಸಂಬಂಧಿಸಿದ ನಂಬಿಕೆ ಆಚರಣೆಗಳ ಆರಂಭಿಕ ಹಿನ್ನೆಲೆ ಸಾಮಾನ್ಯ ಪ್ರದೇಶಗಳಲ್ಲಿ ಈ ಬಗೆಯದ್ದಾಗಿರಬಹುದಾದರೆ ಮರುಭೂಮಿ ಪ್ರದೇಶಗಳಲ್ಲಿ ಈ ಹಿನ್ನೆಲೆ ಇನ್ನೂ ಸರಳ ಉತ್ಕಂಠಿತ ಹಾಗೂ ಪ್ರಾಚೀನವಿದ್ದಿರಬೇಕು. ಅಲ್ಲಿ ಕೃಷಿಯ ಮಾತಿರಲಿ ಕುಡಿಯುವ ನೀರಿಗೂ ತ್ರಾಸವಾಗುತ್ತಿತ್ತು. ಹೀಗಾಗಿ ಸಕಾಲಕ್ಕೆ ಮಳೆಯಾಗುವುದಷ್ಟೇ ಅಲ್ಲ ಆದಷ್ಟು ಹೆಚ್ಚು ಕಾಲ ಮಳೆಯಾಗುವಂತೆ ಪ್ರಾರ್ಥಿಸುವ ಪರಿಪಾಠ ಅಲ್ಲಿ ಹುಟ್ಟಿತು. ಇವುಗಳ ಆರಂಭಕ್ಕೆ ಅಲ್ಲಿನ ಚದುರಿದ ಜನಸಮುದಾಯ ಕೃಷಿಯನ್ನು ಕಂಡು ಹಿಡಿಯಬೇಕಾಗಿರಲಿಲ್ಲ. ಬದುಕು ಅಷ್ಟೊಂದು ಕಾಲಾವಕಾಶ ಅವರಿಗೆ ಕೊಟ್ಟಿರಲಿಕ್ಕಿಲ್ಲ. ಅವರಿಗಿದ್ದ ನೀರಿನ ತುರ್ತು ಇತರೆಯವರಿಗಿಂತ ಎಷ್ಟೋ ಪಟ್ಟು ಹೆಚ್ಚಿನದು. ಆದ್ರೆ ಮಳೆಗಾಲ ಹೊದ್ರೆ ಕೊನೆಗಾಲ ಎಷ್ಟೇ ಮಳೆ ಬಂದ್ರೂ ಅವರಿಗೆ ಬೇಕಾಗಿತ್ತು. ಆದ್ದರಿಂದ ಮಳೆ ನಿಲ್ಲಿಸುವಂತೆ ಕೋರುವ ಆಚರಣೆಗಳು ಅಲ್ಲಿ ಪ್ರಚಾರಗೊಳ್ಳಲಿಲ್ಲ. ದಟ್ಟ ಕಾಡಿರುವ ದಕ್ಷಿಣ ಆಫ್ರಿಕೆಯಲ್ಲಿರಲಿ ನೈಲ್‌ನದಿಯ ಕೊಳದಲ್ಲಿಯೂ ಅಲ್ಲಲ್ಲಿರುವ ಮಳೆ ನಿಲ್ಲಿಸುವ ಆಚರಣೆಗಳು ಅದರೀಚೆಯ ಅರಬ್ಬಿಯ ತುರ್ಕಿ ಪರ್ಶಿಯಾಗಳಲ್ಲಿ ಕಾಣುವುದಿಲ್ಲ. ದಕ್ಷಿಣಕರ್ನಾಟಕದ ಕೆಳಗಡೆ ಇರುವ ಮಳೆ ನಿಲ್ಲಿಸುವ ಆಚರಣೆಗಳು ಧಾರವಾಡದಿಂದ ಮೇಲಿನ ಉತ್ತರ ಭಾಗದಲ್ಲಿಲ್ಲ. ಬೇಕೆಂದಷ್ಟು ಬರದಿದ್ರೆ ಸಾಕು ಅನ್ನೋದು ಎಲ್ಲಿಂದ.

ಮಳೆಬರಿಸುವ ಅಥವಾ ನಿಲ್ಲಿಸುವ ಎರಡೂ ಆಚರಣೆಗಳಲ್ಲಿ ನಗ್ನತೆ ಬಹುಮುಖ್ಯ ಅಂಶವಾಗುವುದುಂಟು. ಗುರ್ಚಿ, ಮಳೆಮಲ್ಲಪ್ಪ, ಮೊದಲಾದ ಆಚರಣೆಗಳಲ್ಲಿ ಮಳೆರಾಯನ ಪ್ರತೀಕವನ್ನು ಹೊರುವ ಹುಡುಗ ನಗ್ನನಾಗಿರುತ್ತಾನೆ ಎಂಬುದನ್ನು ಗಮನಿಸಬಹುದು. ಇಲ್ಲಿ ಮಳೆ ಫಲವಂತಿಕೆಯ ಸಂಕೇತವಾಗಿದ್ದು ಇದನ್ನು ಪ್ರೇರೇಪಿಸುವುದಕ್ಕೆ ನಗ್ನತೆ ಅಗತ್ಯವಾಗುತ್ತದೆ. ಅತಿವೃಷ್ಟಿಯ ಸಂದರ್ಭದಲ್ಲಿ ಚಿಕ್ಕಮಕ್ಕಳನ್ನು ಬೆತ್ತಲೆಮಾಡಿ ಅವರ ಕೈಯಿಂದ ಒಲೆಯೊಳಗಿನ ಕೊಳ್ಳಿಯನ್ನು ಹೊರಗೆಸೆಯುವಂತೆ ಮಾಡಿದರೆ ಮಳೆಬಿಡುತ್ತದೆ ಎಂಬ ನಂಬಿಕೆ ಇದೆ. ಎಳೆ ಮಕ್ಕಳು ಚಡ್ಡಿ ಬಿಚ್ಚಿ ತಮ್ಮ ಹಿಂಭಾಗವನ್ನು ತೋರಿಸಿದರೆ ಮಳೆ ನಿಲ್ಲುವುದು ಎಂಬ ನಂಬಿಕೆಯೂ ಇದೆ. ಮಳೆ ನಿಲ್ಲಿಸಬೇಕಾದರೆ ಬಯಲಲ್ಲಿ ಕಕ್ಕಸಿಗೆ ಕೂರಬೇಕು ಎಂಬ ನಂಬಿಕೆಯ ಹಿನ್ನೆಲೆಯಲ್ಲಿ 'ಸ್ವಾತಿ ನಾ ಹ್ಯಾತಿ ಅಂದ್ರೂ ಬಿಡದು' ಎಂಬ ಗಾದೆ ಹುಟ್ಟಿರಬಹುದು ಎಂದು ಕೆಲವು ವಿದ್ವಾಂಸರು ವಿಶ್ಲೇಷಿಸಿದ್ದಾರೆ. ಕೆಲವು ಕಡೆ

ಮಳೆರಾಯನನ್ನು ಬೈಯ್ದು ಮಳೆಯನ್ನು ಹೋಗಲಾಡಿಸುವ, ಪೊರಕೆಯನ್ನು ತಲೆಕೆಳಗಾಗಿ ಇಡುವ ವಿಧಾನಗಳೂ ರೂಢಿಯಲ್ಲಿವೆ.

ಮಳೆಯನ್ನು ನಿಲ್ಲಿಸುವ ಸಲುವಾಗಿ ಎಲ್ಲರೂ ಉಪವಾಸವಿದ್ದು ಪೂಜೆ ಪುನಸ್ಕಾರಗಳಲ್ಲಿ ತೊಡಗುವ, ಜಲದೇವಿಗೆ ನೈವೇದ್ಯ ಅರ್ಪಿಸುವ ಕೆಲವು ಉಪಾಸನಾ ವಿಧಿಗಳೂ ಉತ್ತರಭಾರತದಲ್ಲಿವೆ. 'ನಿಗಿನಿಗಿ ಕೆಂಡವನ್ನು ಕೇರುವುದರಿಂದ ಮಳೆ ನಿಲ್ಲುತ್ತದೆಯೆಂದು ನಂಬುತ್ತಾರೆ. ಮಳೆಯಿಂದ ಹೊಳೆಯ ನೀರು ಊರಿನ ಕಡೆಗೆ ನುಗ್ಗುತ್ತಿದ್ದರೆ ಎರಡು ಬಾಳೆ ಎಲೆಗಳನ್ನು ಒಂದರ ಮೇಲೆ ಒಂದನ್ನಿಟ್ಟು ಅದರ ತುಂಬಾ ಅಕ್ಕಿ ಹಾಕಿ ಅದರ ಮದ್ಯೆ ತೆಂಗಿಕಾಯಿಯನ್ನು ಇರಿಸಿ ಹೂವ್ವು ಕುಂಕುಮ ಹರಿಶಿಣ ಇಟ್ಟು ಹೊಳೆಯಲ್ಲಿ ತೇಲಿಬಿಡುವ ಪದ್ದತಿ ದಕ್ಷಿಣಕನ್ನಡಜಿಲ್ಲೆಯಲ್ಲಿ ರೂಡಿಯಲ್ಲಿದೆ. ಬಿಜಾಪುರ ಜಿಲ್ಲೆಯಲ್ಲಿ ಏರಿ ಬಂದ ನದಿಯ ನೀರಿಗೆ ಮುತ್ತೈದೆಯರು ಪೂಜೆಮಾಡುವ ಪದ್ದತಿ ರೂಡಿಯಲ್ಲಿದೆ. ಗಂಡಸರಿಬ್ಬರಲ್ಲಿ ಒಬ್ಬನು ಸ್ತ್ರೀವೇಷ ಧರಿಸಿ ಎಲ್ಲರೆದುರು ಶಾಸ್ತ್ರೋಕ್ತ ರೀತಿಯಲ್ಲಿ ಮದುವೆಯಾಗುವ ಪದ್ದತಿ ಜಮಖಂಡಿ ಭಾಗದಲ್ಲಿ ರೂಢಿಯಲ್ಲಿದೆ. ಹೀಗೆ ಮಾಡುವುದರಿಂದ ಮಳೆರಾಯ ನಾಚಿ ಮಳೆಯನ್ನು ನಿಲ್ಲಿಸುತ್ತಾನೆ'[೩೧].

**ಮಳೆ ಬಾಯಿಕಟ್ಟುವುದು**

ಮಳೆಬಂದರೂ ಕಷ್ಟ, ಮಳೆಹೋದರೂ ಕಷ್ಟ. ಮಳೆ ಹೆಚ್ಚಾಗಿ ಬಂದರೆ ಅತಿ ವೃಷ್ಟಿಯಾಗಿ ಮತ್ತೆ ರೈತರಿಗೆ ಕಷ್ಟ ತಪ್ಪಿದ್ದಲ್ಲ. ಮಳೆ ಬರಲಿ ಎಂದು ಮನುಷ್ಯ ನೆರವೇರಿಸುವ ಆಚರಣೆಗಳೂ ಹಲವಾರು ಬಗೆ. ವಿಶ್ವದಾದ್ಯಂತ ಸಾವಿರಾರು ನಂಬಿಕೆಗಳು ಪ್ರಚಲಿತದಲ್ಲಿವೆ ಎಂಬುದನ್ನು ನೋಡಿದ್ದೇವೆ. ಮಳೆ ಅತಿಯಾಗಿ ಬರುವುದನ್ನು ತಡೆಯಲು ಕೆಲವು ಕಡೆ ಆಚರಣೆಗಳು ಪೂಜೆಗಳು ನಡೆಯುವುದುಂಟು. ಕರ್ನಾಟಕದ ಬುಡಕಟ್ಟು ಜನಾಂಗಗಳಲ್ಲೊಂದಾದ ಸೋಲಿಗರಲ್ಲಿ ಮಳೆಯನ್ನು ನಿಲ್ಲಿಸಲು ಧಾರ್ಮಿಕಾಚರಣೆ ಮಾಡುತ್ತಾರೆಂದು ಎಸ್.ಜಿ.ಮೊರೆಬ್ ತಿಳಿಸುತ್ತಾರೆ.

ಅತಿವೃಷ್ಟಿಯಾದ ಸಂದರ್ಭದಲ್ಲಿ ಸೋಲಿಗರ ಹಿರೆಯ ಯಜಮಾನ ಅಥವಾ ತಮ್ಮಡಿ ಒಂದು ಭೂತಾಳೆ (ಕತ್ತಾಳೆ) ಯನ್ನು, ಒಂದು ಕೊಡಲಿಯನ್ನು ತೆಗೆದುಕೊಂಡು ಹತ್ತಿರದ ಬೆಟ್ಟದ ತುತ್ತತುದಿಗೆ ಹೋಗುತ್ತಾನೆ. ಅಲ್ಲಿ ಆತ ತನ್ನ ಮೈಮೇಲಿನ ಬಟ್ಟೆಗಳನ್ನು ಕಳಚಿ, ಹುಟ್ಟಿದ ನಿರ್ವಾಣದಲ್ಲಿ ನಿಂತು, ಭೂತಾಳೆಯನ್ನು ಕೊಡಲಿಯಿಂದ ಚಿಂದಿ ಚಿಂದಿಯಾಗಿ ಸೀಳಿ, ಆ ಚೂರುಗಳನ್ನು ಬೆಟ್ಟದ ತುದಿಯ ನೀರಿಗೆ ಎಸೆದೊಗೆಯುತ್ತಾನೆ. ಹೀಗೆ ಎಸೆದು ಆತ ತನ್ನ ಪೋಡಿಗೆ ಬರುತ್ತಾನೆ. ಹೀಗೆ ಮಾಡುವುದರಿಂದ ಸುರಿಯುವ ಮಳೆ ನಿಲ್ಲುತ್ತದಂತೆ. ಇದು ಸಾರ್ವಜನಿಕ ಹಿತದೃಷ್ಟಿಯಿಂದ ನಡೆಸುವ ಕ್ರಿಯೆ ಎಂದು ಅವರು ನಂಬುತ್ತಾರೆ. ಬಿಳಗಿರಿರಂಗನ ಬೆಟ್ಟದ ತಪ್ಪಲಿರುವ ಕೆಲವು ಸೋಲಿಗರು ಈ ಕ್ರಿಯೆಯನ್ನು "ಮಳೆಬಾಯಿಕಟ್ಟುವುದು" ಎಂದು ಕರೆಯುತ್ತಾರೆ. ಇದೇ ರೀತಿ ಅವರಲ್ಲಿ ಕ್ರೂರ ಪ್ರಾಣಿಗಳ

ಬಾಯಿಕಟ್ಟುವುದೂ ಉಂಟು. ಸಿಂಹಗಳಂಥ ಕ್ರೂರಪ್ರಾಣಿಗಳ ಬಾಯಿಕಟ್ಟಿಸಿದರೆ ಅವು ಮನುಷ್ಯರಿಗೆ ಉಪಟಳ ಕೊಡುವುದಿಲ್ಲವೆಂದು ಅವರು ಅನುಭವದಿಂದ ಹೇಳುತ್ತಾರೆ.

ಮಳೆಗೆ ಸಂಬಂಧಿಸಿದಂತೆ ಇರುವ ಇಂತಹ ಆಚರಣೆಗಳನ್ನು ಆಚರಿಸಿದಾಗ ಖಂಡಿತ ಮಳೆಯಾಗುತ್ತಿತ್ತು. ಆದರೆ ಇಂದು ಮನುಷ್ಯ ಧರ್ಮದ ದಾರಿಬಿಟ್ಟಿರುವುದರಿಂದ ಈ ಆಚರಣೆಗಳ ಬಲಕುಂದಿದೆ ಎಂದು ನಮ್ಮ ಹಿರಿಯರು ಹೇಳುವುದನ್ನು ನಾವು ಸಾಮಾನ್ಯವಾಗಿ ಕೇಳುತ್ತಿರುತ್ತೇವೆ. ಇಂದಿನವರ ದೃಷ್ಟಿಯಲ್ಲಂತೂ ಎಲ್ಲ ಆಚರಣೆಗಳೂ ಅರ್ಥಹೀನವಾಗಿ, ತಮಾಷೆಯಾಗಿ, ಅವೈಜ್ಞಾನಿಕವಾಗಿ ಕಾಣುತ್ತವೆ. ಮಳೆಯಾಗುತ್ತದೋ ಇಲ್ಲವೋ ಎಂಬ ಬಗ್ಗೆ ಅಷ್ಟೊಂದು ಕರಾರುವಾಕ್ಕಾಗಿ ಭವಿಷ್ಯ ನುಡಿಯಬಲ್ಲ ಜನಪದರು ಇಂಥ ಆಚರಣೆಗಳ ಮೊರೆಹೋಗುವುದು, ಇಂಥ ಮೂಢ ನಂಬಿಕೆಗಳಿಗೆ ಶರಣಾಗಿರುವುದು ಒಂದು ರೀತಿಯ ವಿಪರ್ಯಾಸ ಎನಿಸುತ್ತದೆ. ಅನಿಬಂಧಿತವಾದ ಮಳೆಯನ್ನು ನಿಯಂತ್ರಣಕ್ಕೊಳಪಡಿಸುವ ಶಕ್ತಿ ಇಂತಹ ಆಚರಣೆಗಳಿಗಿಲ್ಲ ಎಂಬ ಅಭಿಪ್ರಾಯವೂ ಮೂಡುತ್ತದೆ. ಆದರೆ ಯಾವ ಆಚರಣೆಗಳೂ ಮೂಲರೂಪದಲ್ಲಿದ್ದಂತೆಯೇ ಇಂದು ಉಳಿದುಬಂದಿಲ್ಲ ಎಂಬ ಸಂಗತಿಯನ್ನು ಗಮನದಲ್ಲಿಡಬೇಕಾದುದು ಬಹಳ ಮುಖ್ಯ. ಇವೆಲ್ಲವೂ ಇಂದು ಕೇವಲ ಸಾಂಕೇತಿಕವಾಗಿ ಮಾತ್ರ ಉಳಿದುಬಂದಿವೆ. ಆದ್ದರಿಂದ ಈ ಆಚರಣೆಗಳ ಮೂಲ ಸ್ವರೂಪವನ್ನು ತಿಳಿಯದೆ ಅವುಗಳ ಬಗ್ಗೆ ನಿರ್ಣಯವನ್ನೂ ತೆಗೆದುಕೊಳ್ಳುವುದು ಅಷ್ಟು ಸಾಧುವಲ್ಲ.

- ಗಂಡಿಗೆ ಹೆಣ್ಣಿನ ವೇಷಹಾಕಿ ಶಾಸ್ತ್ರೋಕ್ತವಾಗಿ ಮದುವೆ ಮಾಡಿದರೆ ಮಳೆನಿಲ್ಲುತ್ತದೆ.
- ಮಳೆಯಲ್ಲಿ ಬೆಂಕಿಯನ್ನು ಅಥವಾ ಕೆಂಡವನ್ನು ಹಾಕಿದರೆ ಮಳೆನಿಲ್ಲುತ್ತದೆ.
- ಒಲೆಯಲ್ಲಿ ಉಪ್ಪು ಉರಿದರೆ ಮಳೆನಿಲ್ಲುತ್ತದೆ.
- ಕರಿ ಮುಕುಳಿಯನ್ನು ಆಕಾಶಕ್ಕೆ ತೋರಿಸಿದರೆ ಮಳೆನಿಲ್ಲುತ್ತದೆ.
- ಕರಿಯರು ಬೆತ್ತಲಾದರೆ ಮಳೆನಿಲ್ಲುತ್ತದೆ.
- ಆನೆಕಲ್ಲು ಆಡಿದರೆ ಮಳೆಬರುವುದಿಲ್ಲ.
- ಮಳೆ ಹೆಚ್ಚಾದಾಗ ಮಾಳಿಗೆ ಮೇಲಿಂದ ನೀರು ಹರಿದು ಕೆಳಗೆ ಬೀಳುವ ಸ್ಥಳದಲ್ಲಿ ಉದ್ದನೆಯ ಕಬ್ಬಿಣದ ತುಂಡನ್ನು ಹೊಡೆಯುತ್ತಾರೆ ಹೀಗೆ ಮಾಡುವುದರಿಂದ ಮಳೆನಿಲ್ಲುತ್ತದೆ.
- ಒರಳು ಕಲ್ಲು ತೂತು ಮಾಡಿದರೆ ಮಳೆನಿಲ್ಲುತ್ತದೆ.
- ಹಕ್ಕ ಆಟ ಆಡುವುದು.
- ಮುತ್ತೈದೆಯರೆಲ್ಲ ಹೊಳೆಗೆ ಹೋಗಿ ಗಂಗಾವ್ವನ ಪೂಜೆ ಮಾಡಿ ಕೋರಿಕೆ ಸಲ್ಲಿಸುವುದು.

- ಮಳೆಗಳಲ್ಲಿ ಹಿಂಗಾರುಮಳೆ ಎಂದು ಕರೆದು ರೇವತಿಮಳೆ ಬಂದು ಅಶ್ವಿನಿಮಳೆ ಬಂದರೆ ತೊಂದರೆ ಏನು ಇಲ್ಲ. ಇಲ್ಲವೆಂದರೆ ನೇರವಾಗಿ ರೇವತಿಮಳೆ ಬರದೇ ಅಶ್ವಿನಿಮಳೆ ಬಂದರೆ ಮುಂದಿನ ಮೂರು ಅಥವಾ ಏಳು ಮಳೆಗಳನ್ನು ಕಳೆಯುತ್ತದೆ ಎಂಬ ನಂಬಿಕೆ ಇದೆ.
- ಹಸ್ತಮಳೆ ಮೊದಲ ದಿವಸ ಬಂದರೆ ಭೂಮಿ ತುಂಬಾ ಯ್ಯಾಟ್ಟಿ, ಎರಡನೇ ದಿವಸ ಬಂದರೆ ಬೆಳ್ಳಿ ಹ್ಯಾಂಗ ಮೃದು, ಮೂರನೇ ದಿವಸ ಬಂದರೆ ಅಕ್ಕಡಿ ಸಾಲು ಬಂಗಾರ ಅಂದರೆ ಕಾಳು ಆಗುವುದು ಖಚಿತ.
- ಹಿರೇಪುಷ್ಯ, ಚಿಕ್ಕಪುಷ್ಯ ಅಣ್ಣತಮ್ಮ ಇದ್ದಾಂಗ ಇವೆರಡೂ ಒಕ್ಕಲಿಗನಿಗೆ ಭಾಷೆಕೊಟ್ಟಿದ್ದಾವೆ. ಅಣ್ಣ ಬರಲಿಲ್ಲವೆಂದರೆ ತಮ್ಮಬರುತ್ತಾನೆ ತಮ್ಮ ಬರುವುದಿಲ್ಲವೆನ್ನುವುದಾರೆ ಅಣ್ಣಬರುತ್ತಾನೆ ಇವೆರಡನ್ನು ನಂಬಿಕೊಂಡ ಒಕ್ಕಲಿಗನಿಗೆ ಎಂದೂ ಕೇಡು ಆಗುವುದಿಲ್ಲ.

### ಮಳೆಗೆ ಸಂಬಂಧಿಸಿದ ಜಾನಪದ ಕ್ಷೇತ್ರವಿವಕ್ಷೆ

ಮಳೆ ಹಾಗೂ ಅದರ ಸಂಬಂಧವಾಗಿ ಕಾಣಿಸಿಕೊಳ್ಳುವ ಗುಡುಗು, ಸಿಡಿಲು, ಮಿಂಚು, ಕಾಮನಬಿಲ್ಲು ಇತ್ಯಾದಿಗಳ ಬಗ್ಗೆ ಜಗತ್ತಿನ ಎಲ್ಲ ಸಂಸ್ಕೃತಿಗಳಲ್ಲೂ ಬಹು ವರ್ಣರಂಜಿತ ಕಲ್ಪನೆಗಳಿವೆ. ಪ್ರತಿಯೊಂದು ಸಂಸ್ಕೃತಿಯಲ್ಲೂ ಸಿಡಿಲನ್ನು ದೇವತೆಯ ಕೋಪದ ಪ್ರಕಟಣೆ ಅಥವಾ ದೇವರು ಕೊಡುವ ಶಿಕ್ಷೆಯರೂಪ ಎಂದು ಭಾವಿಸಲಾಗಿದೆ. ಸಿಡಿಲಿನ ಉಗ್ರರೂಪ ಹಾಗೂ ವಿನಾಶಕಾರಿಗುಣವೇ ಈ ರೀತಿಯ ಭಾವನೆಗೆ ಕಾರಣ ಎಂಬುದು ಸ್ಪಷ್ಟ. ಮಿಂಚು ಹಾಗೂ ಸಿಡಿಲನ್ನು ದೇವತೆ ಆಯುಧ ಎಂಬಂತೆಯೇ ಜಗತ್ತಿನ ಬಹುತೇಕ ಪುರಾಣಗಳಲ್ಲಿ ಚಿತ್ರಿಸಲಾಗಿದೆ. ಸಿಡಿಲು ಬಿದ್ದರೆ ಊರಿಗೆ ಒಳ್ಳೆಯದಲ್ಲ ಎಂದು ಸಿಡಿಲು ಬಿದ್ದ ಜಾಗಕ್ಕೆ ತಂಬಿಟ್ಟಿನಾರತಿ ತೆಗೆದುಕೊಂಡು ಹೋಗಿ ಟಗರಿನ ಬಲಿಕೊಡುವ ರೂಢಿ ಕೋಲಾರಜಿಲ್ಲೆಯ ಕೆಲವು ಪ್ರದೇಶಗಳಲ್ಲಿದೆ. ಊರಿಗೊದಗಿದ ಕೇಡನ್ನು ನಿವಾರಿಸುವುದಕ್ಕಾಗಿ ಇಡೀ ಊರಿನ ಜನರು ಭಾಗಿಯಾಗುತ್ತಾರೆ. ಸಿಡಿಲು ಬಿದ್ದು ಸತ್ತಕುರಿ, ಮೇಕೆಗಳನ್ನು ಸಹ ತಿನ್ನುವುದಿಲ್ಲ. ಸಿಡಿಲಿನ ಬಗ್ಗೆ ಇದೇ ರೀತಿಯ ಭಾವನೆ ಇರುವುದನ್ನು ಪಶ್ಚಿಮಆಫ್ರಿಕದ ದಾಹೊವಿಯಲ್ಲಿ ಕಾಣಬಹುದು. ಆದರೆ ಗ್ರೀಸಿನಲ್ಲಿ ಗುಡುಗು ಹಾಗೂ ಸಿಡಿಲುಗಳನ್ನು ಜೂ ದೇವನ ಪ್ರಕಟನಾ ರೀತಿ ಎಂದು ಭಾವಿಸುವುದರಿಂದ ಸಿಡಿಲು ಬಿದ್ದ ಜಾಗವನ್ನು ಪವಿತ್ರವೆಂದು ಪರಿಗಣಿಸುತ್ತಾರೆ. ನಮ್ಮಲ್ಲಿ ಸಿಡಿಲನ್ನು ಅರ್ಜುನ ಬಿಡುವ ಚಿನ್ನದಬಾಣ ಎಂದೂ ಕಲ್ಪಿಸಿದ್ದಾರೆ. ಸಿಡಿಲು ಬಿದ್ದ ಜಾಗದಲ್ಲಿ ಸಗಣಿ ತೊಟ್ಟಿಯನ್ನು ಹಾಕಿದರೆ ಅದು ಚಿನ್ನವಾಗುತ್ತದೆ. ಸಿಡಿಲು ನಾಗರಹಾವಿಗೆ ಮತ್ತು ಹಿರಿಯಮಗನಿಗೆ ಹೊಡೆಯುತ್ತದೆ. ಕಬ್ಬಿಣದ ಚೂರೊಂದನ್ನು ಹಿಡಿದುಕೊಂಡರೆ ಸಿಡಿಲು

ಹೊಡೆಯುವುದಿಲ್ಲ. ಅರ್ಜುನನ ಹತ್ತು ಹೆಸರುಗಳನ್ನು ಹೇಳಿಕೊಂಡರೆ (ಅರ್ಜುನ, ಫಾಲ್ಗುಣ ಪಾರ್ಥ, ಕಿರೀಟಿ, ಶ್ವೇತವಾಹನ, ಭೀಭತ್ಸುರ್ವಿ ಪಿಜಯ, ಕೃಷ್ಣ ಸವ್ಯಸಾಚಿ ಧನಂಜಯ) ಸಿಡಿಲು ಹೊಡೆಯುವುದಿಲ್ಲ ಎಂಬ ನಂಬಿಕೆಗಳಿವೆ. ಕಾಲು ಮುಂದಾಗಿ ಹುಟ್ಟಿದ ಮಕ್ಕಳಿಗೆ ಸಿಡಿಲು ಬಡಿಯುತ್ತದೆ. ಸಿಡಿಲು ಹೊಡೆಯುವಾಗ ಬಾಳೆ ಕಡಿದರೆ ಚಿನ್ನ ಸಿಗುತ್ತದೆ. ಮಳೆಬರುವಾಗ ತೆಂಗಿನ ಮರದ ಕೆಳಗೆ ನಿಂತರೆ ಸಿಡಿಲು ಬಡಿಯುತ್ತದೆ. ಕಂಚಿನ ಗಣಿಕೆಯನ್ನು ಹೊರಗೆ ತೆಗೆದುಕೊಂಡು ಹೋದರೆ ಸಿಡಿಲು ಬಡಿಯುತ್ತದೆ. ಮನೆಯ ಪಕ್ಕದಲ್ಲಿ ಆಮೆ ಚಿಪ್ಪು, ಕೋಳಿ ಮೊಟ್ಟೆ ಸಿಪ್ಪೆ ಹಾಕಿದರೆ ಸಿಡಿಲು ಬಡಿಯುತ್ತದೆ.

ಈ ರೀತಿಯ ಬಹಳಷ್ಟು ನಂಬಿಕೆಗಳು, ಹೇಳಿಕೆಗಳು ಸಿಡಿಲನ್ನು ಕುರಿತಂತೆ ಪ್ರಚಾರದಲ್ಲಿವೆ. ಮನೆಗೆ ಸಿಡಿಲು ಬಡಿಯದಿರಲಿ ಎಂದು ಮನೆಯೊಳಗಿನಿಂದ ಕಬ್ಬಿಣದ ತುಣುಕುಗಳನ್ನು ಹೊರಗೆಸೆಯುವುದು, ಹೊಸ್ತಿಲು ಹಾಗೂ ತಲೆಬಾಗಿಲುಗಳಿಗೆ ಲಾಳ ಬಡಿಯುವುದು, ಮರಗಳಿಗೆ ಮೊಳೆ ಹೊಡೆಯುವುದು ಮುಂತಾದ ರೂಢಿಗಳು ನಮ್ಮಲ್ಲಿವೆ. ಆದಿಮಾನವ ಕಾಲದಿಂದ ಇಂದಿನವರೆಗೆ ಜನಸಾಮಾನ್ಯರು ಈ ರೀತಿ ಸಿಡಿಲಿನ ಬಗ್ಗೆ ಅನುಭವಪಡೆದುಕೊಂಡಿದ್ದಾರೆ. ಈ ಅನುಭವದಿಂದ ಪಡೆದ ಜ್ಞಾನವೇ ಸಿಡಿಲು ಬಡಿಯುವಾಗ ಮರದ ಕೆಳಗೆ ನಿಲ್ಲಬಾರದು, ಕಬ್ಬಿಣದ ವಸ್ತುಗಳಿಗೇ ಸಿಡಿಲು ಬಡಿಯುತ್ತದೆ ಮುಂತಾದ ನಂಬಿಕೆಗಳ ರೂಪದಲ್ಲಿ ಮಡುಗಟ್ಟಿದೆ. ಇಷ್ಟಾದರೂ ಸಿಡಿಲು ಎಂಬುದನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ ಸೂತ್ರರೂಪದಲ್ಲಿಡುವ ಶಕ್ತಿ ಆದಿಮಾನವನಿಗಿರಲಿಲ್ಲ. ಆದ್ದರಿಂದ ಸಿಡಿಲಿನ ಬಗ್ಗೆ ಚಿತ್ರವಿಚಿತ್ರ ಕಲ್ಪನೆಗಳೂ ಹುಟ್ಟಿಕೊಂಡವು. ಮಾನವ ಇಂತಹುದೇ ಕಾಲ್ಪನಿಕ ವಿವರಗಳನ್ನು ಕೊಟ್ಟು ತನ್ನ ಕುತೂಹಲವನ್ನು ತಣಿಸಿಕೊಳ್ಳುತ್ತಿದ್ದ. ಮೋಡಗಳ ಘರ್ಷಣೆಯಾದಾಗ ಉತ್ಪತ್ತಿಯಾಗುವ ವಿದ್ಯುಚ್ಛಕ್ತಿ ಇದು ಎಂದು ವಿಜ್ಞಾನ ಇದರ ಖಚಿತವಾದ ವಿವರಣೆ ನೀಡಿದೆ. ಇದರ ಹಿನ್ನೆಲೆಯಲ್ಲಿ ಜನಪದರು ಅನುಸರಿಸುತ್ತಿರುವ ಎಷ್ಟೋ ರೂಢಿಗಳು ಹಾಗೂ ಅವರ ನಂಬಿಕೆಗಳು ವೈಜ್ಞಾನಿಕವಾಗಿದ್ದವು ಎಂದು ವಿಶ್ಲೇಷಿಸಬಹುದಾಗಿದೆ.

ಗುಡುಗನ್ನೂ ಸಹ ದೇವತೆಯ ಮಟ್ಟಕ್ಕೆ ಏರಿಸಿರುವುದನ್ನು ಅನೇಕ ಬುಡಕಟ್ಟುಗಳಲ್ಲಿ ಕಾಣಬಹುದು. ಅರ್ಜುನನ ರಥ ಆಕಾಶದಲ್ಲಿ ಸಂಚರಿಸುವಾಗ ಉಂಟಾಗುವ ಶಬ್ದವೇ ಗುಡುಗು ಎಂದು ನಮ್ಮ ಜನಪದರು ಕಲ್ಪಿಸಿದ್ದಾರೆ. ಗುಡುಗು ಅತ್ಯಂತ ಶಕ್ತಿಯುತದೇವತೆ ಎಂದು ಪ್ರಾಚೀನ ಪೇರವಿಯನ್ನರು ಭಾವಿಸುತ್ತಿದ್ದರು. ಪ್ಯೂಬ್ಲೋಗಳು ಕಿವಾ ಸಮಾರಂಭಗಳಲ್ಲಿ ಗುಡುಗು ಹಾಗೂ ಮಿಂಚನ್ನು ಕರೆಯುತ್ತಾರೆ. ಅಥವಾ ಅವುಗಳನ್ನು ಪುನರುತ್ಪತ್ತಿ ಮಾಡುತ್ತಾರೆ. ನೂರಾರು ಬಾರಿ ಗುಡುಗಿದರೆ ಆ ವರ್ಷ ಒಳ್ಳೆಯ ಮಳೆಯಿರುತ್ತದೆ ಎಂದು ಭಾವಿಸುತ್ತಾರೆ.

ಗುಂಡಪ್ಪರಾಯ ಗುಂಡಾಡಿ ಬಾರೋ
ಹನುಮಪ್ಪರಾಯ ಹಾರ್‍ಯಾಡಿ ಬಾರೋ

ಎಂಬ ಶಿಶುಪ್ರಾಸ ನಮ್ಮಲ್ಲಿ ಪ್ರಚಲಿತವಿದೆ. ಮುಂಗಾರು ಗುಡುಗಿನ ಸದ್ದು ಕೇಳಿದರೆ ಮೊಟ್ಟೆಗಳು ಲೋಳಿಯಾಗುತ್ತವೆ. (ಅಂದರೆ ಆ ಮೊಟ್ಟೆಗಳಿಂದ ಮರಿಯಾಗುವುದಿಲ್ಲ) ಎಂಬ ನಂಬಿಕೆ ಇದೆ. ಅನೇಕ ಪುರಾಣಗಳಲ್ಲಿ, ಜನರು ನಿರೂಪಿಸಿರುವಂತೆ ಕಾಮನಬಿಲ್ಲು ಆಕಾಶ ಮತ್ತು ಭೂಮಿಯ ನಡುವಣ ಸೇತುವೆ. ಇಂದ್ರ ತನ್ನ ಇರುವಿಕೆಯನ್ನು ಸೂಚಿಸುವುದಕ್ಕಾಗಿ ಕಾಮನ ಬಿಲ್ಲನ್ನು ಆಕಾಶದಲ್ಲಿರಿಸಿದ್ದಾನೆ ಎಂದು ನಮ್ಮ ಪುರಾಣಗಳು ಹೇಳುತ್ತವೆ. ಮಳೆಗೆ ಸಂಬಂಧಿಸಿದಂತೆ ಕಾಮನಬಿಲ್ಲಿನಿಂದ ಜನಪದರು ಅನೇಕ ಸೂಚನೆಗಳನ್ನು ಕಂಡುಕೊಳ್ಳುತ್ತಾರೆ ಎಂಬ ಅಂಶವನ್ನು ಹಿಂದಿನ ಸಾಹಿತ್ಯದ ಪುಟಗಳಲ್ಲಿ ನಿರೂಪಿಸಲಾಗಿದೆ.

ನಮ್ಮ ಜನಪದರ ಜೀವನದಲ್ಲಿ ಮಳೆ ಹಾಗು ಅದರ ಸಂಬಂಧಿತ ವಿದ್ಯಮಾನಗಳು ಬಹಳ ಮುಖ್ಯ ಸ್ಥಾನ ಪಡೆದಿವೆ. ಮಳೆ ಸರ್ವತಂತ್ರ ಸ್ವತಂತ್ರ ಸ್ವಭಾವದಿಂದಾಗಿ ಹಾಗೂ ಅನುಗ್ರಹಶಾಲಿ ಗುಣದಿಂದಾಗಿ ಆರಾಧ್ಯದೈವದ ಸ್ಥಾನಗಳಿಸಿದೆ. ರೈತರ ಮನೋವ್ಯಾಪರಗಳೆಲ್ಲದರ ಚಿಂತನೆಯ ಮುಖ್ಯ ವಸ್ತು ಮಳೆಯೇ. ಅಪರೂಪಕ್ಕೆ ಭೇಟಿಯಾದವರು ನಮ್ಮಲ್ಲಿ ಮೊದಲು ಕೇಳುವ ಪ್ರಶ್ನೆ ನಿಮ್ಮಲ್ಲಿ ಮಳೆ ಬೆಳೆ ಹೇಗೆ ಎಂಬುದೇ ಆಗಿದೆ. ಧರ್ಮಮಾರ್ಗದಲ್ಲಿ ನಡೆದರೆ ಮಾತ್ರ ಕಾಲಕ್ಕೆ ಸರಿಯಾಗಿ ಮಳೆಯಾಗುತ್ತದೆ ಎಂಬುದೇ ನಮ್ಮ ಹಳ್ಳಿಯ ಜನಗಳ ವೇದಾಂತ. ಕರ್ನಾಟಕದಲ್ಲಿ ಮಲೆನಾಡಿಗಿಂತ ಬಯಲುಸೀಮೆಯ ಕಡೆ ಮಳೆಗೆ ಸಂಬಂಧಿಸಿದ ಜಾನಪದಸಾಹಿತ್ಯ ವಿಫುಲವಾಗಿದೆ. ನಮ್ಮಲ್ಲಿ ಯಾವುದಕ್ಕೆ ಕೊರತೆಯಿದೆಯೋ ಅದಕ್ಕೆ ಹೆಚ್ಚು ಮಹತ್ವವನ್ನು ಕೊಡಲಾಗುತ್ತದೆ ಎಂಬ ಅಂಶದ ಹಿನ್ನೆಲೆಯಲ್ಲಿ ಈ ವಿಷಯವನ್ನು ನೋಡಬಹುದು. ವಿಜ್ಞಾನ ಎಷ್ಟೇ ಮುಂದುವರೆದಿದ್ದರೂ ಸಹ ಮಳೆಯ ವಿಷಯದಲ್ಲಿ ಮಾನವ ಅಸಹಾಯಕನಾಗಿಯೇ ಇದ್ದಾನೆ. ಈಗಲೂ ದೀರ್ಘಕಾಲದವರೆಗೆ ಮಳೆ ಬಾರದಿದ್ದರೆ ಈ ಜಾನಪದವೆಲ್ಲ ಪುನಃ ಗರಿಗೆದರುತ್ತದೆ. ಕಪ್ಪೆಯನ್ನೋ, ಕತ್ತೆಯನ್ನೋ ಮಳೆರಾಯ ಎಂದು ಭಾವಿಸಿ ಪೂಜಿಸುವುದರಿಂದ ಹಿಡಿದು ಲಕ್ಷಾಂತರ ರೂಪಾಯಿ ಖರ್ಚು ಮಾಡಿ ಯಜ್ಞಯಾಗಾದಿಗಳ ಮೂಲಕ ಮಳೆ ತುಂಬಿದ ಮೋಡಗಳನ್ನು ಭೂಮಿಗಿಳಿಸುವ ದುಬಾರಿ ಆಚರಣೆಗಳೂ ಇತ್ತೀಚೆಗೆ ನಡೆಯುತ್ತಿವೆ. ಅನಾವೃಷ್ಟಿಯ ಸಂದರ್ಭದಲ್ಲಿ ಸರ್ಕಾರವೂ ಸಹ ವಿಶೇಷ ಪೂಜೆ ಪುನಸ್ಕಾರಗಳನ್ನು ಏರ್ಪಡಿಸುವುದು ಮಳೆಯ ವಿಷಯದಲ್ಲಿ ನಮ್ಮ ಅಸಹಾಯಕತೆ ಅಜ್ಞಾನಗಳೆರಡನ್ನೂ ಸೂಚಿಸುತ್ತಿರಬಹುದು. ಮಳೆಯ ಬಗ್ಗೆ ಜನಪದರಲ್ಲಿ ಪ್ರಚಲಿತವಿರುವ ಅಪಾರ ಜ್ಞಾನಸಂಪತ್ತನ್ನು ವಿಜ್ಞಾನಿಗಳು ಖಂಡಿತವಾಗಿಯೂ ಬಳಸಿಕೊಳ್ಳಬಹುದು. ಹವಾಮಾನ. ಪರಿಸರಗಳ ಅಧ್ಯಯನಕ್ಕೆ ಈ ಜಾನಪದ ಬಹು ಮಹತ್ವದ ಕೊಡುಗೆಯನ್ನು ಕೊಡುತ್ತದೆ ಎಂಬುದರಲ್ಲಿ ಸಂದೇಹವಿಲ್ಲ.

**ಆಚರಣಾ ತಾತ್ವಿಕತೆ**

ನೀರಿನ ಪ್ರಾಕೃತ ರೂಪವಾದ ಮಳೆ ಜಗತ್ತಿನ ಎಲ್ಲ ಜನಾಂಗಗಳನ್ನು ಪ್ರಭಾವಿಸಿದೆ. ಮಳೆಯ ಅತಿವೃಷ್ಟಿ ಅನಾವೃಷ್ಟಿ ವರ್ತನೆಗಳು ಜನರ ಜೀವನವನ್ನು ಅನೇಕ ಕಷ್ಟ ಕೋಟಲೆಗಳಿಗೆ ಈಡು ಮಾಡುತ್ತಾದೆ . ಪುರಾತನ ಕಾಲದಿಂದಲು ಜಗತ್ತಿನಾದ್ಯಮತ ಮಳೆಯ ಕುರಿತ ಆಚರಣೆಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣಸಿಗುತ್ತವೆ. ಮಳೆ ಆಚರಣೆ ಮಾನವನಿಗೆ ಅಗತ್ಯವಾದ ಮಳೆಯನ್ನು ಕುರಿತಾದ ದಾರುಣವಾದ ಮಾನಸಿಕ ಅಭಿವ್ಯಕ್ತಿ ಅಷ್ಟೆ. ಮಳೆ ಅನಿವಾರ್ಯವಾದಂತೆಲ್ಲ ಅದು ಪುನರಾವರ್ತನೆಗೊಳ್ಳುತ್ತದೆ. ಮುಂದುವರೆದಂತೆಲ್ಲಾ ಅವನ ಮಾತು ಕಲಾತ್ಮಕರೂಪ ಪಡೆಯುತ್ತಾ ಹೋಗುತ್ತದೆ. ಈಗಲೂ ನಮ್ಮಲ್ಲಿ ಮಳೆಗಾಲದ ಪ್ರಾರಂಭವಾದ ದಿನಗಳಲ್ಲಿ ಮಳೆರಾಯನಪೂಜೆ ಮಾಡುವುದನ್ನು ಕಾಣಬಹುದು. ಆನಂದದಿಂದ ಕೇಕೇ ಹಾಕುತ್ತಾ ತಮ್ಮ ಜೊತೆಯವರು ಸಂಗಡ ಮೈಮರೆತು ಹಾಡುತ್ತಾ ಕುಣಿಯುತ್ತಾರೆ.

ಹುಯ್ಯೋ ಹುಯ್ಯೋ ಮಳೆರಾಯ
ಮಾವಿನ ತೋಟಕೆ ನೀರಿಲ್ಲ
ಬಾರೋ ಬಾರೋ ಮಳೆರಾಯ
ಬಾಳೆ ತೋಟಕ್ಕೆ ನೀರಿಲ್ಲ
ಬಾರಪ್ಪೇ ಮಳೆರಾಯ ನೀನು
ಬಂದುಯ್ಯೋ ದೇವೇಂದ್ರ

ಈ ರೀತಿಯಾಗಿ ಹಾಡುಗಳನ್ನು ಮತ್ತೆ ಮತ್ತೆ ಹಾಡಿಕೊಂಡು ಸಂತೋಷದಿಂದ ಕುಣಿದಾಗ ಮಳೆಹನಿ ಹಾಕುತ್ತ ಬಂದ ಸಂದರ್ಭಗಳು ಉಂಟೆಂದು ಹೇಳುತ್ತಾರೆ. ಅಂದರೆ ಅಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳು ಎರಡು: ಹಾಡಿ, ಕುಣಿದು ಕುಪ್ಪಳಿಸಿದ್ದರಿಂದ ಮಳೆ ಬಂತೆಂದಾಗಲೀ ಅಥವಾ ಅವರು ಪೂಜೆ ಮಾಡದಿದ್ದ ವರ್ಷದಲ್ಲಿ ಮಳೆ ಬರುತ್ತಿರಲಿಲ್ಲವೆಂದಾಗಲೀ ಅರ್ಥ ಅಲ್ಲ. ಮಳೆ ಬಂದರೆ ಒಟ್ಟಾರೆ ಅವರಿಗೆ ಸಮಾಧಾನ ಸಿಗುತ್ತದೆ. ತಮಗಾಗಿಯೇ ತಮ್ಮ ಅಭ್ಯುದಯಕ್ಕಾಗಿಯೇ ಈ ಪೂಜೆ ಆರಾಧನೆ ಎಂದುಕೊಂಡು ಸುಮ್ಮನಾಗಬೇಕಾಗುತ್ತದೆ. ಕೃಷಿಯೇ ಮುಖ್ಯ ಜೀವನಾಧಾರವಾದ ಹಾಗೂ ಕೃಷಿಗಾಗಿ ಮಳೆಯನ್ನೇ ಅವಲಂಬಿಸಿರುವ ಭಾರತದಂತಹ ಹಿಂದುಳಿದದೇಶಗಳಲ್ಲಿ ಜನಪದರು ಪ್ರಾಕೃತಿಕಶಕ್ತಿಗಳ ಪೈಕಿ ಮಳೆರಾಯನಿಗೆ ಹೆಚ್ಚಿನ ಮಹತ್ವವನ್ನು ನೀಡಿದ್ದಾರೆ. ತಮ್ಮ ಬದುಕಿನ ಸುಖಸಂತೋಷಗಳಿಗೂ ಕಾರಣವಾದ ಮಳೆಯನ್ನು ಕುರಿತು ಅಪಾರವಾದ ಗೌರವ ಕಾಳಜಿ ಈ ಜನರಲ್ಲಿರುವುದು ಆಶ್ಚರ್ಯವೇನಲ್ಲ. ಭಾರತವೊಂದೇ ಅಲ್ಲದೆ ಆಫ್ರಿಕಾದ ಬುಡಕಟ್ಟುಗಳಲ್ಲಿ, ಪ್ಯೂಬ್ಲೊ

ಇಂಡಿಯನ್ನರಲ್ಲಿ, ಹೀಬ್ರೂಕೆಲ್ಟಕ್, ಯೂಜಿ ಜಾಕೊ ಇಂಡಿಯನ್ ಮೊದಲಾದ ಜನಸಮೂಹದಲ್ಲಿ ಮಳೆ ಮತ್ತು ಅದಕ್ಕೆ ಸಂಬಂಧಿಸಿದ ವಿದ್ಯಮಾನಗಳ ಬಗೆಗೆ ವೈವಿಧ್ಯಮಯವಾದ ಆಚರಣೆಗಳು ಪ್ರಚಲಿತವಾಗಿವೆ.

ಮಳೆಗಾಗಿ ಹಂಬಲಿಸಿ, ಕಾತರಿಸಿ, ಕಡೆಗೂ ಮಳೆ ಬಾರದಿದ್ದರೆ, ಜನಪದರು ಕೈಕಟ್ಟಿ ಕೂರುವುದಿಲ್ಲ. ಮಳೆಯನ್ನು ಕರೆತುರವ ಕೃತ್ರಿಮ ವಿಧಾನಗಳಿಗೆ ಕೈಹಾಕುತ್ತಾರೆ. 'ಮಳೆಗೊಂದು ಆಚರಣೆ ಬೆಳೆಗೊಂದು ಗಾದೆ' ಎಂಬ ಗಾದೆಮಾತು ಇಂತಹ ಆಚರಣೆಗಳು ಎಷ್ಟೊಂದು ಇವೆ ಎಂಬುದನ್ನು ಸೂಚಿಸುತ್ತದೆ. ಕೃಷಿಪ್ರಧಾನ ದೇಶಗಳಲ್ಲಿ ಇಂತಹ ಆಚರಣೆಗಳ ಸಂಖ್ಯೆ ಹೆಚ್ಚಾಗಿವೆ. ಇವುಗಳಲ್ಲಿ ಕೆಲವು ವೈಜ್ಞಾನಿಕವಾಗಿ ಕಂಡರೆ ಕೆಲವು  ತಮಾಷೆಯಾಗಿ ಕಾಣುತ್ತವೆ. ಕೃಷಿಯಿಂದ ಜೀವಿಸುವವರ ಇಡೀ ವರ್ಷದ ಸುಖಸಂತೋಷಗಳು ಮಳೆಯನ್ನೇ ಅವಲಂಬಿಸಿರುವುದರಿಂದ ಮಳೆಗಾಲ ಶುಭವಾಗಿ ಆರಂಭವಾಗಲಿ ಎಂದೇ ಮಳೆಗಾಲಕ್ಕೆ ಮುನ್ನ ಹಲವು ಆಚರಣೆಗಳನ್ನು ನಡೆಸುತ್ತಾರೆ. ಇದರಲ್ಲಿ ಬಹುಮುಖ್ಯವಾದುದು ಜೋಕುಮಾರನ ಆಚರಣೆ, ಜೋಕುಮಾರ ಹುಟ್ಟಿದ ನಂತರವೇ ಮಳೆಯಾಗುವುದು ಎಂಬ ನಂಬಿಕೆ ಇರುವುದರಿಂದ ಉತ್ತರಕರ್ನಾಟಕ ಹಾಗೂ ಚಿತ್ರದುರ್ಗ ಮೊದಲಾದ ಬಯಲುಸೀಮೆಯ ಪ್ರದೇಶಗಳಲ್ಲಿ ಇದನ್ನು ತಪ್ಪದೆ ಆಚರಿಸುತ್ತಾರೆ. ಈ ಆಚರಣೆಗೆ ಸಂಬಂಧಿಸಿದ ಹಾಡಿನಲ್ಲಿ ಬರುವ ವಿವರಣೆ ಪ್ರಕಾರ ಜನರು ನೀರಿಲ್ಲದೆ ಬವಣೆ ಪಟ್ಟು, ಪೈರೆಲ್ಲ ಒಣಗಿ, ಮಳೆ ಕರುಣಿಸು ಎಂದು ಶಿವನನ್ನು ಬೇಡುವಾಗ ಜೋಕುಮಾರ ಕಾಸೆ ಹಾಕಿ, ಮೀಸೆ ತಿರುವಿ, ಹೂ ಮುಡಿದು, ನೀಲಿ ಕುದುರೆ ಹತ್ತಿ, ತನ್ನ ಸೆಲ್ಲೆಯವನ್ನು ಬೀಸಿ ಮಳೆ ಕರೆಯುತ್ತಾನೆ.

ರೂಢಿಯಲ್ಲಿರುವ ಬಹಳಷ್ಟು ಆಚರಣೆಗಳನ್ನು ಅನಾವೃಷ್ಟಿಯೊದಗಿದಾಗಲೇ ನಡೆಸಲಾಗುತ್ತದೆ. ಜಗತ್ತಿನಲ್ಲಿ ನ್ಯಾಯ, ನೀತಿ, ಧರ್ಮಗಳು ಕಡಿಮೆಯಾದಾಗ ದೇವರು ಮುನಿದು ಈ ರೀತಿಯ ಕಷ್ಟವನ್ನು ತಂದೊಡ್ಡುವನೆಂದು ಜನಪದರು ಭಾವಿಸುವುದರಿಂದ ಹಲವರು ಪುಣ್ಯಕಾರ್ಯ, ದೇವತಾಕಾರ್ಯಗಳಲ್ಲಿ ತೊಡಗಿ ದೇವರಮುನಿಸನ್ನು ತಿದ್ದಲು ಪ್ರಯತ್ನಿಸುತ್ತಾರೆ. ಇದರಲ್ಲಿ ಪ್ರಸತ ಹಾಕಿಸುವ ಕ್ರಮವೂ ಒಂದು. ಈ ಸಂದರ್ಭದಲ್ಲಿ ದೇವರಪೂಜೆ ಮಾಡಿ ಮೇಲು ಕೀಳೆನ್ನದೆ ಎಲ್ಲರಿಗೂ ಅನ್ನಸಂತರ್ಪಣೆ ಮಾಡುವ ವಿಧಾನ ಕರ್ನಾಟಕದ ಹಲವಾರು ಪ್ರದೇಶಗಳಲ್ಲಿ ರೂಢಿಯಲ್ಲಿದೆ. ಇನ್ನೂ ಕೆಲವೆಡೆ ವಿರಾಟಪರ್ವವನ್ನು ಓದಿಸುತ್ತಾರೆ. ಅಥವಾ ಅಭಿನಯಿಸುತ್ತಾರೆ. ವಿರಾಟಪರ್ವದಲ್ಲಿ ಧರ್ಮರಾಯನ ಕತೆ ಬರುವುದರಿಂದ ಆ ಸತ್ಯವಂತನ ದೆಸೆಯಿಂದಲಾದರೂ ಮಳೆ ಬರಲಿ ಎಂಬ ಆಶಯ ಈ ವಿಧಾನದ ಹಿನ್ನೆಲೆಯಲ್ಲಿರುವಂತೆ  ತೋರುತ್ತದೆ. ಇದು ವೈದಿಕಸಂಸ್ಕೃತಿಯ ಪ್ರಭಾವದಿಂದ ಬಂದಿರಬೇಕು ಎಂದೂ ಊಹಿಸಬಹುದು. ಏಕೆಂದರೆ ಯಾವುದೋ ಒಂದು ಫಲೋದ್ದೇಶಕ್ಕಾಗಿ ಪುಣ್ಯಚರಿತೆಯನ್ನು ಓದಿಸುವ ರೂಢಿ ವೈದಿಕಸಂಸ್ಕೃತಿಯಲ್ಲಿದೆ.

ಮಳೆ ಬಾರದಿರುವುದಕ್ಕೆ ಏನೋ ಆಡಚಣೆಯಿದೆ ಎಂದು ನಂಬಿ ಆ ರೀತಿಯ ಅಡಚಣೆಗಳನ್ನು ನಿವಾರಿಸುವುದು ಮತ್ತೊಂದು ರೀತಿ. ತೊನ್ನಿದ್ದವರನ್ನು ಹೂತಿದ್ದರೆ ಮಳೆಯಾಗುವುದಿಲ್ಲ ಎಂಬ ನಂಬಿಕೆ ಇರುವುದರಿಂದ ಅವರನ್ನು ಉಪ್ಪುಹಾಕಿ ಹೂಳುತ್ತಾರೆ. ಉಪ್ಪು ಹಾಕದಿದ್ದರೆ ಹೆಣ ಕರಗುವುದಿಲ್ಲ. ಹೆಣ ಕರಗುವವರೆಗೆ ಮಳೆಯಾಗುವುದಿಲ್ಲ ಎಂಬ ನಂಬಿಕೆ ಇದೆ. ಕೆಲವೊಮ್ಮೆ ದೇವರನ್ನು ಹೊರಡಿಸಿಕೊಂಡು ಸುಡುಗಾಡು ಗುಡ್ಡೆ ಸೋಸಿ ಅಂಥ ಹೆಣವನ್ನು ತೆಗೆದು ಸುಟ್ಟು ಓಂತಿರುತ್ತಾರೆ. ಇದೇ ರೀತಿ ಬರಗಾಲ ಬಸಪ್ಪ ಇದ್ದ ಕಡೆ ಮಳೆ ಬರುವುದಿಲ್ಲ ಎಂದು ನಂಬಿ ಊರಿನವರು ಅದನ್ನು ರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ಸಾಗಿಸುತ್ತಾರೆ.

'ಸಿಂಪಥೆಟಿಕ್' ಮಾಟದ ಹಿನ್ನೆಲೆಯಲ್ಲಿ ಬಹಳಷ್ಟು ಆಚರಣೆಗಳು ಹುಟ್ಟಿಕೊಂಡಿವೆ. ದೇವರಿಗೆ ನೂರೊಂದು ಕೊಡದ ಅಭಿಷೇಕ ಮಾಡಿಸುವುದು. ವಾರಮಾಡುವುದು ಇವುಗಳಲ್ಲಿ ಒಂದು ಬಗೆ. ಈ ಆಚರಣೆಗಳ ಮುಖ್ಯಾಂಶವೆಂದರೆ ದೇವರ ವಿಗ್ರಹಗಳಿಗೆ ಕೊಡಗಟ್ಟಲೆ ನೀರಿನಿಂದ ಅಭಿಷೇಕ ಮಾಡಿಸುವುದು. ಕೆಲವೊಮ್ಮೆ ನೀರು ಹೊರಹೋಗುವ ನಾಳವನ್ನೂ ಮುಚ್ಚಿ ದೇವರ ವಿಗ್ರಹ ಒಂದು ರಾತ್ರಿಯಿಡೀ ನೀರಿನಲ್ಲಿರುವಂತೆ ಮಾಡುವುದು. ಓಣಿಗಳಲ್ಲೆಲ್ಲ ಹೀಗೆ ನೀರು ಹರಿಸುವ ರೂಢಿಯೂ ಇದೆ[೨]. ಹೀಗೆ ಮಾಡುವುದರಿಂದ ಉಷ್ಣತಾ ಮಟ್ಟ ಕೆಳಗಿಳಿದು ಮೋಡಕ್ಕೆ ತಂಪು ತಗುಲಿ ಮಳೆಯಾಗುವ ಸಾಧ್ಯತೆ ಇದೆ. ನೇರವಾಗಿ ಮಳೆರಾಯನನ್ನೇ ಆರಾಧಿಸುವಂತಹ ವಿವಿಧ ಆಚರಣೆಗಳು ನಮ್ಮಲ್ಲಿವೆ. ಇಲ್ಲಿ ಕಪ್ಪೆ, ಕತ್ತೆ, ಹಾವು ಮುಂತಾದ ಪ್ರಾಣಿಗಳನ್ನು, ಕಲ್ಲು ಅಥವಾ ಮಣ್ಣಿನ ಗುಪ್ಪೆಯನ್ನು ಮಳೆರಾಯನಪ್ರತೀಕವೆಂದು ಭಾವಿಸಲಾಗುತ್ತದೆ. ಮಳೆರಾಯನನ್ನು ಪೂಜಿಸಿ, ಅದರ ಮೇಲೆ ನೀರು ಸುರಿಯುವುದು, ಮಳೆಯನ್ನು ಕರೆಯುವ ಹಾಡುಗಳನ್ನು ಹಾಡುವುದು ಮತ್ತು ಬಹುತೇಕವಾಗಿ ಸಣ್ಣ ಹುಡುಗರೇ ಪಾಲ್ಗೊಳ್ಳುವುದು ಹಾಗೂ ಮಳೆರಾಯನನ್ನು ಹೊರುವ ಹುಡುಗರೇ ನಗ್ನವಾಗಿರುವುದು ಈ ಎಲ್ಲ ಆಚರಣೆಗಳಲ್ಲಿ ಕಂಡು ಬರುವ ಸಮಾನ ಅಂಶ. ಮಳೆ ಬರಿಸುವ ಯಾವುದೇ ಆಚರಣೆಯಲ್ಲಿ ನಗ್ನತೆ ಹಾಗೂ ನೀರು ಬಹುಮುಖ್ಯ ಪ್ರೇರಕಗಳಾಗಿರುತ್ತವೆ ಎಂಬ ಅಂಶವನ್ನು ಜಗತ್ತಿನ ಇಂತಹ ಎಲ್ಲ ಆಚರಣೆಗಳ ಸಂದರ್ಭದಿಂದ ತಿಳಿಯಲಾಗಿದೆ.

ಜೀವಂತಕಪ್ಪೆಯನ್ನು ಬಟ್ಟೆಯಲ್ಲಿ ಸುತ್ತಿ, ಒನಕೆಯ ತುದಿಗೆ ಅದನ್ನು ಬಿಗಿದು ಅದರ ಮೇಲೆ ಒಂದು ಚರಿಗೆ ನೀರು ಸುರಿದು, ಹೆಗಲ ಮೇಲೆ ಹೊತ್ತು ಮನೆಮನೆಗೂ ಮೆರವಣಿಗೆಯಲ್ಲಿ ತೆರಳುವುದು, ಒಂದು ಕತ್ತೆಯನ್ನು ಪೂಜಿಸಿ, ಅದರ ಮೇಲೆ ನಾಲ್ಕು ಬಿಂದಿಗೆ ನೀರು ಸುರಿದು ಮೆರವಣಿಗೆಯಲ್ಲಿ ತೆರಳುವುದು ಕರ್ನಾಟಕದ ಹಾಸನ, ಬೆಂಗಳೂರು ಮೊದಲಾದ ಪ್ರದೇಶಗಳಲ್ಲಿ ಕಂಡುಬರುತ್ತದೆ. (ಮಳೆರಾಯನನ್ನು ಕರೆಯಲು ಕತ್ತೆಯನ್ನು ಬಳಸುವುದರ ಹಿನ್ನೆಲೆಯಲ್ಲಿ ಒಂದು ದಂತಕಥೆಯಿದೆ. ಒಮ್ಮೆ ಶಿವನ ಮೂರ್ತಿಯನ್ನು ಕತೆಯ ಹೊರಿಸಿ ಮೆರವಣಿಗೆ ಮಾಡುವಾಗ ಜನ ಭಯಭಕ್ತಿಯಿಂದ

ನಮಸ್ಕರಿಸುತ್ತಿದ್ದರಂತೆ. ಈ ನಮಸ್ಕಾರ ತನಗೇ ಎಂದು ಭಾವಿಸಿದ ಕತ್ತೆ, ಗರ್ವದಿಂದ ಶಿವನಮೂರ್ತಿಯನ್ನು ಜೀಳಿಸಿ ಓಡಿದಾಗ ಶಿವನು ನೀನು ಹಾಳುಬೀಳಿನಲ್ಲಿ ವಾಸಮಾಡು, ಜನ ನಿನ್ನನ್ನು ಕತ್ತೆ ಎಂದು ಹಿಯ್ಯಾಳಿಸಲಿ ಎಂದು ಶಾಪಕೊಟ್ಟನಂತೆ. ಕತ್ತೆ ನೊಂದುಕೊಂಡು ಶಿವನ ಮೊರೆಹೋದಾಗ, ಮಳೆಬಾರದಾಗ ಜನ ನಿನ್ನನ್ನು ಪೂಜಿಸಲಿ, ಆಗ ಮಳೆ ಆಗುತ್ತದೆ ಎಂದು ವರವಿತ್ತನಂತೆ. ಹೊತ್ತು ಬಂದಾಗ ಕತ್ತೆ ಕಾಲು ಹಿಡಿ ಎಂಬ ಗಾದೆ ಮೂಲತಃ ಈ ಹಿನ್ನೆಲೆಯಿಂದಲೇ ಬಂದಿರಬೇಕು)

ಮಳೆಮಲ್ಲಪ್ಪನ ಆಚರಣೆಯಲ್ಲಿ ಜೇಡಿಮಣ್ಣಿನಿಂದ ಮಳೆರಾಯನನ್ನು ಮಾಡುತ್ತಾರೆ. ಮಲೆನಾಡಿನ ಕಡೆ ಚಿಕ್ಕಹುಡುಗರು ಮಳೆಮಲ್ಲಪ್ಪನನ್ನು ಮಾಡುತ್ತಾರೆ. ಎಕ್ಕೆಎಲೆಗೆ ಎಣ್ಣೆಹಚ್ಚಿ ಬಿಸಿಗೆ ಹಿಡಿದು ನಂತರ ನೀರು ತುಂಬಿದ ಗಿಂಡಿಯ ಬಾಯಿಗೆ ಅಂಟಿಸಿ ತಲೆಕೆಳಗಾಗಿ ಹಿಡಿದುಕೊಳ್ಳುತ್ತಾರೆ. ಇದು ಮಳೆಮಲ್ಲಪ್ಪನ ಪ್ರತೀಕ. ಗುರ್ಚಿ ಆಚರಣೆಯಲ್ಲಿ ತೊಪ್ಪೆಯ ಉಂಡೆಮಾಡಿ ಅದಕ್ಕೆ ಗರುಕೆಯನ್ನು ಸಿಕ್ಕಿಸಿದಾಗ ಅದು ಮಳೆರಾಯನ ಪ್ರತೀಕವಾಗುತ್ತದೆ. ಈ ಎಲ್ಲ ಆಚರಣೆಗಳಲ್ಲೂ ಮಳೆರಾಯನ ಪ್ರತೀಕವನ್ನು ಹೊತ್ತುಕೊಂಡು ಹುಡುಗರು ಮನೆಮನೆಗೂ ಮೆರವಣಿಗೆಹೋದಾಗ ಮನೆಯ ಹೆಂಗಸರು ಮಳೆರಾಯನನ್ನು ಹೊತ್ತಿರುವ ಹುಡುಗನ ಮೇಲೆ ನೀರು ಸುರಿದು, ದುಡ್ಡು, ಕಾಳು ಮುಂತಾದ ಕಾಣಿಕೆಗಳನ್ನು ಕೊಡುತ್ತಾರೆ. ಗುರ್ಚಿಯ ಆಚರಣೆಯಲ್ಲಿ ಗುರ್ಚಿಯನ್ನು ಹೊತ್ತಹುಡುಗನ ಮೇಲೆ ನೀರುಸುರಿದಾಗ ಅವನು ನಂತರ ಸ್ಥಳದಲ್ಲಿಯೇ ಸುತ್ತ ತಿರುಗುತ್ತಾನೆ. ಗುರ್ಚಿಯಿಂದ ಧಾರೆಯಾಗಿ ಸುರಿದ ನೀರು ಮಳೆಯಂತೇ ಕಾಣುತ್ತದೆ. ಈ ಆಚರಣೆಗಳ ಕೊನೆಯಲ್ಲಿ ಮಳೆರಾಯನ ಪ್ರತೀಕವನ್ನು ಕೆರೆ ಬಾವಿಗಳಲ್ಲಿ ಬಿಡುತ್ತಾರೆ. ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರಿನಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಈ ರೀತಿಯ ಆಚರಣೆಗಳು ಪ್ರಚಲಿತವಾಗಿವೆ.

ಮಂಡ್ಯ, ಹಾಸನ, ಅರಸೀಕೆರೆ, ಚಿಕ್ಕಮಗಳೂರು ಪ್ರದೇಶಗಳಲ್ಲಿ ತಿಂಗಳುಮಾವನಪೂಜೆ ಅಥವಾ ಬೆಳ್ದಿಂಗಳಪ್ಪನಪೂಜೆಯನ್ನು ಮಳೆಗಾಗಿ ನಡೆಸುತ್ತಾರೆ. ಬಣ್ಣಬಣ್ಣದ ರಂಗವಲ್ಲಿಯಲ್ಲಿ ತೇರು ಹಾಗೂ ತೇರಿನ ಕಳಸದ ಹತ್ತಿರ ಚಂದ್ರನನ್ನು ಬಿಡಿಸಿ, ಅಕ್ಕಿ ಅಥವಾ ರಾಗಿಯ ರೊಟ್ಟಿಯನ್ನಿಟ್ಟು ಪೂಜಿಸುವುದೂ, ಒಬ್ಬ ಹುಡುಗ ರೊಟ್ಟಿಯನ್ನು ಕದ್ದು ಯಾರಿಗೂ ಸಿಗದಂತೆ ತಪ್ಪಿಸಿಕೊಂಡು ಓಡಿ ಮರದಮೇಲೆ ಕೂತು ರೊಟ್ಟಿ ತಿಂದು ಬರುವುದೂ, ರಂಗವಲ್ಲಿಯ ಸುತ್ತ ಕೋಲು ಹುಯ್ಯುವುದೂ, ತಿಂಗಳುಮಾವನಪದ ಹಾಡುವುದೂ, ಚಿಕ್ಕ ಮಕ್ಕಳಲ್ಲಿ ಇಬ್ಬರಿಗೆ ಮದುವಣಿಗರಂತೆ ಅಲಂಕಾರಮಾಡಿ, ಮದುವೆಮಾಡಿ, ಸೋಬಾನೆ ಹಾಡುವುದೂ ಈ ಆಚರಣೆಯ ಮುಖ್ಯಾಂಶ. ಈ ಆಚರಣೆಯ ಅರ್ಥವಂತಿಕೆಯನ್ನು ವಿಶ್ಲೇಷಿಸಬೇಕಾಗಿದೆ. ಗಂಡುಕಪ್ಪೆ ಮತ್ತು ಹೆಣ್ಣುಕಪ್ಪೆಗಳ ವಿವಾಹವನ್ನು ವಿಜೃಂಭಣೆಯಿಂದ ಹಿಂದೂಪದ್ಧತಿಯಂತೆ ಮಾಡುವುದು ಬೆಳಗಾವಿಜಿಲ್ಲೆಯ ಅಥಣಿ ತಾಲ್ಲೂಕಿನಲ್ಲಿರುವ ಒಂದು ಆಚರಣೆ.

ವಿವಾಹ, ನಗ್ನತೆ, ಮಳೆ ಇವೆಲ್ಲವೂ ಫಲವಂತಿಕೆಗೆ ಸಂಬಂಧಿಸಿದ ಅಂಶಗಳು. ಈ ಹಿನ್ನೆಲೆಯಿಂದ ಇಂಥ ಆಚರಣೆಗಳ ವಿಶ್ಲೇಷಣೆ ಮಾಡಬಹುದು.

ಗುಡುಗಿದಾಗ ಮಳೆ ಬರುತ್ತದೆ. ಆದ್ದರಿಂದ ಗುಡುಗಿನಂತಹ ಸದ್ದನ್ನು ಕೃತಕವಾಗಿ ಮಾಡುವ ರೂಢಿಗಳು ಕೆಲವು ಜನರಲ್ಲಿವೆ. ಊರ ಗುಡಿಯ ಮುಂದೆ ಡೊಳ್ಳಿನ ವಾಲಗ ಏರ್ಪಡಿಸುವುದನ್ನು ಈ ದೃಷ್ಟಿಯಿಂದ ನೋಡಬಹುದು. ಛೋಟಾ ನಾಗಪುರದ ಆದಿವಾಸಿಗಳು ಮಳೆಗೆ ಗುಡುಗೇ ಕಾರಣ ಎಂದು ಭಾವಿಸಿ ದೊಡ್ಡ ದೊಡ್ಡ ಬಂಡೆಗಳನ್ನು ಮೇಲಿನಿಂದ ಕೆಳಕ್ಕೆ ಉರುಳಿಸುವುದರ ಮೂಲಕ ಗುಡುಗಿನಂತಹ ಶಬ್ದವನ್ನುಂಟು ಮಾಡುತ್ತಿದ್ದರು.

ಗ್ರಾಮಗಳಲ್ಲಿ ಅತಿವೃಷ್ಟಿ, ಅನಾವೃಷ್ಟಿಯ ಪರಿಹಾರಕ್ಕಾಗಿ ತೊಗಲುಗೊಂಬೆ ಆಟ, ಪಂಡರೀಭಜನೆ, ಸುಗ್ಗಿಕುಣಿತ ಮೊದಲಾದ ಕಲೆಗಳ ಪ್ರದರ್ಶನವನ್ನು ಏರ್ಪಡಿಸುವುದೂ ರೂಢಿಯಲ್ಲಿದೆ. ಲಂಬಾಣಿಗರು ಹಾಡುವ ಮಳೆರಾಜನ ಕುಣಿತದ ಹಾಡು ನೇರವಾಗಿ ಮೇಘರಾಜನ ಪ್ರಾರ್ಥನೆಯೇ ಆಗಿದೆ. ಮಳೆ ಇಲ್ಲದಾಗ ಇದನ್ನು ಹಾಡಿಕುಣಿದರೆ ಮಳೆಯಾಗುವುದೆಂದು ಈಗಲೂ ಹಳ್ಳಿಯಜನ ನಂಬುತ್ತಾರೆ. ಊರಿನ ಜನ ಲಂಬಾಣಿ ಹೆಣ್ಣು ಮಕ್ಕಳನ್ನು ಕರೆಯಿಸಿ ಮಳೆರಾಯನಹಾಡು ಹೇಳಿಸುತ್ತಾರೆ. ಇಲ್ಲೆಲ್ಲ ಕಲೆಯ ಮೂಲಕ ದೇವರ ಮನಸ್ಸನ್ನು ಸಂತೃಪ್ತಿಗೊಳಿಸುವ ಆಶಯವಿದೆ. ಉತ್ತರ ಕನ್ನಡ ಜಿಲ್ಲೆಯ 'ತಾರ್ಲೆಕುಣಿತ' ಅಥವಾ 'ತಾರಲೆ' ಮಳೆಗಾಗಿ ಮಾಡುವಂಥದ್ದು. ಇದರ ಹಿನ್ನೆಲೆಯಲ್ಲಿ ಒಂದು ಕಥೆ ಇದೆ. ಗಂಗೆ ಗೌರಿಯರ ಜಗಳದಲ್ಲಿ ಗಂಗೆ ಕೋಪಿಸಿಕೊಂಡು ಕೈಲಾಸ ಬಿಟ್ಟು ಬಂದಾಗ ಸೂತಕವಾದ ಗೌರಿ, ಸೂತಕ ಕಳೆದುಕೊಳ್ಳಲು ನೀರಿಗಾಗಿ ಹುಡುಕಿಕೊಂಡು ಹೋದಳಂತೆ. ನೀರು ದೊರೆಯದಿದ್ದಾಗ ಗುರ್ಜಿಯನ್ನು ಹೊತ್ತು ಮನೆಮನೆಗೆ ತಿರುಗಿದಳಂತೆ. ಈ ನೃತ್ಯದಲ್ಲಿ ಹಾಲಕ್ಕಿ ಸ್ತ್ರೀಯರು ಭಾಗವಹಿಸುತ್ತಾರೆ. ಸುಮಾರು ೨೦-೨೫ ಜನ ಸ್ತ್ರೀಯರು ಮನೆಗಳ ಮುಂದೆ ವರ್ತುಲಾಕಾರವಾಗಿ ನಿಂತು ಪರಸ್ಪರರ ಕೈಹಿಡಿದುಕೊಂಡು ಕೈಗಳನ್ನು ಮೇಲಕ್ಕೆ ಎತ್ತುತ್ತ, ಇಳಿಸುತ್ತ, ಮೈಯನ್ನು ವಿವಿಧ ರೀತಯಲ್ಲಿ ಬಾಗಿಸುತ್ತ ಉತ್ಸಾಹದಿಂದ ಮೈಮರೆತು ಕುಣಿಯುತ್ತಾರೆ.

ಮಳೆ ಬರಿಸಲು ಜನರು ನಡೆಸಿದ ಯಾವುದೇ ಆರಾಧನೆಗಳಿಗೂ ಮಳೆರಾಯ ಒಲಿಯದಿದ್ದಾಗ ಕೊನೆಯಪ್ರಯತ್ನ ಎಂಬಂತೆ ಅವನನ್ನು ಅವಮಾನಿಸುವ, ಬೈಯುವ, ಹಿಂಸಿಸುವ ಪದ್ಧತಿಗಳನ್ನೂ ರೂಢಿಸಿ ಕೊಂಡಿದ್ದಾರೆ. ಇವುಗಳಿಗೆ ಹೆದರಿನಾಚಿಕೊಂಡಾದರೂ ಮಳೆರಾಯ ಒಲಿದಾನು ಎಂಬಆಶಯ ಈ ರೂಢಿಗಳ ಹಿನ್ನೆಲೆಯಲ್ಲಿದೆ.

ಮಳೆರಾಯನ ಪ್ರತೀಕವಾದ ಕಪ್ಪೆಯನ್ನು ಕತ್ತೆಯಮೇಲೆ ಕೂರಿಸಿ ಮೆರವಣಿಗೆ ಮಾಡುವುದರ ಹಿನ್ನೆಲೆಯಲ್ಲಿ ಇಂತಹ ಆಶಯವೇ ಇರಬಹುದು. ಕೆಲವೊಮ್ಮೆ ಮಳೆಮಲ್ಲಪ್ಪನ ಪ್ರತೀಕವಾದ ಮಣ್ಣಿನ ಗುಪ್ಪೆಯನ್ನು ನೀರಿಗೆಹಾಕದೆ ಬಿಸಿಲಿನತಾಪ ಅನುಭವಿಸಲಿ ಎಂದು ಬಿಸಿಲಲ್ಲೇ ಇಡುತ್ತಾರೆ. ಉತ್ತರ

ಕರ್ನಾಟಕದಲ್ಲಿ ಮಳೆಗಾಗಿ ಆಚರಿಸುವ ಗುಳ್ಳವ್ವನ ಆಚರಣೆಯಲ್ಲಿ ಗುಳ್ಳವ್ವನ ಪ್ರತೀಕವನ್ನು ಮುಳ್ಳಲ್ಲಿ ಎಸೆಯುತ್ತಾರೆ. ದೇವರ ವಿಗ್ರಹಕ್ಕೆ ಕಾರ ಬಳಿಯುವ ರೂಢಿ ಕೆಲವು ಕಡೆಗಳಲ್ಲಿದೆ. ಕೆರೆಕಟ್ಟೆಯ ಮೇಲಿರುವ ದುಗ್ಗಮ್ಮನಿಗೆ ಕಲ್ಲುಬೀರುವ ರೂಢಿ ಕೋಲಾರಜಿಲ್ಲೆಯಲ್ಲಿದೆ. ದೇವರ ಪೂಜೆಗೆ ನೀರಿಲ್ಲದಂತೆ ಮಾಡಲು ದೇವಸ್ಥಾನದ ಎದುರಿಗಿರುವ ಕೊಳದ ನೀರನ್ನು ಮೊಗೆದು ಚೆಲ್ಲುವುದು, ಮಳೆರಾಯನ ಪ್ರತೀಕವಾದ ಕಪ್ಪೆಯನ್ನು ಬಟ್ಟೆಯಲ್ಲಿಸುತ್ತಿ ಒನಕೆಯ ಗುದಿಗೆ ಕಟ್ಟುವುದು ಇದೇ ಹಿಂಸಾತ್ಮಕ ಉದ್ದೇಶದಿಂದ, ಜೋಕುಮಾರನ ವಿಗ್ರಹವನ್ನು ಕಲ್ಲಿನ ಕೆಳಗಿಡುವ ಮೊದಲು ತಿಗಣೆ, ಸೊಳ್ಳೆ, ಚೆಕ್ಕಾಡು ಮೊದಲಾದ ಕೀಟಗಳನ್ನು ವಿಗ್ರಹದಲ್ಲಿ ಸೇರಿಸುವುದುಂಟು. ಇಲ್ಲಿಯೂ ಸಹ ಮಳೆದೇವತೆಯಾದ ಜೋಕುಮಾರನಿಗೆ ಹಿಂಸೆ ಕೊಡುವ ಉದ್ದೇಶವಿದೆ. ಮಳೆರಾಯನನ್ನು ಬೆದರಿಸುವ ಇಂತಹುದೇ ಒಂದು ಆಶಯ ಚೀನಾದ ಮಳೆ ಜಾನಪದದಲ್ಲಿದೆ. ಚೀನೀಯರು ಮಳೆರಾಯನಿಗೆ ಪ್ರತೀಕವಾಗಿ ಕಾಗದ ಅಥವಾ ಮರದಿಂದ ಡ್ರೇಗನ್‌ನಂಥ ಪ್ರಾಣಿಯ ಬೊಂಬೆಯನ್ನು ರಚಿಸಿ, ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ. ಆಗಲೂ ಮಳೆಬಾರದಿದ್ದರೆ ಅದನ್ನು ಚೂರುಚೂರಾಗಿ ಹರಿದುಹಾಕುತ್ತಾರೆ. ದೇವತೆಯ ಪಟ್ಟದಿಂದ ಕೆಳಗಿಳಿಸುವುದಾಗಿ ಹೆದರಿಸುತ್ತಾರೆ.

ಮಳೆಯಾಗುತ್ತದೋ ಇಲ್ಲವೋ ಎಂಬುದನ್ನು ಕಾಲಜ್ಞಾನ ಅಥವಾ ಶಕುನಗಳಿಂದ ತಿಳಿಯುವ ಕೆಲವು ಸಂಪ್ರದಾಯಗಳೂ ನಮ್ಮಲ್ಲಿ ಪ್ರಚಲಿತವಾಗಿವೆ. ಗಿಂಡಿಯಂತಹ ವಸ್ತುವನ್ನು ನೆಲದಲ್ಲಿ ಹುದುಗಿಸಿ ಹುಡುಕಿಸುವುದು, ನೀರಿಲ್ಲದ ತೆಂಗಿನಕಾಯಿಯನ್ನು ದೇವಾಲಯದ ಕಂಭಕ್ಕೆ ಕಟ್ಟುವುದು. ಈ ಗುಂಪಿಗೆ ಸೇರುತ್ತವೆ. ಕೆಲವೊಮ್ಮೆ ಪಂಡಿತ ವಿದ್ವಾಂಸರಲ್ಲಿ ಮಳೆಯ ಭವಿಷ್ಯ ಕೇಳುತ್ತಾರೆ. ಬಾಯಿಮೇಲಾಗಿ ಹುಟ್ಟಿದವನ ಮುಂದೆ ಒಂದು ಕಬ್ಬಿಣದ ಕಡಾಯಿಯಲ್ಲಿ ನೀರಿಟ್ಟರೆ ಅವನಿಗೆ ಎಲ್ಲ ಮಳೆಗಳೂ ಹಾಯುವದೃಶ್ಯ ಕಾಣಿಸುತ್ತದಂತೆ. ಇನ್ನೂ ಕೆಲವುಕಡೆ ಪ್ರಚಲಿತವಿರುವ ಪ್ರಕಾರ ಒಂದು ಹಿಡಿಮರಳನ್ನು ತೆಗೆದುಕೊಂಡು ಮೇಲಿನಿಂದ ಉದುರಿಸುತ್ತಾರೆ. ಗಾಳಿಯ ದಿಕ್ಕಿನಲ್ಲಿಯೇ ಮರಳು ಹಾರಿ ಬೀಳುವುದರಿಂದ ಈ ಆಧಾರದ ಮೇಲೆ ಮಳೆಯಾಗುತ್ತದೋ ಇಲ್ಲವೋ ಎಂಬುದನ್ನು ಹೇಳುತ್ತಾರೆ. ಒಂದು ಕಳಸ ನಿರ್ಮಿಸಿ ಐವರು ಮುತ್ತೈದೆಯರು ಪೂಜೆ ಆರತಿ ಮಾಡಿ ಒಬ್ಬೊಬ್ಬರಾಗಿ ಕೊಡವನ್ನು ಹಿಡಿದು ತಿರುಗಿಸಿದಾಗ ಅದು ಸತತವಾಗಿ ಐದು ಸುತ್ತು ತಿರುಗಿದರೆ ೫ ದಿನದಲ್ಲಿ ಮಳೆಯಾಗುವುದು ಖಂಡಿತ ಎಂದೂ ನಂಬುತ್ತಾರೆ. ಉಗಾದಿ, ಕಾಮನಹಬ್ಬ ಮುಂತಾದ ಹಬ್ಬಗಳ ಹಿಂದಲ ಅಥವಾ ಮುಂದಲ ೩ ದಿನಗಳೊಳಗೆ ಮಳೆ ಆಗಿಯೇ ಆಗುತ್ತದೆ ಎಂಬ ಕೆಲವು ನಂಬಿಕೆಗಳೂ ಜನರಲ್ಲಿವೆ. ಕಾಮನನ್ನು ಸುಟ್ಟಮೇಲೆ ಅದರ ಬೂದಿಯನ್ನು ತೋಯಿಸುವಷ್ಟಾದರೂ ಮಳೆ ಆಗುತ್ತದೆ ಎಂಬ ನಂಬಿಕೆಯೂ ಇದೆ. ಇದು ಸಾಮಾನ್ಯವಾಗಿ ಹವಾಮಾನವನ್ನೇ ಆಧರಿಸಿರುವ ಪ್ರಕ್ರಿಯೆಯಾಗಿದ್ದು ಜನ ಅದನ್ನು ಅನುಭವದಿಂದ ಕಂಡುಕೊಂಡು ನಂಬಿಕೆ ರೂಪದಲ್ಲಿ ಉಳಿಸಿಕೊಂಡಿದ್ದಾರೆ.

## ಸಂಖ್ಯಾಟಿಪ್ಪಣಿಗಳು

೧. ಅಂಬಳಿಕೆ ಹಿರಿಯಣ್ಣ. ಒಕ್ಕಲಿಗರ ಸಂಸ್ಕೃತಿ. ಪುಟ. ೧೦೧

೨. ಹಿರೇಮಠ್. ಎಸ್,ಎಸ್, ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ. ಪುಟ ೧೧೮

೩. ಸಿದ್ದರಾಮಯ್ಯ. ಎಸ್,ಜಿ. ಸಂ. ಸುವರ್ಣ ಜಾನಪದ ಕಾವ್ಯ. ಪುಟ,೧೨೭

೪. ಪದ್ಮಪ್ರಸಾದ್. ಎಸ್.ಪಿ. ಮಳೆ ಒಂದು ಜಾನಪದೀಯ ಅಧ್ಯಯನ. ಪುಟ, ೦೬

೫. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿದ್ದು. ಹಾಡಿದವರು, ನಂದಿಗಾವಿಯ ಹರಿಜನರ ಹನುಮಕ್ಕ. ವಯಸ್ಸು ೬೫ ವರ್ಷ. ಭಾಗ್ಯಕ್ಕ. ವಯಸ್ಸು, ೪೦ ವರ್ಷ.

೬. ಅಂಬಳಿಕೆ ಹಿರಿಯಣ್ಣ. ಜನಪದ ಸಮಾಲೋಕನ. ಪುಟ. ೧೦೨

೭. ವಕ್ತೃ : ದಾನೇಶ ಅಂಗಡಿ. ಚಿಕ್ಕಕಬ್ಬಾರ

೮. ವಕ್ತೃ : ಚಂದ್ರಪ್ಪ ಹಿತ್ತಲಮನಿ. ಉಕ್ಕಡಗಾತ್ರಿ.

೯. ವಕ್ತೃ : ದಾಸಪ್ಪ. ಹರಪ್ಪನಹಳ್ಳಿ ಗೊಲ್ಲರಹಟ್ಟಿ.

೧೦. ವಕ್ತೃ : ಪ್ರಭುಸ್ವಾಮಿ. ಉಜ್ಜಿನಿ.

೧೧. ವಕ್ತೃ : ರಾಜಪ್ಪ ನಿಂಗಪ್ಪ. ಸತ್ತೂರು.

೧೨. ವಕ್ತೃ : ಡ್ಯಾವಡ್ಲಿ ಓಬಯ್ಯ. ಗಡಿಮಾಕುಂಟೆ.

೧೩. ವಕ್ತೃ : ಬಸವರಾಜಪ್ಪ. ಕಂಚಿಕೆರೆ.

೧೪. ವಕ್ತೃ : ಲೋಕಪ್ಪ. ಶಾಗಲೆ.

೧೫. ವಕ್ತೃ : ಚನ್ನಪ್ಪ. ಕಡರನಾಯಕನಹಳ್ಳಿ

೧೬. ವಕ್ತೃ : ದಾನೇಶ ಅಂಗಡಿ. ಚಿಕ್ಕಕಬ್ಬಾರ.

೧೭. ವಕ್ತೃ : ದಾನೇಶ ಅಂಗಡಿ. ಚಿಕ್ಕಕಬ್ಬಾರ.

೧೮. ವಕ್ತೃ : ಅಶೋಕ. ಬಸವನಾಳು

೧೯. ವಕ್ತೃ : ಮರಿಯಪ್ಪ. ಬಿಲ್ಲಹಳ್ಳಿ.

೨೦. ವಕ್ತೃ : ದ್ಯಾಮಜ್ಜ. ಅರಸಿಕೆರೆ.

೨೧. ವಕ್ತೃ : ದ್ಯಾಮಜ್ಜ. ಅರಸಿಕೆರೆ.

೨೨. ರಾಧಕೃಷ್ಣಭಡ್ತಿ. ಎಸ್. ಮೇಘಮೇದಿನಿ.. ಪುಟ, ೩೮-೩೯

೨೩. ಸೋಮಣ್ಣ. ವ್ಯವಸಾಯ ಸಂಬಂಧಿ ಆಚರಣೆಗಳು. ಪುಟ. ೦೮

೨೪. ಪುನರುಕ್ತ, ಪುಟ. ೦೯

೨೫. ವಕ್ತೃ : ನಾಗೇಂದ್ರಪ್ಪ ಮಡಿವಾಳ, ಹೊಸಕಟ್ಟೆ

೨೬. ಮಂಜುನಾಥ ಬೇವಿನಕಟ್ಟೆ. ಜಾನಪದ ಉತ್ಖನನ. ಪುಟ. ೧೧೮

೨೭. ಸೋಮಣ್ಣ. ವ್ಯವಸಾಯ ಸಂಬಂಧಿ ಆಚರಣೆಗಳು. ಪುಟ. ೧೭-೧೮

೨೮. ರಾಧಕೃಷ್ಣಭಡ್ತಿ.ಎಸ್. ಮೇಘಮೇದಿನಿ.. ಪುಟ, ೨೯

೨೯. ಪದ್ಮಪ್ರಸಾದ್.ಎಸ್.ಪಿ. ಮಳೆ ಒಂದು ಜಾನಪದೀಯ ಅಧ್ಯಯನ. ಪುಟ, ೧೮

೩೦. ಪುನರುಕ್ತ. ೭೧

೩೧. ರಮೇಶ್. ಸ,ಚಿ. ಕರಾವು. ಪುಟ.೧೩

೩೨. ಕಲಬುರ್ಗಿ.ಎಂ,ಎಂ.ಸಂ. ಜಾನಪದಸಾಹಿತ್ಯದರ್ಶನ.ಭಾಗ-೧೨.ಪುಟ,೧೦೦

## ಅಧ್ಯಾಯ. ಆರು

# ಜನಪದ ಸಾಹಿತ್ಯ ಮತ್ತು ಮಳೆಯ ಕಥನಗಳು.

ಭಾರತೀಯ ಸಂಸ್ಕೃತಿಯಲ್ಲಿ (ಜಲಸಂಸ್ಕೃತಿ) ಮನುಷ್ಯಜೀವನ ನಿಯಂತ್ರಿಸುವ ಯಾವುದೇ ಸಂಗತಿಯಾಗಿದ್ದರೂ ಅದು ದೈವತ್ವದ ಗುಣದೊಂದಿಗೆ ಜನಪದರೊಂದಿಗೆ ಬೆರೆತುಬಿಡುವುದು ಸಾಮಾನ್ಯ. ಆ ಸಂಗತಿಯನ್ನವರು ದೈವವಷ್ಟೇ ಅಲ್ಲ ತಮ್ಮ ಮಧ್ಯದ ಒಂದು ಪರಮಾಂಶವಾಗಿಯೂ ಭಾವಿಸಿಕೊಳ್ಳುತ್ತಾರೆ. ಹಾಡುಕಟ್ಟಿ ಕಥೆ ಕಟ್ಟಿ ಶಾಶ್ವತವಾಗಿರಿಸಿ ಬದುಕಿನ ಅವಿಭಾಜ್ಯ ಅಂಗವನ್ನಾಗಿಸುತ್ತಾರೆ. ಈ ಹಿನ್ನೆಲೆಯಲ್ಲಿ ಮಳೆಕಥನಗಳು ಮೇಲ್ನೋಟಕ್ಕೆ ಸಾಮಾನ್ಯ ರಮ್ಯ ಅತಿಮಾನುಷ ಕಥೆಗಳಂತೆ ಕಂಡರೂ ವಾಸ್ತವವಾಗಿ ಅತಿಮಾನುಷಕ್ಕೂ ಅತಿಮಾನುಷದಿಂದ ವಾಸ್ತವಕ್ಕೂ ಜಿಗಿಯುವ ಅಂಶ ಭೂಮಿಯನ್ನು ಒಂದಾಗಿ ಬೆಸೆಯುವ ಸಂವಾಹಕಗಳಾಗಿ ಬಿಡುತ್ತವೆ. ಹಾಗೆಯೇ ಮಳೆಯು ಜನಪದ ಬದುಕಿನ ನಿರ್ಣಾಯಕ ಅಂಶಗಳಲ್ಲಿ ಪ್ರಮುಖವಾದುದಾಗಿದೆ. ಅಂತಹ ಮಳೆಯ ವಿರಾಟ್ ಸ್ವರೂಪದ ಬಗ್ಗೆ ಜನಪದರಲ್ಲಿ ವಿಫುಲವಾದ ಹಾಡು, ಕಥೆಗಳು ದೊರೆಯುತ್ತವೆ.

**ಮಳೆಯ ವಿರಾಟ್‌ಸ್ವರೂಪ.**

ಮಳೆಯ ಕಥನಗಳನ್ನು ಒಂದು ಸುಂದರ ರೂಪಕದ ಮೂಲಕ ರಾಧಾಕೃಷ್ಣಭಕ್ತಿಯವರು ವಿವರಿಸಲು ಪ್ರಯತ್ನಿಸಿದ್ದಾರೆ.

'ಕಾರ್ಗಟ್ಟಿ ಕುಳಿತ ಮೋಡಗಳೆಂದರೆ ಬರಿ ಮೋಡಗಳಲ್ಲ. ಅವು ಬಹುದಿನಗಳಿಂದ ಕಟ್ಟಾ ಬ್ರಹ್ಮಚರ್ಯದಲ್ಲಿ ಕುಳಿತ ಪೌರುಷನ ಪ್ರತೀಕ. ಅಲ್ಲಿ ಸ್ವಲ್ಪವೂ ಲಂಪಟತನವಿಲ್ಲ. ಆತುರಕ್ಕೆಬಿದ್ದ ಆಸಾಮಿ ಆತನಲ್ಲವೇ ಅಲ್ಲ. ಹೆಸರು ಮೇಘ. ನನಸು ಮಾಡಿದರೆ ಎಂಥ ಗಟ್ಟಿಗಿತ್ತಿಯನ್ನೂ ಸಂಭಾಳಿಸಿ ತೃಪ್ತಿಯಸೆಲೆ ಹೊಮ್ಮಿಸದೇ ಬಿಡುವವನಲ್ಲ. ಮುನಿಸಿಕೊಂಡು ಕುಳಿತುಬಿಟ್ಟನೆಂದರೆ ಎಂಥ ಚೆತ್ತಲೆಗೂ ಬೆರಗಾಗುವವನಲ್ಲ ಓಲೈಕೆಗೆ ಒಲಿಯುವವನಲ್ಲ ಕೋರಿದರೂ ಕೊಸರುವುದಿಲ್ಲ ಹಠಕ್ಕೆ ಹೆದರುವುದಿಲ್ಲ ಒಟ್ಟಾರೆ ಅದ್ವಿತೀಯ ಸಂಯಮಿಯಾತ.

ಮೇಘನಿಗೊಬ್ಬಳು ಸಖಿ .... ಪೃಥ್ವಿ. ಆಕೆಯಾದರೋ ಸುಂದರಿಯೆಂದರೆ ಅದು ಸವಕಲು ಪದ. ಹಸಿರು ಪತ್ತಲವುಟ್ಟು ತಣ್ಣನೆಯ ತಂಗಾಳಿಗೆ ಬಿಗು ಮೈಯ ಇನ್ನಷ್ಟು ಸೆಟೆಸಿಕೊಂಡು ಕುಳಿತಳೆಂದರೆ ಮೇಘನೋಬ್ಬನನ್ನುಳಿದು ಮತ್ತಾರಿಗೂ ಮಣಿಯಲಾರಳು. ಆಕೆಯ ತುಂಬು ಜವ್ವನ ಕಂಡು ಕರುಬುವ ಇನ್ನೊಬ್ಬ ಸುಂದರಾಂಗ ಸೂರ್ಯ. ದಿನವಿಡೀ ಆಕೆಯತ್ತ ಆಸೆಯ ಕೆಂಗಣ್ಣ ಬೀರುವ ಆತನ ವಿರಹದ ತಾಪಕ್ಕೆ ಈಕೆ ಮುದುಡಿ ಹೋಗುತ್ತಾಳೆ. ಕೊನೆ ಕೊನೆಗಂತೂ ವಿರಹದ ಉತ್ಕಟತೆ ಕೋಪತಾಪಕ್ಕೆ ತಿರುಗಿ

ವಿಪರೀತ ಪ್ರತಾಪಕ್ಕೆ ಬಿದ್ದರೂ ಭೂಮಿ ಬೆದರುವವಳಲ್ಲ, ಕೊನೆಗೆ ಆತ ಅದೆ ಕೋಪದಲ್ಲಿ ಕಪ್ಪಿಟ್ಟು ಕಂದಿ ಹೋಗುತ್ತಾನೆ.

ಇತ್ತ ಮತ್ತೊಬ್ಬ ರಸಿಕ ಶಶಾಂಕ. ಈತನೋ ಬಲು ಚತುರ. ಆದರೆ ಮಹಾ ಚಂಚಲ ಸುರಸುಂದರಾಂಗ, ಸುಪ್ರಸನ್ನ ವದನ, ಥಕ್ಕನೆ ನೋಡಿದರೆ ಆತನೆ ಮದನ... ತಿಂಗಳ ಚೆಲ್ಲುತ್ತ ಬೆಂಬತ್ತಿ ಬರುವ ಶಶಾಂಕ. ಇನ್ನೇನು ಪೃಥೆಯ ಮಗ್ಗಲಿಗೆ ಮರಳಬೇಕೆನ್ನುವಷ್ಟರಲ್ಲಿ ನಾಚಿಬಿಡುತ್ತಾನೆ ನಾಚುತ್ತ, ನಾಚುತ್ತ.. ಕರಗಿಹೋಗುತ್ತಾನೆ ಹೀಗೆಯೆ ದಿನಗಳುರುಳುತ್ತವೆ. ಇವರೆಲ್ಲರ ಕಾಟ ಪೃಥೆಗೂ ಸಾಕುಸಾಕಾಗಿ ಹೋಗುತ್ತದೆ. ಕಾದು ಕಂಗಾಲಾಗುತ್ತಾಳೆ ತನ್ನಿನಿಯ ತಾನಾಗೇ ಬಂದು ಅಬ್ಬರುಸುತ್ತಾನೆಂದು ನಿರಕ್ಷಿಸುತ್ತಾಳೆ ತನ್ನ ತಬ್ಬಿಹಿಡಿದು ತಣಿಸಿ ತೆರಳಬಾರದೇ? ಸದಾ ಗರ್ಜಿಸುತ್ತಾ ಬಂದು ಘಟ್ಟಿಸಿ ಹೋಗುವ ಗಗನ ಈಗೇಕೆ ಇತ್ತ ಸುಳಿಯನು? ಹೀಗಿರುವಾಗಲೊಮ್ಮೆ ಅತ್ತಿಂದಿತ್ತ ಇತ್ತಿಂದಿತ್ತ ಸುಳಿದಾಡುತ್ತಲೇ ಇರುವ, ಮೇಘನ ದೌಡಾಯಿಸುವ ಆತ ಹಿತನುಡಿಗಳೊಂದಿಗೆ ಆತನ ಮನದಲ್ಲಿ ತಣ್ಣನೆಭಾವ ಬಿತ್ತಿಬರುತ್ತಾನೆ. ಪೃತೆಯ ಸ್ಥಿತಿಗೆ ಮರುಗುವ ಮೇಘ ಕರಗಿಹೋಗುತ್ತಾನೆ ಇನ್ನು ಸಂಯಮ ಸಾದ್ಯವೇ ಇಲ್ಲ, ಎಂಬುದಕ್ಕಿಂತ ಅದರಲ್ಲಿ ಅರ್ಥವಿಲ್ಲ ಎಂದುಕೊಂಡವನೇ ದಡಬಡಿಸಿ ಹೊರಡುತ್ತಾನೆ. ಮಾರುತನ ಸಾರಥ್ಯದಲ್ಲಿ ಮಿಲನಮಹೋತ್ಸವಕ್ಕೆ ಮೋಡಗಳ ತೇರನೇರಿ ಹೊರಟ ಮೇಘನಿಗೆ ಮಿಂಚಿನ ಮಂಗಳಾರತಿ, ಸಿಡಿಲಬ್ಬರದ ಮಂತ್ರಘೋಷ, ಗುಡುಗಿನವಾದ್ಯ, ಆಲಿಕಲ್ಲಿನ ಸೇಸೆ.. ಕಾಮನ ಬಲ್ಲಿನ ತೋರಣ.. ಒಂದೇ ಎರಡೇ..

ಇತ್ತ ಪೃಥೆಯೊ ಒಳಗೊಳಗೇ ಪುಳಕಗೊಂಡು ಅರಳಿ ನಿಲ್ಲುತ್ತಾಳೆ. ಅಬ್ಬರಿಸಿ ಬರುವ ಇನಿಯನಿಗಾಗಿ ತನ್ನನ್ನು ತಾನು ತೆರೆದುಕೊಳ್ಳಲು ಸಜ್ಜಾಗುತ್ತಾಳೆ. ಮಾರುತನಿಗಂತೂ ಸಂಭ್ರಮವೋ ಸಂಭ್ರಮ . ಹೊಸಜೀವ ಮೊಳೆಯುವ ಅಂತರಂಗದ ಅತ್ಯಪೂರ್ವಕ್ಷಣಗಳಿಗೆ ತಾನೊಬ್ಬನೇ ಸಾಕ್ಷಿಯಾಗಬಲ್ಲೆನೆಂಬ ಹಮ್ಮುಬಿಮ್ಮು ಅದೇ ಉತ್ಸಾಹದಲ್ಲಿ ಹುಚ್ಚೆದ್ದು ಸುಳಿಯಲಾರಂಬಿಸುತ್ತಾನೆ. ಪ್ರಣಯಿಗಳಿಬ್ಬರನ್ನು ತೀಡಿತೀಡಿ ಉತ್ತೇಜಿಸುತ್ತಾನೆ. ಮನದಮೂಲೆಯಲ್ಲೆಲ್ಲೋ ಮೂರ್ತಸ್ವರೂಪ ತಾಳುವ ಮುಂದಿನ ಸುಖದ ಕಲ್ಪನೆಯಲ್ಲಿ ಆಕೆ ಸಣ್ಣಗೆ ಕಂಪಿಸುತ್ತಾಳೆ. ಅದೇ ಯೋಚನೆಯಲ್ಲಿ ಮೈ ಮರೆಯುತ್ತಾಳೆ. ಈ ಕ್ಷಣಕ್ಕಾಗಿಯೇ ಕಾಯುತ್ತಿದ್ದ ತುಂಟ ಮಾರುತ ಆಕೆಯ ಮೇಲಿದ್ದ ಮರಗಿಡಗಳ ಹಸಿರು ಹಚ್ಚಡವನ್ನು ಅಸ್ತವ್ಯಸ್ತಗೊಳಿಸುತ್ತಾನೆ. ಇದಾವುದರ ಪರಿವೇ ಇಲ್ಲದೇ ಮುಗಿಲೆಡೆಗೆ ಮೈಯೆತ್ತಿ ನಿಲ್ಲುವ ಆಕೆಯನ್ನು ನೋಡುತ್ತಿದ್ದಂತೆಯೇ ಮೇಘನಲ್ಲೂ ಅದಾವುದೋ ಸಮರೋತ್ಸಹ ಅಂಗಾತ ಮಲಗಿದ ಪೃಥೆಯನ್ನು ಅಬ್ಬರಿಸುತ್ತಲೇ ಆಕ್ರಮಿಸಿಕೊಳ್ಳುವ ಆತ ಮೊದಲಾಗಿ ಘರ್ಷಣೆಗಿಳಿಯುತ್ತಾನೆ. ಅಷ್ಟೇ ಇನ್ನವರನ್ನು ಹರಿಹರ ಬ್ರಹ್ಮಾದಿಗಳೂ ತಡೆಯಲು ಸಾದ್ಯ? ಭಾವೋತ್ಕಟತೆಯ ಮೇರುವನ್ನು ಹತ್ತಿನಿಂತು ಹರ್ಷದ ಹೊನಲಿನಲ್ಲಿ ಜೀಕಲಾರಂಬಿಸಿದರೆ... ಓಹ್ ... ಅದು ಕೇವಲ ಭೌತಿಕದ ಮಾತಲ್ಲ

ಅಂತರಂಗದ ಸ್ಫುರಣ. ಒಂದು ಹೃದಯದೊಳಿನ್ನೊಂದರ ಧಾರಣ ಅವಿನಾಭಾವದ ಬಂಧನ. ವಿಶ್ವದ ಎರಡು ಮಹಾಶಕ್ತಿಗಳ ಮಿಲನ... ಅತ್ಯಂತ ನವಿರುನವಿರಾಗಿ ಅಂತರ್ಯವನ್ನು ಮೀಟಲಾರಂಬಿಸಿದ ಅವರು ಬರುಬರುತ್ತಾ ಆಳಕ್ಕಿಳಿಯುತ್ತಾರೆ. ಸುತ್ತೆಲ್ಲಾ ಗಾಡಾಂಧಾಕಾರ ಕವಿಯುತ್ತದೆ. ನಾಚುವ ನಲ್ಲೆಯ ಮನ ತನ್ನ ಬಿಟ್ಟು ಕದಲಬಾರದೆಂಬ ಉದ್ದೇಶದಿಂದ ಮೇಘನೇ ಬಾಹುಗಳ ಚಾಚಿ ಮರೆಮಾಡಿ, ಅಂಥದೊಂದು ಮಬ್ಬು ಕತ್ತಲೆಯನು ನಿರ್ಮಿಸುತ್ತಾನೆ.

ಹಾಗೇ ಆಕ್ರಮಿಸಿಕೊಳ್ಳುವ ಮೇಘನಿಗೆ ತನ್ನನ್ನೊಪ್ಪಿಸಿಕೊಳ್ಳಲು ಇನ್ನಾವುದೂ ಅಡ್ಡಿ ಉಳಿಯಲಿಲ್ಲ ಪೃಥೆಗೆ. ಬಹುದಿನಗಳಿಂದ ಕಾಯುತ್ತಿದ್ದ ಆ ಕ್ಷಣ ಬಂದೇಬಿಟ್ಟಿತು, ಅದೇ ಮೊದಲ ಸ್ಪರ್ಶ. ಮೊದಲ ಹನಿಯೊಂದು ಮೇಲಿನಿಂದ ಆಕೆಯ ಒಡಲ ತಾಕಿದ್ದೇ ತಡ ... ಅರಳಿ ಒಮ್ಮೆಲೇ ಅಕ್ಕಳಿಸಿಬಿಡುತ್ತಾಳೆ. ಅಷ್ಟೇ. ಮನದೊಳಗಣ ಸಂತಸ ಹಿತವಾದ ಪರಿಮಳವಾಗಿ ಸ್ರವಿಸಲಾರಂಬಿಸುತ್ತದೆ. ಧೂಳುಹನಿಗಳ ಆ ಮಿಲನದಿಂದ ಹುಟ್ಟಿದ ಅದು... ಒಹ್...ಅದೆಂಥಾ ಉತ್ತೇಜಕ ಗಂಧಾ... ಇಬ್ಬರೂ ಇನ್ನಷ್ಟೂ ಮತ್ತಷ್ಟೂ ಮನ್ನುಗ್ಗಿ ನುಗ್ಗಿಹೋಗಲು ಅಷು ್ಸಾಲದೇ. ಇವರಿಗೇ ಸಮಯದ ಪರಿವೇ ಇಲ್ಲ, ಧೋಗುಟ್ಟಿ ಆತ ಸುರಿಯ ಲಾರಂಬಿಸುತ್ತಾನೆ. ಪೌರುಷದ ಪರಾಕಾಷ್ಠೆಯಲ್ಲಿ ಆತ ಕರಗಿ ನೀರಾಗುತ್ತಾನೆ.. ತನ್ನೊಳಗೆ ಕಾಯ್ದುಕೊಂಡಿದ್ದ ಎಲ್ಲವೆಂದರೆ ಎಲ್ಲವನನ್ನೂ ಪೃಥೆಯೊಡಲಿಗೆ ಸೊಕ್ಕಿ ಸುರಿದು ಬರಿದು ಬರಿದಾಗುತ್ತಾನೆ. ಇದಕ್ಕಾಗಿಯೇ ಕಾದಿದ್ದವಳಂತೆ ಆಕೆಯು ಇನಿತೂ ಬಿಡದಂತೆ ಹೀರುತ್ತಾಳೆ. ಬಹುಹೊತ್ತಿನವರೆಗೆ ಇವೆರಡೂ ಸಾಗುತ್ತದೆ. ಕೊನೆಗೊಮ್ಮೆ ಆಕೆಯೊಡಲು ತುಂಬಿಕೋಡಿಯಾಗಿ ಚೆಲ್ಲುತ್ತದೆ. ಮೇಘನೂ ಎಲ್ಲವನ್ನೂ ಖಾಲಿಯಾಗಿಸಿಕೊಂಡು ನಿರಭ್ರನಾಗುತ್ತಾನೆ. ಆತನ ವಿಜಯದನಗೆ ಬೀರುತ್ತಾ ಹೊರಟಾಗಲೇ ಸಣ್ಣಗೆನಗುವ ಪೃಥೆ ಇಂಥ ಸೋಲಿನಲ್ಲೇ ತನ್ನ ಗೆಲುವು ಅಡಗಿದೆಯೆಂಬ ಸಂತೃಪ್ತ ಭಾವದಲ್ಲಿ ಮಗ್ಗುಲಾಗುತ್ತಾಳೆ. ಹೊಸ ಹಸಿರುಭೂಮಿಯ ಮೇಲೆ ಚಿಗುರಲಾರಂಬಿಸುತ್ತದೆ"[೧].

ಮಳೆಯೆಂಬುದು ಒಮ್ಮೊಮ್ಮೆ ಅಮ್ಮನ ಜೋಗುಳ. ಅಣ್ಣನೊಂದಿಗಿನ ಜಗಳ ಅಕ್ಕನ ಜತೆಯಾಟದ ಕೇಕೆ. ಅಪ್ಪನ ಆಪ್ತತೆ. ಪ್ರಿಯತಮೆಯ ತೆಕ್ಕೆಯಲಿ ಉಸುರುವ ಪಿಸುಮಾತು. ಮಳೆಯಲ್ಲೊಮ್ಮೆ ಮಿಂದು ನೋಡಿ ಅದರಲ್ಲಿ ಬಹು ಸುಂದರ ರೂಪಕದ ಹಿನ್ನೆಲೆಯು ಲಿಂಗಭೇದದ ಮುನ್ನೆಲೆಗೆ ತರುತ್ತದೆಯಾದರೂ ಭಡ್ತಿಯವರ ಕಲ್ಪನೆ ಮತ್ತು ಆಶಯದಂತೆ ಅದೊಂದು ಸಮಾಗಮ, ಸಂಮಿಲನ, ಸಂಬೋದ್ಭವತೆ ಇದು ಘಟನೆಗಳ ಮಹಾಪರ್ವ. ಉಜ್ವಲತೆಗಳ ವಿರಾಟ್‌ಸ್ವರೂಪ. ಆದಿಮಕ್ಕೆ ರಾಜವೀದಿ. ಹಾಗೆಯೇ ಜೀವಕೇಂದ್ರೀಯ ಆಸರೆ. ಆಕೆ ಮನುಷ್ಯಸ್ವರೂಪಿ ಪಿತೃಸ್ವರೂಪಿ. ಅವಳಲ್ಲಿ ಪ್ರೀತಿ ಇದೆ, ಅವನ ಆಸೆಯಿದೆ ಇವಳ ಹುಸಿ ಮುನಿಸಿದೆ. ಅವನ ಸಹನೆಯಿದೆ. ಇವಳೆದೆಯ ರಾಗಕ್ಕೆ ಅವನ ತಾಳದ ಸಾಥ್ ಇದೆ. ಬದುಕಿನೆಲ್ಲಾ ಸಂತಸದ ರಾಗತಾಳಗಳಿಗೆ ಮಳೆಯೆಂಬುದೇ ಪಲ್ಲವಿ. ಅಲ್ಲಿಯೇ ಶೃತಿ ತಪ್ಪಿದರೆ ಮುಂದಿನದಾವುದು ಸುಶ್ರಾವ್ಯವಾಗಲು ಸಾದ್ಯವೇ ಇಲ್ಲ. ಇಂದೇ

ಕ್ಷಣದಲ್ಲೆ ಮಳೆಯ ಚಟಪಟಕ್ಕೆ ನೀವೂ ಸ್ವರಸೇರಿಸಿ ಹಾಡಿಕೊಳ್ಳಲಾರಂಬಿಸಿ ನಿಮ್ಮೊಳಗೊಬ್ಬ ಕವಿ ಮೂಡಿ ಬರಬಹುದು. ಗಾಯಕ ಜಾಗೃತನಾಗಬಹುದು ಯಾರಿಲ್ಲದುದ್ದರೂ ಮುಗ್ದಮನದ ಮಾನವೀಯ ತಂತುವೊಂದು ಮೊಳೆಯುವುದಂತು ನಿಚ್ಚಿತ[೨].

ಮಳೆಯ ಆದಿಮಸ್ವರೂಪವೆಂದರೆ ಸಕಾರಾತ್ಮಕವಾದ ಹನಿಗೂಡಲ್ಲ. ಅದೊಂದು ಜೀವೋತ್ಪಲ, ಜೀವದನಿ. ಅಮೃತಸ್ವರೂಪಿ, ಜಗತ್ತಿನ ಜೀವಜಾಲವನ್ನು ತನ್ನೊಂದು ಹನಿಯಲ್ಲಿ ಅಡಗಿಸಿಡ್ಡುಕೊಳ್ಳುವ ಬಿಂದುಸ್ವರೂಪಿ. ಜಗದ್ವ್ಯಾಪಿ ಹನಿಪ್ರತ್ಯಕ್ಷಜೀವ ಹನಿ ಅದೃಶ್ಯ ಜೀವನಾಶವೆಂಬ ತತ್ವವನ್ನು ದಿಗ್ದರ್ಶನ ಮಾಡಿಸುವ ತಾಕತ್ತು ಮಳೆಹನಿಗಿದೆ. ಆ ಕಾರಣಕ್ಕೆ ನೀರೆಂದರೆ ಬರೀ ನೀರಲ್ಲ; ಅದೊಂದು ಜಾಗೃತಪ್ರಜ್ಞೆಯ ಪ್ರತೀಕ. ಅದು ಜೀವಂತಿಕೆಯ ಲಕ್ಷಣ ಸಾಮುದಾಯಿಕ ಸಂಕೇತ ಚಲನಶೀಲತೆಗೆ ಸಾಕ್ಷಿ. ಕರ್ತಾರನ ಕಸುವಿನಲ್ಲಿ ಅತ್ಯಂತ ಕ್ರಿಯಾಶೀಲ ಭಾಗವೊಂದಿದ್ದರೆ ಅದು ನೀರು. ಅದು ಮಹಾ ಪ್ರಳಯದ ಸಮಯ ಆಗಸಕ್ಕೆ ಆಗಸವೇ ಮೋಡಗಳಿಂದ ಆವೃತ್ತವಾಗಿ ಕಾರ್ಗತ್ತಲು ತುಂಬಿಕೊಡಿತು. ಎಲ್ಲೆಲ್ಲೂ ಗಾಢಾಂದಕಾರ. ಕಲ್ಲವಿಲ್ಲಗೊಂಡ ಮನಸಿನ ಹೊಯ್ದಾಟದ ಮಾದರಿಯಲ್ಲೆ ಬಾರಿ ಏರುಪೇರು ಪ್ರಕೃತಿಯಲ್ಲಿ. ಬೀಸುವ ಗಾಳಿಗೆ ಎದುರಾಗಿ ನಿಲ್ಲುವುದು ಸಾದ್ಯವೇ? ಅದೇ ಆದದ್ದು ಎಲ್ಲೂ ನಿಲ್ಲಲಿಲ್ಲ. ಎಲ್ಲವೂ ತೂರಿಕೊಡು ಹೋಗುತ್ತಿದೆ ಎನ್ನುವಾಗಲೇ ಭಾರೀ ವಿಸ್ಪೋಟಕ ಶಬ್ದ. ಫಳಾರನೆ ಬಡಿ ಸಿಡಿಲೊಂದು ಈ ಭೂಮಿಯನ್ನೇ ಸೀಳಿಕೊಂಡಿ ಹೋಗುತ್ತದೆ. ಇಡೀ ಭೂಮಂಡಲವೆ ಕಾದು ಕೆಂಡವಾಗಿರುವಾಗಲೇ ಆಗಸದಿಂದ ತೊಪತೊಪನೆ ಸುರಿಯಲಾರಂಬಿಸಿದವು ದೈತ್ಯಹನಿಗಳು. ಅದಾದರೂ ಎಂಥದ್ದು? ಒಂದೊಂದು ಹನಿಯಲ್ಲು ಇಡೀ ಭೂಮಿಯನ್ನೇ ಕೊಚ್ಚಿಕೊಂಡು ಹೋಗಬೇಕೆಂಬ ಕೆಚ್ಚಿದ್ದಂತಿತ್ತು. ಗಾತ್ರ ರಭಸ ಸಾಮರ್ಥ್ಯಗಳಾವುದರಲ್ಲು ಸಾಟಿ ಇನ್ನೊಂದಿಲ್ಲ. ಹಾಗೆ ಸುರಿಯಲಾರಂಬಿಸಿದ್ದು ನಿಲ್ಲಲೇ ಇಲ್ಲ. ಒಂದು ದಿನವಲ್ಲ ವಾರವಲ್ಲ ತಿಂಗಳು ವರ್ಷಗಳಲ್ಲ. ಸಾವಿರಾರು ವರ್ಷಗಳವರಗೆ ಆಕಾಶಕ್ಕೂ ಭೂಮಿಗೂ ಮದ್ಯ ಎರಡಿಲ್ಲವೇ ಇಲ್ಲ. ಅದೆ ಭೂಮಿ ಮೇಲೆ ಬಿದ್ದ ಮೊದಲಮಳೆ , ಮಹಾಮಳೆ[೩].

## ವಿಶ್ವವ್ಯಾಪಿ ಮಳೆಯ ಬಾಹುಳ್ಯ ಸ್ವರೂಪ

ಮೊದಲು ಭೂಮಿಸೃಷ್ಠಿಯ ಬಗೆಗೆ ಹೇಳುವುದಾದರೆ, ಪ್ರಚಲಿತ ಪ್ರತಿಪಾದನೆಯಂತೆ ಈ ಭೂಮಿ ಸೂರ್ಯನಿಂದ ಸಿಡಿದು ಬಂದ ಕೆಂಡದುಂಡೆ. ನಮ್ಮ ನಭೋಮಂಡಲದ ಅತ್ಯಂತ ದೊಡ್ಡ ನಕ್ಷತ್ರವಾಗಿರುವ ಸೂರ್ಯನ ಜ್ಯೋತಿರ್ವರ್ಷದಲಿ ಆದ ಮಹಾನ್ ವಿಘಟನೆಯೊದು ಭೂಮಿಯ ಹುಟ್ಟಿಗೆ ಕಾರಣ ವಾಯಿತೆನ್ನುತ್ತದೆ ವಿಜ್ಞಾನ. ಭಯಂಕರ ಬಿಸಿಯ ದ್ರವಗೋಲವೊಂದು ಸೂರ್ಯನಿದ ಸಿಡಿದು ದೂರಬಂತು. ಸೂರ್ಯನ ಪಥದಲ್ಲಿ ಅದು ಸುತ್ತುತ್ತಾ ಬಂದಂತೆಲ್ಲಾ ತಣ್ಣಗಾಗಿ ಘನ ರೂಪಕ್ಕೆ

ತಿರುಗಿತು. ಮೇಲ್ಭಾಗ ಬೇಗನೆ ತಣ್ಣಗಾಗಿಬಿಟ್ಟಿದ್ದರಿಂದ ಒಳಭಾಗಕ್ಕೆ ತಣಿಯುವ ಅವಕಾಶವೇ ಉಳಿಯಲ್ಲಿಲ್ಲ. ಈಗಾಗಿ ಭೂಮಿಯ ಕೇಂದ್ರಭಾಗ ಇಂದಿಗೂ ಕುದಿಯುತ್ತಲೇ ಇದೆಯಂತೆ.

ತಣ್ಣಗಾದ ಹೊರಭಾಗ ಗೋಲವಾಗಿ ಪರಿವರ್ತನೆಯಾಗುವಾಗ ಒಂದಷ್ಟು ಬೆಟ್ಟಗುಡ್ಡಗಳು ತಗ್ಗು ಹಳ್ಳಗಳು ನಿರ್ಮಾಣವಾದವು. ಈ ಹಂತದಲ್ಲೆ ಭೂಮಂಡಲದ ಸುತ್ತಾ ತೇವಾಂಶ ಘನೀಭವಿಸುತ್ತಾ ಹೋಯಿತು. ಕುದಿಯುವ ಭೂಗೋಳ ತಣಿಯುವ ಪ್ರಕ್ರಿಯೆಯಲ್ಲಿ ಆವಿ ಮೇಲೆದ್ದು ಸುತ್ತಲೂ ಮೋಡವನ್ನೂ ತಟ್ಟಿತು. ಮೋಡಮಳೆಯಾಗಿ ಪರಿವರ್ತನೆಗೊಂಡಿತು. ಅದು ಆಗಸದಿಂದ ಸುರಿಯಲಾರಂಭಿಸಿತು. ಇಲ್ಲೂ ನಿರಂತರ ವರ್ಷಧಾರೆ. ಹೀಗೆ ಸುರಿದ ನೀರಧಾರೆ ಭೂಮಿಯ ಸೃಷ್ಟಿಕಾಲದಲ್ಲಿ ನಿರ್ಮಾಣಗೊಂಡಿದ್ದ ತಗ್ಗುಗಳನ್ನು ಶೇಖರಗೊಂಡಿತು. ಅವೇ ಇಂದಿನ ಸಮುದ್ರ, ಸಮುದ್ರ ಸೇರುವ ಮುನ್ನ ಅಲ್ಲಲ್ಲಿ ಪುಟ್ಟ ತಗ್ಗುಗಳಲ್ಲಿ ನಿಂತನೀರು ಭೂಮಿಯೊಳಕ್ಕೂ ಇಳಿಯಿತು. ಅಂತರ್ಜಲ ನಿರ್ಮಾಣವಾಯಿತು. ಅಂತರ್ಜಲದಿಂದ ನದಿ, ಕೆರೆಗಳು ಜೀವಪಡೆದವು. ಹೀಗೆ ಭೂಮಿಯ ಬಹುಪಾಲು ಜಲಾವೃತಗೊಂಡಿತು.

ಭೂಮಿಸೃಷ್ಟಿಯ ಬಗ್ಗೆ ಇರುವ ಇನ್ನೊಂದು ಪ್ರತಿಪಾದನೆಯೆಂದರೆ ವಾತಾವರಣದಲ್ಲಿನ ಧೂಳಿನ ಕಣಗಳಿಂದ ಭೂಮಿ ರಚನೆಯಾಗಿದೆ. ಅದು ಇನ್ನೂ ಸಾಬೀತಾಗಿಲ್ಲ ಬಿಡಿ. ಹಾಗೆಯೇ ನೀರಿನ ಸೃಷ್ಟಿಯ ಬಗೆಗೂ ಚರ್ಚೆಯಲ್ಲಿರುವ ಇನ್ನೊಂದು ಸಂಗತಿಯೆಂದರೆ ಅದು ಭೂಮಿಯ ಸೃಷ್ಟಿಯ ಜತೆಜತೆಗೇ ಆದದ್ದೆಂಬುದು. ಭೂಮಿ ತಂಪಾಗುವ ಸಂದರ್ಭದಲ್ಲಿ ಘನೀಭವನಗೊಳ್ಳುತ್ತಿದ್ದ ಕಲ್ಲುಗಳು ತೇವಾಂಶವನ್ನು ವಿಸರ್ಜಿಸಿವೆಯಂತೆ. ಅಂಥ ತೇವಾಂಶ ಹನಿಗಳ ರೂಪಪಡೆದು, ಹನಿಗಳು ಹರಿವಾಗಿ, ಹರಿವು ಹಳ್ಳ, ಕೊಳ್ಳ, ನದಿ, ತೊರೆಗಳಾಗಿ ಸಮುದ್ರ ರಚನೆಯಾಗಿದೆ.

ನೀರು ಈ ಪ್ರಕೃತಿಯ ಅತ್ಯದ್ಭುತ ಸೃಷ್ಟಿ ಎನ್ನುವುದಂತೂ ಸತ್ಯ. ಆ ನೀರಿನಿಂದಲೇ ಇಡೀ ಜೀವರಾಶಿಯ ಜನನವಾಗಿದೆ ಎಂಬುದೂ ನಿಜ. ಇದರಲ್ಲಿ ಭಿನ್ನಮತವೇ ಇಲ್ಲ. ಇಂಥ ನೀರನ್ನು ಮತ್ತೆ ಸೃಷ್ಟಿ ಮಾಡಲಂತೂ ನಮ್ಮಿಂದ ಸಾಧ್ಯವೇ ಇಲ್ಲದ ಮಾತು. ಅದನ್ನು ಹಂಚಿಕೊಂಡು ವ್ಯವಸ್ಥಿತವಾಗಿ ಅಗತ್ಯಕ್ಕೆ ಅನುಗುಣ ಬಳಸುವುದರಲ್ಲಷ್ಟೇ ಜಾಣ್ಮೆ ತೋರಬೇಕು. ಆಗಲೇ ನೀರಿನ ಸೌಂದರ್ಯ ಕಂಡೀತು".

ಮಳೆಕುರಿತ ಜನಪದಸಾಹಿತ್ಯದಲ್ಲಿ ಏಕಮಾಧರಿಯ ಸಂಕಥನಗಳು ಇಲ್ಲ. ಅವುಗಳ ವರ್ಗೀಕರಣವಂತೂ ವಿದ್ವಾಂಸವಲಯದ ವಿದ್ವತ್ತಿಗೆ ಸವಾಲಿನವುಗಳಾಗಿವೆ. ಆದರೂ ಸ್ಥೂಲವಾಗಿ ಅವುಗಳನ್ನು ಈ ಕೆಳಗಿನಂತೆ ವಿಭಾಗಿಸಿಕೊಳ್ಳಬಹುದು.

- ಸಂಭ್ರಮದ ಕಥನಗಳು
- ದುರಂತದ ಕಥನಗಳು

- ❖ ಪ್ರತಿಭಟನಾತ್ಮಕ ಕಥನಗಳು
- ❖ ಸಮನ್ವಯ ಕಥನಗಳು

**ಸಂಭ್ರಮದ ಕಥನಗಳು**

ಮಳೆ ಕುರಿತ ಉತ್ಸಾಹಪೂರಿತ ಸ್ಥಾಯಿಯೇ ಸಂಭ್ರಮದ ಕಥನಗಳ ವಸ್ತುವಾಗಿದ್ದು ಅವ್ಯಕ್ತತೆಗೆ ಮೂಲವಾಗುವ ಗಾದೆ ಆಲೌಕಿಕಪ್ರಜ್ಞೆಯು ಕಟ್ಟಿದ ಕಥಾನಕಗಳು ಸಂಭ್ರಮದ ಕಥನಗಳಾಗಿರುತ್ತವೆ. ಸೋನೆಮಳೆಯು ಈ ಸಂಭ್ರಮದ ನೆಲೆಯಗಿದ್ದು ಹೊಲದಲೆಲ್ಲಾ ಹಸಿರು ತುಂಬಿ ಹೊಲದ ಕೆಲಸಗಳು ಬಾಕಿಯಿಲ್ಲದೇ ಇದ್ದಾಗ ಮಳೆ ಬರುವುದರ ಚಿತ್ರಣ ಈ ಪ್ರಕಾರಗಳ ನಿರ್ಮಿತಿಗೆ ಕಾರಣವಾಗುತ್ತದೆ, ಕೇರಿಯಚೆ ನಿಲ್ಲುವ ಈ ಕಥನಗಳು ತನಗಾದ ಆನಂದದ ತುಂಬಿಕೆಯನ್ನು ಅಭಿವ್ಯಕ್ತ ಪಡಿಸಲು ಮಾತ್ರ ಸಂವಾಹಕವಾಗುತ್ತದೆ.

**ದುರಂತದ ಕಥನಗಳು**

ಈ ಕಥನಗಳ ಸ್ಥಾಯಿಯೇ ಆವಲಂಬಿತನದ ಕೋರಿಕೆಯಾಗಿದ್ದು ಮನುಷ್ಯನಾಶದ ದುರಂತವನ್ನು ಚಿತ್ರಿಸುತ್ತಾ ಸಾಗುತ್ತದೆ. ಅಭಿವ್ಯಕ್ತಿಯಲ್ಲಿ ವಿಷಾದ ಆಸಹಾಯಕತೆ ಪ್ರದಾನವಾಗಿ ಕರುಳು ಹಿಂಡುವ ಧ್ವನಿವ್ಯಕ್ತವಾಗುತ್ತದೆ, ಗಮುನಿಸತಕ್ಕದ್ದೇ ಮನುಷ್ಯನಾಶದ ಬಗೆಗಿನ ಭಯ ಒಂದೆಡೆಯಾದರೆ ನಾಶದ ಕುರಿತಾದ ಮರುಕವೂ ಮತ್ತೊಂದು ಆಯಾಮವಾಗಿ ನಿಲ್ಲುತ್ತದೆ. ಈ ಕಥನಗಳು ಚಿತ್ರಿಸಿವಾಗ ಬಳಸಿಕೊಂಡ ಪ್ರತಿಮೆಗಳು ಜೀವಂತಪ್ರತಿಮೆಗಳಾಗಿ ಸಾರ್ವಕಾಲಿಕ ಮಾನ್ಯತೆಯನ್ನು ಪಡೆದು ಪರಿಣಾಮ ಬೀರುತ್ತವೆ. ಮಳೆರಾಯನಹಾಡು ಇನ್ನು ಮುಂತಾದ ಹಾಡುಗಳು ಮಳೆಹೋಗಿ ಮಾನವಬದುಕಿನ ವಿನಾಶದಂಚಿನ ಪರಿಸ್ಥಿತಿಯನ್ನು ಮನೋಘ್ನವಾಗಿ ಪ್ರತಿಮಾತ್ಮಕವಾಗಿ ಚಿತ್ರಿಸುತ್ತವೆ.

ಕ್ಷಾಮದ ಚಿತ್ರಣವನ್ನು ನೀಡುವ ಗೀತೆಗಳಲ್ಲಿ ಅತ್ಯಂತ ಹೃದಯವಿದ್ರಾವಕ ಚಿತ್ರಣವಿರುತ್ತದೆ. 'ಮಲ್ಲಿಗೆ ದಂಡೆ'ಯಲ್ಲಿ ಬಹುಹಿಂದೆಯೇ ಪ್ರಕಟವಾಗಿ ಆಗಿನಿಂದ ಪದೇ ಪದೇ ಉಲ್ಲೇಖಗೊಳ್ಳುತ್ತಿರುವ 'ಮಳಿಹಾಡು' ಇದಕ್ಕೆ ಅತ್ಯುತ್ತಮ ಉದಾಹರಣೆ. 'ಬಣ್ಣದ ಗುಬ್ಯಾರು ಮಳಿರಾಜಾ ಅವರು ಮಣ್ಣಾಗಿ ಹೋದರು ಮಳಿರಾಜಾ' ಎಂದು ಆರಂಭವಾಗುವ ಹಾಡಿನಲ್ಲಿ ಹಲವು ದಾರುಣ ಚಿತ್ರಗಳನ್ನು ಕೊಟ್ಟು ಮಳೆರಾಜನನ್ನು 'ಯಾವಾಗ ಬರುತ್ತೀ ಎಂದು ಆರ್ತವಾಗಿ ಪ್ರಾರ್ಥಿಸುವ ಚಿತ್ರಣವಿದೆ. ಇಲ್ಲಿ ಬರುವ ಮಕ್ಕಳನ್ನು ಕೊಂದುಹಾಕುವ, ಇನ್ನಿತರ ಚಿತ್ರಗಳು ಭೀಕರವೂ ಅಪೂರ್ವವೂ ಆದವುಗಳು. ಕನ್ನಡ ಸಾಹಿತ್ಯದಲ್ಲಿ ಇದಕ್ಕೆ ಸಮಾನವಾದ ದಾರುಣತೆಯ ಚಿತ್ರಣ ವಿರಳ.

ಕ್ಷಾಮದ ದವಡೆಯಲ್ಲಿದ್ದು ಮಳೆಗಾಗಿ ಪ್ರಾರ್ಥಿಸುವ ಹಾಡುಗಳಲ್ಲಿ ದಾರುಣತೆಯೂ ಸಾಮಾನ್ಯ ಸಂದರ್ಭಗಳ ಹಾರೈಕೆಯಲ್ಲಿ ಸಾಧಾರಣತೆಯೂ ಇರುವಂತೆ ಇವೆರಡರ ನಡುವಿನ ಇನ್ನೊಂದು

ಸ್ಥಿತಿಯೂ ಇದೆ. ಅದೆಂದರೆ-ಕ್ಷಾಮದಷ್ಟು ಭೀಕರವಲ್ಲದ ಆದರೆ, ಜನಗಳಿಗೆ ಸಾಕಷ್ಟು ಆತಂಕ, ಕಷ್ಟಗಳನ್ನು ಹುಟ್ಟಿಸಿರುವ, ಮಳೆತಡವಾಗಿರುವ ದಿನಗಳ ಸ್ಥಿತಿ. ಇಂಥ ಚಿತ್ರಣ ಕೊಡುತ್ತಾ ಮಳೆಗಾಗಿ ಪ್ರಾರ್ಥಿಸುವ ಗೀತೆಗಳಲ್ಲಿ ಹೆಚ್ಚಿನ ವಿಷಣ್ಣತೆ ಕಂಡುಬರುತ್ತದೆ. ಇದಕ್ಕೆ ಉದಾಹರಣೆಗಾಗಿ 'ಸ್ವಾಮಿಮಳೆರಾಯ' ಹಾಡನ್ನು ನೋಡಬಹುದು. ಇಲ್ಲಿ ವಸ್ತುನಿಷ್ಠ ಚಿತ್ರಣವೇ ಇದ್ದು, ಉಪಮೆಗಳೂ ಸಹ ಕಡಿಮೆಯೇ ಇವೆ. ಆದರೆ ಇಲ್ಲಿಯ ವಾಸ್ತವವೇ ಗಾಢವಾಗಿದ್ದು, ನಮ್ಮನ್ನು ತಟ್ಟುತ್ತದೆ. 'ಬರಗಾಲದ ಹಾಡು' ಕೂಡ ಈ ದುಃಖದ ಪರಿಣಾಮಕಾರಿ ಚಿತ್ರಣ ಕೊಡುತ್ತದೆ. ಮಳೆರಾಯನೇ ಪ್ರಧಾನ ಪಾತ್ರವಾಗಿರುವಂತಹ (ಅಂದರೆ-ಮಳೆಯನ್ನು ಕುರಿತ ವಿವಿಧ ನಂಬಿಕೆ), ಆಚರಣೆಗಳನ್ನು ಪ್ರತಿಬಿಂಬಿಸುವ ಹಾಡುಗಳು. ತಿಂಗಳುಮಾಮನ ಪದಗಳು, ಕುರುಬರ ಮಹತ್ವ ಸಾರುವ ಪದಗಳು, ಇವೆಲ್ಲ ಇದಕ್ಕೆ ಉದಾಹರಣೆ. ವಸ್ತುವಿನ ದೃಷ್ಟಿಯಿಂದ ಗುರ್ಜಿಹಾಡುಗಳೂ ಇದೇ ಗುಂಪಿಗೆ ಸೇರುತ್ತವೆ. 'ಪುಣ್ಯವಿಲ್ಲದ ನಾರಿ ಪುರುಷನ ಬೈದರೆ ಅನ್ಯಾಯಕ್ಕೆ ಮಳೆ ಹೋದವೋ', ಎಂಬಂಥ ನಂಬಿಕೆಗಳೂ ಈ ಹಾಡುಗಳಲ್ಲಿ ದಾಖಲಾಗಿವೆ. ಈ ಗುಂಪಿನ ಹಾಡುಗಳಲ್ಲಿ ಕೆಲವೆಡೆ ಒಳ್ಳೆಯ ಕಾವ್ಯಾತ್ಮಕ ಅಭಿವ್ಯಕ್ತಿ ಕಂಡು ಬರುತ್ತದೆ. ಉದಾ:

ಆಡೋ ಮಕ್ಕಳ ಅಡವಿಗೆ ಕಳಿಸಿ,
ಉಣ್ಣೋ ಮಕ್ಕಳ ಕಂಬಕ್ಕೆ ಕಟ್ಟಿ
ಎತ್ತೆತ್ತ್ಹೋದೋ ಮಳಿದ್ಯಾವೋ ಮಳಿದ್ಯಾವೋ॥
ಅಪ್ಪ ನೀನಿಲ್ಲದೆ ಸೊಪ್ಪಾದೊ ಈ ಭೂಮಿ
ಸಪ್ಪೆ ದಂಟಾದೊ ದನಕರ । ದೇವಿಂದ್ರಾಯ
ಅಪ್ಪ ರಾತಿರಿಕೆ ಕರುಣಾಗೋ ॥

(ತಿಂಗಳ ಮಾಮನ ಪದ)

**ಪ್ರತಿಭಟನಾತ್ಮಕ ಕಥನಗಳು**

ಮಳೆಯಕಥನಗಳ ತಾತ್ವಿಕಬಿತ್ತಿಯಲ್ಲಿ ಮುನ್ನೆಲೆಯಲ್ಲಿ ನಿಲ್ಲುವ ಕಥನಗಳು ಪ್ರತಿಭಟನಾತ್ಮಕ ವಾದವುಗಳು. ಮೇಲ್ನೋಟಕ್ಕೆ ಪ್ರತಿಭಟನೆಯ ಸುಳಿವನ್ನುಕೊಡದಿದ್ದರು ಅಂತರ್ಯದಲ್ಲಿ ಕ್ರಿಯಾತ್ಮಕ ಪ್ರತಿಭಟನೆಯಿರುತ್ತದೆ ಈ ವಿಧದ ಕಥನಗಳನ್ನು ಆರ್ಯರ ಆಗಮನದ ನಂತರವೇ ರೂಪುಗೊಂಡಿರಲು ಸಾದ್ಯ. ಮಾಯದಂತ ಮಳೆಬಂತಣ್ಣ ಮದಗಾದಕೆರೆಗೆ ಎನ್ನುವ ಗೀತೆಯು ಪುರುಷತಂತ್ರ ಕಾರ್ಯಚ'ರಣೆಯ ಭಂಜನೆ ಲೋಕಕಲ್ಯಾಣಾರ್ಥಕ್ಕೆ ತೊಡಗುವ ನೆಲೆಗಳು ಆಂತಸ್ಥವಾಗಿರುವುದನ್ನೂ ಅಭಿವ್ಯಕ್ತಿಸುತ್ತದೆ. ಜೋಕುಮಾರಕಥನವೂ ಕೂಡ ಬಂಡಾಯದ ಪ್ರತಿಭಟನೆ ಮತ್ತೊಂದು ಆಯಾಮಕ್ಕೆ ಸಾಕ್ಷಿ ಯಾಗುತ್ತದೆ. ಕೆಳವರ್ಗದ ಕಾಯಕತತ್ವವನ್ನು ಅನುಸರಿಸದ ಜೋಕುಮಾರನು ಕಾಯರಸಿಕತೆ

ಜನಕ್ಕೆ ಹಿಂಸೆ ಕೊಡುವ ಬಲತ್ಕಾರ ಮಾಡುವ ಕ್ರಿಯೆಗಿಳಿಯುತ್ತಾನೆ, ಆಗಸರು ಬಟ್ಟೆ ಒಗೆಯುವಾಗ ಆಗಸರ ಹುಡುಗಿಯನ್ನು ಬಲತ್ಕಾರಿಸಿದಕ್ಕೆ ಸಾಯಿಸಿ ಬಂಡೆಯ ಕೆಳಗೆ ಬಚ್ಚಿಡುತ್ತಾರೆ ಅಂದರೆ ಕಾಯಕಕ್ಕೆ ವಿಘ್ನಮಾಡಿದ ವ್ಯಕ್ತಿಯನ್ನು ಕೊಂದು ಆದೇ ಕಾಯಕದ ಪ್ರತೀಕದ ಕೆಳಗೇ ಆತನಿಗೆ ಮೋಕ್ಷಕಾಣಿಸುವ ಪ್ರತಿಭಟನೆಯ ಧೋರಣೆಯು ಈ ಕಥನದಲ್ಲಿದೆ.

ಜೋಕುಮಾರ ಫಲಸಮೃದ್ಧಿಯ ದೇವತೆಯಾದರಿಂದ ಸಮೃದ್ಧವಾದ ಫಲದ ಉತ್ಪನ್ನವುಳ್ಳ ಆಳುವವರ್ಗದ ಪರನಿಂತ ದೇವರು, ಆಳುವವರ್ಗದ ಪುಂಡಾಟಿಕೆಯೇ ಈ ದೇವರೂ ಪುಂಡಾಟಿಕೆ ಆರಂಬಿಸಿ ಆತ್ಯಾಚಾರಕ್ಕಿಳಿದ. ಇದರಿಂದ ರೋಸಿಹೋದ ಜನ ಸಂಘಟಿತರಾಗಿ ವ್ಯವಸ್ಥೆಯ ವಿರುದ್ಧ ತಿರುಗಿಬಿದ್ದು ಮುಗಿಸಿದರು. ಇಲ್ಲಿ ಎರಡು ಕಾರಣಗಳು ಸ್ಪಷ್ಟವಾಗಿವೆ. ಪುಂಡಾಟಿಕೆ ಮತ್ತು ದುಡಿಮೆಯ ದಕ್ಕದಫಲ ಇವೆರಡು ಆತಿಯಾದಾಗ ನಿಜವಾಗಿಯೂ ಪ್ರತಿಭಟನೆ ಶುರುವಾಗುತ್ತದೆ ಬಹುಶಃ ಇಂಥ ಬಂಡಾಯ ಜನಪದಸಾಹಿತ್ಯದಲ್ಲಿ ಆಪರೂಪವಾದುದು. ಬೇರಾವುದೇ ಚಾರಿತ್ರಿಕಲಾವಣಿಗಳ ಕ್ರಾಂತಿಗಿಂತ ಇದು ಆಪರೂಪವಾದದು. ಯಾಕೆಂದರೆ ದೇವರ ವಿರುದ್ಧ ತಿರುಗಿಬೀಳುವಂತಹ ಮನೋಭಾವ ವ್ಯಕ್ತಪಡಿಸುವುದರಿಂದ, ಆಳುವವರ್ಗ ತನಗನುಕೂಲವಾದಂಥ ರೀತಿಯಲ್ಲಿ ಶಾಸ್ತ್ರ, ಧರ್ಮ ದೇವರು ಸೃಷ್ಟಿಸಿಕೊಳ್ಳುವ ಸನ್ನಿವೇಶದಲ್ಲಿ ಪ್ರತಿಭಟನೆ ನಡೆದಿರುವುದು. ಅದೂ ದೇವರು ಯಾಜಮಾನಿಕೆಯ ವಿರುದ್ಧ ಎಂದಾಗ ರಾಜಕೀಯ ಕ್ರಾಂತಿಗೀತೆಗಳಗಿಂತ ಇದು ಮುಖ್ಯವಾಗಿದೆ.

ಕರ್ನಾಟಕದೆಲ್ಲೆಡೆಯು ಪ್ರಚಲಿತವಿರುವ ಮಳೆರಾಜನ ಹಾಡು ಕೂಡ ಸಶಕ್ತವಾಗಿ ಬಂಡಾಯ ಧೋರಣೆಯನ್ನು ಅಭಿವ್ಯಕ್ತಿಸುವ ಹಾಡು. ಭೀಕರಬರಗಾಲದಲ್ಲಿ ಜನ ಮಕ್ಕಳನ್ನು ಮಾರಿ ರೊಕ್ಕ ಹಿಡಿದುಕೊಂಡು ಭತ್ತ ಹುಡುಕಿಕೊಂಡು ಆಲೆಯುವ ಪರಿಸ್ಥಿತಿಯಲಿ ಸಿರಿವಂತವರ್ಗ ಬಡಜನತೆಯ ಆಹಾರದಲ್ಲಿ ಸುಣ್ಣ ವಿಷಗಳನ್ನೆ ಸೇರಿಸಿ ಸಾಯಿಸುತ್ತಾರೆ. ಹೀಗೆ ದೌರ್ಜನ್ಯ ಎಸಗುತ್ತಿದ್ದಾಗ ಅನ್ಯದದಿನ ಬಂದು ಮಳೆರಾಜನಿಂದ ಸಿರಿವಂತ ಬಣ್ಣದಗುಬ್ಬಿಯವರು ಮಣ್ಣಾಗಿಹೊದರು ಎಂದು ಗೀತೆ ತಿಳಿಸುತ್ತದೆ. ಮಳೆರಾಜ ಎಂಬುದನ್ನು ಸಾಂಕೇತಿಕವಾಗಿ ತೆಗೆದುಕೊಂಡರೆ ಎರಡು ಅರ್ಥಗಳಲ್ಲಿ ಇದು ಕ್ರಾಂತಿಗೀತೆಯಾಗುತ್ತದೆ. ಉಳ್ಳವರ ದಬ್ಬಾಳಿಕೆ ಆತಿಯಾದಾಗ ಕ್ರಾಂತಿ. ಅವರು ನಿರೀಕ್ಷಿಸಿರದ ಕಾಲ ಬಿಟ್ಟು ಬೇರೆ ಕಾಲದಲ್ಲಿ ಆಗಿ ಹಳ್ಳಕೊಳ್ಳದ ತುಂಬ ಹೆಣ ಹರಿದಾಡುವಂತಹ ಸ್ಥಿತಿಯನ್ನು ಎಂದು ಮಾಡುತ್ತದೆ, ಆದೇ ಈ ಗೀತೆಯಲ್ಲಿ ತಮಗೆ ಆಗುವ ಅನ್ಯಾಯಕ್ಕೆ ಕಾರಣರಾದವರನ್ನು ನಾಶಪಡಿಸುವ ಮನೋಭಾವ ಎದ್ದು ಕಾಣುತ್ತದೆ. ಯಥಾ ಸ್ಥಿತಿಯನ್ನು ಅಪ್ಪಿಕೊಳ್ಳುತ್ತಲೇ ತಮಗನುಕೂಲ ಸಮಯಸಿಕ್ಕಾಗ ದೌರ್ಜನ್ಯದ ಪುಂಡಾಟಿಕೆಯನ್ನು ಅಳಿಸಬೇಕೆನ್ನುವ ಧೋರಣೆ ಅಶಿಕ್ಷಿತರಾದ ಜನಪದರಲ್ಲಿತ್ತು ಎಂಬುದು ಮೇಲಿನ ಎರಡುಗೀತೆಗಳ'ಲ್ಲೂ ಕಂಡುಬರುತ್ತದೆ.

ಮಳೆಯನ್ನು ಕುರಿತು ಮೇಲ್ಮುಖದ ಚಿಂತನಾಕ್ರಮವು ವೈದಿಕಶಾಹಿಹಿತಾಸಕ್ತಿಯ ದೃಷ್ಟಿಕೋನವಾಗಿದ್ದು ಆ ಕಾರಣಕ್ಕೆ ವರುಣನಾದಿಯಗಿ ಪ್ರತಿಯೊಂದೂ ದೇವತಾಸ್ವರೂಪಿಗಳೆಂಬಂತೆ ನಿರೂಪಸಲ್ಪಡುತ್ತವೆ. ಈ ಸ್ಥಿತ್ಯಂತರ ಪ್ರಕ್ರಿಯೆಯು ಮಧ್ಯಮಕಾಲ ಪ್ರಕ್ರಿಯೆಯಾಗಿರುವುದು ಮೇಲ್ನೋಟದ ಆಲೋಚನೆಯ ಸತ್ಯವಾದರೂ ಅದನ್ನಿನ್ನೂ ಆಧ್ಯಯನ ಸಂಶೋಧನೆಗಳು ಸ್ಪಷ್ಟಪಡಿಸಬೇಕಿದೆ. ಆರ್ಯಫಿಲಾಸಫಿಯ ಹೆಣೆದುಕೊಂಡಿರುವ ಕಥನಗಳನ್ನು ಅಪವಿತ್ರ್ಯಕರಿಸುವ ವೈರುಧ್ಯ ನೆಲೆಯ ಕಥನಕಗಳು ಜನಪದ ಮಿಥ್ ಕಲ್ಪನಾಪ್ರಕ್ರಿಯೆಯಲ್ಲಿ ಸಾದೃಷ್ಯವಾಗಿರುತ್ತದೆ. ಇದನ್ನು ಜನಪದಮಹಾಕಾವ್ಯಗಳಲ್ಲದೆ ಕೆಲವು ಖಂಡಕಾವ್ಯಗಳೂ ಸ್ಪಷ್ಟಿಕರಿಸಿಕೊಂಡಿವೆ. ಜನಪದ ಮಹಾಭಾರತ ರಾಮಾಯಣಗಳು ಈ ಕ್ರಮವನ್ನು ಸ್ಪಷ್ಟವಾಗಿ ಸಂರಚಿಸಿ ತಮ್ಮಲ್ಲಿನ ಆದಿಮಪ್ರಜ್ಞೆಗೆ ಕಥನಸ್ವರೂಪ ಕೊಟ್ಟಿವೆ, ಸಾರ್ವತ್ರಿಕ ಸ್ಥಾಪಿತಮಿಥ್‌ವೊಂದನ್ನು ಜನಪದ ಮನಸ್ಸು ಹೇಗೆ ಒಡೆದು ಹಾಕುತ್ತದೆ ಎಂಬುದಕ್ಕೆ ನಂಬಲರ್ಹ ಕತೆಗಳು ಪ್ರಚಲಿತದಲ್ಲಿವೆ. ಈ ಸಂಕಥನ (Descouse) ಗಳಲ್ಲಿ ಪ್ರಮುಖವಾದ ಎರಡು ಕತೆಗಳನ್ನು ಸಂಕ್ಷಿಪ್ತವಾಗಿ ಗಮನಿಸೋಣ.

ಇಂದ್ರಪ್ರಸ್ಥ ಹಸ್ತಿನಾಪುರ ಸುಬಿಕ್ಷವಾಗಿದೆ. ನ್ಯಾಯಧರ್ಮಗಳು ನೇರವಾಗಿದ್ದು ಕಾಲಕಾಲಕ್ಕೆ ಮಳೆ ಬೆಳೆಗಳಾಗಿ ಪ್ರಜೆಗಳೆಲ್ಲರೂ ಸುಖಸಂತೋಷದಿಂದದ್ದಾರೆ. ಒಮ್ಮೆ ಹಿಡಿದಮಳೆ ಧಾರಾಕಾರವಾಗಿ ಧೋಗುಟ್ಟುತ್ತಿದೆ ವಾರೊಪ್ಪತ್ತು ದಿನವಾದರು ಬಿಡುವ ಯಾವ ಲಕ್ಷಣಗಳೂ ಕಾಣುತ್ತಿಲ್ಲ. ಅದೇ ಸಮಯದಲ್ಲಿ ಒಬ್ಬ ಬಡಬ್ರಾಹ್ಮಣನ ಮಗ ಅಕಾಲ ಮರಣಕ್ಕೀಡಾಗುತ್ತಾನೆ. ಶವಸಂಸ್ಕಾರ ಮಾಡೋಣವೆಂದರೆ ಮಳೆ ಬಿಡುತ್ತಿಲ್ಲ. ಬ್ರಾಹ್ಮಣನ ಮಗ ಸತ್ತ ಮರುದಿನ ಮಳೆ ನಿಲ್ಲುತ್ತದೆ. ಆದರೆ ಶವವನ್ನು ಸುಡಲು ಎಲ್ಲೂ ಒಣ ಕಟ್ಟಿಗೆ ಸಿಗುತ್ತಿಲ್ಲ. ಬ್ರಾಹ್ಮಣ ಮೊದಲು ಧರ್ಮರಾಯನ ಹತ್ತಿರ ಹೋಗಿ ಬೇಡಿಕೋಳ್ಳುತ್ತಾನೆ. ಆಗ ಧರ್ಮರಾಯ ವಾರದಿಂದ ಮಳೆ ಹಿಡಿದು ನಮಗೇ ಆಡುಗೆ ಮಾಡಲು ಕುಳ್ಳೆ ಇಲ್ಲ ನಿಮಗೆಲ್ಲಿಂದ ತರೋದು ಬೇರೆ ಏನಾದರು ಕೇಳು ಎನ್ನುತ್ತಾನೆ. ಬ್ರಾಹ್ಮಣ ನನಗೆ ಕಟ್ಟಿಗೆ ಬಿಟ್ಟು ಬೇರೇನೊ ಬೇಡ ಅನ್ನುತ್ತಾನೆ. ಅಂತೆಯೇ ಬ್ರಾಹ್ಮಣ ಕ್ರಮವಾಗಿ ಭೀಮ, ಅರ್ಜುನ, ನಕುಲ, ಸಹದೇವರ ಮನೆಗೂ ಹೋಗಿ ಬೇಡುತ್ತಾನೆ. ಎಲ್ಲರ ಉತ್ತರವೂ ಒಂದೇ, "ವಾರೂಪ್ಪತ್ತು ಮಳೆ ಹಿಡಿದು ನಮಗೇ ಅಡುಗೆ ಮಾಡಲು ಎಲ್ಲೂ ಒಣಕಟ್ಟಿಗೆ ಸಿಗುತ್ತಿಲ್ಲ. ನಿಮಗೆಲ್ಲಿಂದ ತರೋದು ಬೇರೆ ಏನಾದರೂ ಕೇಳಿ ಕೊಡುತ್ತೇವೆ" ಬ್ರಾಹ್ಮಣನಿಗೆ ಮಗನ ಶವಸಂಸ್ಕಾರ ಮಾಡಲಾಗದ ಸಂಕಟ ಒಂದೆಡೆಯಾದರೆ ಮುಂದೇನು ಮಾಡಬೇಕೆನ್ನುವ ದಿಗಿಲು ಮತ್ತೊಂದಡೆ. ಆತ ನೇರವಾಗಿ ದುರ್ಯೋಧನನ ಮನೆಗೆಹೋಗಿ ಕೇಳಿದಾಗಲೂ ಧರ್ಮರಾಯ ಹೇಳಿದ ಮಾತನ್ನೇ ದುರ್ಯೋಧನನೂ ಹೇಳುತ್ತಾನೆ. ಬ್ರಾಹ್ಮಣನಿಗೆ ಮುಂದಿನ ದಾರಿಯೇ ಕಾಣುವುದಿಲ್ಲ. ಆಗ ಕರ್ಣ ನೆನಪಾಗುತ್ತಾನೆ. ಕರ್ಣನ ಮನೆಗೆಹೋಗಿ ಕೇಳುತ್ತಾನೆ ಕರ್ಣ ಮೂಗಿನಮೇಲೆ ಬೆರಳಿಟ್ಟು

ಯೋಚಿಸುವಾಗ ದಾರಿಕಾಣದೆ ಮೇಲಕ್ಕೆ ನೋಡುತ್ತಾನೆ. ಮನಸ್ಸಿಗೆ ಯಾವುದೋ ಒಂದು ಮಿಂಚುಹೊಳಯುತ್ತದೆ. ಆಳುಗಳನ್ನು ಕರೆಸಿ ಮನೆಯ ಜಂತಿಗಳನ್ನು ಕೀಳಲು ಹೇಳುತ್ತಾನೆ. ಒಂದು ಗಾಡಿಯಷ್ಟು ಒಣಕಟ್ಟಿಗೆ ದೊರೆಯುತ್ತದೆ. ಬ್ರಾಹ್ಮಣನಿಗೆ ಸಂತೋಷವಾಗುತ್ತದೆ. ಮಗನ ಶವಸಂಸ್ಕಾರ ಮುಗಿದತಕ್ಷಣ ಬ್ರಾಹ್ಮಣ 'ಸ್ವಾಮಿ ನಿಮಗೆ ನೆರಳಿರುವ ಮನೆಯನ್ನೇ ಕೆಡವಿದ್ದಿರಾ ಯಾಕೆ ಹೀಗೆ ಮಾಡಿದಿರಿ' ಎಂದು ಕೇಳುತ್ತಾನೆ. ಆಗ ಕರ್ಣನು "ಬ್ರಾಹ್ಮಣನ ಮಗನಿಗೆ ಶವಸಂಸ್ಕಾರಕ್ಕೆ ಕಟ್ಟಿಗೆ ಕೊಟ್ಟ ಪುಣ್ಯವೇ ನಮ್ಮನ್ನು ಕಾಯುತ್ತದೆ. ಬಿದ್ದುಹೋದ ಮನೆ ಕಟ್ಟಿಸಬಹುದು. ಹಾಗಂತ ಸತ್ತಶವ ಮತ್ತೊಮ್ಮೆ ಸಾಯೋಕೆ ಸಾಧ್ಯವೇ ಹೇಳಿ" ಎನ್ನುವನು. ಕರ್ಣನ ಮಾತಿಗೆ ಕಣ್ತುಂಬಿಕೊಂಡ ಬ್ರಾಹ್ಮಣನು "ಕರ್ಣ ನಿಜವಾಗಿಯೂ ನೀನೇ ದಾನಶೂರ ಜಗತ್ತಿನಲ್ಲಿ ಹಿಂದೆಯೂ ಮುಂದೆಯೂ ನಿನ್ನ ಸರಿಗೈದ ದಾನಶೂರ ಜನಿಸಲಾರನೆಂದು ಹರಸುತ್ತಾನೆ" ಕರ್ಣಕುಂಡಲವನ್ನು ಕೊಟ್ಟಿದಕ್ಕಲ್ಲ. ಕರ್ಣ ದಾನಶೂರನಾಗಿದ್ದು ಶವಸಂಸ್ಕಾರಕ್ಕೆ ಕಟ್ಟಿಗೆ ಯಾರೂ ಕೊಡದಿದ್ದಾಗ ಕರ್ಣ ಕೊಡುತ್ತಾನೆ ಆದಕ್ಕೆ.

ಮಲೆಮಾದೇಶ್ವರ ಕಾವ್ಯದಲ್ಲಿ ಬರುವ ಮಳೆಯ ಕಥನವೊಂದು ಹೀಗಿದೆ. ಮಲೆಮಾದೇಶ್ವರನು ಸಂಕಮ್ಮನ ಮಕ್ಕಳಾದ ಬಿಲ್ಲಯ್ಯ ಕಾರಯ್ಯರನ್ನು ದತ್ತುಪಡೆಯುತ್ತಾನೆ. ಅವರ ಭಕ್ತಿಯನ್ನು ಪರೀಕ್ಷಿಸಬೇಕೆಂದು ನಿಶ್ಚಯಿಸುತ್ತಾನೆ. ಒಂದು ದಿನ ಬಿಲ್ಲಯ್ಯ ಕಾರಯ್ಯರು ಮತ್ತು ಬ್ಯಾಡರ ಕನ್ನಯ್ಯರು ಪೂಜೆಗೆ ಹೂ ತರಲು ಕಡ್ಡಿಹಳ್ಳಕ್ಕೆ ಹೋಗಿರುತ್ತಾರೆ. ಆಗ ಭಕ್ತಿಪರೀಕ್ಷೆ ನಡೆಯುತ್ತದೆ. ಮೊದಲು ಮಾದೇಶ್ವರನು ದೇವೇಂದ್ರನ ಬಳಿಗೆ ಬಂದು ಭೂಮಿ ಆಕಾಶ ಒಂದಾಗುವಂತೆ ಮಳೆಯನ್ನು ಸುರಿಸುವಂತೆ ವರುಣನಿಗೆ ಆಜ್ಞಾಪಿಸುತ್ತಾನೆ. ನಂತರ ಗುಡುಗಾಜಮ್ಮನ ಬಳಿಹೋಗಿ ಈ ಭೂಮಿ ನಡುಗುವಂತೆ ಗುಡುಗಬೇಕು ಸೀಳಮ್ಮನ ಬಳಿ ಹೋಗಿ ಕತ್ತಲನ್ನೇ ಸೀಳಿ ಕತ್ತಲಾವರಿಸುವಂತೆ ಸಿಡಿಲು ಹೊಡೆಯಬೇಕು ಎಂದು ಆಜ್ಞಾಪಿಸುತ್ತಾನೆ. ಇದಕ್ಕೆ ಒಪ್ಪಿದ ದೇವತೆಗಳು ತಮಗೊಪ್ಪಿಸಿದಂತೆ ಕಾರ್ಯಪ್ರವೃತ್ತರಾಗುತ್ತಾರೆ. ಕಡ್ಡಿಹಳ್ಳದಲ್ಲಿ ಹೂವನ್ನು ಕೀಳುತ್ತಾ ಇದ್ದ ಕಾರಯ್ಯ ಬಿಲ್ಲಯ್ಯ ಕನ್ನಯ್ಯರು ಕಣ್ಣೆತ್ತಿ ನೋಡುತ್ತಾರೆ. ಇದ್ದಕ್ಕಿದ್ದ ಹಾಗೆ ಕತ್ತಲು ಆವರಿಸುತ್ತದೆ. ಕಾರೆಂಬ ಕತ್ತಲ ನಡುವೆ ಭೋರ್ಗರೆದು ಮಳೆ ಸುರಿಯಲಾರಂಬಿಸುತ್ತದೆ. ಒಂದೊಂದು ಚಂಡಿನ ಗಾತ್ರದ ಹನಿಗಳು ಬೀಳಲಾರಂಬಿಸುತ್ತವೆ. ಮರ, ಗುಡ್ಡ, ಬೆಟ್ಟ, ಆನೆಗಳು ಸೇರಿದಂತೆ ಅನೇಕ ಪ್ರಾಣಿಗಳು ನೀರಿನಲ್ಲಿ ಹರಿದುಕೊಂಡು ಹೋಗುತ್ತವೆ. ಮಾದೇಶ್ವರನ ದೇವಾಲಯದೊಳಗೂ ನೀರು ಹರಿದು ಕನ್ನಯ್ಯ ಬಿಲ್ಲಯ್ಯ ಕಾರಯ್ಯರು ಮಾದೇಶ್ವರನ ಲಿಂಗವೂ ನೀರಿನಲ್ಲಿ ಹರಿದುಕೊಡು ಹರಿದುಕೊಂಡು ಹೋಗುವುದನ್ನು ಕಂಡು ಶಿವನೇ ನಿನಗೂ ಈ ಸ್ಥಿತಿ ಬಂದಿತೇ ಎಂದು ಕೊಚ್ಚಿಹೋಗುವ ಲಿಂಗವನ್ನು ತಬ್ಬಿಕೊಳ್ಳುತ್ತಾರೆ. ಎಂತಹ ಸಂದರ್ಭ ಬಂದರೂ ಈ ಸಿಸು ಮಕ್ಕಳು ನನ್ನನ್ನು ನನ್ನ ಮೇಲಿನ ಭಕ್ತಿಯನ್ನು ಬಿಡೋರಲ್ಲ ಎಂದು ಆ ಮೂವರನ್ನೂ ಶಿವನು

ತಬ್ಬಿಕೊಂಡು ಬಿಲ್ಲಯ್ಯ ಕಾರಯ್ಯರನ್ನು ಹೆಗಲಮೇಲೆ ಕೂರಿಸಿಕೊಂಡು ದೇವಾಲಯಕ್ಕೆ ಕರೆ ತರಲು ನಂತರ ತನ್ನ ಕಣ್ಸನ್ನೆಯಿಂದಲೇ ಇಂದ್ರನಿಗೆ ಮಳೆಯನ್ನು ನಿಲ್ಲಿಸಲು ಸೂಚಿಸುತ್ತಾನೆ. ಗುಡುಗು ಸಿಡಿಲು ಗಾಳಿಬಯಲಾಗಿ ಭಕ್ತಿಯ ಪರಾಕಾಷ್ಠೆ ಮೆರೆದ ತನ್ನ ಭಕ್ತರನ್ನು ಮಾದೇಶ್ವರ ಸುಖವಾಗಿಡುತ್ತಾನೆ.

ಈ ಗುಂಪಿನ ಹಾಡುಗಳಲ್ಲಿ ಕೆಲವು ಕಥನಗೀತೆಗಳೂ ದೊರೆಯುತ್ತವೆ. ಅವುಗಳಲ್ಲಿ ಮೂರು ವಿಧದ ಹಾಡುಗಳು ಮುಖ್ಯವಾದವುಗಳು.

೧) ಜೋಕುಮಾರನ ಹಾಡು

೨) ಮಳೆರಾಯ – ಕಾರ್‍ಹೆಣ್ಣು ಹಾಡು

೩) ಉತ್ತರದೇವಿ ಹಾಡು

**ಮಳೆಕಥನಗಳ ತಾತ್ವಿಕತೆ.**

ಜನಪದ ಕವಿಯೊಬ್ಬ ತಾನು ಕಂಡುದನ್ನು ಅನುಭವಿಸಿದ್ದನ್ನು ಸಹಜವಾಗಿ ನೋಡಿದಂತೆ, ಶಿಷ್ಟ ಕವಿಯೊಬ್ಬ ನೋಡಲಾರ. ಜನಪದರು ತಮ್ಮ ಸುತ್ತಲಿನ ಪ್ರಕೃತಿಯೊಂದಿಗೆ ಸ್ಪಂದಿಸುವವರು ಅದರೊಳಗೆ ತಮ್ಮ ಬದುಕು ಮತ್ತು ದೈವವನ್ನು ಹುಡುಕುವವರು. ಆದರೆ ಶಿಷ್ಟಕವಿಯೊಬ್ಬ ತನ್ನ ಉದ್ದೇಶಕ್ಕೆ ಅನುಗುಣವಾಗಿ ಸಹಜತೆಯನ್ನು ವೈಭವಿಕರಿಸುವ ಅಂಶಗೋಚರಿಸುತ್ತದೆ. ಉತ್ತರದೇವಿ, ಉತ್ತರೆ ಮಳೆಯಾದಳು ಎಂಬ ವಿಷಯವನ್ನು ತಿಳಿಸುವ ಪಾಠಗಳಲ್ಲಿ ಆಕೆ ಉತ್ತರೆಮಳೆಯೇ ಏಕೆ ಆದಳು? ಹಾಗೆ ಆಗಲು ಕಾರಣವೇನು? ಉತ್ತರೆಗೂ ಉತ್ತರೆಮಳೆಗೂ ಏನು ಸಂಬಂಧ? ಎಂಬೆಲ್ಲಾ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಇವುಗಳಿಗೆ ಯಾವ ಪಾಠದಲ್ಲಿಯೂ ನೇರಉತ್ತರ ಸಿಕ್ಕಿರುವುದಿಲ್ಲ. ಉತ್ತರೆಮಳೆಯಾದ ಉತ್ತರದೇವಿಯ ಚಾರಿತ್ರ್ಯವನ್ನರಿತ ಜನಪದಕವಿಯೊಬ್ಬನ ಮಾನಸಿಕ ಹಂಬಲವೇ ಉತ್ತರೆಗೆ ಈ ಉನ್ನತ ನೆಲೆ ದೊರಕಲು ಕಾರಣವಾಗಿರಬೇಕು. ಮಳೆಯ ನಕ್ಷತ್ರ ಉತ್ತರಾ ಮತ್ತು ಉತ್ತರದೇವಿ ಈ ಹೆಸರುಗಳ ಸಾಮ್ಯತೆಯೇ ಕವಿಯ ಬಾಯಲ್ಲಿ ಇಂತಹ ಸಂಬಂಧವಾಗಿ ಹೊರಹೊಮ್ಮಿರಬೇಕು. ಅಥವಾ ಉದ್ದೇಶಪೂರ್ವಕವಾಗಿಯೇ ಕವಿ ತನ್ನ ಈ ಉತ್ತರೆಯ ಪಾತ್ರವನ್ನು ಚಿರಂತನವಾಗಿ ನಿಲ್ಲಿಸಲು ಉತ್ತರೆ ಎಂಬ ಹೆಸರನ್ನು ಇಟ್ಟು ಉತ್ತರೆ ಮಳೆಯಾಗಿಸಿರಬಹುದು.

ಉತ್ತರದೇವಿ ಒಂದು ಪ್ರಸಿದ್ಧ ದುರಂತಕಥನಗೀತೆ. ಕೆಲವು ಸುಖಾಂತವಾದ ಪಾಠಗಳೂ ಇವೆ. ಉತ್ತರೆ, ಉತ್ತರೆಮಳೆಯಾದಳು ಎಂಬ ಅಂಶವನ್ನು ಗಮನದಲಿಟ್ಟುಕೊಂಡು ವಿವೇಚಿಸಿದರೆ ಇದು ಬಯಲುಸೀಮೆಯ ಸೃಷ್ಟಿಯಿರಬಹುದು. ಉತ್ತರೆ ಮಳೆಯಾಗುವಷ್ಟರ ಮಟ್ಟಕ್ಕೆ ಏರಿದ ಆ ಸಾಧ್ವಿಯ ಗುಣದಿಂದಾಗಿಯೇ ಈ ಕಥನಗೀತೆ ಇಷ್ಟು ಪ್ರಚಾರಪಡೆದು ಹಬ್ಬಲು ಸಾಧ್ಯವಾಯಿತು. ಅಲ್ಲದೆ ಇದು ಕಾಲಾಂತರದಲ್ಲಿ ಆಯಾಪ್ರದೇಶದ ಜನರ ಭಾವನೆಗಳಿಗನುಗುಣವಾಗಿ ರೂಪಾಂತರ ಹೊಂದುತ್ತಾ

ಹೋಯಿತು ಎಂದು ಹೇಳಬಹುದು. ಅದು ಏನೇ ಇದ್ದರೂ ಬೇರೆ ಬೇರೆ ಪಾಠಗಳಲ್ಲಿ ಕಂಡುಬರುವ ಅನೇಕ ಸಾಮ್ಯತೆಯ ಅಂಶಗಳಾದ ಇದು ಒಂದೇಮೂಲದಿಂದ ಹೋರಾಟಗೀತೆ ಎಂಬುದನ್ನು ಒಪ್ಪಬೇಕಾಗುತ್ತದೆ.

ಉತ್ತರದೇವಿ' ಎಂಬ ಹೆಸರನ್ನು ಕನ್ನಡನಾಡಿನ ಯಾವ ಭಾಗದಲ್ಲಿಯೂ ರೂಢಿಯಲ್ಲಿ ಉಳಿದು ಬಂದಿರುವುದು ಗೋಚರಿಸುವುದಿಲ್ಲ. ಮಹಾಭಾರತದಲ್ಲಿ ಕಂಡುಬರುವ ಉತ್ತರೆಯನ್ನು ಬಿಟ್ಟರೆ ಉತ್ತರೆ ಮಳೆಯ ಹೆಸರು ಮಾತ್ರ ಕೇಳಿಬರುತ್ತದೆ. ಜನಪದಕವಿಯೊಬ್ಬ ತನ್ನ ಸಮಕಾಲೀಕನ ಮಹಿಳೆಯೊಬ್ಬಳ ಸಾತ್ವಿಕತೆ, ಸದ್ಗುಣಗಳನ್ನು ಕಂಡು ಅವಳ ಹಿರಿತನಕ್ಕೆ ಮಾರುಹೋಗಿ ಆಕೆಯನ್ನು ಎಲ್ಲಾಕಾಲಕ್ಕೂ ನಿಲ್ಲಿಸಲು ಉತ್ತರೆಮಳೆಯಾಗಿಸಿರಬಹುದು. ಮುಂದೆ ಕೆಲವರು ಆಕೆಯನ್ನು ಅತ್ಯಂತ ಸಾಧ್ವಿ, ಗುಣಸಂಪನ್ನೆ, ಗರತಿ ಎಂಬಂತೆ ಚಿತ್ರಿಸಿದರೆ, ಮತ್ತೆ ಕೆಲವರು ಅವಳನ್ನು ಅಹಂಕಾರದ ಪಲ್ಲಕ್ಕಿಯ ಮೇಲೆ ಮೆರೆಸಿ ಈ ನೆಲದ ಬದುಕಿನ ಹಲವು ಮುಖಗಳನ್ನು ಪರಿಚಯಿಸಿದ್ದಾರೆ.

ಮಳೆಯನ್ನು ಕುರಿತ ಬಹುಮುಖ್ಯ ಕಥನಗಳಲ್ಲಿ ಮಾಯದಂಥ ಮಳೆ ಬಂತಣ್ಣ ಮದಗಾದ ಕೆರೆಗೆ, ಉತ್ತರದೇವಿ, ಭಾಗೀರಥಿ, ಮದಗದ ಕೆಂಚವ್ವ, ಕೆರೆಹೊನ್ನಮ್ಮ, ಮಳೀಹಾಡು, ಪ್ರಮುಖವಾಗಿ ಮಳೆಯನ್ನು ಭಿನ್ನ ಭಿನ್ನ ಆಯಾಮಗಳಲ್ಲಿ ಕಥನ ವಿಶ್ವಾತ್ಮಕ ಮಾಧರಿಯಾಗಿವೆ.

**ಮಳೆಕಥನಗಳ ತಾತ್ವಿಕ ಭಿನ್ನ ಆಯಾಮಗಳು**

**ಲೌಕಿಕಪ್ರಜ್ಞೆ– ಆದಿಮದ ಅರ್ಧಸತ್ಯ**

ಜನಪದವನ್ನು ಭಾವುಕವಾಗಿ ಪರಿಭಾವಿಸುವಲ್ಲಿಯೂ ಸತ್ಯದಿಂದ ದೂರವಾಗುವ ಸಂಭವ ಒದಗುತ್ತದೆ. ರೊಮ್ಯಂಟಿಕ್ ಕ್ರಮದಿಂದ ಹೊರಬಂದಾಗ ಜನಪದವು ತೆರೆದುಕೊಳ್ಳುವ ಕ್ರಮವೇ ಲೌಕಿಕ ಪ್ರಜ್ಞೆಯನ್ನು ಅನುಸರಿಸುತ್ತದೆ. ಮಳೆಕಥನಗಳಲ್ಲಿ ಜರುಗುವ ಸಂದರ್ಭಗಳು ಅಲೌಕಿಕ ಅಂಶಗಳ ಮೊತ್ತದವುಗಳೇನಲ್ಲ. ಮನಸಿನಂತೆ ಮಾದೇವ ಎನ್ನುವ ಜನಪದರ ನಾಣ್ನುಡಿಯಂತೆ ರಾಜಕುಮಾರಿ ಮನಸಲ್ಲಿ "ಮಳೆರಾಯ ಈಗ ಬರುವವನು ರಾತ್ರಿ ಬರಬಾರದಿತ್ತೇ" ಎನ್ನುವ ಸ್ವಗತವೊಂದೇ ಇಡೀ ಕಥನದತಾತ್ವಿಕ ಪಾತ್ರಗಳಿಗೆ ಕಾರಣವಾಗಿ ಕಥನಘಟಿಸುತ್ತಾ ಸಾಗುತ್ತದೆ. ಮಾನವ ಸಂಬಂದಗಳಂತೆಯೇ ಸವತಿಮತ್ಸರವೂ ಎರಡನೆಯ ಸಂಬಂಧವೂ ಮುಂದುವರೆಯುತ್ತಾ ಕಥನವು ಸ್ವರೂಪ ಸ್ಪಷ್ಟತೆಯನ್ನು ಪಡೆಯುತ್ತದೆ. ಮಾನವ ಸಂಬಂದಗಳಲ್ಲಿ ನಿತ್ಯ ಕಂಡುಬರುವ ಪರಿಕ್ರಮಗಳೇ ಕಥೆಯ ಆಯಾಮಗಳಿಗೂ ಕಾರಣವಾಗುತ್ತದೆ. ತಾನು ಬಯಸಿದ್ದು ಪುರುಷ ಅದನ್ನು ಈಡೇರಿಸೋ ಮನಸುಮಾಡಿದ್ದು ತನ್ನಬಿಟ್ಟು ಬೇರೆಯವಳನ್ನು ಮೋಹಿಸಿದಾಗ ಆಕೆಗೆ ಆಗುವ ಅವಮಾನ ಮಾತ್ಸರ್ಯ ಮತ್ತು ಪರಿಹಾರ ಕ್ರಮಗಳೆಲ್ಲವೂ ಸ್ವಾಭಾವಿಕವೇ. ಆದರೆ ಜನಪದ ಮನಸ್ಸು ರೂಪಿಸಿರುವ ಈ ಕಥನಗಳು

ಸತ್ಯಪ್ರಮಾಣಗಳೆಂದು ಲೌಕಿಕಸತ್ಯದ ಸ್ಪಷ್ಟಚಿತ್ರಣಗಳೆಂದು ತೀರ್ಮಾನಿಸಲೂ ಒಪ್ಪಿಕೊಳ್ಳಲೂ ಆಗದ ಬಹುಶಃ ಮಾತೃಸಂಸ್ಕೃತಿಗೆ ಪ್ರತಿಯಾಗಿ ಪುರುಷ ಲೈಂಗಿಕರಾಜಕಾರಣದ ನೆಲೆಗಳಿಂದ ಬಂದ ಬಹುಪತ್ನಿತ್ವದ ಕ್ರಮವನ್ನು ಲೋಕಕ್ಕೆ ನಿರೂಪಿಸಲು ಈ ಕಥನಗಳು ಶ್ರಮಿಸುವತ್ತ ಮುಖಮಾಡುತ್ತವೆ. ಕಥೆಗಳಲ್ಲಿ ಅಲ್ಲಲ್ಲಿ ಅಲೌಕಿಕ ಅಂಶಗಳ ನಿರೂಪಣೆ ಕಂಡುಬರುವುದಲ್ಲದೇ ಕಥನಗಳು ಆರ್ಯೀಕರಣಗೊಳ್ಳುವ ಸುಳಿವು ಚಹರೆಗಳು ಅಲ್ಲಲ್ಲಿ ಸ್ಪಷ್ಟವಾಗುತ್ತವೆ.

ಈ ಕಾರ್ಯತಂತ್ರವು ಜನಪದಮನಸ್ಸನ್ನು ಕಾಡದುದೇನಲ್ಲ. ಕಥನಗಳನ್ನು ಅಪವಿತ್ರೀಕರಣ ಗೊಳಿಸುವ ತಂತ್ರದ ಬಗ್ಗೆ ಅದು ಸ್ವಾಸ್ಥ್ಯವಾಗಿಯೇ ಎದುರುಗೊಳ್ಳುತ್ತದೆ. ಕಥನಗಳ ಆಂತರ್ಯದ ಒತ್ತಡ ಮತ್ತು ಅನುಭವವನ್ನು ಪ್ರಜ್ಞಾಪೂರ್ವಕವಾಗಿಯೇ ನೀಗಿಸಿಕೋಳ್ಳುತ್ತಾ ಕಥನಸಂರಚನೆಗಳಲ್ಲಿ ತಮ್ಮ ಪಜ್ಞೆಯನ್ನು ನಿರೂಪಸುತ್ತಾ ಅಂತಸ್ಥ್ಯಗೊಳಿಸಿಕೊಳ್ಳುತ್ತದೆ ಕೆಲವೊಮ್ಮೆ ವಕ್ತ್ಯವನ್ನು ಪ್ರಬಲವಾಗಿ ಪ್ರಭಾವಿಸುವ ವೈಧಿಕಚಿಂತನೆಗಳು ಜನಪದ ಚಂತನೆಗಳಂತೆ ಚಿತ್ರಿತವಾಗುವ ಸಾದ್ಯತೆಗಳೂ ಇರುತ್ತವೆ. ಅಭೌತ ಅಂಶಗಳತ್ತ ಗಮನ ಸೆಳೆಯುವುದು ಸಾಮಾನ್ಯವೇ, ವೈಧಿಕ್ಯದ ಕರ್ಮಸಿದ್ದಾಂತವು ಈ ಕೆಲಸ ಮಾಡಿದೆ, ಕಥನ ರೂಪಾಂತರವು ಆಶಯ ರೂಪಾಂತರವಾಗಿಯೂ ಸಹ ಆದಿಮವು ಅರ್ಧಸತ್ಯವನ್ನು ಮಾತ್ರ ನಿರೂಪಿಸುತ್ತದೆ. ಇದು ಕಾರ್ಯಕ್ಷೇತ್ರದ ಒಟ್ಟು ವೈಶಾಲ್ಯತೆಯನ್ನು ನಿಯಂತ್ರಸುವಾಗಲೂ ಸಾಬೀತಾಗುವ ಸತ್ಯವಾಗಿದೆ. ಈ ಕಾರಣಕ್ಕೆ ಜನಪದಮಹಾಕಾವ್ಯಗಳು ಸ್ಪಷ್ಟ ನಿರ್ದಿಷ್ಠ ತತ್ವಶಾಸ್ತ್ರೀಯ ನೆಲೆಗೆ ದಕ್ಕುವುದಿಲ್ಲ ಆದು ತಾತ್ವಿಕತೆಯ ವಿಭಿನ್ನ ಮುಗ್ಗುಲುಗಳಾಗಿರದೆ ತತ್ವವಿಕೇಂದ್ರಿಕರಣವೂ ಆಗಿರದೆ ತತ್ವಗಳ ಕೆಲಸ ಮೇಲೋಗರವಾಗಿರುತ್ತದೆ. ಈ ಕ್ರಮವು ಮಳೆಕಥನಗಳಲ್ಲೂ ನಿಶ್ಚಿತವಾಗಿ ಕಂಡು ಬರುತ್ತದೆ. ಅಧ್ಯಯನಗಳು ಇದನ್ನು ಇನ್ನಷ್ಟು ಸ್ಪಷ್ಟಪಡಿಸಿಕೊಳ್ಳಬೇಕಿದೆ.

**ಅಲೌಕಿಕದೃಷ್ಠಿ –ವಾಸ್ತವದ ಮೆರುಗು ಕಲ್ಪನೆಯ ಸೆರಗು**

ಕಥನಗಳು ವಾಸ್ತವ ಅಂಶಗಳನ್ನಷ್ಟೆ ಪ್ರತಿಪಾದಿಸುತ್ತಿದ್ದರೆ ಆನನ್ಯತೆಯನ್ನು ಕಾಪಾಡಿಕೊಳ್ಳುವಲ್ಲಿ ಆಸ್ತಿತ್ವವನ್ನು ಉಳಿಸಿಕೊಳ್ಳುವುದು ಕಷ್ಠವಾಗುತ್ತದೆ. ಒಂದು ರೀತಿಯಲ್ಲಿ ಇದನ್ನು magic realison method ಎಂದುಕರೆಯಲೂ ಸಾದ್ಯವಿದೆ. ಪರಂಪರೆಗೆ ಮುಂಗಾಣ್ಕೆಯಾಗಿಸುವಲ್ಲಿ ಹಾಗೂ ನೆನಪಿನ ಕಾರಣಕ್ಕಾಗಿ ಘಟಿಸಿರುವ ಘಟನೆಗೆ ಆಲೌಕಿಕ ಅಂಶಗಳ ರಮ್ಯತೆ ಅನಿವಾರ್ಯವಾಗುತ್ತದೆ. ಹಾಗಂತ ಪೂರ್ಣಪ್ರಮಾಣದ ಕಲ್ಪನೆಯೂ ಇಲ್ಲಿ ಗೈರಾಗೆಯೇ ಕಾಣಿಸುತ್ತದೆ. ವಾಸ್ತವದ ಸೆರಗಿಗೆ ಕಲ್ಪನೆಯ ಸೆರಗಿನಸೋಂಕು ಪ್ರತ್ಯೇಕಿಸದ ಗುಣವಾಗಲು ಸಾದ್ಯವಾಗುತ್ತದೆ.

ಕಥನಗಳು ತೆರೆದುಕೊಳ್ಳುವ ಲೌಕಿಕತೆಗೆ ತನ್ನದೇ ಆದ ಸೀಮಿತವ್ಯಾಪ್ತಿಯು ಪ್ರಾಪ್ತವಾಗುವಾಗ ಆದರಿಂದ ಬಿಡಿಸಿಕೊಳ್ಳಲು ಆಲೌಕಿಕತೆಯ ಸ್ಪಷ್ಠಮಾರ್ಗದರ್ಶಿಯಾಗುತ್ತದೆ. ಆನುಭವ ವಿಸ್ತಾರತೆಯನ್ನು

ಅಲೌಕಿಕ ಪ್ರತಿಮೆಗಳ'ಲ್ಲಿ ಸಶಕ್ತವಾಗಿ ಹಿಡಿದಿಡಲು ಸಾಧ್ಯವಾಗುತ್ತದೆ. ಅಥವಾ ತಾನು ನಿರೂಪಿಸಿಕೊಂಡ ಸಾಮಾಜಿಕ ವಾಸ್ತವ ಜೀವಂತಪ್ರತಿಮೆಯು ಅಲೌಕಿಕದೃಷ್ಟಿಕೋನದ ಅಮೂರ್ತನೆಲೆಗಳಲ್ಲಿ ತನ್ನನ್ನು ಕಾಣಿಸಿಕೊಳ್ಳುವಲ್ಲಿ ಯಶಸ್ವಿ ಪಡೆಯುತ್ತದೆ. ಈ ವಿಧಾನವು ಶಿಷ್ಟಕ್ಕಿಂತ ಜನಪದಕ್ಕೆ ಹೆಚ್ಚು ಸೂಕ್ತವಾದುದು.

- ಸಾಮಾಜಿಕವಾಸ್ತವಿಕತೆಯು ಲೌಕಿಕತೆಯನ್ನು ಮೀರಿ ಅಲೌಕಿಕತೆಯಲ್ಲಿ ಗುರುತಿಸಿಕೊಳ್ಳುವುದು.
- ಧಾರ್ಮಿಕವಾಸ್ತವತೆಯು ಮೂಲಪ್ರಜ್ಞೆಯಿಂದ ಬಿಡುಗಡೆಗೊಂಡು ಸಾಂಸ್ಥಿಕ ಧರ್ಮವಾಗುವ ಸ್ಥಿತ್ಯಂತರಗಳು.
- ಜನಪದದ ಹಿಂದಿರುವ ರಾಜಕೀಯ ಮನೋನೆಲೆಗಳು ಪ್ರಭುತ್ವಸ್ವರೂಪ ಪಡೆಯುವ ಅತ್ಯಂತಿಕ ಸ್ಥಿರೀಕರಣ ಆಯಮಗಳು.

**ಮಳೆರಾಯನ ಪರ್ಯಟನ ಸಹಜ ಗುಣ, ವಲಸೆಯ ಆದಿಮಪ್ರಜ್ಞೆ**

ಮಳೆ ಕುರಿತ ಕಥನಗಳಲ್ಲಿ ಪ್ರಮುಖವಾಗಿ ಕಂಡುಬರುವ ಗುಣವೆಂದರೆ ಕಥಾನಾಯಕ ಮಳೆರಾಯನ ಸ್ಥಳಪರ್ಯಟನೆ. ಇದು ಮಾನವನ ಅಲೆಮಾರಿಗುಣವನ್ನು ಧ್ವನ್ಯೋಗೋಚರಿಸುತ್ತದೆ. ಪ್ರಯಾಣದ ಕಲ್ಪನೆಯ ಹಿನ್ನೆಲೆಯಲ್ಲಿ ಅನುಭವ ಸಾಂದ್ರತೆ, ಸಂಕೀರ್ಣತೆಗಳನ್ನು ವ್ಯಕ್ತಿಗಿರಬೇಕಾದ ಲೋಕಾನುಭವದ ಗುಣವನ್ನು ಒತ್ತಿ ಒತ್ತಿ ಹೇಳುತ್ತದೆ. ಶಿಷ್ಟಮಹಾಕಾವ್ಯಗಳ ನಾಯಕರ ಪ್ರಮುಖ ಜೀವನಕ್ರಮವು ಪ್ರಯಾಣವೇ ಆಗಿರುವುದು ಎಲ್ಲರಿಗೂ ತಿಳಿದ ಸಂಗತಿ. ರಾಮಾಯಣದ ರಾಮನಾಗಲಿ, ಮಹಾಭಾರತದ ಪಾಂಡವರಾಗಲಿ ಒಂದೆಡೆ ನೆಲೆನಿಂತವರಲ್ಲ. ಈ ಅಂಶಗಳು ಜನಪದ ಹಾಗೂ ಶಿಷ್ಟಮಹಾಕಾವ್ಯಗಳ ಕೊಡುಕೊಳ್ಳುವಿಕೆಯ ಅನುಸಂಧಾನವಾದರೂ ಮನುಷ್ಯ ಚಿಂತನಾಪ್ರಜ್ಞೆಯ ಸಾಮ್ಯತೆಯನ್ನು ಸೂಚಿಸುತ್ತದೆ. ತನಗೊಬ್ಬ ಹೆಂಡತಿಯಿದ್ದರೂ ಮಳೆರಾಯ ಮತ್ತೊಬ್ಬ ರಾಜಕುಮಾರಿಯನ್ನು ವರಿಸುತ್ತಾನೆ. ತನಗೆ ಸಂವಾಹಕವಾಗಿ ಬಳಸುವ ಕ್ರಮವೂ ಸಾದೃಶ್ಯವಾದುದೇ. ರಾಜಕುಮಾರಿಯನ್ನು ಮದುವೆಯಾಗಿಯೂ ಆತ ಒಂದೆಡೆ ನಿಲ್ಲುವುದಿಲ್ಲ. ಅದು ಆದಿಮಮನುಷ್ಯನ ಸ್ವಭಾವ, ಆಲೋಚನಾಕ್ರಮವಾಗಿಯೂ ಗಮನಿಸಲು ಸಾಧ್ಯವಿದೆ.

**ಕಾಗೆ, ಹದ್ದು ವಾಹನ-ತಿರಸ್ಕೃತವೇ ಸಂವಾಹಕವಾಗಿ ಮುಖ್ಯವಾಹಿನಿಯತ್ತ ಊರ್ಧ್ವಮುಖತ್ವದ ಚಲನೆ**

ಮಳೆಕಥನಗಳೆಲ್ಲದರಲ್ಲೂ ಪ್ರಧಾನವಾಗಿ ಬಳಕೆಯಾಗಿ ನಿರ್ಧಾರಿತ ಪಾತ್ರವಹಿಸುವುದು. ಪ್ರಾಣಿಪ್ರಪಂಚ ಮನುಷ್ಯನ ಹಿಡಿತಕ್ಕೆ ಸಿಲುಕಿ ಪ್ರಸ್ತಾಪಿಸಲ್ಪಡದಿರುವುದು ಸೋಜಿಗದ ಸಂಗತಿಯಾಗಿದೆ. ಮನುಷ್ಯ ಪ್ರಭುತ್ವ ಸಾಧಿಸಿ ಅಧಿಕಾರ ಚಲಾಯಿಸುವ ಕಾಲಘಟ್ಟದ ಅದರಲ್ಲೂ ಪುರುಷಪ್ರಧಾನ

ವ್ಯವಸ್ಥೆಯು ಇಡೀ ಪ್ರಾಕೃತಿಕ ಜಗತ್ತನ್ನು ನಿಯಂತ್ರಣದಲ್ಲಿಟ್ಟುಕೊಂಡಿರುವ ಚಿತ್ರಣವು ಹಲವು ನೆಲೆಗಳಿಗೆ ತೆರೆದುಕೊಳ್ಳುತ್ತದೆ. ವೈದಿಕ ಅಗ್ನಿಸಂಸ್ಕೃತಿಯು ಯಾವುದನ್ನು ತಿರಸ್ಕರಿಸುತ್ತದೆಯೋ ಅದನ್ನೆ ಜನಪದ ಜಲ(ಮಳೆ)ಸಂಸ್ಕೃತಿಯು ಪ್ರಧಾನ ಧಾರೆಯನ್ನಾಗಿ ಚಿತ್ರಿಸಿಕೊಳ್ಳುತ್ತದೆ. ವೈದಿಕಸಂಸ್ಕೃತಿಯು ಪವಿತ್ರವೆಂದು ಭಾವಿಸುವ ಯಾವ ಪ್ರಾಣಿ ಸಸ್ಯವರ್ಗದಲ್ಲಿ ಈ ಕಥಾನಕಗಳಲ್ಲಿ ಚಿತ್ರಿಸಲ್ಪಡಲ್ಲವೆಂಬುದು ಪ್ರಧಾನ ಸಂಗತಿ. ಇದನ್ನು ಇನ್ನೊಂದು ರೀತಿಯಲ್ಲಿ ಸಾಮಾನ್ಯಕರಿಸುವುದಾದರೆ ಜಲಸಂಸ್ಕೃತಿಯು ಯಾವುದನ್ನು ಪವಿತ್ರವೆಂದು ಮುಖ್ಯಧಾರೆಯಲ್ಲಿಟ್ಟು ನೋಡುತ್ತದೋ ಅದನ್ನು ಅಗ್ನಿಸಂಸ್ಕೃತಿಯು ತಿರಸ್ಕೃತವಾಗಿ ಕಡೆಗಣಿಸುತ್ತದೆ. ಮಳೆಕಥನಗಳಲ್ಲಿ ಪಕ್ಷಿವರ್ಗ ಹದ್ದು ಮತ್ತು ಕಾಗೆಗಳು ಪ್ರಧಾನ ಪಾತ್ರವಹಿಸುತ್ತವೆ. ಪ್ರಮುಖ ಸಾಮಾಜಿಕ ಸಂವಹಕಗಳಾಗಿ ಕಾರ್ಯ ನಿರ್ವಹಿಸುತ್ತವೆ. ಆವುಗಳ ಚಲಾನಾತ್ಮಕತೆಯು ಮೇಲ್ಮುಖ ಪ್ರಕ್ರಿಯೆಯಾಗಿ ಮುಖ್ಯವಾಹಿನಿಗೆ ತುಡಿಯುವ ಲಕ್ಷಣಗಳನ್ನು ಹೊಂದಿರುವುದು ಖಚಿತ ಸಂಗತಿಯಾಗಿದೆ.

**ಪುರುಷಭಂಜನೆಯ ಮೂಲಮಾಧರಿ ಸ್ತ್ರೀ ಸ್ಥಿರೀಕರಣ ಚಿತ್ರಣ: ಸ್ತ್ರೀ ಸ್ವಾಭಿಮಾನ, ಪುರುಷನ ವಿಫಲ ಪ್ರಯತ್ನ**

ಕಥನಗಳಲ್ಲಿ ಲಕ್ಷಿಸಬೇಕಾದ ಮತ್ತೊಂದು ಸಂಗತಿಯೆಂದರೆ ಅವುಗಳು ಸೂಕ್ಷ್ಮವಾಗಿ ಬಿಟ್ಟುಕೊಡುವ ಸ್ಥಿತ್ಯಂತರದ ಚಾರಿತ್ರಿಕ ಚಹರೆಗಳು. ಪುರುಷಪ್ರಭುತ್ವದ ರಾಜಕೀಯಾಧಿಕಾರವು ಸ್ತ್ರೀ ಅಧೀನ ಮಾಡಿಕೊಳ್ಳುವ ಕುಟಿಲತಂತ್ರಗಳನ್ನು ಕಥನಗಳಲ್ಲಿ ನೋಡಲು ಸಾಧ್ಯವಿದೆ. ಮಳೆರಾಯನನ್ನು ವರಿಸಿ ಆತನ ಅಥವಾ ಆತನ ಉಡುಗೊರೆಯ ನಿರೀಕ್ಷೆಯಲ್ಲಿರುವ ರಾಜಕುಮಾರಿಯು ನಿರಾಶೆಯನ್ನು ಅನುಭವಿಸುತ್ತಾಳೆ, ಅದು ಆಕೆಗೆ ಪ್ರಮುಖವಲ್ಲ ಅದಕ್ಕಿಂತ ಹೆಚ್ಚಾಗಿ ಆಕೆ ಅವಮಾನಿತಳಾಗಿ ಮಾನಸಿಕ ಹಾಗೂ ದೈಹಿಕ ಹಿಂಸೆಗೆ ಒಳಗಾಗುತ್ತಾಳೆ. ಮಳೆರಾಯ ಬಂದಾಗ ಸ್ವೀಕರಿಸದೆ ತನ್ನ ಛಲವನ್ನು ಸ್ವಾಭಿಮಾನವನ್ನು ತೋರುತ್ತಾಳೆ, 'ಮೂರುಕಾಸಿನ ಮಹಿಳೆ' ಎಂಬ ಪುರುಷಂಕಾರವನ್ನು ಭಂಜಿಸಿ ಬಿಡುತ್ತಾಳೆ. ಆತನನ್ನು ಸ್ವೀಕರಿಸದೆ ತನಗಾದ ಆವಮಾನ ಹಿಂಸೆಯನ್ನೆ ಆತನೂ ಅನುಭವಿಸಲೆಂಬ ನಿರ್ಧಾರದಿಂದ ಧೃಡವಾಗುತ್ತಾಳೆ. ಇಲ್ಲಿಂದ ಶುರುವಾಗುತ್ತದೆ. ಸ್ತ್ರೀಯ ನಿಜವಾದ ಹೋರಾಟ ಕತೆಗಳಲ್ಲಿ ವಿವರವಾಗಿ ನಿರೂಪಿಸಲ್ಪಟ್ಟಿದೆ. ಮಳೆರಾಯನ ಯಾವತಂತ್ರಕ್ಕೂ ರಾಜಕುಮಾರಿ ಬಗ್ಗದೆ ಪ್ರತಿರೋಧ ಒಡ್ಡುತ್ತಾ ಗೆಲ್ಲುತ್ತಾಳೆ. ಪುರುಷ ಸ್ತ್ರೀಯ ಸರ್ವಸ್ವವನ್ನು ತನ್ನದಾಗಿಸಿಕೊಳ್ಳಲು ಯತ್ನಿಸುವ ಪ್ರತಿಯೊಂದು ತಂತ್ರವೂ ಪ್ರತಿಮಾತ್ಮಕವಾಗಿ ನಿರೂಪಿಸಲ್ಪಟ್ಟಿದೆ. ಆ ಮೂಲಕ ಪುರುಷಚಿಂತನೆ ಮತ್ತು ತಂತ್ರಕ್ಕೆ ಸ್ತ್ರೀ ಪ್ರಬಲ ಪ್ರತಿರೋಧಒಡ್ಡುತ್ತಾಳೆ. ವಿಶೇಷವೆಂದರೆ ಪುರುಷನಾದ ಮಳೆರಾಯನೆ ರಾಜಿಸೂತ್ರಕ್ಕೆ ಬರುವುದು. ಸ್ತ್ರೀಪ್ರಾಬಲ್ಯ ಹಾಗೂ ಪ್ರಾತಿನಿಧಿಕ ಮಾಧರಿಗಳನ್ನು ಕತೆಗಳಲ್ಲಿ ಸ್ಪಷ್ಟವಾಗಿ ಗುರುತಿಸಲು ಸಾಧ್ಯವಿದೆ.

ಮಳೆರಾಯನ ಪ್ರಯತ್ನಗಳೂ ವಿಫಲವಾಗುತ್ತಾ ರಾಜಕುಮಾರಿ ಅವುಗಳನ್ನು ನೀಗಿಸಿಕೊಳ್ಳುತ್ತಾ ವಿಜಯ ಸಾದಿಸುತ್ತಾಳೆ.

**ಕಥನಗಳ ಭೂಮಿಕೆಯಾಗಿರುವ ಅವ್ಯಕ್ತ ಮೌಖಿಕ ಚರಿತ್ರಾತ್ಮಕ ಸುಪ್ತ ಸಂಗತಿಗಳು**

ಪುರಾಣಗಳು ಪ್ರಾಚೀನ ಮಾನವನ ಇತಿಹಾಸವೆನ್ನುವಂತೆ ಕಥನಗಳು ಸಾಮಾನ್ಯ ಮನುಷ್ಯ ಅಥವಾ ಜನಪದರು ಕಟ್ಟಿಕೊಂಡ ಅವ್ಯಕ್ತ ಮೌಖಿಕಆಕರಗಳೇ ಆಗಿವೆ. ಮೌಖಿಕಸಾಹಿತ್ಯ ಪೀಳಿಗೆಯಿಂದ ಪೀಳಿಗೆಗೆ ಹರಿದುಬರುವ ಸಂಧರ್ಭದಲ್ಲಿ ಬದಲಾದ ರಾಜಕೀಯ, ಧಾರ್ಮಿಕ, ಕೆಲವೊಮ್ಮೆ ಐತಿಹಾಸಿಕ ಅಂಶಗಳನ್ನು ಸಹ ಸುಪ್ತಪ್ರಜ್ಞೆಯಲ್ಲಿ ಅಡಗಿಸಿಟ್ಟುಕೊಂಡಿರುತ್ತದೆ. ಕಥನಗಳು ಚರಿತ್ರೆಯ ಭಾಗಗಳೆ ಅಗಿವೆ. ಸಂಪ್ರದಾಯ, ನಂಬಿಕೆಗಳಿಗೆ ಹೊಸರೂಪವನ್ನು ನೀಡುತ್ತಾ ಅನನ್ಯತೆ ಮತ್ತು ಅರಿವನ್ನು ನಿರಂತರವಾಗಿ ಕಾಪಾಡಿಕೊಂಡು ಬಂದಿವೆ. ಮಳೆಯನ್ನು ಕುರಿತು ಕಥನಗಳನ್ನು ಗಮನಿಸುವುದಾದರೆ ಒಂದು ಕಾಲಕ್ಕೆ ಸಂಬಂಧಿಸಿದ ಜನಜೀವನ ವ್ಯವಸ್ಥೆಯನ್ನು ಹೇಳುವ ಅಂಶಗಳನ್ನು ಕಥನಾತ್ಮಕರೂಪ ಕೊಟ್ಟು ಚಾರಿತ್ರಿಕಾಂಶಗಳನ್ನು ಸುಪ್ತವಾಗಿ ಕಾಪಾಡಿಕೊಂಡಿರುತ್ತವೆ. ಮಳೆರಾಜನನ್ನು ರಾತ್ರಿವೇಳೆ ಬರುವಂತೆ ಹೇಳುವ ಮಹಿಳೆ ರಾತ್ರಿವೇಳೆಯೇ ಬಂದಾಗ ಅವನನ್ನು ತಿರಸ್ಕರಿಸದೆ ಸಂಪೂರ್ಣವಾಗಿ ತನ್ನನ್ನು ಸಮರ್ಪಿಸಿಕೊಳ್ಳುವ ಅಂಶವನ್ನು ಗಮನಿಸಿದಾಗ ಸ್ತ್ರೀಗೆ ಪುರುಷನನ್ನು ಧಿಕ್ಕರಿಸುವ ಯಾವ ಕುರುಹುಗಳೂ ಚರಿತ್ರೆಯಲ್ಲಿ ಸಿಗುವುದಿಲ್ಲ. ವಸ್ತುವೆಂದು ಭಾವಿಸುವ ಪುರುಷ ಕನಿಷ್ಠ ಆಸೆಯನ್ನು ತೀರಿಸಿ ಹೆಚ್ಚಿನ ಲಾಭವನ್ನು ಪಡೆಯುವ ಧೋರಣೆ ಪುರುಷನ ಹೇರಿಕೆಯಾಗಿದೆ. ಇನ್ನು ಈ ಕಥನಗಳಲ್ಲಿ ಯಾವ ವಿಷಯಗಳನ್ನೂ ಹೆಣ್ಣು ತನ್ನ ಮನೆಯವರೊಂದಿಗೆ ಹಂಚಿಕೊಳ್ಳುವುದಿಲ್ಲ. ನಂತರ ಕಷ್ಟವನ್ನು ಅನುಭವಿಸುವ ಶಾಪ ನೀಡುವ ಮಳೆರಾಜ(ಪುರುಷ)ನ ಅಧಿಕಾರವನ್ನು ಚರಿತ್ರೆಯ ಪುಟಗಳಲ್ಲಿ ಸ್ತ್ರೀ ಅಸ್ತಿತ್ವ ಹರಣ ಮಾಡಿರುವುದು ಕಂಡುಬರುತ್ತದೆ. ಹೆಣ್ಣಿನ ಕಷ್ಟಕ್ಕೆ ಇನ್ನೊಂದು ಹೆಣ್ಣು ಕಾರಣವಾಗುತ್ತಾಳೆ ಎನ್ನುವುದು ಕೂಡ ಹೆಣ್ಣಿಗೆ ಹೆಣ್ಣೇ ಶತ್ರು ಎನ್ನುವ ಚಾರಿತ್ರಿಕ ಸಂಗತಿಯು ಪುರುಷ ಧೋರಣೆಯದೇ ಆಗಿದೆ. ಭಾಗೀರಥಿ, ಮದಗದಕೆಂಚಮ್ಮ, ಉತ್ತರದೇವಿ ಮುಂತಾದ ಕಥನಗಳು ಇದಕ್ಕೆ ಸ್ಪಷ್ಟಸಾಕ್ಷ್ಯಗಳನ್ನು ಒದಗಿಸುತ್ತವೆ.

**ಸಂಪತ್ತಿನ ಪ್ರಶ್ನೆಯೇ ಪ್ರಧಾನವಾಗಿ ಹೋರಾಟದ ಭೂಮಿಕೆಯಾಗಿರುವ ಭೂಮಿಪ್ರಶ್ನೆ**

ಜನಪದಸಾಹಿತ್ಯವು ಚಳುವಳಿಯಾತ್ಮಕ ಸ್ವರೂಪದ್ದೆಂದು ಹೇಳಿದರೆ ಯಾರಾದರೂ ಸರಿಯೇ ಹಾಸ್ಯಕ್ಕೊಳಗಾಗುತ್ತಾರೆ. ವಾಸ್ತವವಾಗಿ ಮಳೆಕಥನಗಳಲ್ಲಿ ಈ ಅಂಶವು ನಿಚ್ಚಳವಾಗಿ ಚಿತ್ರಿಸಲ್ಪಟ್ಟಿದೆ. ನಾಗಕನ್ಯೆ, ಮಳೆರಾಯನ ಮಡದಿ ಮುಂತಾದ ಕಥೆಗಳಲ್ಲಿ ಇದ್ದ ಮಾನವೀಯ ಸಂಬಂಧಗಳಾಚೆ ನಿಂತುನೋಡಲು ಒತ್ತಾಯಿಸುತ್ತದೆ, ಮಳೆರಾಯನ ಶಾಪವು ಇದಕ್ಕೆ ಉತ್ತಮ ನಿದರ್ಶನವಾಗಿದೆ. ಆತ ಆಕೆಯನ್ನು ಕುರಿತು ಬೇರಾವುದೇ ಶಾಪಕೊಡದೆ ಆಕೆಯ ಸಂಪತ್ತುನಾಶವಾಗಿ ಕಷ್ಟಗಳನ್ನೆದುರಿಸುವ

ಪರಿಸ್ಥಿತಿಗೆ ತರುತ್ತಾನೆ. ಪ್ರಮುಖವಾಗಿ ಲಕ್ಷಿಸಬೇಕಾದ ಮತ್ತೊಂದು ಅಂಶವೆಂದರೆ ಮಾತೃಮೂಲೀಯ ಸಂಸ್ಕೃತಿಯಲ್ಲಿ ಆಸ್ತಿ, ಸಂಪತ್ತು ಹೆಣ್ಣಿಗೆ ಸೇರಬೇಕಾದ್ದು. ಅದು ರಾಜಕುಮಾರಿಯಿಂದ ತಪ್ಪಿಸುವ ಯತ್ನವು ಆಕೆ ನಿರ್ಗತಿಕಳಾದಾಗ ಸಂಪತ್ತಿನ ಕಾರಣಕ್ಕಾದರೂ ತನಗೆ ಸೋತು ರಾಜಿಯಾಗುತ್ತಾಳೆಂಬ ತಂತ್ರವು ಮಳೆರಾಯನದು. ಅದನ್ನೆಲ್ಲಾ ದಿಟ್ಟತನದಿಂದಲೇ ರಾಜಕುಮಾರಿ ನೀಗಿಸಿಕೊಳ್ಳುತ್ತಾಳೆ ಇವೆರಡರ ಮಧ್ಯೆ ಮಳೆರಾಯನ ದೃಷ್ಠಿ ಆಕೆಯ ಸೌಂದರ್ಯದ ಮೇಲಲ್ಲದೇ ಆಸ್ತಿಯ ಮೇಲೂ ಹರಿಯುತ್ತದೆ. ಆ ಮೂಲಕ ಸಾಮಾನ್ಯವರ್ಗದ ಸಂಪತ್ತು ತನಗೆ ಸೇರಬೇಕೆನ್ನುವ ಧೋರಣೆ ಮಳೆರಾಯನದಾಗಿರುತ್ತದೆ. ಶ್ರಮಿಕವರ್ಗದ ಕಷ್ಟಕಾರ್ಪಣ್ಯಗಳು ಹಾಗೂ ಅವರು ಭೂಮಿಗಾಗಿ ಪಡುವ ಪಡಿಪಾಟಲು ಕಥೆಗಳಲ್ಲಿ ಚಿತ್ರಿತಗೊಂಡಿದ್ದು ಆಗಿನ ಕಾಲದ ಹೋರಾಟದ ಹೆಜ್ಜೆಗುರುತುಗಳಂತೆಯೇ ಕಾಣಸಿಗುತ್ತವೆ.

**ಸುಖ ಕಷ್ಟಗಳೆರಡರ ಬದುಕಿನ ರೂಪಕಗಳ ನಿರ್ವಚನೆ**

ಕಥೆಗಳಲ್ಲಿ ಬದುಕಿನ ಹಲವಾರು ಮಗ್ಗುಲುಗಳನ್ನು ಸವಿಸ್ತಾರವಾಗಿ ಚಿತ್ರಿಸಲಾಗಿದೆ. ಬದುಕೆಂದರೆ ಅದು ಸುಃಖದ ಸುಪ್ಪತ್ತಿಗೆಯೂ ಅಲ್ಲ ನರಕಯಾತನೆಯೂ ಅಲ್ಲ. ಅದು ಸಾಮರಸ್ಯದಿಂದ ಕೂಡಿದೆಯೆಂಬುದು ಕಥನಗಳ ಆಶಯವಾಗಿದೆ. ಬಡತನಕ್ಕೆ ಒದಗಿಬರುವ ಯಾವುದೇ ಸಂದರ್ಭವು ಅಲೌಕಿಕ ಅಂಶಗಳಿಂದ ಕೂಡಿರದೆ ತಾನು ಕೈಗೊಂಡ ಆತುರದ ನಿರ್ಧಾರ, ಸಿಡುಕು, ಹಠಮಾರಿತನ, ಸ್ವಪ್ರತಿಷ್ಠೆಗಳಿಂದ ತಂದುಕೊಂಡದ್ದಾಗಿದೆ. ಮಳೆರಾಯನ ಶಾಪವೆಂಬುದು ಲೌಕಿಕತೆಯಿಂದ ಕೂಡಿದ ಪ್ರತಿಷ್ಠೆಯ ಸೇಡುಮಾತ್ರ, ಮತ್ತೆ ಆತ ರಾಜಕುಮಾರಿಯನ್ನು ಸೋಲಿಸಲು ಹೂಡುವ ತಂತ್ರಗಳು ಜನಪದ ಬದುಕಿನಲ್ಲಿ ನಡೆಯುವ ನಿತ್ಯಸಂಗತಿಗಳಷ್ಟೇ. ಅದಕ್ಕಾಗಿ ಪ್ರಾಣಿ ಸಸ್ಯಪ್ರಪಂಚದ ಸಹಾಯ ಪಡೆದುಕೊಳ್ಳುತ್ತಾನೆ. ಆ ತಂತ್ರಗಳೂ ಸಹ ವಿನಾಶಕಾರಿಯಾಗಿಲ್ಲವೆಂಬುದನ್ನು ಗಮನಿಸಬೇಕು. ಈ ತಂತ್ರಗಳು ರಾಜಕುಮಾರಿಗೆ ತಿಳಿಯದವುಗಳೇನಲ್ಲ. ಅವನ್ನು ಸುಲಭವಾಗಿಯೇ ನೀಗಿಸಿಕೊಳ್ಳುತ್ತಾ ಗೆಲ್ಲುತ್ತಾಳೆ. ಆಕೆಯಲ್ಲಿರುವುದು ಹಠಮಾರಿತನವಲ್ಲ, ಪ್ರತಿಷ್ಠೆಯೂ ಅಲ್ಲ ಬದುಕಿನ ಅಸ್ತಿತ್ವದ ಬದ್ಧತೆಯಷ್ಟೇ. ಈ ಬದ್ಧತೆಯೇ ಎದುರಾಳಿಯನ್ನು ಮುಖಾಮುಖಿತ್ವದಲ್ಲಿ ಬದುಕಿನ ಎರಡೂ ಬದಿಗಳಲ್ಲಿ ಬದುಕನ್ನು ಗ್ರಹಿಸುವ ಕ್ರಮ ಬದುಕಿನ ಜೀವಂತ ಸಹಜಪ್ರತಿಮೆಯಾಗಿ ತರ್ಕಕ್ಕೆ ನಿಲುಕುವ ಗುಣದ್ದಾಗಿದೆ. ಸಂಪೂರ್ಣ ಲೌಕಿಕತೆಯಿಂದ ಕೂಡಿದ ವಿವರಗಳಿಂದಲೇ ಬದುಕನ್ನು ಹತ್ತಿರದಿಂದ ಗ್ರಹಿಸಲು ಸಾಧ್ಯವಾಗುತ್ತದೆ. ಬದುಕಿನಲ್ಲಿ ಘಟಿಸುವ ಕ್ರಿಯೆಗಳು ತಂದೊಡ್ಡುವ ಸವಾಲುಗಳು ನಿರ್ಗತಿಕವರ್ಗ ಅದನ್ನು ನೀಗಿಸುವ ಬಗೆ ವಾಸ್ತವಕ್ಕೆ ಹತ್ತಿರದವುಗಳಾಗಿ ನಿರೂಪಿಸಲ್ಪಟ್ಟಿರುವುದು ಕಥನಗಳ ಆಶಯಕ್ಕೆ ಸಮಂಜಸವಾದುದಾಗಿದೆ.

**ಕಥನಗಳು ಚಿತ್ರಿಸ ಹೊರಟ ಸಮನ್ವಯತೆ**

ಮಳೆಕಥನಗಳನ್ನು ನಿಡಿದಾಗಿ ಗಮನಿಸಿದಾಗ ಕಥನಗಳ ಆಶಯ ಬದುಕಿನ ವಿಸ್ತಾರತೆಯನ್ನು ಬಿಂಬಿಸಿ ವಿಸ್ತಾರಸಮನ್ವಯತೆಯನ್ನು ಉದ್ಘೋಷಿಸುವುದೇ ಆಗಿದೆ. ಕಥನಕಾರನ ಕೌಶಲ್ಯ ನಿಜವಾಗಿಯೂ ಮೆಚ್ಚುವಂತದ್ದು. ಆತ ನಗಿಸುತ್ತಾನೆ, ಅಳಿಸುತ್ತಾನೆ. ಬದುಕಿನ ಆತಂಕಗಳನ್ನು ಕ್ಷಣಮಾತ್ರದಲ್ಲೇ ಸೃಷ್ಟಿಸುತ್ತಾನೆ. ಭಿನ್ನ ಆಯಾಮಗಳಿಗೆ ಮುಖಾಮುಖಿಯಾಗಿ ಯಾವುದೇ ವಿನಾಶಕಾರಿ ಸಂದರ್ಭವನ್ನು ತರದೆ ಸುಖಾಂತ್ಯವಾಗಿ ಮುಕ್ತಾಯ ಕಾಣಿಸುತ್ತಾನೆ. ಕೊನೆಗೆ ಜೀವನವ್ಯಾಖ್ಯಾನದಲ್ಲಿ ಮನುಷ್ಯ ತನ್ನ ಪ್ರತಿಷ್ಠೆಯನ್ನು ನೀಗಿಸಿಕೊಳ್ಳಬೇಕಾದ ಅನಿವಾರ್ಯತೆಯನ್ನು ಒತ್ತಿ ಹೇಳುತ್ತಾನೆ. ಮೇಲುಕೀಳೆಂಬ ಪರಿಭಾವನೆಯ ವ್ಯಕ್ತಿತ್ವನಾಶಕ್ಕೆ ಹೇಗೆ ಕಾರಣವಾಗುತ್ತದೆ ಅದನ್ನು ಹೇಗೆ ನೀಗಿಸಿಕೊಳ್ಳಲು ಸಾಧ್ಯವೆಂಬುದನ್ನು ಸವಿಸ್ತಾರ ಸಂದರ್ಭಗಳಲ್ಲಿ ಕಟ್ಟಿಕೊಡುತ್ತಾನೆ. ಬದುಕು ಮುಖ್ಯ ಎಂದು ಬದುಕುವ ಜನಪದಕಥನಗಳ ಆಶಯವು ಸಮನ್ವಯತೆಯ ಅಖಂಡ ಕಲ್ಪನೆಯಾಗಿರುತ್ತದೆ.

ಕಥನಗಳಲ್ಲಿ ಬರುವ ಸವತಿಮಾತ್ಸರ್ಯ, ಅದರಿಂದ ಉಂಟಾಗುವ ತೊಂದರೆಗಳು, ಕಳ್ಳಪ್ರಣಯ ಇವೆಲ್ಲ ಜನಪದಕತೆಗಳಲ್ಲಿ ಬರುವ ಮಾಮೂಲಿ ಆಶಯಗಳು. ಆದರೆ, ಇಲ್ಲಿನ ಅಂತ್ಯ ಗಮನಾರ್ಹ. ಮಳೆರಾಯ ಅಷ್ಟೈಶ್ವರ್ಯ ಕೊಡಬಲ್ಲ ಸಾಮರ್ಥ್ಯ ಉಳ್ಳವನೆಂಬುದು ಇಲ್ಲಿನ ಧ್ವನಿ. ಈ ವಾಸ್ತವಸಂಗತಿ ಸಾಮಾನ್ಯ ಕತೆಯೊಂದರ ಮೂಲಕ ಧ್ವನಿತವಾಗಿರುವುದು ನಾವು ಗಮನಿಸಬೇಕಾದ ಅಂಶ. (ಮೇಲೆ ವಿಸ್ತರಿಸಲಾಗಿರುವ ಕಥನಗಳ ಆಯಾಮಗಳು ಇದೇ ಪ್ರಬಂಧದ ಅನುಬಂಧ ಒಂದರಲ್ಲಿ ಕೊಡಲಾಗಿರುವ ಕಥೆಗಳನ್ನು ಆಧರಿಸಿವೆ.)

**ಸಂಖ್ಯಾಟಿಪ್ಪಣಿಗಳು**

೧. ರಾಧಾಕೃಷ್ಣ ಭಡ್ತಿ. ಎಸ್ 'ಮೇಘ ಮೇದಿನಿ' ಪುಟ. ೧೩-೧೫
೨. ಪುನರುಕ್ತ. ಪುಟ. ೧೯
೩. ಪುನರುಕ್ತ. ಪುಟ. ೨೧-೨೨
೪. ಪುನರುಕ್ತ. ಪುಟ. ೨೨-೨೩

## ಅಧ್ಯಾಯ. ಏಳು

## ಲಿಂಗ ಸಂಬಂಧಗಳು ಮತ್ತು ಮಳೆ ಕಥನಗಳು.

ಜೀವಸಂಕುಲದ ಹಿನ್ನೆಲೆಯಲ್ಲಿಯೇ ಗಮನಿಸುವುದಾದರೆ ಮನುಷ್ಯರಲ್ಲಿ ಹೆಣ್ಣು ಗಂಡುಗಳಿರುವಂತೆ, ಪಶುಪಕ್ಷಿಗಳಲ್ಲಿ, ಗಿಡಮರಗಳಲ್ಲಿ ಹೆಣ್ಣು ಗಂಡುಗಳುಂಟೂ. ಅದೇ ರೀತಿ ಮನಷ್ಯ ತಾನು ಸೃಜಿಸಿಕೊಂಡ ಬದುಕಿನ ಭಾಗವಾದ ಸಾಹಿತ್ಯದಲ್ಲೂ ಮೂಡಿಬಂದ ಮಳೆಯಲ್ಲಿಯೂ ಹೆಣ್ಣು-ಗಂಡು ಉಂಟು ಎಂಬುದು ಜನಪದರ ನಂಬಿಕೆ. ಉತ್ತರಿ ಮಳೆ ಹೆಣ್ಣಾದ್ರೆ ಆರಿದ್ರ ಮಳೆ ಗಂಡಂತೆ. ಉತ್ತರಿ ಮಳೆಯಲ್ಲಿ ಬಿಳಿಜೋಳ ಬಿತ್ತಬೇಕಂತೆ. ಅದು ಹೆಣ್ಣುಮಳೆ ಆದುದರಿಂದ ಬಸಿರುತುಂಬಿ ಹಡೆಯುತ್ತಾಳೆ. ಉತ್ರಿ ಬಿಳಿಜೋಳಾ ಬಿತ್ರಿ, ನಾ ಬರದಿದ್ರ ನೀವು ಸತ್ರಿ ಎಂದು ಆಕೆ ಜನಪದರನ್ನು ಎಚ್ಚರಿಸುತ್ತಾಳೆ. ಆರಿದ್ರೆ ಮಳೇಲಿ ಆದವನೇ ಗಂಡ ಎನ್ನುತ್ತಾರೆ. ಆರಿದ್ರೆ ಮಳೆಗುಡುಗಿದ್ರೆ ಆರು ಮಳೆ ಬರೋದಿಲ್ಲವಂತೆ. ಅಂತಹ ಗಂಡಸುತನ ಆ ಮಳೆಯದು. ಅಷ್ಟೆ ಅಲ್ಲ ಆತ ದುಡಿಯದೆ ಇದ್ದರೆ ಹೊಟ್ಟೆಗೆ ಅನ್ನವಿರುವುದಿಲ್ಲ. ಅದಕ್ಕೇ ಆರಿದ್ರ ಹೋದ್ರೆ ದರಿದ್ರ ಎಂಬ ಮಾತು ರೈತರಲ್ಲಿದೆ. ಆರಿದ್ರ ಮಳೆಯ ಸಂದರ್ಭದಲ್ಲಿ ಬೀಸುವ ಗಾಳಿ ಆದಿಗಾಳೆ ಆದಿಗಾಳಿಯ ಹೊಡೆತಕ್ಕ ಸಿಕ್ಕಬಾರದು. ಅಷ್ಟು ಬಲವಾದ ಗಾಳಿ ಅದು ಮನುಷ್ಯರನ್ನು ಕೊಚ್ಚಿಕೊಂಡು ಹೋಗಿಬಿಡುತ್ತದೆ[೧]. ಪ್ರಸ್ತುತ ಮಾತಿನಲ್ಲೇ ಸಿಗುವ ಮಳೆಯ ಹಿಂದಿನ ಸ್ಥಿತಿಯ ಸ್ವರೂಪ ಜೀವಸಂಕುಲದಲ್ಲಿ ಅದ ವಹಿಸುವ ಹಾಗೂ ನಿಯಂತ್ರಿಸುವ ಕಾರ್ಯವೈವಿಧ್ಯತೆ, ಗ್ರಹಿಸಿಕೊಂಡ ಬಗೆಯನ್ನು ಕಾಣಬಹುದಾಗಿದೆ. ಆರ್ಯರ ಆಕ್ರಮಣದ ತರುವಾಯ ಸ್ತ್ರೀ ದೇವತೆಯೆಂದು ಪರಿಗಣಿತವಾಗಿದ್ದ ಮಳೆಯೂ ಕಾಲಾನುಸಾರ ಪುರುಷ ದೇವರಾಗಿ ಪರಿವರ್ತಿತವಾಗುತ್ತಾ ಬಂದಿದೆ ಎಂಬುದನ್ನು ಅಳೆಗಳೆಯುವಂತಿಲ್ಲ. ವೈದಿಕಸಾಹಿತ್ಯದಲ್ಲೂ ಸಹ ಒಂದು ಕಥೆಯ ಪ್ರಕಾರ ಮಳೆಯು ಸ್ತ್ರೀದೇವತೆಯೇ ಆಗಿದ್ದಾಳೆ.

ದಕ್ಷಬ್ರಹ್ಮ-ವೇದಾವತಿ ದಂಪತಿಗಳಿಗೆ ಬಹುಕಾಲದಿಂದ ಮಕ್ಕಳಿರಲಿಲ್ಲ. ಇವರು ಶಿವನ ಬಳಿಗೆ ಹೋಗಿ ಮಕ್ಕಳ ವರವನ್ನು ಬೇಡುತ್ತಾರೆ. ಅದರ ಫಲವಾಗಿ ಇವರಿಗೆ ೨೭ ಜನ ಹೆಣ್ಣುಮಕ್ಕಳು ಜನಿಸುತ್ತಾರೆ. ಅವರು ಪ್ರಾಯಕ್ಕೆ ಬರಲು ದಕ್ಷಬ್ರಹ್ಮ ಅವರಿಗೆ ವಿವಾಹ ಮಾಡಲು ಮುಂದಾಗುತ್ತಾನೆ. ಆ ಸಂದರ್ಭದಲ್ಲಿ ಅವನು ಶಿವನ ವರಪ್ರಸಾದದಿಂದ ಮಕ್ಕಳಾದ ಕಾರಣ ಶಿವನಿಗೆ ತನ್ನ ಒಬ್ಬ ಮಗಳನ್ನು ಕೊಡಲು ತೀರ್ಮಾನಿಸುತ್ತಾನೆ. ಶಿವನು ಕೂಡ ಇದಕ್ಕೆ ಒಪ್ಪಿ ಗೌರಿಯನ್ನು ವಿವಾಹವಾಗುತ್ತಾನೆ. ಉಳಿದ ೨೬ಜನ ಹೆಣ್ಣುಮಕ್ಕಳಲ್ಲಿ ೫ ಜನರನ್ನು ಇತರ ದೇವಮಾನವರಾದಿಯಾದ ಗಂಧರ್ವರಿಗೆ ಕೊಟ್ಟು ವಿವಾಹಮಾಡುತ್ತಾನೆ. ಅನಂತರ ಚಂದ್ರಮನು ಉಳಿದ ಆ ೨೧ ಜನರಲ್ಲಿ ಅತ್ಯಂತ ರೂಪವತಿಯಾದ ರೋಹಿಣಿಯ ಮೇಲಿನ ಪ್ರೇಮದಿಂದ ವಿವಾಹವಾಗಲು ಮುಂದಾಗುತ್ತಾನೆ. ಈ ಸಂದರ್ಭದಲ್ಲಿ

ದಕ್ಷಬ್ರಹ್ಮನು ಚಂದ್ರನಿಗೆ ಒಂದು ಷರತ್ತನ್ನು ಹಾಕುತ್ತಾನೆ. ಅದೇನೆಂದರೆ, ರೋಹಿಣಿಯ ಜೊತೆಗೆ ತನ್ನ ಉಳಿದ ಹೆಣ್ಣುಮಕ್ಕಳನ್ನು ಸಮಾನವಾಗಿ ಸುಖಸಂತೋಷದಿಂದ ನೋಡಿಕೊಳ್ಳುವುದಾದರೆ ಮದುವೆಗೆ ಒಪ್ಪುವುದಾಗಿ ನುಡಿಯುತ್ತಾನೆ. ಇದಕ್ಕೆ ಚಂದ್ರಮನು ಒಪ್ಪಿ ರೋಹಿಣಿಯಾದಿಯಾಗಿ ಎಲ್ಲರನ್ನು ವಿವಾಹವಾಗುತ್ತಾನೆ. ಹೀಗಿರಲು ಒಂದು ದಿನ ದಕ್ಷಬ್ರಹ್ಮ ತನ್ನ ಹೆಣ್ಣುಮಕ್ಕಳನ್ನು ನೋಡಲು ಅಳಿಯನಾದ ಚಂದ್ರಮನ ಬಳಿಗೆ ಹೋಗುತ್ತಾನೆ. ಚಂದ್ರಮ ಮತ್ತು ರೋಹಿಣಿ ಸಂತೋಷದಿಂದ ಸಮಯ ಕಳೆಯುತ್ತಿರುತ್ತಾರೆ. ಇದನ್ನು ಕಂಡು ದಕ್ಷಬ್ರಹ್ಮನು ಸಂತೋಷಗೊಂಡು ರೋಹಿಣಿಯ ಯೋಗಕ್ಷೇಮವನ್ನು ವಿಚಾರಿಸಿ ಸ್ವಲ್ಪಸಮಯ ಕಳೆಯುತ್ತಾನೆ. ಅನಂತರದಲ್ಲಿ ದಕ್ಷಬ್ರಹ್ಮನಿಗೆ ತನ್ನ ಉಳಿದ ಮಕ್ಕಳ ನೆನಪಾಗಿ ಚಂದ್ರನನ್ನು ಕೇಳಲು ಉದಾಸೀನತೆಯಿಂದ ಅವರೆಲ್ಲೋ ಇದ್ದಾರೆ ಎನ್ನಲು, ರೋಹಿಣಿಯು ತಂದೆಗೆ ನಿಜ ಸಂಗತಿಯನ್ನು ತಿಳಿಸುತ್ತಾಳೆ. ಅವರೆಲ್ಲರನ್ನು ಒಂದು ಕೋಣೆಯಲ್ಲಿ ಕೂಡಿಹಾಕಿರುವುದಾಗಿ ತಿಳಿಸುತ್ತಾಳೆ. ಇದರಿಂದ ಕೋಪಗೊಂಡ ದಕ್ಷಬ್ರಹ್ಮನು ಅಳಿಯನಾದ ಚಂದ್ರನಿಗೆ ಕುರುಡನಾಗುವಂತೆ ಶಾಪಕೊಟ್ಟು ಹೊರಟು ಹೋಗುತ್ತಾನೆ. ಇದರಿಂದ ಅತೀವವಾಗಿ ನೊಂದ ಚಂದ್ರನು ಶಿವನ ಬಳಿಬಂದು ತಪ್ಪನ್ನು ನಿವೇದಿಸಿಕೊಳ್ಳುತ್ತಾನೆ. ಶಿವನು ಅವನ ಶಾಪವನ್ನು ವಿಮೋಚನೆಗೊಳಿಸಲು ಭೂಮಿಯನ್ನು ಬೆಳಗುವಂತೆ ಹೇಳುತ್ತಾನೆ. ಅದರಂತೆ ಚಂದ್ರನು ಭೂಮಿಯನ್ನು ಬೆಳಗುವುದಾಗಿ ಹೇಳಿ ಹೊರಟುಹೋಗುತ್ತಾನೆ. ಈ ವಿಷಯವನ್ನು ತಿಳಿದ ಅವನ ಮಡದಿಯರು ಮೇಘರಾಜನ ಬಳಿಗೆ ಹೋಗಿ ಮಳೆಗಳಾಗಿ ಜನ್ಮವೆತ್ತುತಾರೆ. ಇವರು ಮೂರು ದಿವಸಕ್ಕೆ ಅಥವಾ ನಾಲ್ಕು ದಿವಸಕ್ಕೆ ಒಂದು ಪಾದದಂತೆ ಕಾಣಿಸಿಕೊಳ್ಳುತ್ತಾರೆ. ಮಳೆನಕ್ಷತ್ರದಲ್ಲಿ ಪ್ರತಿ ಮಳೆಗೂ ನಾಲ್ಕು ನಾಲ್ಕು ಪಾದಗಳನ್ನು ಹೇಳಿರುವುದು ಇಲ್ಲಿ ಗಮನಾರ್ಹ.

ಸಾಮಾನ್ಯ ಅರ್ಥವಂತಿಕೆಗಳಿಗಿಂದ ಸ್ವಲ್ಪ ಗಂಭೀರ ಚಿಂತನೆಗೆ ತೊಡಗಿದರೆ ಮಳೆಯ ಕುರಿತಾದ ನಮ್ಮ ಆಲೋಚನೆ ಆದಿಮಸ್ಥಿತಿಗೆ ಹೋಗುತ್ತದೆ. ಭಾರತೀಯ ಸಂಸ್ಕೃತಿಯ ಚಿಂತನಾನೆಲೆಗಳಲ್ಲಿ ಮತ್ತು ಜನಪದಸಾಹಿತ್ಯದಲ್ಲಿ ಮಳೆಯನ್ನು ದ್ವಂದ್ವ ನೆಲೆಗಳಲ್ಲಿಯೇ ನಿರೂಪಿಸಲಾಗಿರುತ್ತದೆ. ವೈದಿಕಸಂಸ್ಕೃತಿಯ ನಿರ್ವಚನದಂತೆ ಮಳೆಯನ್ನು ವರುಣ ಎಂದು ನಿರೂಪಿಸಿದರೆ ಆರ್ಯಪೂರ್ವಕಾಲದಲ್ಲಿ ಮತ್ತು ನಂತರದಲ್ಲೂ ಮಳೆಯೂ ಸ್ತ್ರೀಯಾಗಿಯೇ ನಿರೂಪಿತವಾಗಿದೆ. ನಂತರ ಆರ್ಯೀಕರಣದ ಪ್ರಭಾವದಿಂದ ಜನಪದರು ಮಳೆಗೆ ಪುರುಷತ್ವವನ್ನು ಆರೋಪಿಸಿದ್ದಾರೆ. ಈ ಸ್ಥಿತ್ಯಂತರವನ್ನು ಗಮನಿಸಿದರೆ ಆದಿಮ ಸಂಸ್ಕೃತಿಯ ಮೇಲೆ ಆದ ಆಕ್ರಮಣಕಾರಿ ಚರಿತ್ರೆಯೇ ಬಿಚ್ಚಿಕೊಳ್ಳುತ್ತದೆ. ಎರಡು ಉದಾಹರಣೆಗಳೊಂದಿಗೆ ಗಮನಿಸೋಣ.

### ಸ್ತ್ರೀ ಸಂಕೇತ ತತ್ವ

ಮಳೆ ಸ್ತ್ರೀದೇವತೆ ಎನ್ನುವುದಕ್ಕೆ ಜನಪದಸಾಹಿತ್ಯದಲ್ಲಿ ವಿಪುಲವಾದ ಆಧಾರಗಳು ದೊರೆಯುತ್ತವೆ. ದೇವಿಪ್ರಸಾದ ಚಟ್ಟೋಪಾಧ್ಯಾಯರ ಅಧ್ಯಯನಗಳು ಡಿ.ಡಿ ಕೋಸಂಬಿಯವರ ಸಂಶೋಧನೆಗಳು ಸಹ ಆದಿಮಸಂಸ್ಕೃತಿಯು ಮಾತೃಮೂಲೀಯವಾಗಿದ್ದು, ಪ್ರಕೃತಿಯ ಸಮಸ್ತವೂ ಮತ್ತು ಭೌತಿಕ, ಭೌದ್ಧಿಕ ಜಗತ್ತು ಸ್ತ್ರೀಯ ಹಿಡಿತದಲ್ಲಿತ್ತು ಎಂಬುದನ್ನು ಸಾದರಪಡಿಸುತ್ತವೆ. ಆ ಅಂಶಗಳಲ್ಲಿ ಮಳೆಯು ಒಂದು. ಮೋಡದ ಕಡೆ ಮಳೆಯು ಗಂಗಮ್ಮ ಅಥವಾ ಹೆಣ್ಣು ಎಂಬುದನ್ನು ಇದು ಸಮರ್ಥಿಸುತ್ತದೆ.

ಪತ್ರೆ ಪುಷ್ಪ ಮಡುಗಿ
ಹಣ್ಣ ತೊಟಾ ಮುರ್ದು
ಗಂಧದ ಕಡ್ಡಿ ಬೆಳಗಿ
ಬೆಲ್ಲದನ್ನವ ತಂದು
ಅಲ್ಲಿ ಎಡೆಮಾಡಿ
ಮೇಲೆ ಮಳೆ ಕರೆಯೊ
ಆಕಾಸದಮ್ಮ ತಾಯಿ[3]
ಮೋಡಾದ ಕಡೆಯಿಂದ ಮಿಂಚಿನ ಸುಳಿಯಿಂದ
ತಕ್ಕತೈಯಾ ಕುಣಿಯುತ್ತಾ ಬರುತ್ತಾಳ
ಆಹಾ! ಜಳ ಜಳಾ ಫಳ ಫಳಾ[4]

ಎಂಬುದು ಮಳೆಯನ್ನು ಸ್ತ್ರೀಯೆಂದು ಸಮರ್ಥಿಸುತ್ತದೆ. ಅಲ್ಲದೆ 'ಮಾಯದಂತ ಮಳೆ ಬಂತಣ್ಣ ಮದಗಾದ ಕೆರೆಗೆ' ಎನ್ನುವ ಹಾಡಿನಲ್ಲಿ 'ನಾನಿಲ್ಲುವಳಲ್ಲ' ಎಂಬ ಮಾತು ಬರುತ್ತದೆ. ಮಳೆಯನ್ನು ವಶೀಕರಣ ಮಾಡಿಕೊಳ್ಳಲು ಮಾಟಮಂತ್ರದ ಪ್ರಸ್ತಾಪ ಇರುವುದಷ್ಟೇ ಅಲ್ಲದೆ ಅದೆಲ್ಲದಕ್ಕೂ ಸವಾಲೊಡ್ಡುವ ಮಳೆಯ ಗಟ್ಟಿತನ ಕಂಡು ಬರುತ್ತದೆ. ಇನ್ನೂ ಹಲವಾರು ಆಧಾರಗಳ ಮೇಲೆ ಜನಪದಸಾಹಿತ್ಯದಿಂದಲೇ ಮಳೆಯನ್ನು ಸ್ತ್ರೀತತ್ವದ ಸಂಕೇತವೆಂದು ಸಮರ್ಥಿಸಬಹುದು.

ಸಣ್ಣಾದ ಗಾಳಿ ತರಿಸ್ಯಾಳು ಎಲ್ಲಮ್ಮ
ಸಣ್ಣಾದ ಮಿಂಚು ತರಿಸ್ಯಾಳು ದೇವಿ
ಸಣ್ಣಾದ ಗುಡುಗು ಇಳಿಸ್ಯಾಳು ದೇವಿ
ಅಂಗೈಯೋಟು ಮೋಡಾವ ಮಾಡಿ
ಮಾಯಾದ ಮಳೆಯ ತರಿಸ್ಯಾಳು[5]

ಮಳೆ ಒಂದು ಮಿಥ್. ಇದು ಕೃಷಿಯಮೂಲ, ಕೃಷಿಸಂಸ್ಕೃತಿಯ ತಾಯಿಬೇರು. ಆರ್ಯರು ಭಾರತದಲ್ಲಿ ಪ್ರಾರಂಭಿಸಿದ ಆರ್ಯೀಕರಣದ ಪ್ರಕ್ರಿಯೆಯ ಮುಖ್ಯ ಲಕ್ಷಣಗಳಲ್ಲಿ ಲಿಂಗ ಬದಲಾವಣೆ ಪ್ರಮುಖವಾದದ್ದು. ಫಲವಂತಿಕೆಯ ಸಾದೃಶ್ಯವನ್ನು ಮೂಲವಾಗಿಟ್ಟುಕೊಂಡಿದ್ದ ಕೃಷಿಸಮಾಜದ ಎಲ್ಲಾ ದೇವರುಗಳು ಸ್ತ್ರೀ ರೂಪಿಗಳಾಗಿದ್ದರು ಎಂಬುದನ್ನು ವಿವರವಾಗಿ ಚರ್ಚಿಸಲಾಗಿದೆ.

> 'ಗುಡುಗು ಗುಡುಗುಕಟ್ಟಿತು
> ನಡು ಮುಗಿಲು ಮಿಂಚೀತು
> ಅಡಬರಿಸಿ ಸಿಡಿಲು ಹೊಡದಿತು
> ಗಂಗಮ್ಮ ಸಡಗರಿಸಿ ದುಡಗಿ ಸುರದಾಳ'[೫]

ಮಳೆಯ ವರ್ತನೆಗಳಾದ ಮೋಡ, ಮಿಂಚು, ಗುಡುಗು, ಸಿಡಿಲುಗಳನ್ನು ಹೆಣ್ಣಿನ ವರ್ತನೆಗಳ ಜೊತೆ ಗುರುತಿಸುವುದು ರೂಢಿಯಲ್ಲಿತ್ತು. ಇಂದಿಗೂ ಮಳೆಗಳ ಹೆಸರುಗಳನ್ನೆಲ್ಲಾ ಹೆಣ್ಣಿನ ಹೆಸರುಗಳಿಂದಲೇ ಕರೆಯುವುದು ವಾಡಿಕೆ. "ಅವಳ ಮಕದಾಗ ಗಂಗಮ್ಮ ತಾಂಡ್ವಾಡ್ತಾಳೆ" "ಕಣ್ಣಿನ ಕುಡಿಹುಬ್ಬು ಮಿಂಚೀನ ಕುಡಿಹಾಂಗೆ" ಜಾನಪದ ಸಾಹಿತ್ಯದಲ್ಲಿ ಅಲ್ಲದೆ ನುಡಿಗಟ್ಟಿನಲ್ಲಿ ಈ ಮಾತಿಗೆ ಎಣೆಯಿಲ್ಲದಷ್ಟು ಸಾಕ್ಷಿಗಳು ಸಿಕ್ಕುತ್ತವೆ. ಕಥನಕಾವ್ಯವಾದ ಉತ್ತರದೇವಿ ಹಾಡಿನ ಕೊನೆಯಲ್ಲಿ ಆಕೆ ಮಳೆಯಾಗಿ ಹೋಗುವ ಚಿತ್ರ ಮಳೆಯನ್ನು ಹೆಣ್ಣಿನೊಡನೆ ಸಮೀಕರಿಸಿರುವುದನ್ನು ಗಮನಿಸಬಹುದು.

> ಅಮ್ಮನ ಕೂಡಿಕೊಂಡು ಉತ್ತರದೇವಿ
> ಗಂಗೆಯ ಬಳಿಗೆ ನಡುದಾಳು ।ನುಡಿದಾಳು
> ಗಂಗಮ್ಮ ತಾಯಿ ನನ್ನ ಎಳಕೊಳ್ಳೆ
> ತಾವರೆ ಎಲೆ ಮ್ಯಾಲೆ ತಾನಾಗಿ ಕೂತಕಂಡು
> ತಪಸ್ಸು ಮಾಡ್ಯಾಳೆ ಶಿವನೀಗೆ । ಉತ್ತರದೇವಿ
> ನಾಡ ಮೇಲೆ ಉತ್ತರ ಮಳೆಯಾಗಿ ಹರಿದಾಳು'[೬.]
> 'ಅನ್ನೆರಡು ವರುಸಕ್ಕೆ ಅಣ್ಣಯ್ಯನ ಮನೆಗೋಗಿ
> ನಿಂಬೆ ಪಾದ್ರಾಕ್ಷಿ ಮರುದೆಡೆ
> ನಿಂಬೆ ಪಾದ್ರಾಕ್ಷಿ ಮರುದೆಡೆ ನಿಂತುಕೊಂಡು
> ವೊಂದುಗುಟ್ಟಿದಣ್ಣಯ್ಯನ ಬರ ಹೇಳಿ
> ದೂರದಸೀಮೆಯಿಂದ ನನ್ನ ತಂಗಿ ಬಂದವಳೆ

ಮನೆಯ ಹೆಣ್ಣು ಮಗಳು ಮಕ ಮುಸಿಸು ಆಗ್ಯವಳೆ

ಬಣ್ಣುಡಸಿ ಬಳೆಯ ತೊಡಿಸಯ್ಯ ಅಣ್ಣಯ್ಯ

ಬಂದ ಗಾಚಾರ ಬಯಲಾದೊ[೩]

ಮೇಲಿನ ಪದ್ಯದ ಸಾಲುಗಳು ಮಳೆ, ಭೂಮಿಯ ಮೇಲೆ ಮತ್ತು ಆಕಾಶದಲ್ಲಿನ ಸ್ಥಿತಿಗಳೆರಡರಲ್ಲೂ ಸ್ತ್ರೀ ರೂಪಿಯೇ ಎನ್ನುವುದನ್ನು ಯಾವುದೇ ಅನುಮಾನಕ್ಕೆ ಎಡೆಯಿಲ್ಲದ ಹಾಗೆ ಸಮರ್ಥಿಸುತ್ತವೆ.

**ಪುರುಷ ತತ್ವ ಸಂಕೇತ**

ಮಳೆಯನ್ನು ಗಂಡುದೈವ ಎಂದು ಕರೆಯುವ ಹಾಡುಗಳು ಜನಪದಸಾಹಿತ್ಯದಲ್ಲಿವೆ. ಆದರೆ ಈ ವಿಲಕ್ಷಣ ಬದಲಾವಣೆಗೆ ಆರ್ಯೀಕರಣವೇ ಕಾರಣವೆಂದು ನಂಬಬಹುದು. ವೈದಿಕಸಾಹಿತ್ಯದಲ್ಲಿ ದಾಖಲು ಆಗಿರುವಂತೆ ಮಳೆಯ ಅಧಿಪತಿ ಇಂದ್ರ. ಅನಂತರ ಮಳೆಗೆ ವರುಣನನ್ನು ಅಧಿಪತಿಯೆಂದು ನಂಬಿದರಿಂದ ಮಳೆ ಬೇಡುವಾಗ ಮಳೆರಾಯ, ಮಳೆರಾಜ, ದೇವೇಂದ್ರ, ಘನರಾಜ ಎಂದು ಪುರುಷವಾಚಕಗಳಿಂದ ಸಂಬೋದಿಸಿದ್ದಾರೆ. ಹಾಗೂ ಆಕಾಶ ದೇವೇಂದ್ರನ ಆವಾಸವಾಗಿದ್ದರಿಂದ ಆಕಾಶವೂ ಗಂಡ. ಈ ವಿಚಾರವನ್ನು ವ್ಯವಸ್ಥಿತವಾಗಿ ಪ್ರಸರಣ ಮಾಡುವುದರ ಮೂಲಕ ತನ್ನ ನೆರೆಸಂಸ್ಕೃತಿಯ ಅನನ್ಯತೆಯನ್ನು ನಾಶಪಡಿಸಲು ಪ್ರಯತ್ನಿಸಿರುವ ಚಾರಿತ್ರಿಕಸಂಗತಿಯನ್ನು ಇದು ದಾಖಲಿಸುತ್ತದೆ. ಈ ನಂಬಿಕೆಗಳೇ ಜನಪದರಲ್ಲಿ ಬಲವಾಗಿ ಬೇರೊರಿದಂತಿದೆ.

ಗಾಳೆಪ್ಪ ಧೂಳೆಪ್ಪ ಮಿಂಚಪ್ಪ

ಇವರ್ನಾಕ ಮಂದಿ ಅಣತಮ್ರು/ಇದ್ದಾ

ಸತ್ತಣ ಹಳ್ಳಿಗೆ ಘನರಾಜ ಮಳೆರಾಜ

ತೇಜೇರಿ ಸುರಿದ ಮಳೆರಾಜ/ಬೆಳೆದಾನು

ಲೋಕದೊಳು ರಾಜ ತೆನಿರಾಜ[೮]

ಮೇಲಿನ ಸಾಲುಗಳು ಮಳೆಯನ್ನು ಪ್ರಾರ್ಥಿಸುವುದಕ್ಕಿಂತಲೂ ಮಳೆಯ ರೂಪದಲ್ಲಿರುವ ಪುರಷನ ಅಂತಸ್ತು(ಪೊಸಿಷನ್)ಗಳ ಸ್ತುತಿಯನ್ನು ಮಾಡುತ್ತವೆ. ಮಳೆಯ ಜೊತೆ ಪ್ರಯೋಗವಾಗುವ ರಾಯ,ರಾಜ,ರಾಜ್ಯ ಮುಂತಾದ ಪ್ರಭುತ್ವಸಂಸ್ಥೆಯ ರೂಪಗಳು, ಸುತ್ತಹಳ್ಳಿಗಳಿಗೆ ದೊಡ್ಡವನು, ಎನ್ನುವ ಶ್ರೇಣೀಕರಣದ ಸಿದ್ಧಾಂತ, ದಂಡು, ಕುದುರೆಸವಾರಿ, ಮುಂತಾದ ಯುದ್ಧಸಂಬಂಧಿ ವಿವರಗಳು ಭಾರತದಲ್ಲಿ ಪಿತೃಪ್ರಧಾನ ಸಮಾಜ ರೂಪಗೊಂಡ ಮೇಲೆ ಭಾಷೆಯಲ್ಲಿ ಬಳಕೆಗೆ ಬಂದಿರುವ ಪದಗಳು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಅಂಬರದಲ್ಲಿ ಯ್ಯಾಕೋ ನಿಂತೋ ಮಳೆರಾಯ
ಅಪ್ಪಾ ನೀನಿಲ್ಲದೇ ಸೊಪ್ಪಾದೋ ಈ ಭೂಮಿ
ಸಪ್ಪೆದೊಂಟಾದೋ ದನಕರ/ದೇವೇಂದ್ರರಾಯ
ಕಂಚಿನ ಹಣವಾಗಿ ಸುರಿ ಬಾರೋ[೯]

ಆಕ್ರಮಣಕಾರಿ ಮನೋಭಾವವು ಶಕ್ತಿಗಿಂತ ಹೆಚ್ಚಾಗಿ ಯುಕ್ತಿಗೆ ಪ್ರಾಧಾನ್ಯತೆ ಕೊಡುತ್ತದೆ. ಆರ್ಯರು ಮೊದಲು ಪ್ರಯೋಗಿಸಿದ್ದು, ಶಕ್ತಿಯಾದರೂ ನಂತರ ಯುಕ್ತಿಗೆ ಮೊರೆಹೋದರು. ಕೃಷಿಮೂಲ ಸಂಸ್ಕೃತಿಯ ಆರಾಧ್ಯದೈವ, ಮಳೆದೇವತೆ ಅದು ಮಾತೃಸ್ವರೂಪಿಯಾಗಿದ್ದು, ಆಕ್ರಮಣದ ನಂತರ ಆರ್ಯರು ಪ್ರಭುತ್ವ ಸಾಧಿಸಿದಾಗ ಲಿಂಗಬದಲಾವಣೆಯ ಪ್ರಕ್ರಿಯೆಯನ್ನು ಮೊದಲು ಮಾಡಿದರು. ಮಳೆಯು ಒಂದು ಕೃಷಿಮೂಲದ ಮಿಥ್‌ಯಾಗಿದ್ದು ಅದನ್ನು ಆರ್ಯರು ಪುನರ್ ರಚಿಸಿದರು. ಆ ಮೂಲಕ ಬಲವಂತದ ಬದಲಾವಣೆಗಳಾದವು. ಆ ಮೂಲಕ ಇಡೀ ಸಾಂಸ್ಕೃತಿಕವ್ಯವಸ್ಥೆಯು ಸಾಂಸ್ಕೃತಿಕ ರಾಜಕಾರಣಕ್ಕೆ ಒಳಗಾಗಿರುವುದನ್ನು ಕಾಣಬಹುದು. ನಂತರದ ಕಾಲಮಾನದಲ್ಲಿ ಮಳೆಯು ಸಂಪೂರ್ಣ ಪುರುಷಲಿಂಗವಾಗಿತ್ತೆಂದು ಹೇಳಲಾಗದು. ಏಕೆಂದರೆ, ಜನಪದ ಕಥನಗೀತೆಗಳಲ್ಲಿ ಮಳೆಯು ಒಲಿಯುವುದು ಹೆಣ್ಣಿಗೆ ವಿನಃ ಗಂಡಿಗಲ್ಲ ಎಂಬುದು ಗಮನಾರ್ಹ. ಬಲಿಪದ್ಧತಿಯ ಅಂತರಾಳದಲ್ಲಿ ಈ ಸಂಗತಿ ಸ್ವರೂಪಗಳು ಕಾಣಸಿಗುತ್ತವೆ. 'ಮಾಯದಂತ ಮಳೆ ಬಂತಣ್ಣ ಮದಗಾದ ಕೆರೆಗೆ' ಗೀತೆಯು ಪುರುಷತಂತ್ರಗಳನ್ನು ಭಂಜನೆ ಮಾಡಿ ವಿಜಯಿಯಾದ ಮಳೆಯ ಜಯಘೋಷದಂತೆ ಗೋಚರಿಸುತ್ತದೆ. 'ಉತ್ತರದೇವಿಕಥನ ಗೀತೆ'ಯು ಈ ಸ್ವರೂಪದಾಗಿದ್ದು, ಅಲ್ಲಿ ಮೌನಪ್ರತಿಭಟನೆಯಾಗಿದೆ. ಉತ್ತರದೇವಿ ಕೊನೆಗೆ ಮಳೆಯಾಗುವುದರ ಮೂಲಕ ಇಡೀ ಜನಪದರ ಬದುಕನ್ನು ಬಂಗಾರವಾಗಿಸುವತ್ತ ತನ್ನ ಗಮನ ಕೇಂದ್ರಿಕರಿಸಿ ಅಸ್ತಿತ್ವಸ್ಥಾಪಿಸಿಕೊಳ್ಳುತ್ತಾಳೆ. 'ಭಾಗೀರಥಿ' ಕಥನವು ಮಳೆಯು ಸ್ತ್ರೀಯ ಆಧೀನತೆ ಪ್ರತೀಕವಾಗಿ ಆಕೆಯ ಕೋರಿಕೆಯ ಮೇರೆಗೆ ಮಳೆಸುರಿಯುವಂತಾಗಿದೆ. ಈ ಕಾರಣಕ್ಕೆ ಜನಪದ ಕಥನಗಳನ್ನು ಈ ಹಿನ್ನೆಲೆಯಲ್ಲಿಯೇ ನೋಡುವ ಉದ್ದೇಶವು ಈ ಅಧ್ಯಯನಕ್ಕೆ ಇದೆ.

'ಮೂಡ ಮೋಡ ನೋಡೊ ಮೋಡಾದ ಚಂದ ನೋಡೋ
ಗೋಡೇಗೆ ಕಪ್ಪು ಬಳದಂಗೆ । ಮಳೆರಾಯ
ಬೋರಾಡುತಾನೆ ಮುಗಿಲಲ್ಲಿ'[೧೦]

ಮನುಷ್ಯನ ಸಂಸ್ಕೃತಿಯ ಅವಿರ್ಭವಿಸಿ ವಿಕಾಸಗೊಳ್ಳಲು ಪೃಥ್ವಿ, ಆಪ್, ಅಗ್ನಿ ಹಾಗೂ ವಾಯು ಈ ನಾಲ್ಕು ಪ್ರಾಕೃತಿಕತತ್ವಗಳು ಒಟ್ಟಂದದಲ್ಲಿ ಕಾರಣವಾಗಿವೆ. ಅಗ್ನಿಯೂ ಸೃಜನಕ್ರಿಯೆಯಲ್ಲಿ ಪ್ರಧಾನಪಾತ್ರ ವಹಿಸುತ್ತದೆ. ಜಲವೂ ಅವ್ಯಕ್ತವಾದ ಜೀವತತ್ವಕ್ಕೆ ವ್ಯಕ್ತಸ್ವರೂಪವನ್ನು ನೀಡುತ್ತದೆ. ಪ್ರಕೃತಿಯೂ ರೂಪುಗೊಳ್ಳಬೇಕಾದರೆ ಅಗ್ನಿ ಹಾಗೂ ಜಲತತ್ವಗಳ ಸಂಯೋಗವು ಅನಿವಾರ್ಯವಾಗಿದೆ. ಅತೀಂದ್ರಿಯ

ಆಕರಗಳ ಆರಾಧಕರಾದ ವೇದದ ಋಷಿಗಳು ಹಾಗೂ ವೇದಸಂಸ್ಕೃತಿಯು ಅಗ್ನಿಯನ್ನು ಆರಾಧನೆಯ ಪ್ರಧಾನದತತ್ವವೆಂದು ಸ್ವೀಕರಿಸಿದರೂ ಜಲತತ್ವದ ಸಹಚರ್ಯೆವಿಲ್ಲದೇ ಅಗ್ನಿ ಅಸ್ತಿತ್ವವೂ ಪೂರ್ಣವಾಗದು ಎಂಬ ತತ್ವವನ್ನು ಸ್ಪಷ್ಟವಾಗಿ ನಿರೂಪಿಸುತ್ತವೆ. ಕೆಲವು ಸಂಶೋಧಕರು ಅಗ್ನಿಪೂಜೆ ಹಾಗೂ ಜಲಪೂಜೆಗಳು ಒಂದಕ್ಕೊಂದು ವಿರುದ್ಧವಾಗಿ ಎರಡು ಮಾರ್ಗಗಳನ್ನು ಸೂಚಿಸುತ್ತವೆ ಎಂದು ಹೇಳುತ್ತಾರೆ. ಆದರೂ ವೈದಿಕತತ್ವದ ಅಂತರಾಳದಲ್ಲಿ ಸೂರ್ಯ, ಮರುತು, ಅಗ್ನಿ ವಾಯು, ಆದಿತ್ಯ, ಇಂದ್ರ, ಆಪ್, ಅಪಂನಾಪತ್, ವರುಣ ಈ ಎಲ್ಲಾ ಪ್ರಕೃತಿಯ ಪ್ರಾಧಿನಿಕ ತತ್ವಗಳು ಪರಸ್ಪರ ಪೂರಕವಾಗಿಯೇ ಚಿತ್ರಿಸಲ್ಪಟ್ಟಿವೆ.

ಮಳೆಯನ್ನು ಜನಪದರು ಮೂಲತಃ 'ಗಂಡು' ಎಂದು ಭಾವಿಸಿರುವಂತೆ ಕಾಣುತ್ತದೆ. (ಕಾಕತಾಳೀಯವಾಗಿ–ಭೂಮಿ ನಮ್ಮವರ ದೃಷ್ಟಿಯಲ್ಲಿ ಹೆಣ್ಣು) ಅದ್ದರಿಂದಲೆ ಮಳೆರಾಜ, ಮಳೆರಾಯ, 'ಮಳೆದೇವ' ಎಂದು ಅವನನ್ನು ಹಾಡಿ ಹೊಗಳಿ ಭೂಮಿಗೆ ಬರುವಂತೆ ಪ್ರಾರ್ಥಿಸಿರುವುದು ಕಾಣುತ್ತದೆ.

ಅಂಗ ಕೊಡುವವನೆ ಗೊಂಬೆ ಹಚ್ಚಡದವನೆ
ರಂಬೆ ತೊಡೆ ಮೇಲಿರುವವನೆ ! ಮಳೆ ದೇವ
ಅಂಬರದಿಂದ ಕರುಣಿಸೋ ।
ಮಳೆಯಪ್ಪ ಮಳೆರಾಜ ಕರೆಯುತಾರೋ ನಿನ್ನ
ಮೊದಲು ಕೂರಿಗೆಯ ರೈತಾರೋ ; ಹೊಲದಾಗ
ಬೆಳೆ ಎದ್ದು ಕೈಯ ಮುಗಿದಾವ !
ರಾಗೀ ಬಣ್ಣದ ಕುದರಿ ರಾಜಕ ದೊಡ್ಡದು
ರಾಜಾರೊಳು ರಾಜಾ ಮಳೆರಾಜಾ ! ಬರುವಾಗ
ರಾಜೀವ ಕೈಯ ಮುಗಿದಾವ[೧೧]॥

ಮಳೆಯನ್ನೇ ಗಂಡೆಂದು ಭಾವಿಸಿರುವಂತೆ ಮಳೆತರಬಲ್ಲ ಜೋಕುಮಾರನಂತಹ ದೇವತೆಗಳೂ ಗಂಡೇ ಆಗಿದ್ದಾರೆ. 'ಗುರ್ಜಿ'ಯನ್ನು ಗಂಡೆಂದು ಸ್ಪಷ್ಟವಾಗಿ ಹೇಳಿಲ್ಲದಿದ್ದರೂ ಅದನ್ನು ಗಂಡಿನಂತೆ ಸಂಬೋದಿಸಿರುವುದು, ಅದರ ಶಿವಲಿಂಗದ ಆಕಾರ ಇವುಗಳಿಂದಾಗಿ ಅದನ್ನೂ ಗಂಡೆಂದು ಭಾವಿಸಿಕೊಂಡಿ ರುವಂತೆಯೇ ಕಾಣುತ್ತದೆ. ಮಳೆಯ ಜೊತೆಗಾರನಾದ ಗುಡುಗು, ಮಿಂಚು, ಸಿಡಿಲುಗಳೂ ಗಂಡೇ ಜನಪದರ ಪಾಲಿಗೆ. ಕನ್ನಡದ ಜನಪದ ಗೀತೆಗಳಲ್ಲಿ ಕಾಣುವಂತೆ ಮಳೆ ಒಂದು ಪ್ರಾಕೃತಿಕ ವಿದ್ಯಮಾನ ಮಾತ್ರವಾಗಿರದೆ ಮಳೆರಾಯ, ದೇವೇಂದ್ರ, ತಂದೆ ಹಾಗೂ ಪ್ರೀತಿಯ ಬಂಧುವಾಗಿ

ವ್ಯಕ್ತಿರೂಪ ಧರಿಸಿ ಅವರ ಬದುಕಿನಲ್ಲಿ ಬೆರೆತಿದ್ದಾನೆ. 'ಗೊಂಬೆ ಹಚ್ಚಡ ದವನೆ, ರಂಭೆ ತೊಡೆ ಮೇಲೆ ಮಲಗಿರುವ ಮಳೆದೇವ'. ಎಂದು ಅವನನ್ನು ರಸಿಕನನ್ನಾಗಿ ಕಲ್ಪಿಸಿದ್ದಾರೆ. ಅವರ ದೃಷ್ಟಿಯಲ್ಲಿ ಮಳೆರಾಯ ಅಪಾರ ಕರುಣೆಯಿಂದ ತುಂಬಿದವನು.

ಬಿತ್ತು ಬಂದಣ್ಣ ಮುತ್ತಿನ ಕಂಭ ಸೇರಿ
ಬಿತ್ತು ಬಂದೆ ಶಿವನೆ ಮಳೆಯಲ್ಲ ಅಂದಾಗ
ಮುತ್ತಿನ ಮಂಜು ಹರಿದಾವು'[೧೨]

ಎಂಬ ಗೀತೆ ಇದಕ್ಕೆ ಉದಾಹರಣೆ ಜನಪದರ ಪಾಲಿಗೆ ಒಂದೊಂದು ಮಳೆಹನಿಯೂ ಮುತ್ತಾಗಿದೆ. ಎಂಬ ಸತ್ಯಾಂಶವೆ ಇಲ್ಲಿ ಹೊಮ್ಮಿದೆ. ಈ ಹಿನ್ನೆಲೆಯಲ್ಲಿ ನೋಡಿದಾಗ

ಮಳಿ ಹೋಯ್ತು ಅಂತ ಮಳೆರಾಯ್ನ ಬೈಯಬೇಡ
ಒಕ್ಕಳ ಹೊನ್ನ ಸೆರಗಲ್ಲಿ ಕಟ್ಕೊಂಡು
ಸಾಲಕ್ಕೋಗವ್ನೆ ಮಳೆರಾಯ[೧೩]

ಎಂಬ ತ್ರಿಪದಿ ಅತ್ಯಂತ ಧ್ವನಿಪೂರ್ಣವಾಗಿದೆ. ಸಾಲಕ್ಕೋಗವನೆ ಮಳೆರಾಯ ಎಂಬ ಸಾಲು, ಸಾಲ ಮಾಡಿಯಾದರೂ ಮಳೆರಾಯ ಮಳಿಕೊಡುತ್ತಾನೆ ಎಂಬುದಷ್ಟೇನೇ ಅಲ್ಲ, ವಾತಾವರಣದಲ್ಲಿ ತೇವಕಣಗಳೆಲ್ಲ ಒಟ್ಟುಗೂಡಿ, ಮೋಡದ ರೂಪ ತಳೆದು ಆ ಮೋಡ ದಟ್ಟವಾಗಿ ಆನಂತರ ಮಳೆ ಸುರಿಸುವ ಪ್ರಕ್ರಿಯೆಯನ್ನೂ ಧ್ವನಿಸುತ್ತಿರಬಹುದು.

ಬಾರೆಂದರೆ ಬಾರನು ಹೋಗೆಂದರೆ ಹೋಗನು
ಯಾರಿಚ್ಚೆ ಹೇಳು ಮಳೆರಾಯ

ಎಂದು ಮಳೆರಾಯನ ಸರ್ವತಂತ್ರ ಸ್ವತಂತ್ರ ಸ್ವಭಾವವನ್ನು ಗೀತೆಗಳಲ್ಲಿ ಸೂಚಿಸಿದ್ದಾರೆ.

ಮಳೆಗಾಲದ ಸೊಬಗು, ವೈಭವಗಳನ್ನು ವರ್ಣಿಸುವ ಅನೇಕ ಗೀತೆಗಳಿವೆ. ಮಳೆರಾಯ ಹೇಗೆ ಆಗಮಿಸುತ್ತಾನೆ ಎಂಬುದನ್ನು ಅತ್ಯಂತ ಸುಂದರವಾಗಿ ವರ್ಣಿಸುವ ಒಂದು ಗೀತೆ ಹೀಗಿದೆ.

ಆಕಾಶದೊಳಗೆ ಆರ್ಭಟವೆನಿರೆ
ದೇವೇಂದ್ರರಾಯ ಹೊರ ಪಯಣ ಹೋಗ್ವಾಗ
ಸಿಡಿಲು ಮಿಂಚಿನ ಐಭೋಗ
ಕೆಂಧೂಳೂ ಎದ್ದು ಮುಗಿಲ ಮೋಡ ಕವಿದೂ
ಹಗಲ್ ಇರುಳಾದೊ ಜಗಕೆಲ್ಲ – ಮಳೆರಾಯ[೧೪]

ಆರ್ಯ ಅಥವಾ ವೈದಿಕಪರಂಪರೆಯಲ್ಲಿ ಮಳೆಯ ದೇವರು ದೇವೇಂದ್ರ ಪುರುಷತ್ವಕ್ಕೆ ಸಂಕೇತವಾದವನು ಋಗ್ವೇದ ಮಂತ್ರವೊಂದರಲ್ಲಿ ಹೀಗೆ ಹೇಳಲಾಗಿದೆ 'ನಾನು ಸೂರ್ಯ, ವಿಪ್ರನಾದ ಋಷಿ, ಕಾಕ್ಷೀವಾನ್ ನಾನು. ನನ್ನನ್ನು ನೋಡಿ! ನಾನು ಆರ್ಯರಿಗೆ ಭೂಮಿಯನ್ನು ಕೊಟ್ಟಿದ್ದೇನೆ. ಹವಿಸ್ಸುಗಳನ್ನು ಅರ್ಪಿಸುವ ಜನರಿಗೆ ನಾನು ಮಳೆ ನೀಡಿದ್ದೇನೆ. ಗುಡುಗು ಧ್ವನಿಗಳ ಸಂಗಡದ ನೀರನ್ನು ಕೊಡುವವನು ನಾನು'[೧೫] ಈ ಮಂತ್ರದಲ್ಲಿ ನಾನು ಪದದ ಪುನರಾವರ್ತನೆಯನ್ನು ಗಮನಿಸಬೇಕು. ಮಳೆಗೆ ವರುಣನನ್ನು ಅಧಿಪತಿಯೆಂದು ಈ ಪಂಥ ನಂಬಿದ್ದರಿಂದಲೇ ಮಳೆ ಬೇಡುವಾಗ ಮಳೆರಾಯ ಮಳೆರಾಜ, ದೇವೇಂದ್ರ, ಘನರಾಜ ಎಂದು ಪುರುಷವಾಚಕಗಳಿಂದ ಸಂಭೋದಿಸಿದ್ದಾರೆ. ಹಾಗೂ ಆಕಾಶ ದೇವೇಂದ್ರನ ಆವಾಸವಾದದ್ದರಿಂದ ಆಕಾಶವು ಗಂಡೇ. ಈ ವಿಚಾರವನ್ನು ವ್ಯವಸ್ಥಿತವಾಗಿ ಪ್ರಸರಣ ಮಾಡುವ ಮೂಲಕ ತನ್ನ ನೆಲಸಂಸ್ಕೃತಿಯ ಅನನ್ಯತೆಯನ್ನು ನಾಶಪಡಿಸಲು ಪ್ರಯತ್ನಿಸಿರುವ ಚಾರಿತ್ರಿಕ ಸಂಗತಿಯನ್ನು ಇದು ದಾಖಲಿಸುತ್ತದೆ.

ವೈದಿಕರ ಪ್ರಕಾರ ಇಂದ್ರ ಮಳೆಯ ಅಧಿಪತಿ, ಈತ ನದಿಗಳನ್ನು ಬಂಧಿಸಿಟ್ಟಿದ್ದ ವೃತ್ರಾಸುರನೆಂಬ ಅಸುರನನ್ನು ಕೊಂದು ನದಿಗಳನ್ನು ಮುಕ್ತಗೊಳಿಸಿದ ಎಂಬ ಋಗ್ವೇದದ ಉಲ್ಲೇಖವನ್ನು ಅಭ್ಯಾಸಮಾಡಿ ಈ ಕೆಳಗಿನಂತೆ ವಿವರಿಸಿದ್ದಾರೆ. ಇಂದ್ರ ನದಿಗಳನ್ನು ವೃತ್ರಾಸುರನ ಸೆರೆಯಿಂದ ಮುಕ್ತಮಾಡಿದ ಮಿಥ್‌ನ್ನು ಆಳವಾಗಿ ಅಭ್ಯಾಸ ಮಾಡಿದ ಅತ್ಯಂತ ಸಮರ್ಥ ಇರಾನಿನ ತತ್ವಶಾಸ್ತ್ರಜ್ಞರಾದ ಸಿ. ಬೆನ್ವನಿಸ್ಟ್ ಮತ್ತು ಎಲ್.ರೇನೋ (ಆರ್ಯ ಮತ್ತು ಸಂಸ್ಕೃತ ದಾಖಲೆಗಳ ಪೂರ್ಣಜ್ಞಾನವಿರುವವರು) ವೃತ್ರಾ ಎನ್ನುವುದು ರಾಕ್ಷಸನ ಹೆಸರಲ್ಲ ಅದು ಒಂದು ತಡೆ (ಅಬ್‌ಸ್ಟ್ಯಾಕಲ್) ಅಥವಾ ಒಡ್ಡು (ಬ್ಯಾರೇಜ್) ಎಂದು ವಿವರಿಸುತ್ತಾರೆ. ಇದನ್ನು ಸ್ಪಷ್ಟವಾಗಿ ಸಮರ್ಥಿಸುವ ವೃತ್ರಾಸುರನ ಸಂಹಾರದ ಋಗ್ವೇದಸೂಕ್ತವನ್ನು ಗಮನಿಸಿ. 'ಇಳಿಜಾರಿನಲ್ಲಿ ಆ ರಾಕ್ಷಸ ಕಪ್ಪು ಹಾವಿನ ಹಾಗೆ ಮಲಗಿದ್ದ ಎಲ್ಲಾ ನದಿಗಳು ಸೆರೆಸಿಕ್ಕಿ ಸ್ತಬ್ದಗೊಂಡಿದ್ದವು. ಆಗ ಇಂದ್ರ ತನ್ನ ವಜ್ರಾಯುಧದಿಂದ ರಾಕ್ಷಸನ ಮೇಲೆ ಪ್ರಹಾರಮಾಡಿದ. ಆಗ ಭೂಮಿ ಅದುರಿತು. ಕಲ್ಲು ಗುಂಡುಗಳು ರಥದ ಗಾಲಿಗಳ ಹಾಗೆ ಉರುಳಿಹೋದವು. ಸತ್ತುಬಿದ್ದ ರಾಕ್ಷಸನ ಮೃತ ದೇಹದ ಮೇಲೆ ನದಿಗಳು ಹರಿದು ಹೋದವು'[೧೬] ಜಗತ್ತಿನ ಸಂಸ್ಕೃತಿಯ ನಿರೂಪಣೆಯ ಪ್ರಥಮ ಅಧಿಕೃತ ಗ್ರಂಥವಾದ ಋಗ್ವೇದವು ಹಾಗೂ ಅದನ್ನು ಆಧರಿಸಿ ಅನುಸರಿಸಿ ಬೆಳೆದ ಸಮಸ್ತ ಭಾರತೀಯ ಪೌರಾಣಿಕ ಗ್ರಂಥಗಳು ಸಂಸ್ಕೃತಿಗಳು ಅಗ್ನಿ ಹಾಗೂ ಜಲತತ್ವಗಳ ಸಮ್ಮಿಲನವನ್ನು ಸೃಜನಸೃಷ್ಟಿಯ ಮೂಲಕಾರಣವೆಂದು ಬಗೆದಿದೆ. ಹೀಗಾಗಿ ಋಗ್ವೇದವನ್ನೊಳಗೊಂಡ ಸಮಸ್ತ ಶಿಷ್ಟಪರಂಪರೆಯ ಸಂಸ್ಕೃತಿ ಗ್ರಂಥಗಳು ಒಂದು ಕಡೆಗೆ ಅಗ್ನಿಯನ್ನು ಪುರುಷತತ್ವದ ಸಂಕೇತವನ್ನು ಹಾಗೂ ಮಳೆಯನ್ನು ಸ್ತ್ರೀತತ್ವದ ಸಂಕೇತವೆಂದೂ ಸಾಧಾರವಾಗಿ ಭಾವಿಸಿವೆ. ಅಂತೆಯೇ ಅಪ್, ಜಲ, ನದಿ, ಪೃಥ್ವಿ ಇವೆಲ್ಲ ಸ್ತ್ರೀತತ್ವ ಸಂಕೇತವಾಗಿಯೇ ಪ್ರತಿಪಾದಿಸಲ್ಪಟ್ಟಿವೆ. ಮಳೆ ಮತ್ತು ಇಳೆ ಇವುಗಳ

ಅವಿನಾಭಾವ ಸಂಬಂಧಗಳನ್ನು ತುಂಬಾ ಭಾವುಕವಾಗಿ ವರ್ಣಿಸುವ ಹೇರಳವಾದ ಉದಾಹರಣೆಗಳು ವೇದಪುರಾಣಗಳ, ಸ್ಮೃತಿ ಗ್ರಂಥಗಳ ಉದ್ದಕ್ಕೂ ಅಭಿವ್ಯಕ್ತವಾಗಿವೆ. ಇದೇ ವಿಚಾರಗಳನ್ನು ಹಿರಿಯ ಸಂಶೋಧಕರಾದ ಶಂಭಾಜೋಶಿಯವರು ತಮ್ಮ ಹಾಲುಮತದರ್ಶನ ಸಂಶೋಧನೆಯ ಸಂದರ್ಭದಲ್ಲಿ ಗುರುತಿಸಿದ್ದಾರೆ.

ಅಗ್ನಿ ಮತ್ತು ಜಲಸಂಸ್ಕೃತಿಗಳ ನಡುವೆ ಸಂಘರ್ಷಗಳು ಮತ್ತು ಒಂದನ್ನೊಂದು ತುಳಿದು ಬೆಳೆಯುವ ಪ್ರವೃತ್ತಿಗಳು ನಡೆದುಬಂದಿವೆ. ಜನಪದಸಂಸ್ಕೃತಿಯ ಅಂತಃಸತ್ವವು ಸ್ತ್ರೀತತ್ವದಿಂದ ರೂಪಿತವಾಗಿದೆ. ಹಾಗೆಯೇ ಸಾಂಕೇತಿಸುವುದಾಗಿದೆ. ಆದರೆ ಆರ್ಯೀಕರಣದ ಪ್ರಕ್ರಿಯೆಯಲ್ಲಿ ಸ್ತ್ರೀದೇವತೆಗಳು ಗಂಡು ದೇವತೆಗಳಾಗಿ ಬದಲಾದರೆ, ದೇವತಾರಾಧನೆಗಳು ಸ್ತ್ರೀಯರಿಂದ ಗಂಡಸರ ಕೈವಶವಾಗಿ ಬಲವಂತದ ಅರ್ಚನೆ ಬಿಂಬಿಸುತ್ತವೆ. ಜಗತ್ತಿನಸೃಷ್ಟಿ ಜೀವಗಳ ಹುಟ್ಟುವಿಕಾಸವು ಮಳೆಯಿಂದ ಆಗಿತ್ತು ಎಂಬುದನ್ನು ಋಗ್ವೇದದಸೂಕ್ತಿಗಳು ಸೃಷ್ಟಿಪೂರ್ವಸ್ಥಿತಿಯನ್ನು ವಿವರಿಸುತ್ತಾ ಜಲದ ಅಸ್ತಿತ್ವ ಹಾಗೂ ಜೀವಜಗತ್ತಿನ ಹೊಮ್ಮುವಿಕೆಯ ಬಗ್ಗೆ ಸೂಕ್ತವಾದ ಸಂಕೇತಗಳನ್ನು ನೀಡುತ್ತದೆ. ಪುರಾಣಗಳಲ್ಲಿ ಬರುವ ದಶಾವತಾರದ ವಿವರಣೆಯಲ್ಲಿ ಮತ್ಸ್ಯಾವತಾರವು ಪ್ರಪ್ರಥಮವಾಗಿದ್ದು, ಮತ್ಸ್ಯಾವತಾರಕ್ಕೂ, ಜಲತತ್ವಕ್ಕೂ ಇರುವ ಅವಿನಾಭಾವ ಸಂಬಂಧವನ್ನು ಸೂಚಿಸುತ್ತದೆ. ಮತ್ತು ಪುರಾಣದಲ್ಲಿ ಬರುವ ಜಲಪ್ರಳಯದ ಕಥೆಯೂ ವೇದಗಳಲ್ಲಿ ಧ್ವನಿತವಾದ ಜಲದಿಂದಲೇ ಜೀವನ, ಜಲದಿಂದಲೇ ಸೃಷ್ಟಿ, ಜಲದಿಂದಲೇ ಪ್ರಳಯ ಎಂಬ ತ್ರೈಕಾಲಿಕಸತ್ಯವನ್ನು ಪುಷ್ಟೀಕರಿಸುತ್ತದೆ. ಆಶ್ಚರ್ಯಕರವಾದ ಸಂಗತಿಯೆಂದರೆ, ಪುರಾಣಗಳಲ್ಲಿ ಜಲಪ್ರಳಯದ ಕಥೆಯೂ ಪುನಃ ಪುನಃ ಹೇಳಲ್ಪಟ್ಟಂತೆ ಅಗ್ನಿಪ್ರಳಯದ ಕಥೆಯೂ ಅಥವಾ ನಿರೂಪಣೆಯು ಅಷ್ಟಾಗಿ ಸ್ಫುಟವಾಗಿ ಸಿಗುವುದಿಲ್ಲ. ಈ ವಿಷಯವು ಗಮನಾರ್ಹವಾಗಿದ್ದು ಸೃಷ್ಟಿ, ಸ್ಥಿತಿ, ಲಯವನ್ನು ನಿರೂಪಿಸುತ್ತವೆ.

ಮಳೆರಾಯ ಹುಟ್ಟಲಿ ಕೆರೆರಾಯ ತುಂಬಾಲಿ
ಸಾಲಕೋಡಿಗಳೆ ಹರಿಯಾಲಿ । ಮಳೆರಾಯ
ಬತ್ತಾದ ಕೋಡಿ ಹರಿಯಾಲಿ[೧೭]

ದೇವತ್ವದ ಸಂಕೇತವಾಗಿರುವ ನೀರು ಆ ನೀರಿನಮೂಲ ಮಳೆ ಹೆಣ್ಣುತನದ, ತಾಯಿತನದ ಫಲವಂತಿಕೆ ರೂಪವಾಗಿರುವ ನೀರು ಮಾತೃದೇವತೆಯ ಸ್ಥಾನದಲ್ಲಿ ಮೂಲಸಂಸ್ಥೆಯೊಳಗಡೆ ಅಡಕವಾಗಿದೆ. ನೀರು ಪಾವಿತ್ರ್ಯತೆಯ ರೂಪವಾಗಿ, ದೈವಿಭಾವನೆಯ ಪ್ರತಿರೂಪವಾಗಿ ಪ್ರಾಣವನ್ನು ಪಂಚಭೂತಗಳೊಂದಿಗೆ ಬೆರೆಸುವ ಸಂಕೇತವಾಗಿ ಜನಪದರಲ್ಲಿ ಬೆರೆತು ಹೋಗಿದೆ. ಅಗ್ನಿ ಮತ್ತು ನೀರನ್ನು ಪಂಚಭೂತಗಳಲ್ಲಿ ಕೇಂದ್ರಿಕರಿಸಿ ಹೇಳುವುದಾದರೆ 'ವೈದಿಕ ಆರ್ಯಜೀವನಾವರ್ತಗಳಲ್ಲಿ ಅಗ್ನಿ ನಿರ್ವಹಿಸುವ ಕಾರ್ಯಗಳನ್ನು ಪ್ರತಿನಿಧಿಸುವ ದೈವಗಳ ಸಂಕೇತಿಸುವ ರೂಪಗಳನ್ನು ಜನಪದರ ಜೀವನಾವರ್ತನಗಳಲ್ಲಿ

ನೀರು ನಿರ್ವಹಿಸುತ್ತದೆ.[೧೮] ಭಾರತೀಯ ಸಂಸ್ಕೃತಿಯಲ್ಲಿ ಅಗ್ನಿ ಮತ್ತು ನೀರು ಎರಡು ವಿಶೇಷವಾದ ಅರ್ಥವಂತಿಕೆ ಪಡೆಯುತ್ತವೆ. ಅಗ್ನಿ ಪುರುಷ ಸಂಕೇತವಾಗಿ, ನೀರು ಹೆಣ್ಣಿನ ಸಂಕೇತವಾಗಿ ಪ್ರತಿನಿಧಿಸಿರುವುದರಿಂದ ಇಲ್ಲಿ ವೈದಿಕ ಆವರ್ತಗಳು ಪುರುಷಕೇಂದ್ರಿತ ಚಿಂತನೆಗಳನ್ನು ಅಗ್ನಿ ಎಂದೂ, ಜನಪದಸಂಸ್ಕೃತಿಗಳ ಸ್ತ್ರೀ ಅಥವಾ ಪ್ರಕೃತಿಕೇಂದ್ರಿತ ಚಿಂತನೆಗಳನ್ನು ಜಲಸಂಸ್ಕೃತಿ ಎಂದು ಕರೆಯುತ್ತಾರೆ. ಜಲಸಂಸ್ಕೃತಿ ಭಾರತದಲ್ಲಿ ಅತ್ಯಂತ ಪ್ರಾಚೀನ ಸಂಸ್ಕೃತಿಯಾದರೆ ವೈದಿಕಪರಂಪರೆ ಅಗ್ನಿಸಂಸ್ಕೃತಿಯನ್ನು, ನಾಗರೀಕತೆಯು ಉತ್ತಮ ಸ್ಥಿತಿಯ ಹಂತದಲ್ಲಿದ್ದಾಗ ಪ್ರಾಬಲ್ಯತೆಯನ್ನು ಸಾಧಿಸಿರಬಹುದು.

ಜಲದಿಂದಲೇ ಜಗತ್ತಿನ ಉದಯ ಮತ್ತು ಅಂತ್ಯ ಎಂಬ ಕಥನಗಳು ಜನಪದರಲ್ಲಿ ಸಿಗುತ್ತವೆ. ಇದರ ಹಿಂದಿನ ಉದ್ದೇಶ ಜಲವೆನ್ನುವ ನೀರಿನಮೂಲ ಮಳೆಯೇ ಆಗಿರುವುದರಿಂದ ಮಳೆಯೇ ಸೃಷ್ಟಿ ಮತ್ತು ಲಯಗಳ ಮೂಲವೆನ್ನಬಹುದಾಗಿದೆ. ಜಗತ್ತಿನ ಸೃಷ್ಟಿಗೆ ಮನು ಮತ್ತು ಈಡ ಎಂಬ ಪುರುಷ ಮತ್ತು ಸ್ತ್ರೀ ಕಾರಣವೆನ್ನುವ ಪ್ರಾಚೀನ ಆಧಾರಗಳು ಇದಕ್ಕೆ ಕಾರಣ. ಒಮ್ಮೆ ಧಾರಾಕಾರ ಮಳೆ ಆಗುತ್ತೆ. ಮಳೆ ಎಂದರೆ ಅದು ಮೋಡವನ್ನೇ ಆವರಿಸುವಂತಹ ಮಳೆ. ಇಡೀ ಭೂಮಿ ನೀರಿನಿಂದ ಆವೃತ್ತವಾಗಿರುತ್ತದೆ ಇಡೀ ಜೀವಸಂಕುಲವೇ ಸರ್ವನಾಶವಾಗುತ್ತದೆ. ಹುಡುಕಿದರೂ ಭೂಮಿಯ ಮೇಲೆ ವಾಸಿಸುವ ಒಂದು ನರಪಿಳ್ಳೆಯೂ ಸಿಗುವುದಿಲ್ಲ. ಆ ಸಂದರ್ಭದಲ್ಲಿ ಮನು ಎಂಬ ವ್ಯಕ್ತಿಯು ನೌಕೆಯಲ್ಲಿ ಎತ್ತರವಾದ ಪರ್ವತಕ್ಕೆ ಬಂದು ಈಡ ಎಂಬ ಮಹಿಳೆಯ ಜೊತೆ ಸೇರಿ ಮನುಷ್ಯ ಜೀವನದ ಮುಂದುವರೆಕೆಗೆ ಕಾರಣನಾದನು. ಈ ಕಥೆಯ ಹಿಂದಿನ ಸ್ವಾರಸ್ಯ ಪ್ರಪಂಚದ ಮುಂದುವರೆದ ಭಾಗವಾಗಿ ನೋಡುವುದಾದರೆ ಜಗತ್ತಿನ ನಾಶಕ್ಕೆ ನೀರು ಹೇಗೆ ಕಾರಣವೋ, ಜೀವಸಕುಲದ ಮುಂದುವರೆಕೆಗೆ ನೀರೇ ಕಾರಣವೂ ಆಗಿ ಕಂಡು ಬರುತ್ತದೆ. ಮಳೆಯನ್ನು ಕುರಿತಾದ ನಂಬಿಕೆಗಳು ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿವೆ.

ಜಗತ್ತಿನ ಬಹುತೇಕ ಸಂಸ್ಕೃತಿಗಳಲ್ಲಿ ಮಳೆರಾಯ ವಿವಿಧ ರೂಪಗಳಲ್ಲಿ ಸಕಲ ದೇವತೆಗಳ ಅಧಿಪತಿಯಾಗಿದ್ದಾನೆ. ವೈದಿಕಸಂಸ್ಕೃತಿಯ ದೇವೇಂದ್ರ, ಗ್ರೀಕ್ ಹಾಗೂ ರೋಮನ್ನರ ಜ್ಯೂದೇವ ಮಳೆ ದೇವರೇ ಆಗಿದ್ದಾರೆ. ಹಿಂದೂ ವೇದಪುರಾಣಗಳಲ್ಲಿ ಅಂತರಿಕ್ಷ ದೇವತೆಗಳಲ್ಲೆಲ್ಲ ಬಲಿಷ್ಠನಾದ ಇಂದ್ರನೇ ಮಳೆಯ ಅಧಿಪತಿ, ಬಿರುಗಾಳಿ, ಸಿಡಿಲು, ಮಿಂಚಗುಡುಗುಗಳ ಕರ್ತನಾಗಿದ್ದಾನೆ. ಎಂದು ಅವನಿಗೆ ಹೆದರಿದರೂ ಫಲವಂತಿಕೆ ಹಾಗೂ ಮಳೆಗೆ ಕಾರಣನಾದವನು ಆರಾಧಿಸಲಾಗುತ್ತದೆ. ಇಂದ್ರನು ಮೊರೆ ಬಂದವರನ್ನು ಮಳೆಸುರಿಸಿ ಕಾಪಾಡಿ ಅನೇಕ ಘಟನೆಗಳು ಮಹಾಭಾರತದಲ್ಲಿವೆ. ತಕ್ಷಕನನ್ನು ಕಾಪಾಡಿದ ಘಟನೆ ಬಹುಶಃ ಎಲ್ಲರಿಗೂ ಗೊತ್ತಿರುವಂಥದ್ದು. ಋಷ್ಯಶೃಂಗನಿಗೆ ತನ್ನ ಅತೀವ ಸಾತ್ವಿಕಗುಣದಿಂದ ಮಳೆ ಬರಿಸುವ ಶಕ್ತಿಯಿತ್ತು ಎಂಬ ವಿವರ ಮಹಾಭಾರತದಲ್ಲಿ ಸಿಗುತ್ತದೆ. ಅನಾವೃಷ್ಟಿ ಪೀಡಿತ ಪ್ರದೇಶಗಳಿಗೆ ಈತನನ್ನು ಕರೆದೊಯ್ದಾಗ ಮಳೆಯಾಗುತ್ತಿದ್ದ ಘಟನೆಗಳನ್ನು ಇಲ್ಲಿ ಹೇಳಲಾಗಿದೆ. ಮಳೆಗೆ

ಸಂಬಂಧಿಸಿದ ಪ್ರತಿಯೊಂದು ವಿದ್ಯಮಾನದ ಹಿನ್ನೆಲೆಯಲ್ಲಿ ಒಬ್ಬ ದೇವತೆಯಾಗಿದ್ದಾನೆ ಎಂಬ ಕಲ್ಪನೆ ವೇದಗಳಲ್ಲಿಯೂ ಕಂಡುಬರುತ್ತದೆ. ಪರ್ಜನ್ಯಜಪ ನಡೆಸುವುದು ನಮ್ಮ ಶಿಷ್ಟಸಂಸ್ಕೃತಿಯಲ್ಲಿ ಈಗಲೂ ರೂಢಿಯಲ್ಲಿದೆ. ಪರ್ಜನ್ಯದೇವತೆ ತನ್ನ ಜಲರಥದಲ್ಲಿ ಕುಳಿತು ಮೋಡದ ಮೇಲೆ ಸುತ್ತಿ ಮೇಘಕೊಳವನ್ನು ಕೆಳಮುಖವಾಗಿ ಬಗ್ಗಿಸಿ ಮಳೆ ಸುರಿಸುತ್ತಾನೆ ಎಂಬ ವಿವರವಿದೆ. 'ಅಪಮ್‌ನಪತ್' ಎಂಬ ದೇವತೆ ಮೋಡವನ್ನು ಪ್ರತಿನಿಧಿಸುತ್ತಾನೆ. ಮಿಂಚು ಈತನ ಉಡುಗೆ.

ಮಳೆಯ ಲಿಂಗರೂಪ ಬದಲಾವಣೆಗೆ ಮುಖ್ಯ ಕಾರಣವನ್ನು ಹೀಗೆ ಊಹಿಸಬಹುದು. ಯಾವುದೇ ಸಂಸ್ಕೃತಿಯ ಮೂಲಪರಿಕಲ್ಪನೆಯನ್ನು ಬದಲಿಸುವ ಮೂಲಕ, ಆ ಸ್ಥಳೀಯ ಸಂಸ್ಕೃತಿಯನ್ನು ತನ್ನ ಅಧೀನಕ್ಕೆ ತೆಗೆದುಕೊಳ್ಳಲು ಸಾಧ್ಯ ಎನ್ನುವುದು ಇಂದಿನ ವಸಾಹತುಶಾಹಿಗಳ ನಂಬಿಕೆ. ಅಂದಿನ ವೈದಿಕರ ನಂಬಿಕೆಯೂ ಆ ನೆಲೆಯದೇ ಆಗಿರಬಹುದು ಎನ್ನುವುದಕ್ಕೆ ಹೆಣ್ಣಾಗಿದ್ದ ಮಳೆಯನ್ನು ಮಳೆರಾಜನನ್ನಾಗಿಸಿದ್ದು (ಗಂಡಾಗಿಸಿದ್ದು) ಒಂದು ಉದಾಹರಣೆ ಮಾತ್ರ. ಬಹುಶಃ ವೈದಿಕರ ಪ್ರಭುತ್ವ ಮತ್ತು ಆಕ್ರಮಣಪ್ರವೃತ್ತಿಯ ಕಾರಣವಾಗಿ ಆರ್ಯೇತರ ಜನಪದರು ಆ 'ಪರ' ಕಲ್ಪನೆಗಳನ್ನು ಒಪ್ಪಿಕೊಂಡಿರುವ ಹಾಗೆ ತೋರುತ್ತದೆ. ಆದರೆ ಅದು ಸ್ವೀಕರಿಸಿದ್ದಲ್ಲ. ಬಲವಂತದ ಹೇರಿಕೆ ಎನ್ನುವುದನ್ನು ಈ ಅಧೀನಪರಂಪರೆ ದಾಖಲಿಸಿರುತ್ತದೆ. ಈ ಆಶಯ ಗಂಗೆ ಗೌರಿ ಜಗಳದ ಕಥನಕವನದಲ್ಲಿ ಒಡೆದು ಕಾಣುವಂತೆ ದಾಖಲಾಗಿದೆ.

ಪ್ರತಿಯೊಂದು ಸಂಸ್ಕೃತಿಯೂ ಅದರ ಮೌಲ್ಯವ್ಯವಸ್ಥೆಯನ್ನು ಕಾಪಾಡುವ ಪುರಾಣಗಳನ್ನು ಸೃಷ್ಟಿಸಿಕೊಂಡಿರುತ್ತದೆ. ಯಾವಸಂಸ್ಕೃತಿಯು ಅತಿಕ್ರಮಣದ ಮೂಲಕ ನೆರೆಸಂಸ್ಕೃತಿಯನ್ನು ತನ್ನ ನಿಯಂತ್ರಣಕ್ಕೆ ತೆಗೆದುಕೊಳ್ಳಲು ಯತ್ನಿಸುತ್ತದೋ ಆ ಸಂಸ್ಕೃತಿ ತನ್ನ ಎದುರಿನ ಸಂಸ್ಕೃತಿಯ ಮಿಥ್‌ಗಳನ್ನು ಒಡೆಯುತ್ತದೆ. ಮತ್ತು ಒಡೆದ ಮಿಥ್‌ಗೆ ಬದಲು ತನ್ನ ಸಂಸ್ಕೃತಿಯ ಅನನ್ಯತೆಯನ್ನು ಸ್ಥಾಯಿಯಾಗುಳ್ಳ ಮಿಥ್ ಒಂದನ್ನು ಅದರ ಬದಲಾಗಿ ಪುನರ್‌ರಚಿಸುತ್ತದೆ. ಈ ಹೊಸ ಮಿಥ್‌ನಿಂದಾಗಿ ಪ್ರಧಾನಸಂಸ್ಕೃತಿಯ ನಿಯಂತ್ರಣಕ್ಕೆ ಸಿಕ್ಕ ಅಧೀನಸಂಸ್ಕೃತಿಯ ಒಳಗೆ ಅನೇಕ ಬಗೆಯ ಪಲ್ಲಟಗಳು ಉಂಟಾಗುತ್ತವೆ. ಈ ಮಿಥ್‌ನ ಸೃಷ್ಟಿ ಅಷ್ಟು ಸುಲಭದ ಕೆಲಸವಲ್ಲ. ಕಲ್ಪಿಸಿದ ಹೊಸ ಮಿಥ್ ಅನ್ನು ಆ ಅನ್ಯಸಂಸ್ಕೃತಿ ಒಪ್ಪಿಕೊಳ್ಳದೇ ಇರುವ ಸಾಧ್ಯತೆ ಇದೆ. ಅಂಥ ಸಂದರ್ಭದಲ್ಲಿ ಈ ಪ್ರಧಾನಸಂಸ್ಕೃತಿ ರಾಜ್ಯಪ್ರಭುತ್ವ ಅಧಿಕಾರಗಳನ್ನು ಬಳಸಿಕೊಂಡು ಹೊಸಪುರಾಣವನ್ನು ಒಪ್ಪಿಕೊಳ್ಳುವಂತೆ ಬಲವಂತದಿಂದ ಹೇರುತ್ತದೆ. ಇದು ಮೇಲುನೋಟಕ್ಕೆ ಎರಡು ಸಂಸ್ಕೃತಿಗಳ ನಡುವೆ ಅತ್ಯಂತ ಸಹಜವಾಗಿ ನಡೆಯುವ ಕ್ರಮ ಪ್ರಧಾನ'ವಾಗಿ ಕಾಣಿಸುತ್ತದೆ. ಇದು ಅತ್ಯಂತ ಸೂಕ್ಷ್ಮ ಸಾಂಸ್ಕೃತಿಕ ರಾಜಕಾರಣ(ಕಲ್ಚರಲ್ ಪಾಲಿಟಿಕ್ಸ್‌ನ)ದ ಮಾದರಿ. ಭಾರತದಲ್ಲಿ ಪುರುಷಪ್ರಧಾನ ಸಮಾಜವೊಂದು ಹೇಗೆ ಮಾತೃಪ್ರಧಾನ

ಸಮಾಜವೊಂದರ ಮಿಥ್ ಒಂದನ್ನು ಒಡೆದು ತನ್ನ ಹೂರಣವಿಟ್ಟು ಅದನ್ನು ಮರುಸೃಷ್ಟಿಸಿತು ಎನ್ನುವುದಕ್ಕೆ ಹೆಣ್ಣೆಂದು ಸ್ವೀಕರಿಸಲ್ಪಟ್ಟ ಮಳೆ, ಮಳೆರಾಜ ಎಂಬ ಗಂಡಾಗಿ ಪರಿವರ್ತನೆ ಆದದ್ದು ಒಂದು ಉದಾಹರಣೆ ಮಾತ್ರ, ಅಲ್ಲದೆ ಹೊಸ ಮಿಥ್‌ಅನ್ನು ಅಧಿಕಾರಶಾಹಿಯ ಮೂಲಕ ಪ್ರಸರಣಗೊಳಿಸಿದ್ದು ಕೂಡ ಜಾನಪದದಲ್ಲಿ ದಾಖಲಾಗಿದೆ.

ಉಗುರಷ್ಟೇ ವಿಭೂತಿ ಭೂಮಿ ಮೇಲ್ಹಾಕಿ

ಮಳೆರಾಯ್ನ ಕರೆದು ಆಣೆ ಬಿಡಿಸಿದಳು

ಗುಡಗುಡನೆ ಗುಡುಗೀತು – ಥಳಥಳನೆ ಮಿಂಚೀತು

ಜಡಿಮಳೆ ಉಯ್ದಾಗ – ನೀರು ಜಲ್ಲನೆ ಬಿತ್ತು......

........ಕೈ ಬೀಸಿ ಕರೆದಾಳು ಮಳೆರಾಯ ದೇವನು

ಜಡಿಮಳೆ ಹುಯ್ದು ಜಲ್ಲಾನೆ ಬಿತ್ತು

ಗಂಗೇಯ ನಡೆದಾರೆ ಮೊಣಕಾಲು ಉದ್ದ ನೀರು ಬಂತು

ಗೌರೀಯು ನಡೆದರೆ ಕೊಚ್ಚಿ ಹೋದಳು'[೧೯]

ಎನ್ನುವಲ್ಲಿ ಸಮನ್ವಯತೆಯೇ ಸದಾಶಯವಾಗಿದೆ. ಇಲ್ಲಿ ಅಸ್ತಿತ್ವದಪ್ರಶ್ನೆಯು ಮೂಲಸಂಸ್ಕೃತಿಯ ಸುಪ್ತತೆಯಲ್ಲಿ ಬಂದುದಾಗಿದೆ. ಕಥಾನಕಗಳು ಹೊರಸೂಸುವ ಭಾಂಧವ್ಯದನೆಲೆಗಳೂ ಸಹ ಆದಿಮಪ್ರಜ್ಞೆಯಿಂದ ಬಂದುದೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅದು ಬಿಚ್ಚುವ ಲಿಂಗ ಸಂಬಂಧಿಯು ಮೂಲದಲ್ಲಿ ಭೂಮಿಯ ಪ್ರಶ್ನೆಯಿಂದ ಬಂದುದಾದರೂ ಅಧಿಕಾರದ ನೆಲೆಯಿಂದ ಬಂದುದಲ್ಲ.

## ಸಂಖ್ಯಾಟಿಪ್ಪಣಿಗಳು

೧. ತಲ್ವಾಡಿ. ಬಿ.ಎಸ್. ಜಾನಪದ ಕಲರವ. ಪುಟ. ೯೮

೨. ತಿಪ್ಪೇಸ್ವಾಮಿ. ಜಿ.ಆರ್. ಸಂ, ದಕ್ಷಿಣ ಕರ್ನಾಟಕದ ಬೇಸಾಯದ ಹಾಡುಗಳು. ಪುಟ, ೪೧

೩. ನಾರಾಯಣಸ್ವಾಮಿ. ಕೆ.ವೈ. ನೀರದೀವಿಗೆ. ಪುಟ, ೧೬೦

೪. ಕೃಷ್ಣಮೂರ್ತಿ ಹನೂರು. ಕತ್ತಾಲ ದಾರಿ ದೂರ. ಪುಟ. ೨೨೨

೫. ಚನ್ನವೀರಕಣವಿ. ಜಾನಪಧ ಕಾವ್ಯಭಾಷೆ. ಪುಟ. ೧೩೫

೬. ತಿಪ್ಪೇಸ್ವಾಮಿ. ಜಿ.ಆರ್. ಸಂ, ದಕ್ಷಿಣ ಕರ್ನಾಟಕದ ಬೇಸಾಯದ ಹಾಡುಗಳು. ಪುಟ,೩೦

೭. ಸ್ವಾಮಿ. ಬಿ,ಎಸ್, ಜಾನಪದ ಝೇಂಕಾರ, ಪುಟ. ೧೦೫

೮. ನಾರಾಯಣಸ್ವಾಮಿ. ಕೆ.ವೈ. ನೀರದೀವಿಗೆ. ಪುಟ, ೧೬೪

೯. ನಾರಾಯಣಸ್ವಾಮಿ. ಕೆ.ವೈ. ನೀರದೀವಿಗೆ. ಪುಟ, ೧೬೦

೧೦. ವಕ್ತೃ : ಲಲಿತಮ್ಮ. ಕಿರಿಗೆರಿ

೧೧. ವಕ್ತೃ : ಲಲಿತಮ್ಮ. ಕಿರಿಗೆರಿ

೧೨. ತಿಪ್ಪೇಸ್ವಾಮಿ. ಜಿ.ಆರ್. ಸಂ, ದಕ್ಷಿಣ ಕರ್ನಾಟಕದ ಬೇಸಾಯದ ಹಾಡುಗಳು. ಪುಟ,೩೦

೧೩. ತಿಪ್ಪೇಸ್ವಾಮಿ. ಜಿ.ಆರ್. ಸಂ, ದಕ್ಷಿಣ ಕರ್ನಾಟಕದ ಬೇಸಾಯದ ಹಾಡುಗಳು. ಪುಟ,೩೦

೧೪. ತಿಪ್ಪೇಸ್ವಾಮಿ. ಜಿ.ಆರ್. ಸಂ, ದಕ್ಷಿಣ ಕರ್ನಾಟಕದ ಬೇಸಾಯದ ಹಾಡುಗಳು. ಪುಟ,೩೨

೧೫. ಪುಟ್ಟಪ್ಪ. ಕೆ.ವಿ. ಯುಗಯಾತ್ರಿ ಭಾರತೀಯ ಸಂಸ್ಕೃತಿ. ಪುಟ. ೧೪೯

೧೬. ಕೊಸಾಂಬಿ. ಡಿ.ಡಿ. ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರೀಕತೆ. ಪುಟ. ೭೪

೧೭. ವಕ್ತೃ : ಲಲಿತಮ್ಮ. ಕಿರಿಗೆರಿ

೧೮. ನಾರಾಯಣಸ್ವಾಮಿ. ಕೆ.ವೈ. ನೀರದೀವಿಗೆ. ಪುಟ, ೧೬೦

೧೯. ಪದ್ಮಪ್ರಸಾದ್. ಎಸ್.ಪಿ. ಮಳೆ ಒಂದು ಜಾನಪದೀಯ ಅಧ್ಯಯನ. ಪುಟ, ೧೦೨

## ಅಧ್ಯಾಯ .ಎಂಟು

## ಬದಲಾಗುತ್ತಿರುವ ಪರಿಸರ ಪ್ರಜ್ಞೆ ಮತ್ತು ಮಳೆಯ ಪರಿಸ್ಥಿತಿಗಳು.

ಮಳೆತರುವ ದೇವತೆಗಳೆಂದು ಆರಾಧಿಸುವ ಮತ್ತು ಪೂಜಿಸುವ ಜೋಕುಮಾರ ಮತ್ತು ಕಾಮನ ಆಚರಣೆಗಳಿಂದ ಕೃಷಿಕರು ಕೇವಲ ಸ್ತ್ರೀದೈವಗಳನ್ನಲ್ಲದೆ ಪುರುಷದೈವಗಳನ್ನು ಆರಾಧಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಚಾರಿತ್ರಿಕ ಬೆಳವಣಿಗೆಯಲ್ಲಿ ಜಾತಿ ಸಮಾಜ ರಚನೆಯಾದ ಬಳಿಕ ವೈದೀಕರಣಪ್ರಕ್ರಿಯೆಗೆ ಒಳಗಾಗಿದ್ದರಿಂದ ಕೃಷಿಸಂಸ್ಕೃತಿಯಲ್ಲಿ ಅನೇಕ ರೀತಿಯ ಬದಲಾವಣೆಗಳಾದವು. ಹಾಗಾದ ಬದಲಾವಣೆಗೆ ಅವರು ಪೂಜಿಸಿಕೊಂಡು ಆರಾಧಿಸಿಕೊಂಡು ಬಂದ ದೈವಗಳಲ್ಲಾದ ಬದಲಾವಣೆ ಮತ್ತು ಬೆಳವಣಿಗೆಯನ್ನೆ ಒಂದು ಸ್ಪಷ್ಟ ನಿದರ್ಶನವಾಗಿ ಕೊಡಬಹುದು. ಆರಂಭಿಕ ಕೃಷಿಹಂತದಲ್ಲಿ ಪ್ರಕೃತಿಯನ್ನು ಹೆಣ್ಣುರೂಪದಲ್ಲಿ ಆರಾಧಿಸುತ್ತಿದ್ದ ಮತ್ತು ಹೆಣ್ಣನ್ನು ದೈವವಾಗಿಸಿಕೊಂಡಿದ್ದ ಮನುಜರು ಕ್ರಮೇಣ ವಿವಿಧ ನಮೂನೆಯ ದೈವಗಳನ್ನು ಸೃಷ್ಟಿಸಿಕೊಂಡು ಅವುಗಳನ್ನು ಆರಾಧಿಸತೊಡಗಿದರು. ಆ ಕಾರಣಕ್ಕಾಗಿಯೇ ನಮ್ಮಲ್ಲಿ ಪ್ರಾದೇಶಿಕವಾಗಿ ಮಳೆ, ಬೆಳೆಗೆ ಸಂಬಂಧಿಸಿದಂತೆ ಬೇರೆ ಬೇರೆ ದೈವಗಳ ಬಗೆಗೆ ನಂಬಿಕೆ ಹೊಂದಿದ್ದು ಅವುಗಳಿಗೆ ಸಂಬಂಧಿಸಿದಂತೆ ಅನೇಕ ಆಚರಣೆಗಳನ್ನು ರೂಢಿಸಿಕೊಂಡಿರುವುದು ಕಂಡು ಬರುತ್ತದೆ.

ಕೃಷಿಸಂಸ್ಕೃತಿಯಲ್ಲಿ ಕೇವಲ ಸ್ತ್ರೀದೇವತೆಗಳಲ್ಲದೆ ಪುರುಷದೈವಗಳು ಕಾಣಿಸಿಕೊಳ್ಳುತ್ತವೆ. ಮತ್ತವುಗಳಿಗೆ ಸಂಬಂಧಿಸಿದಂತೆ ಆಚರಣೆಗಳಿರುವುದು ಕಂಡು ಬರುತ್ತವೆ. ಹಾವೇರಿ ಜಿಲ್ಲೆಯ ಪಕ್ಕದಲ್ಲಿರುವ ಮೈಲಾರ ಎಂಬ ಒಂದು ಗ್ರಾಮದಲ್ಲಿ 'ಮಳೆಮಲ್ಲಪ್ಪನ ಗುಡಿ' ಎಂಬ ಒಂದು ಸಣ್ಣ ದೇಗುಲವೇ ಇರುವುದು ಕಂಡು ಬರುತ್ತದೆ. ಕೃಷಿಕರು ಸ್ತ್ರೀದೈವಗಳನ್ನಷ್ಟೇ ಅಲ್ಲದೆ ಪುರುಷದೈವಗಳನ್ನು ಆರಾಧಿಸುತ್ತಿದ್ದರು ಎಂಬುದಕ್ಕೆ ಈ ರೀತಿಯ ಅನೇಕ ನಿದರ್ಶನಗಳು ನಮ್ಮ ನಡುವೆ ಇರುವುದು ಕಂಡುಬರುತ್ತದೆ. ಅದೇ ಮೈಲಾರಗ್ರಾಮದ ಇನ್ನೊಂದು ದೈವ ಮೈಲಾರಲಿಂಗಪ್ಪ ಅಥವಾ ಮೈಲಾರಲಿಂಗೇಶ್ವರ ಇಂದು ರಾಜ್ಯಾದಾದ್ಯಂತ ಪ್ರಸಿದ್ಧಿಯನ್ನು ಪಡೆದು ಸಾವಿರಾರು ರೈತಾಪಿಗಳು ಈ ದೈವವನ್ನು ಮನೆದೇವರನ್ನಾಗಿಸಿಕೊಂಡು ಪೂಜಿಸುತ್ತಿರುವುದು ಕಂಡುಬರುತ್ತದೆ. ಪ್ರತಿವರ್ಷ ಈ ದೇವರ ಜಾತ್ರೆಯಲ್ಲಿ ಆಗುವ ಕಾರ್ಣೀಕದ ಬಗೆಗೆ ರೈತಾಪಿಗಳಿಗೆ ಅತಿಯಾದ ನಂಬಿಕೆ ಇದೆ. ಹಾಗಾಗಿ ಅಲ್ಲಿ ನಡೆದ ಕಾರ್ಣೀಕದ ಮೇಲೆಯೇ ತಮ್ಮ ಆ ವರುಷದ ಕೃಷಿಭವಿಷ್ಯವನ್ನು ಅವರು ನಿರ್ಧರಿಸುವರು.

ಪ್ರತಿ ಊರಿನಲ್ಲಿ ಮಳೆ, ಬೆಳೆ ಸರಿಯಾಗಿ ಬರದಿದ್ದರೆ ಊರಿನಲ್ಲಿರುವ ಸ್ತ್ರೀದೈವಗಳಿಗೆ ಉಡಿ ತುಂಬಿದರೆ ಪುರುಷದೈವಗಳಾದ ಈರಣ್ಣ, ಬಸವಣ್ಣ, ಹನುಮಪ್ಪ, ಮೈಲಾರಲಿಂಗಪ್ಪ, ರೇಣುಕಾಚಾರ್ಯ

ಇನ್ನೂ ಮುಂತಾದ ದೈವಗಳಿಗೆ ಹಣ್ಣುಕಾಯಿ ಮಾಡಿಸುವರು. ಅಲ್ಲದೆ ಕೆಲವೊಮ್ಮೆ ರುದ್ರಾಭಿಷೇಕ, ಎಲಿಪೂಜೆ, ಕುಂಕುಮ ಪೂಜೆಮಾಡಿಸುವರು. ಕೃಷಿಯ ಆರಂಭಿಕಹಂತದಲ್ಲಿ ಸ್ತ್ರೀಶಕ್ತಿಯಲ್ಲಿಯೇ ಅಗಾಧ ನಂಬಿಕೆ ಇಟ್ಟು ಸ್ತ್ರೀದೈವಗಳನ್ನು ಆರಾಧಿಸುತ್ತಿದ್ದವರು ಕ್ರಮೇಣ ಪುರುಷದೈವಗಳನ್ನು ಆರಾಧಿಸುವುದನ್ನು ರೂಢಿಸಿಕೊಂಡು ಬಂದಿರುವರು. ದೈವದ ಬಗೆಗಿರುವ ಕೃಷಿಕರ ಮನೋಭೂಮಿಕೆಯಲ್ಲಾದ ಬದಲಾವಣೆಯನ್ನು ಆ ಸಂಸ್ಕೃತಿಯ ವಿಕಾಸಕ್ರಮವೆಂದೂ ಅಥವಾ ಸಂಸ್ಕೃತಿಯಲ್ಲಾದ ಬದಲಾವಣೆಯೆಂದು ಹೇಳಬಹುದು.

**ಸ್ತ್ರೀಯರನ್ನು ಸಂಪತ್ತಿನಿಂದ ಅನ್ಯವಾಗಿಸಿದ ತಂತ್ರ**

ಕೃಷಿ ವಲಯದಲ್ಲಿ ಪ್ರಚಲಿತದಲ್ಲಿರುವ ಕೆಲವು ನಂಬಿಕೆಗಳನ್ನು ನೋಡಿದಾಗ ಮಹಿಳೆಗೆ ಕೆಲವು ನಿಷೇಧಗಳನ್ನು ವಿಧಿಸಿರುವುದು ಅಚ್ಚರಿಯೆನಿಸಿದರು ವಾಸ್ತವವಾಗಿದೆ. ಇದು ಪುರುಷಪ್ರಧಾನ ವ್ಯವಸ್ಥೆ ಮಹಿಳೆಯನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಮಾಡಿದ ಸಂಚಿನಂತೆ ಕಾಣುವುದನ್ನು ಪ್ರಸ್ತಾಪಿಸಿದ ಕೆಲವು ನಂಬಿಕೆಗಳಿಂದ ತಿಳಿದುಬರುತ್ತದೆ. ಆಣೆ ಕಲ್ಲಾಡಿದರೆ ಮಳೆ ಬರೋಲ್ಲ ಎನ್ನುವ ಸಾಮಾನ್ಯ ತಿಳುವಳಿಕೆ ಅಥವಾ ನಂಬಿಕೆಯೊಂದು ಜನರಲ್ಲಿದೆ. ಅಂದರೆ ಆಣೆಕಲ್ಲಾಡಬಾರದು ಎನ್ನುವ ಈ ನಂಬಿಕೆ ಪರೋಕ್ಷವಾಗಿ ಯಾರು ಆಡಬಾರದು ಎಂಬುದನ್ನು ಹೇಳುತ್ತದೆ. ಎಲ್ಲಿ ಹೆಣ್ಣು ಮಕ್ಕಳು ಕೆಲಸ ಕಾರ್ಯಗಳನ್ನೆಲ್ಲ ಬಿಟ್ಟು ಆಣೆಕಲ್ಲು ಆಡುತ್ತ ಸಮಯ ಕಳೆದುಬಿಡುವರೊ ಎಂಬ ಆತಂಕದಿಂದ ಪುರುಷ ಮನಸ್ಸು ಈ ರೀತಿಯ ನಂಬಿಕೆಯನ್ನು ಹುಟ್ಟು ಹಾಕಿರಬೇಕು. ಟೋಪಿ ಧರಿಸಿದರೆ ದವಸಧಾನ್ಯಗಳು ತುಟ್ಟಿ(ದುಬಾರಿ)ಯಾಗುತ್ತವೆ ಎಂಬ ನಂಬಿಕೆಯೊಂದಿದೆ. ಟೋಪಿ ಧರಿಸುವುದು ಅಥವಾ ತಲೆಗೆ ರುಮಾಲು ಸುತ್ತುವುದು ಇಲ್ಲವೆ ತಲೆಗೆ ವಸ್ತ್ರವನ್ನು ಕಟ್ಟುವುದು ಒಂದು ಬಗೆಯ ಶ್ರೇಷ್ಠತೆಯ ಸಂಕೇತವೇ ಆಗಿದೆ. ತಲೆಗೆ ಟೋಪಿ ಹಾಕಿಕೊಳ್ಳುವುದು ಬಹುಹಿಂದಿನಿಂದಲೂ ರೂಢಿಸಿಕೊಂಡು ಬಂದವರು ಪುರುಷರೇ ಆಗಿದ್ದಾರೆ. ಹಾಗಾಗಿ ಈ ತಲೆಗೆ ಟೋಪಿ (ರುಮಾಲು ವಸ್ತ್ರ) ಧರಿಸುವುದು ಪುರುಷರಿಗಷ್ಟೆ ಸೀಮಿತವಾಗಿರಬೇಕೆಂಬ ಆಶಯದ ಹಿನ್ನೆಲೆಯಲ್ಲಿ ಹೆಣ್ಣು ಮಕ್ಕಳು ಟೋಪಿ ಧರಿಸಿದರೆ ದವಸಧಾನ್ಯಗಳ ಬೆಲೆ ಏರುತ್ತದೆಂಬ ನಂಬಿಕೆ ಹುಟ್ಟುಹಾಕಿರಬೇಕು. ಹಾಗಾಗಿ ಈ ನಂಬಿಕೆ ಕೂಡಾ ಪುರುಷ ಒಪ್ಪಿತ ಮೌಲ್ಯವೇ ಆಗಿದ್ದು, ಸ್ತ್ರೀಯರ ನಡವಳಿಕೆಯ ಮೇಲೆ ನಿಯಂತ್ರಣವನ್ನು ಹೇರಿರುವಂತೆ ಕಂಡು ಬರುತ್ತದೆ. ಮಳೆಗಳು ಏಕೆ ಹೋಗುತ್ತವೆ ಎಂಬುದಕ್ಕೆ ಜನಪದರಲ್ಲಿರುವ ಒಂದು ನಂಬಿಕೆ ಈ ರೀತಿ ಇದೆ.

ಮಳೆ ಹೋಯ್ತೆಂದು ಮಳೆರಾಯನ ಬಯ್ಯದಿರೆ

ಸಾವಿರ ಹೊನ್ನಿನ ಸರಗಂಟಿ ತಕ್ಕೊಂಡು

ಸಾಲಕೆ ಹೋಗ್ಯವನೆ ಮಳೆರಾಯ

ಮಳೆಗಳು ಯಾಕೆ ಹೋದವು ಮಳೆಗಳು

ಲೋಕ ಸಾಕಲಾರದಕೆ ಹೋದವು

ಪುಣ್ಯವಿಲ್ಲದ ನಾರಿ ಪುರುಷನ ಬೈದರೆ

ಅನ್ಯಾಯಕೆ ಮಳೆ ಹೋದವು'

ಮಳೆ ಏಕೆ ಹೋಗುತ್ತವೆ ಎನ್ನುವುದಕ್ಕೆ ಜನನಂಬಿರುವ ಕಾರಣಗಳಲ್ಲಿ ಇದು ಒಂದು. ಲೋಕವನ್ನು ಸಾಕಲಾರದೆ ಮಳೆ ಹೋಗುತ್ತವೆ. 'ಪುಣ್ಯವಿಲ್ಲದ ನಾರಿ ಪುರುಷನ ಬೈದರೆ ಆ ಅನ್ಯಾಯಕ್ಕೆ ಮಳೆ ಹೋದವು' ಎಂಬ ನಂಬಿಕೆ. ಅಂದರೆ ಇದು ತಿಳಿಸುವ ಒಳಾರ್ಥವೇನೆಂದರೆ ಪುರುಷ ನಾರಿಯನ್ನು ಬೈಯ್ಯುವುದು ಸಹಜವೆನಿಸುತ್ತದೆ ಎಂದು ಭಾವಿಸಿದಂತಿದೆ. ಏಕೆಂದರೆ ಆ ಬಗೆಗೆ ಇಲ್ಲಿ ಪ್ರಸ್ತಾಪವಿಲ್ಲ. ನಾರಿ ಪುರುಷನನ್ನು ಬೈಯ್ಯುವುದು ಅಸಹಜವಾಗಿ ಕಂಡು ಬರುತ್ತದೆ. ಅಲ್ಲದೆ ಅದು ಅನ್ಯಾಯವಾಗಿ ಕೂಡ ಕಾಣುತ್ತದೆ. ಪರೋಕ್ಷವಾಗಿ ಇದು ನಾರಿ ಪುರುಷನನ್ನು ಬೈಯಬಾರದು ಎಂಬ ಮೌಲ್ಯವನ್ನು ಪ್ರತಿಪಾದಿಸುತ್ತದೆ.

ಅದೇ ರೀತಿಯಾಗಿ ಉಡದಾರ ಇಲ್ಲದವರು ರಾಶಿ ಕಟ್ಟಬಾರದು ಎಂಬ ನಂಬಿಕೆ ಇದೆ. ಇದು ಕೂಡ ಕೃಷಿಸಮುದಾಯ ಮಹಿಳೆಯನ್ನು ನಿರ್ಲಕ್ಷಿಸಿದಂತೆ ಕಂಡುಬರುತ್ತದೆ. ಉಡದಾರ ಕಟ್ಟಿಕೊಳ್ಳುವರು ಗಂಡುಮಕ್ಕಳು. ಉಡದಾರ ಹಾಕದೆ ಇರೋರೆಂದರೆ ಹೆಣ್ಣುಮಕ್ಕಳು. ಇಲ್ಲಿ ಉಡದಾರ ಇಲ್ಲದವರು ರಾಶಿ ಕಟ್ಟಬಾರದು ಎಂದರೆ ಹೆಣ್ಣುಮಕ್ಕಳನ್ನು ರಾಶಿಕಟ್ಟುವ ಕ್ರಿಯೆಯಿಂದ ದೂರವಿರಿಸಿರುವುದು ಕಂಡು ಬರುತ್ತದೆ. ಬೆಳೆ ಬೆಳೆಯುವ ಎಲ್ಲಾ ಕ್ರಿಯೆಯಲ್ಲಿ ಪಾಲ್ಗೊಳ್ಳುವ ಹೆಣ್ಣನ್ನು ಬೆಳೆಬಂದ ನಂತರ ದೂರವಿಡುವ ತಂತ್ರವಿದಾಗಿದೆ.

### ವೈಜ್ಞಾನಿಕ ಗ್ರಹಿಕಾ ಕ್ರಮ

ಒಂದೆಡೆ ಅದ್ಭುತಶಕ್ತಿಯಂತೆ ದೈವದಂತೆ ಕಂಡು ಹೆಣ್ಣು ಮತ್ತೊಂದೆಡೆ ನಿಯಂತ್ರಣಕ್ಕೊಳ್ಳಪಟ್ಟಂತೆ ಕಾಣುವ ಈ ವೈರುಧ್ಯಗಳನ್ನು ಕೃಷಿಸಂಸ್ಕೃತಿಯಲ್ಲಿ ಕಾಣುತ್ತೇವೆ. ಬಹುಶಃ ಇದು ಮಹಿಳೆಯ ಸ್ಥಾನಮಾನ ಮತ್ತು ಅವಳ ಬದುಕಿನಲ್ಲಾದ ಸ್ಥಿತ್ಯಂತರವನ್ನು ತಿಳಿಸುತ್ತದೆ. ಮಾತೃಪ್ರಧಾನ ಕುಟುಂಬಗಳು, ಪಿತೃಪ್ರಧಾನ ಕುಟುಂಬಗಳಾಗಿ ರೂಪಾಂತರಗೊಂಡ ಹಂತದಲ್ಲಿ ಸ್ತ್ರೀಗೆ ಇದ್ದ ಅಧಿಕಾರಯುತವಾದ ಸ್ಥಾನಮಾನಗಳೆಲ್ಲವು ಪುರುಷನಿಗೆ ಹಸ್ತಾಂತರಗೊಂಡಿವೆ. ಆ ಕಾರಣಕ್ಕಾಗಿಯೇ ಕೃಷಿಯ ಆರಂಭಿಕ ದಿನಮಾನಗಳಲ್ಲಿ ದೈವೋಪಾದಿಯಾಗಿ ಗುರುತಿಸಲ್ಪಡುತ್ತಿದ್ದ ಹೆಣ್ಣು ಕ್ರಮೇಣ ಪುರುಷನ ಕೆಲವಾರು

ನಿಯಂತ್ರಣಕ್ಕೆ ಒಳಪಟ್ಟಿರುವುದರಲ್ಲಿ ಸಂದೇಹವಿಲ್ಲ. ಏಕೆಂದರೆ ವಾಸ್ತವದ ವಸ್ತುಸ್ಥಿತಿ ಇರುವುದೇ ಹಾಗಿದೆ.

ಕೃಷಿಕಾರ್ಯ ಅಥವಾ ಬೆಳೆ ಸಾಗುವಳಿ ಭಾರತದಲ್ಲಿ ಕೊನೆಯ ಪಕ್ಷ ೫೦೦೦ ವರ್ಷಗಳ ಹಿಂದೆಯೇ, ಅಂದರೆ ಸುಮಾರು ಕ್ರಿ.ಪೂ.೩೦೦೦ ದಷ್ಟು ಹಿಂದೆಯೇ ಪ್ರಾರಂಭವಾಯಿತೆಂದು ಹೇಳಲಾಗುತ್ತದೆ. ಆದರೂ ಯುರೋಪಿನಲ್ಲಿ ಹಾಗೂ ಅಮೇರಿಕದಲ್ಲಿ ಅಥವಾ ಚೀನಾದಲ್ಲಿಯೇ ಆಗಲಿ ಸಾಧಿಸಿರುವ ಬೆಳೆಗಳ ಇಳುವರಿಗೆ ಹೋಲಿಸಿದಲ್ಲಿ ಭಾರತದಲ್ಲಿ ಇಳುವರಿ ತೀರಕಡಿಮೆ ಎಂದೇ ಹೇಳಬೇಕು. ಇದಕ್ಕೆ ನಾವು ನಾಚುವುದೂ ಉಂಟು. ಆದರೆ ಜಗತ್ತಿನ ಹೆಚ್ಚಿನ ದೇಶಗಳಲ್ಲಿ ಕೃಷಿಕಾರ್ಯ ಭಾರತದ ಕೃಷಿಕಾರ್ಯದ ಅರ್ಧದಷ್ಟು ಕೂಡ ಪ್ರಾಚೀನವಾದುದಲ್ಲ. ಚೀನಾವಷ್ಟೇ ಇದಕ್ಕೆ ಅಪವಾದವಿರಬಹುದು. ನಮ್ಮ ಕೃಷಿ ಅನೇಕ ಶತಮಾನಗಳಿಂದ ತೀವ್ರತರ ಸಾಗುವಳಿ ನಡೆಸಿಕೊಂಡು ಬಂದಿದೆ. ಆದರೂ ಅದು ಭೂಮಿಯನ್ನು ಮರಳುಗಾಡನ್ನಾಗಿ ಪರಿವರ್ತಿಸದಿರುವುದು ಗಮನಾರ್ಹ ಅಂಶ. ಅದೂ ಕೃಷಿಕಾರ್ಯವನ್ನು ಬೇಸಾಯ ಮಾಡಲು ಕಷ್ಟವಾದಂಥ ಪ್ರದೇಶಗಳಲ್ಲೇ ಹೆಚ್ಚಾಗಿ ನಡೆಸಿಕೊಂಡು ಬಂದಿರುವಾಗ ಅದೇ ಚೀನಾದಲ್ಲಿ ಯಾವತ್ತೂ ಕೃಷಿಕಾರ್ಯವನ್ನು ಹೆಚ್ಚು ಅನುಕೂಲಕರ ಪ್ರದೇಶಗಳಲ್ಲೇ ನೀರಾವರಿ ಸೌಕರ್ಯವಿರುವ ಪ್ರದೇಶಗಳಲ್ಲೇ ನಡೆಸಿಕೊಂಡು ಬರಲಾಗುತ್ತಿದೆ. ಭಾರತದಲ್ಲಿ ನಡೆಸಿಕೊಂಡು ಬರಲಾಗುತ್ತಿದ್ದರೆ, ಚೀನಾದಲ್ಲಿ ಇದು ಶೇ.೧೦ಕ್ಕೂ ಕಡಿಮೆ. ಅಮೇರಿಕಾದಲ್ಲಿ ಶೇ.೨೨ರಷ್ಟು ಅಷ್ಟೆ. ಈ ವಿಷಯದಲ್ಲಿ ಬಾಂಗ್ಲಾದೇಶವಷ್ಟೆ ಭಾರತವನ್ನು ಮೀರಿಸುತ್ತದೆ. ಅಲ್ಲಿ ನಾಡಿನ ಭೌಗೋಳಿಕ ಪ್ರದೇಶದ ಮೂರನೇ ಎರಡಕ್ಕೂ ಹೆಚ್ಚು ಭಾಗದಲ್ಲಿ ಸಾಗುವಳಿ ನಡೆಯುತ್ತಿದೆ. ಆದರೆ ಬಾಂಗ್ಲಾದೇಶವು ಎಷ್ಟೇ ಆಗಲಿ ಭಾರತೀಯ ಉಪಖಂಡದ ಒಂದು ಭಾಗವಷ್ಟೆ.

ಇದಕ್ಕೂ ಹೆಚ್ಚಿನ ಗಮನ ಸೆಳೆಯುವ ಅಂಶವೆಂದರೆ ಭಾರತದಲ್ಲಿ ಕೃಷಿಕಾರ್ಯ ಮಳೆ ಬೀಳುವ ಪ್ರದೇಶಗಳಲ್ಲಷ್ಟೆ ಹೆಚ್ಚಾಗಿ ನಡೆಯುತ್ತಿರುವುದು. ನೀರಾವರಿ ಸೌಕರ್ಯವನ್ನು ಬಳಸಿಕೊಂಡು ನಡೆಸುವ ಕೃಷಿಕಾರ್ಯ ಈಗಲೂ ಕೇವಲ ಶೇ.೩೭ರಷ್ಟು ಭಾಗದಲ್ಲಷ್ಟೆ ವ್ಯಾಪಿಸಿದೆ. ೧೯೭೦-೭೧ರಷ್ಟು ಈಚೆಗಿನ ಕಾಲದಲ್ಲೂ ಈ ಪ್ರಮಾಣ (ಬೆಳೆ ಬಿತ್ತಿದ ನಿವ್ವಳ ಕ್ಷೇತ್ರಕ್ಕೆ ಹೋಲಿಸಿದಂತೆ ನಿವ್ವಳ ನೀರಾವರಿ ಕೃಷಿ ಪ್ರಮಾಣವು) ಶೇ.೨೨ರಷ್ಟು ಅಷ್ಟೇ ಆಗಿದ್ದಿತು. ೨೦ನೆಯ ಶತಮಾನದ ಕೊನೆಯ ದಶಕದಲ್ಲೂ ಒಟ್ಟು ಕೃಷಿ ಉತ್ಪನ್ನದ ಶೇ.೫೦ಕ್ಕೂ ಕಡಿಮೆ ಇಲ್ಲದಷ್ಟು ಉತ್ಪನ್ನ ಅರೆಶುಷ್ಕ ಪ್ರದೇಶಗಳಲ್ಲಿನ ಮಳೆ ಆಧಾರಿತ ಕೃಷಿಯೇ ಒದಗಿಸುತ್ತಿದ್ದಿತು. ಸುಮಾರು ೫೦ ಶತಮಾನಗಳಷ್ಟು ದೀರ್ಘ ಸಾಗುವಳಿಯ ಇತಿಹಾಸ ಹೊಂದಿದ್ದರೂ ಭಾರತದಲ್ಲಿ ಕೃಷಿಕಾರ್ಯವು ಇಂದಿಗೂ ಸುಸ್ಥಿರವೆಂದು, ಚೇತರಿಕೆ ಉಳ್ಳದ್ದೆಂದು ಸಾಧಿಸಿಕೊಂಡು ಬಂದಿರುವುದು ಜನಸಂಖ್ಯೆಯ ಶೇ.೭೦ರಷ್ಟು ಭಾಗದವರಿಗೆ ಜೀವನೋಪಾಯ ಒದಗಿಸಿಕೊಂಡು ಬಂದಿರುವುದು, ಶತಕೋಟಿಯಷ್ಟು ಜನರಿಗೆ ಅನ್ನಾಹಾರ ಒದಗಿಸುತ್ತಿರುವುದು,

ನಿಜಕ್ಕೂ ಗಮನಾರ್ಹವೇ ಸರಿ. ನಿಜ ಹಿಂದೆ ಕ್ಷಾಮಡಾಮರಗಳೂ ಇದ್ದವು. ಮತ್ತು ಈಗಲೂ ಜಲಾಭಾವ ಅನಾವೃಷ್ಟಿಗಳು ಕಾಡುತ್ತಿವೆ. ಆದರೆ ಅಮರ್ತ್ಯಸೇನ್‌ರವರು ತೋರಿಸಿಕೊಟ್ಟಿರುವಂತೆ, ಗತಕಾಲದಲ್ಲಿ ಕ್ಷಾಮಡಾಮರಗಳು ಆಹಾರ ಸರಬರಾಜಿನ ಅಭಾವದಿಂದ ಅಷ್ಟಾಗಿ ಆಗಲಿಲ್ಲ. ಆದರೆ ಅವ್ಯವಸ್ಥೆ ಹಾಗೂ ಸರಕಾರಿ ಅನಾದರಗಳ ಕಾರಣದಿಂದಾಗಿ ಆದವು. ಹಾಗಾಗಿಯೂ ನಮ್ಮ ಪ್ರಜಾಸತ್ತೆಯ ಸ್ತುತ್ಯಾರ್ಹ ಕಾರಣದಿಂದಾಗಿ ಜಲಾಭಾವದ ಫಲವಾಗಿ ಉಂಟಾಗುವ ಉಪವಾಸ-ಸಾವುಗಳು ಕಣ್ಮರೆಯಾಗಿವೆ ಅಥವಾ ಕೊನೆಯ ಪಕ್ಷ ತುಂಬ ಅಪರೂಪವಾಗಿವೆ ಎಂದೇ ಹೇಳಬೇಕು.

ಭಾರತದಲ್ಲಿ ಮಳೆ ಆಧಾರಿತ ಕೃಷಿಯು ತನ್ನ ವ್ಯವಸ್ಥೆಯಲ್ಲಿ ಇಂತಹ ಪರಿಸರ ಸಮತೋಲನವನ್ನು ಸಾಧಿಸುವುದು ಹೇಗೆ ಸಾಧ್ಯವಾಯಿತು? ಹಿಂದಿನಿಂದ ಬಂದ ಅಭ್ಯಾಸಗಳನ್ನು ಅನುಷ್ಠಾನಕ್ಕೆ ತರುವುದರ ಮೂಲಕ, ಬೆಳೆಸುವುದರ ಮೂಲಕ ಅದು ಅನೇಕ ಶತಮಾನಗಳಿಂದ ವಿಕಾಸಗೊಂಡು ಬಂದಿತು. ಅದು ಬಲವಾಗಿ ಬೇರೂರಿದ ಜನರ ಪರಂಪರೆಯ ಆಚಾರ ಮತ್ತು ಸಂಸ್ಕೃತಿಗಳ ಒಂದು ಭಾಗವಾಗಿ ಬೆಳೆಯಿತು. ಅನೇಕ ಶತಮಾನಗಳಿಂದ ವರ್ಷವರ್ಷವೂ ಸಾಗುವಳಿ ಮಾಡಿಕೊಂಡು ಬಂದರೂ ಮಣ್ಣಿನ ಉತ್ಪಾದಕತೆಯನ್ನು ಉಳಿಸಿಕೊಂಡು ಬರುವುದು. ವಿಪತ್ಕಾಲಗಳಲ್ಲೂ ಜನಜಾನುವಾರಗಳಿಗೆ ಜೀವದಿಂದಿದ್ದು ಕೊಂಡಿರಲು ಸೌಲಭ್ಯ ಮಾಡಿಕೊಡುವುದ; ಯುಗಯುಗಾಂತರಗಳ ಸುಧೀರ್ಘ ಕಾಲಗಳವರೆಗೆ ಕೃಷಿಯನ್ನೇ ಚೈತನ್ಯ ಪೂರ್ಣವಾಗಿ ತಾಕತ್ತುಉಳ್ಳದ್ದನ್ನಾಗಿ ಮಾಡುವುದು. ಇದೇ ಕೃಷಿ ಅನುಸರಿಸಿದ ವ್ಯೂಹೋಪಾಯಗಳ ಮುಖ್ಯ ಅಂಶವಾಗಿದ್ದಿತು. ನಿಜ, ಹೀಗೆ ಹೊಂದಿಕೊಂಡು ಹೋಗುವ ವರ್ತನೆಯ ಗುರಿ ಬೆಳವಣಿಗೆಯೇ ಅಷ್ಟಾಗಿ ಆಗಿರಲಿಲ್ಲ. ಏಕೆಂದರೆ ಬೆಳವಣಿಗೆಯು ಈಚೆಗಿನ ಗುರಿಯಾಗಿದೆ. ವಿದ್ಯಮಾನವಾಗಿದೆ. ಈ ಬೆಳೆವಣಿಗೆ ಹಾಗೂ ಅದರ ಪ್ರಭಾವ ಪರಿಣಾಮಗಳ ಪ್ರಶ್ನೆಯನ್ನು ನಾವು ಮುಂದೆ ಎತ್ತಿಕೊಳ್ಳೋಣ.

ಮೊದಲು ಪ್ರಕೃತಿಗೂ ಶುಷ್ಕಭೂಮಿಗಳಲ್ಲಿ ವಾಸಿಸುವ ಜನಸಮುದಾಯಗಳಿಗೂ ನಡುವಿನ ನಿರಂತರ ಕ್ರಿಯೆ ಪ್ರತಿಕ್ರಿಯೆಗಳ ಪರಿಣಾಮಗಳ ಶತಶತಮಾನಗಳಿಂದ ವಿಕಾಸಗೊಂಡು ಬಂದಿರುವ ಪರಿಸರ ವ್ಯವಸ್ಥೆಯನ್ನು ನಾವು ಅರ್ಥಮಾಡಿಕೊಳ್ಳಬೇಕು. ಅನಂತರವಷ್ಟೇ ಬೆಳವಣಿಗೆಯು ಪರಿಸರ ವ್ಯವಸ್ಥೆಯು ಮೇಲೆ ಎಂತಹ ಪರಿಣಾಮ ಉಂಟುಮಾಡಬಲ್ಲುದು ಎಂಬುದನ್ನು ತಿಳಿದುಕೊಳ್ಳಲು ಸಾಧ್ಯ ಆಗಷ್ಟೆ ನಾವು ವರ್ತನೆಯ ಒಂದು ಸರಿ ಹೊಂದಬಹುದಾದಂಥ ವಿನ್ಯಾಸವನ್ನು ಸ್ಥಿರ ಅಭಿವರ್ಧನೆ ಸಾಧಿಸಬಲ್ಲಂಥ ವಿನ್ಯಾಸವನ್ನು ವಿಕಾಸಗೊಳಿಸಲು ಸಾಧ್ಯವಾಗುತ್ತದೆ. ಹ್ರಸ್ವಕಾಲಿಕ ಗಳಿಕೆಗಳ ಸಲುವಾಗಿ ಮೂಲಪರಿಸರ ವ್ಯವಸ್ಥೆಯನ್ನೇ ಭಂಗಗೊಳಿಸುವಂಥ, ನಾಶಗೊಳಿಸುವಂಥ ಯಾವುದೇ ಅಭಿವರ್ಧನೆಯೂ ಸ್ಥಿರವಾಗಿರಲಾರದು, ಉಳಿಯಲಾರದು. ಶತಶತಮಾನಗಳಿಂದ ಉಪಯೋಗಿಸುತ್ತ

ಬಂದರೂ ಭೂಮಿಯು ತನ್ನ ಉತ್ಪಾದಕತೆಯನ್ನು ಉಳಿಸಿಕೊಂಡೇ ಇರುವಂತೆ ಮೊದಲು ಮಣ್ಣಿನ ಸುಸ್ಥಿರ ಬಳಕೆಯ ಒಂದು ಸಂಕೀರ್ಣ ಹಾಗೂ ಕುಶಲ ವ್ಯೂಹೋಪಾಯವನ್ನು ಹಿಂದೆ ವಿಕಾಸಗೊಳಿಸಲಾಗಿದ್ದಿತು. ಅದು ಸರದಿ ಉಳುಮೆ, ಬೆಳೆ–ವೈವಿಧ್ಯೀಕರಣ ಹಾಗೂ ಮಣ್ಣಿನ ಸಾರ ಪುನಃಪೂರಣ ಮಾಡುವ ಜೈವಿಕ ಗೊಬ್ಬರ ಬಳಕೆ, ಇವುಗಳ ಮೇಲೆ ಆಧರಿಸಿದ್ದಿತು. ಮಣ್ಣು ಅಷ್ಟು ಫಲವತ್ತಾಗಿರದಿದ್ದ ಕಡೆಗಳಲ್ಲಿ ಹಿಡುವಳಿಯ ವಿವಿಧ ಭಾಗಗಳಲ್ಲಿ ಸರದಿಯಲ್ಲಿ ವರ್ಷ ಬಿಟ್ಟು ವರ್ಷ ಉಳುಮೆ ಮಾಡುವ ವಿಧಾನವನ್ನು ಅನುಸರಿಸಲಾಗುತ್ತಿತ್ತು. ಹಾಗಾಗಿ ಒಂದೊಂದು ಭಾಗವೂ ಕೊನೆಯ ಪಕ್ಷ ಎರಡು ಮೂರು ವರ್ಷಗಳಲ್ಲೊಮ್ಮೆ ಉಳುಮೆಯಿಂದ ರಜೆ ಅನುಭವಿಸುತ್ತಿದ್ದಿತು. ಇದರಿಂದ ಮಣ್ಣಿನ ಫಲವತ್ತತೆಯನ್ನು ಉಳಿಸಿಕೊಳ್ಳಲು ಸಹಾಯವಾಗುತ್ತಿತ್ತು. ಎಲ್ಲಿ ಭೂಮಿ ಹೆಚ್ಚು ಫಲವತ್ತಾಗಿದ್ದಿತೋ ಅಲ್ಲಿ ಋತುಗಳಿಗೆ ಅನುಗುಣವಾಗಿ ವ್ಯವಸಾಯ ಮಾಡಲಾಗುತ್ತಿದ್ದಿತು. ಇದರ ಜೊತೆಗೆ ಪರ್ಯಾಯ ಬೆಳೆ ಪದ್ಧತಿಯನ್ನು ವಿವೇಕಯುತವಾಗಿ ಆಯ್ಕೆ ಮಾಡಿಕೊಳ್ಳಲಾಗುತ್ತಿತ್ತು, ಬೇಸಿಗೆಯ ಮಳೆಯಲ್ಲಿ ಭತ್ತ, ಜೋಳಗಳಂಥ ಧಾನ್ಯಗಳನ್ನು ಬೆಳೆಯಲಾಗುತ್ತಿದ್ದಿತು. ಇವುಗಳ ಜೊತೆಗೆ ಮಧ್ಯೆ ಸಾಲುಗಳಲ್ಲಿ ದ್ವಿದಳ ಧಾನ್ಯಗಳ ಬೆಳೆಗಳನ್ನು ಬೆಳೆಯಲಾಗುತ್ತಿತ್ತು.

ಇದಾದನಂತರ ಆ ಪ್ರದೇಶಗಳಲ್ಲಿ ಗೋಧಿ, ಕಡಲೆಯಂಥ ಚಳಿಗಾಲದ ಬೆಳೆಗಳನ್ನು ಬೆಳೆಯಲಾಗುತ್ತಿದ್ದಿತ್ತು. ಇವು ಹೆಚ್ಚು ಗಡಸಾಗಿದ್ದು ಮಳೆಗಾಲದ ನಂತರ ಮಣ್ಣಿನ ಮೇಲ್ಮೈನ ಮೇಲೆ ಉಳಿದಿದ್ದ ತೇವವನ್ನೇ ಬಳಸಿಕೊಂಡು ಬೆಳೆಯುತ್ತಿದ್ದವು. ತೊಗರಿ ಹಾಗೂ ಕಡಲೆಗಳಂಥ ದ್ವಿದಳ ಧಾನ್ಯಗಳು ಸಾರಜನಕವನ್ನು (ನೈಟ್ರೋಜನ್) ಮಣ್ಣಿಗೆ ಒದಗಿಸುತ್ತಿದ್ದವು ಅನ್ನುವುದನ್ನು ರೈತರು ತಿಳಿದಿಲ್ಲದೆ ಇರಬಹುದು. ಆದರೆ ಉಳಿದ ಬೆಳೆಗಳಿಂದ ಖಾಲಿ ಮಾಡಲಾದ ಮಣ್ಣಿನ ಫಲವತ್ತತೆಯನ್ನು ಅವು ತುಂಬಿಕೊಡುತ್ತಿದ್ದವು. ಅನ್ನುವುದನ್ನಂತೂ ಅವರು ತಿಳಿದಿದ್ದರು. ಬೇಳೆಗಳೂ, ಧಾನ್ಯಗಳೂ ಪರಸ್ಪರ ಪೂರಕವಾಗಿದ್ದವೆಂಬುದನ್ನು ಅವರು ತಿಳಿದಿದ್ದರು. ಸಮೃದ್ಧ ಸುಗ್ಗಿ ಖಚಿತವಿಲ್ಲದಿದ್ದಾಗ ಬದುಕುಳಿಯುವ ಹಾಗೂ ಮಣ್ಣಿನ ಫಲವತ್ತತೆ ಬರಿದಾಗುವುದನ್ನು ತಪ್ಪಿಸಲು ವ್ಯೂಹೋಪಾಯವಾಗಿ ಅವರು ಬೆಳೆ ವೈವಿಧ್ಯೀಕರಣವನ್ನು ಪಟ್ಟುಹಿಡಿದು ಅನುಸರಿಸುತ್ತಿದ್ದರು. ಈ ಪ್ರಕ್ರಿಯೆಯಲ್ಲಿ ಅವರು ಅನೇಕ ಮಾದರಿಯ ಕಾಳು, ಬೆಳೆಗಳನ್ನು ಪ್ರೀತಿಯಿಂದ ಬೆಳೆಸಿ ಉಳಿಸುತ್ತಿದ್ದರು. ಇಂಥ ವೈವಿಧ್ಯತೆ ವಿಭಿನ್ನತೆಗಳನ್ನು ಬೇರಾವ ದೇಶದಲ್ಲೂ ಸುಲಭವಾಗಿ ಕಾಣಲಾಗದು. ದಾನ ನೀಡುವಾಗ ಬೇರೆಲ್ಲ ವಸ್ತುಗಳ ಜೊತೆಗೆ ನವಧಾನ್ಯಗಳು ಇರಲೇಬೇಕು. ಇಲ್ಲದಿದ್ದರೆ ಪುಣ್ಯ ಅಥವಾ ಶ್ರೇಷ್ಠತೆ ಲಭಿಸುವುದಿಲ್ಲ ಎಂದು ಹಿಂದೂ ಮತಧರ್ಮ ಕ್ರಿಯೆಗಳು ಒತ್ತಿ ಹೇಳುತ್ತವೆ. ರೈತರು ಹೀಗೆ ತುಂಬ ವೈವಿಧ್ಯಮಯವಾದ ಬೆಳೆಗಳನ್ನು ಬೆಳೆದಾಗ ಜನರ ಆಹಾರ ಸೇವನೆಯೂ ಅಷ್ಟೇ ವೈವಿಧ್ಯಪೂರ್ಣ ವಸ್ತುಗಳಿಂದ ಕೂಡಿದ್ದಿತು. ಅವು ಉತ್ತಮ ಆರೋಗ್ಯಕ್ಕೆ ಅವಶ್ಯವಾದಷ್ಟು ಪ್ರಮಾಣಗಳಲ್ಲಿ ಕ್ಯಾಲೋರಿಗಳ, ಪ್ರೋಟೀನ್‌ಗಳ,

ಖನಿಜಗಳ ಹಾಗೂ ವಿಟಮಿನ್‌ಗಳ ಪೌಷ್ಟಿಕ ಸಮತೋಲ ಒದಗಿಸುತ್ತಿದ್ದವು. ಭೂಮಿಯ ಫಲವತ್ತತೆಯನ್ನು ಕಾಪಾಡಿಕೊಳ್ಳುವುದರಲ್ಲಿ ಗೋವುಗಳ ಸಾಕಣೆಯ ಒಂದು ಮುಖ್ಯಾಂಶವಾಗಿದ್ದತು. ಅವು ಪ್ರಾಸಂಗಿಕವಾಗಿ ರೈತರಿಗೆ ಹಾಲಿನರೂಪದಲ್ಲಿ ಪೌಷ್ಟಿಕಆಹಾರವನ್ನು ಒದಗಿಸುತ್ತಿದ್ದವು. ಕೊಟ್ಟಿಗೆಗಳಿಂದಷ್ಟೆ ಅಲ್ಲ. ರಸ್ತೆಗಳಿಂದಲೂ, ಗೋಮಾಳ ಹುಲ್ಲುಗಾವಲುಗಳಿಂದಲೂ, ಹೊಲಗದ್ದೆಗಳಿಂದಲೂ ದನಗಳ ಸಗಣಿಯನ್ನು ಸಂಗ್ರಹಿಸಿ ಗುಂಡಿಗಳಲ್ಲಿ ತುಂಬಿಡಲಾಗುತ್ತಿತ್ತು. ಮಣ್ಣಿನ ಪೌಷ್ಟಿಕಾಂಶಗಳು ಸಮೃದ್ಧವಾಗಿರುವಂತೆ ಹೊಂಗೆಯಂಥ ಮರದಲೆಗಳನ್ನು ಜೈವಿಕ ಕಸಕಡ್ಡಿಗಳನ್ನೂ ತೋಟಗಳಿಂದ ಸಂಗ್ರಹಿಸಿ ಸಗಣಿಯೊಂದಿಗೆ ಬೆರೆಸಿಡಲಾಗುತ್ತಿತ್ತು. ವರ್ಷವರ್ಷಗಳಿಂದ ಎಚ್ಚರಿಕೆಯಿಂದ ಆಯ್ದು ಅಂಥ ಮರಗಳನ್ನು ಹೊಲಗದ್ದೆಗಳ ಅಂಚುಗಳಲ್ಲೂ ಊರೊಟ್ಟಿನ ಜಮೀನುಗಳಲ್ಲೂ ಬೆಳೆಯಲಾಗುತ್ತಿತ್ತು. ಹೊಂಗೆ ಹಾಗೂ ಬೇವುಗಳಂಥ ಮರಗಳು ಅವರಿಗೆ ಎಣ್ಣೆ ಬೀಜಗಳನ್ನೂ ಒದಗಿಸುತ್ತಿದ್ದವು. ಎಣ್ಣೆ ತೆಗೆದ ನಂತರ ಉಳಿದ ಹಿಂಡಿಗಳನ್ನು ಮತ್ತೆ ತಿನ್ನಬಲ್ಲಂಥವಾದರೆ ದನಕರುಗಳಿಗೆ ಮೇವಾಗಿಯೋ ಇಲ್ಲವೇ ಹೊಲಗಳಿಗೆ ಗೊಬ್ಬರವಾಗಿಯೋ ಬಳಸಲಾಗುತ್ತಿತ್ತು. ಈ ರೀತಿ ತಯಾರಾದ ಮಿಶ್ರ ಗೊಬ್ಬರವನ್ನು ಮತ್ತೆ ಬೀಜಬಿತ್ತುವ ಮುನ್ನ ಜಮೀನುಗಳ ಮೇಲೆ ಎಚ್ಚರಿಕೆಯಿಂದ ಹರಡಿ ಆಮೇಲೆ ಮಣ್ಣಿನ ಒಳಕ್ಕೆ ಹೋಗುವಂತೆ ನೇಗಿಲು ಹೊಡೆಯಲಾಗುತ್ತಿತ್ತು.

ಗಂಜಲವನ್ನು ವ್ಯರ್ಥಮಾಡುತ್ತಿರಲಿಲ್ಲ. ಅದನ್ನು ಕೊಟ್ಟಿಗೆಗಳಲ್ಲಿ ಅಚ್ಚುಕಟ್ಟಾಗಿ ಸಂಗ್ರಹಿಸಿ ಅನಂತರ ಹತ್ತಿರದಲ್ಲೇ ಇದ್ದ ಬೆರಕೆಗೊಬ್ಬರದ ಗುಂಡಿಗಳಿಗೆ ಹರಡಿಬಿಡಲಾಗುತ್ತಿತ್ತು. ಹೊಲವನ್ನು ಎತ್ತುಗಳ ಸಹಾಯದಿಂದ ಅವಶ್ಯವಿದ್ದಷ್ಟು ಆಳದವರೆಗೆಷ್ಟೆ ಬಿದ್ದ ಮಳೆಯ ನೀರನ್ನು ಗರಿಷ್ಠ ಪ್ರಮಾಣದಲ್ಲಿ ಹೀರಿಕೊಳ್ಳಲು ಹಾಗೂ ಮಣ್ಣನ್ನು ಕೃಷಿಯೋಗ್ಯಗೊಳಿಸಲು ಸಾಲುವಷ್ಟು ಆಳದವರೆಗಷ್ಟೆ ಉಳಲಾಗುತ್ತಿದ್ದಿತು. ಮಿಶ್ರಗೊಬ್ಬರದ ಎಲೆ, ಕಡ್ಡಿ ಮೊದಲಾದ ಜೈವಿಕ ಪದಾರ್ಥಗಳ ಮಣ್ಣಿನತೇವವನ್ನು ದೀರ್ಘಕಾಲ ಉಳಿಸಿಕೊಂಡಿರಲು ಸಹಾಯ ಮಾಡುತ್ತಿದ್ದವು. ಹಳ್ಳಿಗರು ಚಿಕ್ಕಮಟ್ಟ ಮೆಲಕು ಪ್ರಾಣಿಗಳನ್ನೂ ವಿಶೇಷವಾಗಿ ಮೇಕೆ, ಕುರಿಗಳನ್ನು ಸಾಕುತ್ತಿದ್ದರು. ಅದನ್ನು ರಾತ್ರಿ ವೇಳೆಗಳಲ್ಲಿ ಹೊಲಗದ್ದೆಗಳಲ್ಲಿ ಕೂಡಿಡಲಾಗುತ್ತಿತ್ತು ಅವು ಹಾಕುತ್ತಿದ್ದ ಹಿಕ್ಕೆಗಳಿಗೆ ಹೆಚ್ಚಿನ ಮಹತ್ವ ನೀಡಲಾಗಿತ್ತು. ಸ್ವಂತದ ಕುರಿ, ಮೇಕೆಗಳು ಇಲ್ಲದಿದ್ದಾಗ ರೈತರು ತಮ್ಮ ಹೊಲಗಳಲ್ಲಿ ಅವನ್ನು ಬಿಡುವಂತೆ ಅಲೆಮಾರಿಗಳನ್ನು ಸಂಚಾರಿ ಪಶುಪಾಲಕರನ್ನೂ ಕೇಳಿಕೊಳ್ಳುತ್ತಿದ್ದರು. ಮತ್ತು ಅದಕ್ಕಾಗಿ ಅವರಿಗೆ ಶುಲ್ಕ ನೀಡುತ್ತಿದ್ದರು. ಹೀಗೆ ರೈತರು ಕೃಷಿಗಾರಿಕೆಯನ್ನು ಅನೇಕ ಪೂರಕ ಅಂಶಗಳನ್ನುಳ್ಳ ಒಂದು ಸಮಗ್ರ ಉದ್ಯಮವನ್ನಾಗಿ ಕಂಡುಕೊಂಡಿದ್ದರು ಮತ್ತು ಒಂದೊಂದು ಅಂಶವನ್ನೂ ಪೂರ್ಣವಾಗಿ ಬಳಸಿಕೊಳ್ಳುತ್ತಿದ್ದರು.

ಕೃಷಿಗಾರಿಕೆಯಲ್ಲಿ ಪರಿಸರ ಸಂರಕ್ಷಣೆಯಲ್ಲಿ ದನಕರುಗಳನ್ನು ಅವಲಂಬಿಸುತ್ತಿದ್ದುದೇ ಹಿಂದೂ ಪರಂಪರೆಯಲ್ಲಿ ಎತ್ತು, ಹಸುಗಳ ಬಗೆಗೆ ಗೌರವ ಹಾಗು ಪೂಜ್ಯಭಾವನೆ ಮೂಡಿರುವುದಕ್ಕೆ ಕಾರಣವೆನ್ನಬಹುದು. ರೀಡಿಂಗ್ ಎಂಬಾತ ವಿನೋದದಿಂದ ಹೀಗೆ ಹೇಳಿದ್ದಾನೆ. ದನದ ಮಾಂಸ ತಿನ್ನುವ ಬ್ರಿಟಿಷರಿಗೆ ಚೆನ್ನಾಗಿ ಸುಟ್ಟ ಒಂದು ದೊಡ್ಡ ದನದಮಾಂಸದ ತುಂಡಿನ ವಿಚಾರ ಮನಸ್ಸಿನಲ್ಲಿ ಹೊಳೆದರೆ ಸಾಕು ನಾಲಿಗೆಯಲ್ಲಿ ನೀರೂರುತ್ತದೆ. ಹಾಗಾಗಿ ಅವರಿಗೆ ಐರೋಪ್ಯ ನಾಗರೀಕತೆಯನ್ನು ಭಾರತದ ಮೇಲೆ ಹೊರಿಸುವ ಯತ್ನದಲ್ಲಿ ಅಡ್ಡಿಬರುತ್ತಿದ್ದ ಅನೇಕ ಹಿಂದೂಧಾರ್ಮಿಕ ಹಾಗೂ ಕಂದಾಚಾರ ಪದ್ಧತಿಗಳ ಮಧ್ಯೆ ಗೋಪೂಜೆ ಅತ್ಯಂತ ಮೂರ್ಖತನದ್ದೆಂದೇ ಕಂಡುಬರುತ್ತಿದ್ದಿತು. (ರೀಡಿಂಗ್ ೧೯೯೦, ೧೮೮) ಭಾರತದಲ್ಲಿ ಹಸುಗಳ ಬಗೆಗೆ ಇರುವ ಪೂಜ್ಯಭಾವನೆಗೆ ಪಾರಂಪರಿಕ ಧಾರ್ಮಿಕನಂಬಿಕೆಯೇ ಮೂಲ ಕಾರಣವೆಂದು ತಪ್ಪಾಗಿ ಭಾವಿಸಲಾಗಿದ್ದಿತು. ಆದರೆ ೧೯೬೬ರಲ್ಲಿ ಕರೆಂಟ್ ಆಂತ್ರಪಾಲಜಿ ಪತ್ರಿಕೆಯು (ಸಂ.೭:೫೧-೯) ಪ್ರಕಟಿಸಿದ "ಭಾರತದ ಪವಿತ್ರ ಪಶುಗಳ ಸಾಂಸ್ಕೃತಿಕ ಪರಿಸರ ವ್ಯವಸ್ಥೆ" ಎಂಬ ಮಾರ್ವಿನ್ ಹ್ಯಾರಿಸ್‌ರ ಪ್ರಬಂಧವು ಈ ಸಮಸ್ಯೆಯ ಕುರಿತು ಬುದ್ದಿಜೀವಿಗಳ ಮಧ್ಯೆ ಹೆಚ್ಚು ಉತ್ತಮ ತಿಳಿವಳಿಕೆ (ಈ ತಿಳಿವಳಿಕೆ ರೈತರ ಮಧ್ಯೆ ಆಗಲೇ ಇದ್ದಿತೆನ್ನಿ) ಮೂಡಿಸಲು ಸಹಕಾರಿಯಾಯಿತು.

ಹ್ಯಾರಿಸ್‌ರು ಈ ಪ್ರಬಂಧವನ್ನು ಕಾರ್ಯಾರ್ಥಿಕ ಮನೋಭಾವದಿಂದ ಬರೆದು. ಜನರಿಗೂ ಜಾನುವಾರುಗಳಿಗೂ ನಡುವೆ ಪ್ರಯೋಜನವಾಗುವಂಥ ಸಹಜೀವನ ಸಂಬಂಧ ಇದ್ದುದೇ ಗೋವಿನ ಬಗೆಗಿನ ಪೂಜ್ಯಭಾವನೆಗೆ ಕಾರಣವೆಂದು ಸ್ಪಷ್ಟಪಡಿಸಿದ್ದರು. ಭಾರತದಲ್ಲಿ ಜನರಿಗೂ ಜಾನುವಾರುಗಳಿಗೂ ನಡುವೆ ಬದುಕುಳಿಯುವ ಪೈಪೋಟಿ ಇದ್ದಿತೆಂದು ಅನೇಕ ಬುದ್ದಿಜೀವಿಗಳ ನಂಬಿಕೆಯನ್ನು ಅಲ್ಲಗಳೆದು ಅವರು ಅಂತಹ ಸ್ಪರ್ಧೆಯ ಪ್ರಶ್ನೆಯೇ ಉದ್ಭವಿಸದೆಂದು ತಿಳಿಸಿದರು. ನಿಜವಾಗಿ ಹೇಳುವುದಾದರೆ ಪ್ರತಿಯೊಂದು ಕೃಷಿಕುಟುಂಬಕ್ಕೂ ತನ್ನದೇ ಎತ್ತುಗಳನ್ನು ಹೊಂದಿರುವ ಅವಶ್ಯಕತೆ ಇದ್ದುದನ್ನು ಪರಿಗಣಿಸಿದರೆ ದನಕರುಗಳ ಸಂಖ್ಯೆಯಲ್ಲಿ ಕೊರತೆ ಇದ್ದಿತೆಂದೇ ಹ್ಯಾರೀಸ್ ತೀರ್ಮಾನಕ್ಕೆ ಬರುತ್ತಾರೆ. ಸಕಾಲದಲ್ಲಿ ಬೀಜಬಿತ್ತಲೊಸುಗೆ ಮಳೆಗಾಲ ಆರಂಭವಾಗುತ್ತಿದ್ದಂತೆಯೇ ಉಳುಮೆಕಾರ್ಯ ಮುಗಿಸಲು ಸುಸ್ಥಿತಿಯಲ್ಲಿದ್ದ ರೈತರು ತಮ್ಮವೇ ಎತ್ತುಗಳನ್ನು ಹೊಂದಿರುವುದಕ್ಕೆ ಆದ್ಯತೆ ನೀಡಿದ್ದರು. ಇತರರಿಂದ ಬಾಡಿಗೆಗೆ ಪಡೆಯುವುದೆಂದರೆ ತಡವಾಗುತ್ತಿತ್ತು. ಎತ್ತುಗಳ ಉಳುವ ಸಾಮರ್ಥ್ಯಕ್ಕೆ ಹೋಲಿಸಿದಲ್ಲಿ ಹೊಲಗಳ ಗಾತ್ರ ಚಿಕ್ಕದಾಗಿದ್ದನ್ನು ಗಮನಕ್ಕೆ ತಂದುಕೊಂಡಲ್ಲಿ ಎತ್ತುಗಳ ಸಂಖ್ಯೆ ಹೆಚ್ಚಿದ್ದಿತೆಂದು ಕಂಡರೂ ಮಳೆಯ ಪ್ರಯೋಜನ ಪಡೆದುಕೊಳ್ಳಲು ಉಳುಮೆ ಹಾಗೂ ಬಿತ್ತನೆ ಕಾರ್ಯಗಳನ್ನು ಮಳೆಗಾಲಕ್ಕೆ ಮುನ್ನವೇ ಪೂರ್ಣವಾಗಿ ಪೂರೈಸುವ ಅಗತ್ಯವಿದ್ದುದನ್ನು ಗಮನಕ್ಕೆ ತಂದುಕೊಂಡಾಗ ಅದು ನಿಜಕ್ಕೂ ಹಾಗಿರಲಿಲ್ಲವೆಂದೇ ಹೇಳಬಹುದು.

ರೈತರು ದವಸಧಾನ್ಯಗಳನ್ನು ದಾಸ್ತಾನು ಮಾಡಿಡಲೂ ಅತ್ಯಂತ ವಿಶ್ವಾಸಾರ್ಹ ವಿಧಾನಗಳನ್ನು ವಿಕಾಸಗೊಳಿಸಿಕೊಂಡಿದ್ದರು. ಇದಕ್ಕಾಗಿ ಅವರು ವಿಶೇಷಕಟ್ಟಡಗಳನ್ನು ನಿರ್ಮಿಸಹೋಗದೆ ಮುಕ್ತವಾಗಿ ಲಭ್ಯವಿದ್ದ ಹಾಗೂ ಅಗ್ಗದ ನೈಸರ್ಗಿಕ ಸಾಮಾನುಗಳನ್ನೇ ಬಳಸಿಕೊಂಡರು. ಉದಾಹರಣೆಗೆ, ಅಕ್ಕಿಯನ್ನು ತುಂಬಿಡುತ್ತಿದ್ದ ವಾಡೆಗಳು. ಇವುಗಳನ್ನು ನಿಸರ್ಗದಲ್ಲೇ ಸುಲಭವಾಗಿ ಸಿಗುತ್ತಿದ್ದ ಬಿದಿರಿನಿಂದ ತಯಾರಿಸುತ್ತಿದ್ದರು. ಗಾಳಿಯಾಗಲೀ, ಕ್ರಿಮಿಗಳಾಗಲೀ, ಒಳನುಸಿಯಲು ಅವಕಾಶವಿರದಂತೆ ರಚಿಸಲಾಗುತ್ತಿದ್ದ ಈ ವಾಡೆಗಳು ನಿಜಕ್ಕೂ ಅತ್ಯಂತ ಜಾಣ್ಮೆಯ ಸಾಧನಗಳಾಗಿದ್ದವು. ಇದೇ ರೀತಿ ಅವರು ಸುತ್ತಮುತ್ತಲಿನ ವಾತಾವರಣ ಪರಿಸ್ಥಿತಿಗೆ ತಕ್ಕಂತೆ ನೆಲದಡಿ ಹಾಗೂ ನೆಲದಮೇಲೆ ಧಾನ್ಯದಾಸ್ತಾನು ಮಾಡಿರುವ ವಿಧಾನಗಳನ್ನು ವಿಕಾಸಗೊಳಿಸಿಕೊಂಡಿದ್ದರು. ಉತ್ತಮ ಹವಾಗುಣ ವರ್ಷಗಳಲ್ಲಿ ಹೀಗೆ ದಾಸ್ತಾನು ಮಾಡುತ್ತಿದ್ದ ಮಿಗುತಾಯ ಧಾನ್ಯದ ಜಲಾಭಾವ ಹಾಗೂ ಕ್ಷಾಮಗಳ ವರ್ಷಗಳಲ್ಲಿ ಬಳಸುವುದಕ್ಕೆ ಒದಗಿಬರುಸತ್ತಿದ್ದತು. ಬಡವರಿಗೆ ವಿಶೇಷವಾಗಿ ಧಾನ್ಯ ಕೊರತೆಯ ವರ್ಷಗಳಲ್ಲಿ ಉಚಿತವಾಗಿ ಊಡ ಒದಗಿಸುವ ಅನ್ನದಾನದಂಥ ಕಾರ್ಯವನ್ನು ಬಹಳ ಪುಣ್ಯದ ಕೆಲಸವೆಂದು ಭಾವಿಸಲಾಗಿತ್ತು. ಹೀಗಾಗಿ ಉಳುಮೆ ಭೂಮಿ ಇಲ್ಲದಂಥ ಜನರೂ ಅನಾವೃಷ್ಟಿಕಾಲಗಳಲ್ಲಿ ಬದುಕಿ ಉಳಿಯಲು ಸಾಧ್ಯವಾಗಿದ್ದಿತು. ಭೂಹೀನ ಬಡಜನರು ಶ್ರೀಮಂತರು ಔದಾರ್ಯವನ್ನು ಅವಲಂಭಿಸಿರುವಂತಹ ಪದ್ದತಿ ಇಂದು ಆಕ್ಷೇಪಣಾರ್ಹವಾಗಿರುಬಹುದು. ಆದರೆ ಆ ಹಿಂದಿನಕಾಲಗಳಲ್ಲಿ ತನ್ನದೇ ರೀತಿಯಲ್ಲಿ ನ್ಯಾಯಸಮ್ಮತ ವಾಗಿದ್ದಿತು.

ಮಳೆಯ ಹೆಚ್ಚಿನ ನೀರನ್ನು ದಾಸ್ತಾನು ಮಾಡಿಡಲು ಕೆರೆ ಕೊಳಗಳನ್ನು ನಿರ್ಮಿಸುವ ವ್ಯವಸ್ಥೆಯನ್ನು ತುಂಬ ಎಚ್ಚರಿಕೆಯಿಂದ ಹಾಗೂ ಸಮರ್ಪಣ ಭಾವದಿಂದ ವಿಕಾಸಗೊಳಿಸಲಾಗಿದ್ದಿತು. ಅನೇಕ ಅರೆಶುಷ್ಕ ಪ್ರದೇಶಗಳಲ್ಲಿ ಕೆರೆಗಳ ಸರಣಿಯನ್ನು ಮೇಲ್ಮಟ್ಟದಿಂದ ಕೆಳಗಿನ ಮಟ್ಟದವರೆಗೆ ಎಚ್ಚರಿಕೆಯಿಂದ ನಿರ್ಮಿಸಲಾಗುತ್ತಿದ್ದಿತು. ಹಾಗಾಗಿ ಮಳೆಗಾಲದ ಹೆಚ್ಚಿನ ನೀರು ಮೇಲ್ಮಟ್ಟದ ಕೆರೆಗಳಿಂದ ಕೆಳಮಟ್ಟದ ಕೆರೆಗಳಿಗೆ ಹರಿದುಹೋಗುತ್ತಿದ್ದಿತು. ಈ ಕೆರೆಗಳಿಂದ ಕಾಲಕಾಲಕ್ಕೆ ಹೂಳು ಎತ್ತಲು ಸ್ಥಳೀಯ ಸಮುದಾಯಗಳು ತಮ್ಮವೇ ವ್ಯವಸ್ಥೆ ಏರ್ಪಡಿಸಿಕೊಂಡಿದ್ದವು. ಈ ಕೆರೆಗಳ ನೀರನ್ನು ಕುಡಿಯಲೂ, ನೀರಾವರಿಗಾಗಿಯೂ ಸಮಪ್ರಮಾಣದಲ್ಲಿ ಹಂಚಲಾಗುತ್ತಿದ್ದಿತು. ಕೆರೆಗಳನ್ನು ನಿರ್ಮಿಸುವುದನ್ನು ಅತ್ಯಂತ ಉನ್ನತ ಮಟ್ಟದ ಪುಣ್ಯ ಅಥವಾ ಶ್ರೇಷ್ಠತೆಯನ್ನು ಗಳಿಸಿಕೊಡುವ ಕಾರ್ಯವೆಂದು ಭಾವಿಸಲಾಗಿದ್ದೀತು. ಹಾಗಾಗಿ ಶ್ರೀಮಂತರಾದ ಹಾಗೂ ಯಶಸ್ಸುಗಳಿಸಿದ ವೇಶ್ಯೆಯರು ತಮ್ಮ ಪಾಪ ವಿಮೋಚನೆಗಾಗಿ ಕೆರೆ ಕುಂಟೆಗಳನ್ನು ನಿರ್ಮಿಸುತ್ತಿದ್ದರು. ಅನೇಕ ಅರೆಶುಷ್ಕ ಪ್ರದೇಶದ ಹಳ್ಳಿಗಳಲ್ಲಿ 'ಸೂಳೆಕೆರೆ'ಗಳೆಂಬ ಹೆಸರಿನ ಕೆರೆಕೊಳಗಳು ಈಗಲೂ ಕಂಡುಬರುತ್ತವೆ. ಅಂತಹ ಸೂಳೆಯರು ಅತ್ಯಂತ ಹೆಚ್ಚಿನ ಗೌರವಕ್ಕೂ ಪಾತ್ರರಾಗಿದ್ದರು.

ಸಾರ್ವಜನಿಕವಾಗಿ ಎಲ್ಲರಿಗೂ ಸೇರಿದ ಹುಲ್ಲುಗಾವಲುಗಳೂ ಮಳೆ ಆಧಾರಿತ ಕೃಷಿಯಪರಿಸರ ವ್ಯವಸ್ಥೆಯ ಅವಿಭಾಜ್ಯ ಭಾಗಗಳಾಗಿದ್ದವು. ಅವು ದನಕರುಗಳಿಗೆ ಮೇವು ಒದಗಿಸುತ್ತಿದ್ದವು. ಇದರಿಂದ ಭೂರಹಿತ ಜನರು ಪ್ರಾಣಿಸಾಕಣೆಯಲ್ಲಿ ತೊಡಗಬಹುದಿದ್ದಿತು. ಈ ಸಾರ್ವಜನಿಕ ಗೋಮಾಳಗಳು ರೈತರಿಗೆ ಹಸುರು ಗೊಬ್ಬರದ ಆಕರವೂ ಆಗಿದ್ದವು. ಅಲ್ಲದೆ ಅವು ರೈತರಿಗೂ ಇತರರಿಗೂ ಕಟ್ಟಿಗೆ ಮತ್ತಿತ್ತರ ಅವಶ್ಯ ಜೈವಮೂಲ ಸಾಮಗ್ರಿಗಳನ್ನು ಒದಗಿಸುತ್ತಿದ್ದವು. ಇಂಥ ಪರಿಸರ ವ್ಯವಸ್ಥೆಯ ಚೌಕಟ್ಟಿನಲ್ಲೇ ಕೃಷಿ ಉತ್ಪಾದನೆಯ ಅಧಿಕಾಧಿಕ ಹೆಚ್ಚಳವೂ ಆದಾಯದಲ್ಲಿ ಹೆಚ್ಚಳವೂ ಜರುಗಬೇಕಾಗಿದೆ. ಖುಷ್ಕಿಭೂಮಿಗಳಲ್ಲಿ ಇದುವರೆವಿಗೂ ಜರುಗಿರುವ ಕೃಷಿವಿಕಾಸದಲ್ಲಿ ಒಳ್ಳೆಯ ಹಾಗೂ ಕೆಡಕು ಲಕ್ಷಣಗಳೆರಡೂ ಇವೆ. ಉತ್ಪನ್ನ ಹಾಗೂ ಹಣಕ್ಕೆ ಸಂಬಂಧಿಸಿ ಆಗಿರುವ ಬದಲಾವಣೆಯೂ ಒಂದು ಮುಖ್ಯ ಅಂಶವಾಗಿದೆ. ಪಾರಂಪರಿಕಪದ್ಧತಿಯಲ್ಲಿ ರೈತರ ಉಳುಮೆಕಾರ್ಯಕ್ಕೆ ಹಣದ ಅವಶ್ಯಕತೆ ಯೇನೂ ಇರಲಿಲ್ಲ. ಎಲ್ಲವೂ ಉಚಿತವಾಗಿ ಲಭ್ಯವಾಗುತ್ತಿದ್ದಿತು. ರೈತರು ಫಸಲನ್ನು ಹಣದ ಬಳಕೆಯ ಪ್ರಮೇಯವಿಲ್ಲದೆಯೇ ಸಂಗ್ರಹಿಸಿಕೊಳ್ಳುತ್ತಿದ್ದ. ಆಧುನಿಕಪದ್ಧತಿಯಲ್ಲಾದರೂ ಕೃಷಿಕಾರ್ಯಕ್ಕೆ ಅವಶ್ಯವಾದ ಅನೇಕ ವಸ್ತುಗಳನ್ನು ಹೊರಗಿನಿಂದ ಪಡೆದುಕೊಳ್ಳಬೇಕಾಗುತ್ತದೆ. ಇದಕ್ಕೆ ಹಣದ ಅವಶ್ಯಕತೆ ಬೀಳುತ್ತದೆ. ಇದು ರೈತನನ್ನು ಹಿಂದೆಂದಿಗಿಂತಲೂ ಹೆಚ್ಚಾಗಿ ಮಾರುಕಟ್ಟೆ ಶಕ್ತಿಗಳ ಹಿಡಿತಕ್ಕೆ ತಳ್ಳುತ್ತದೆ. ಅಲ್ಲದೆ ಇದು ಕೃಷಿಕಾರ್ಯದ ಖರ್ಚುಗಳನ್ನು ಹೆಚ್ಚಿಸುತ್ತದೆ. ಹೊಸಕೃಷಿ ತಂತ್ರಗಳ ಬಳಕೆಯಿಂದ ಆದಾಯ ಸಾಕಷ್ಟು ಹೆಚ್ಚಿದಾಗ ರೈತರು ಇದನ್ನು ಅಷ್ಟಾಗಿ ಗಣನೆಗೆ ತಂದುಕೊಳ್ಳುವುದಿಲ್ಲ. ಆದಾಯದಲ್ಲಿ ಹೆಚ್ಚಳವು ಅಧಿಕವೆಚ್ಚವನ್ನು ಸರಿ ತುಂಬಿಸುತ್ತದೆ. ಮತ್ತು ಮಾರುಕಟ್ಟೆಯ ಏರುಪೇರುಗಳಿಂದ ರೈತನನ್ನು ಮುಕ್ತಗೊಳಿಸುತ್ತದೆ. ಆದರೆ ಎಲ್ಲ ರೈತರೂ, ಅದರಲ್ಲೂ ಆರಂಭ ಘಟ್ಟದಲ್ಲಿ ಅಷ್ಟು ಧೈರ್ಯಶಾಲಿ ಗಳಾಗಲೀ, ಕುಶಲಿಗಳಾಗಲಿ ಇರಲಾರರಷ್ಟೇ ಹೆಚ್ಚು ಉತ್ತಮ ಸಂಪನ್ಮೂಲಗಳುಳ್ಳ ರೈತರಷ್ಟೇ ನವೀನ ವಿಧಾನಗಳನ್ನು ಅನುಷ್ಠಾನಕ್ಕೆ ತರುವ ಧೈರ್ಯ ಮಾಡುಬಲ್ಲರು. ಇತರರು ಅವರನ್ನು ಕ್ರಮೇಣ ಅನುಸರಿಸಬಹುದಷ್ಟೆ.

ಇಂತಹ ವ್ಯಕ್ತಿಗತ ವರ್ತನೆ ಸರ್ವಜನರ ಒಳಿತನ್ನೇನೂ ಗಣನೆಗೆ ತಂದುಕೊಳ್ಳುವುದಿಲ್ಲವಷ್ಟೆ. ಅದೃಷ್ಟವಶಾತ್ ಕಳೆದ ಎರಡು ದಶಕಗಳಿಂದ ಅರಣ್ಯೀಕರಣದ ಮೂಲಕ ಮತ್ತು ಕೆಲವು ಸ್ಥಳಗಳಲ್ಲಿ ಕೆರೆಗಳನ್ನು ಪುನರುಜ್ಜೀವನಗೊಳಿಸುವ ಮೂಲಕವೂ ಹಳೆಯ ಸಾರ್ವಜನಿಕ ಆಸ್ತಿ ಸಂಪನ್ಮೂಲಗಳ ವ್ಯವಸ್ಥೆಯನ್ನು ಮತ್ತೆ ಜೀವಂತಗೊಳಿಸಲು ವಿಸ್ತೃತಯತ್ನ ಮಾಡಲಾಗುತ್ತದೆ. ಬಿದ್ದ ಮಳೆನೀರನ್ನು ಕೆರೆಕೊಳಗಳಲ್ಲಿ ಸಂಗ್ರಹ ಮಾಡಲೋಸುಗ ಜಲಾನಯನ ಭೂಮಿಗಳನ್ನು ಖುಷ್ಕಿ ಭೂಮಿ ವಿಕಾಸದ ಒಂದು ವ್ಯೂಹೋಪಾಯವಾಗಿ ಬೆಳೆಸುತ್ತಿರುವುದು ಒಂದು ಉತ್ತೇಜಕ ಅಂಶವಾಗಿದೆ. ಇದು ಪರಿಸರ ವ್ಯವಸ್ಥೆಯ ಸಂರಕ್ಷಣೆಗೆ ಹಾಗೂ ಮುಕ್ತ ಬಳಕೆಗೆ ಅನುಗುಣವಾಗಿಯೇ ಇದೆ. ಈ ವ್ಯೂಹೋಪಾಯದ

ಫಲವಾಗಿ ಮಳೆ ಆಧಾರಿತ ಪ್ರದೇಶಗಳಲ್ಲಿ ಭೂ ಹಾಗೂ ಜಲಸಂಪನ್ಮೂಲಗಳ ಸುಧಾರಣೆಗೆ ಅಧಿಕೋತ್ತೇಜನ ಲಭಿಸಿದೆ. ಜಲಸಂಪನ್ಮೂಲಗಳ ಸುಧಾರಣೆ ಎಂದರೆ ದೊಡ್ಡ ದೊಡ್ಡ ನೀರಾವರಿ ಯೋಜನೆಗಳ ನಿರ್ಮಾಣ ಎಂದಷ್ಟೇ ಅರ್ಥವಲ್ಲ. ಬಿದ್ದ ಮಳೆ ನೀರನ್ನು ಕೃಷಿಕಾರ್ಯಕ್ಕೆ ಬಳಸುವುದಿಲ್ಲ. ನೀರನ್ನು ಹಿತಮಿತವಾಗಿ ಬಳಸುವುದು, ಭೂಮಿಯ ಒಂದು ಏಕಮಾನಕ್ಕಲ್ಲ ಆದರೆ ನೀರಿನ ಒಂದು ಏಕಮಾನಕ್ಕೆ ಲಭಿಸುವ ಬೆಳೆಯ ಪ್ರಮಾಣವನ್ನು ಹೆಚ್ಚಿಸುವುದು. ಇವೆಲ್ಲವೂ ಅದರಲ್ಲಿ ಸೇರಿವೆ. ಅರೆಶುಷ್ಕ ಪ್ರದೇಶಗಳಲ್ಲಿ ನೀರಿನ ಅಭಾವವಿರುವುದರಿಂದ ಉತ್ಪಾದನೆಯ ಒಂದು ಅಂಶವಾಗಿ ಭೂಮಿಗಿಂತ ನೀರೇ ಹೆಚ್ಚು ಮೌಲ್ಯದ್ದಾಗಿರುತ್ತದೆ. ಆಲಾನಯನ (ಉಬ್ಬು) ಭೂಮಿಗಳನ್ನು ನಿರ್ಮಿಸುವ ಯೋಜನೆಯಲ್ಲಿ ಭೂ ಹಾಗೂ ಜಲಸಂರಕ್ಷಣೆಯನ್ನು ಒಂದು ಮೂಲಭೂತ ಅಂಗಭಾಗವನ್ನಾಗಿ ಕೈಗೆತ್ತಿಕೊಳ್ಳಲಾಗಿದೆ. ಬಂಜರುಭೂಮಿಯನ್ನು ಇದರಲ್ಲಿ ಸೇರಿಸಲಾಗಿದೆ. ಪರಿಣಾಮವಾಗಿ ಫಲದಾಯಕ ಆಚರಣೆಗಳೂ, ಆಸಕ್ತಿಗಳೂ ಮೂಡಿವೆ. ಆದರೆ ಈ ಚಳವಳಿ ಇನ್ನೂ ವಿಸ್ತೃತವಾಗಿ ವ್ಯಾಪಿಸಬೇಕಾಗಿದೆ. ಹಾಗಾದರಷ್ಟೆ ಚಾರಿತ್ರಿಕವಾಗಿ ಸಾರ್ವಜನಿಕ ಆಸ್ತಿ ಸಂಪನ್ಮೂಲಗಳಲ್ಲುಂಟಾಗಿರುವ ಉಳಿತಾಯವನ್ನೂ ಒಟ್ಟಿನಲ್ಲಿ ಅರೆಶುಷ್ಕ ಪ್ರದೇಶಗಳಲ್ಲಿನ ಪರಿಸರವ್ಯವಸ್ಥೆಯಲ್ಲಿನ ಉಳಿತಾಯವನ್ನು ಹೋಗಲಾಡಿಸಲು ಸಾಧ್ಯವಾಗುತ್ತದೆ.

ಉನ್ನತ ಇಳುವರಿ ನೀಡುವ ಬೀಜಗಳನ್ನು ಬಳಸಿ ಕೃಷಿಕಾರ್ಯ ನಡೆಸುವ ಹಾಗೂ ಹೊಸ ಮಾದರಿಯ ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಬಳಸುವ ಹೊಸ ತಂತ್ರಕಲೆಯನ್ನು ಮಳೆ ಆಧಾರಿತ ಕೃಷಿ ಪ್ರದೇಶಗಳಲ್ಲಿ ಜಾರಿಗೆ ತಂದುದು ಮಿಶ್ರ ಫಲಿತಾಂಶಗಳನ್ನು ನೀಡಿದೆ. ಇಳುವರಿ ಅಸ್ಥಿರ ಆಗಿದ್ದ ಪ್ರದೇಶಗಳಲ್ಲಿ ಈ ಹೊಸ ತಂತ್ರ ಕಲೆ ಕೃಷಿಉತ್ಪಾದನೆ ಹೆಚ್ಚುವುದಕ್ಕೇನೋ ಪ್ರೋತ್ಸಾಹ ನೀಡಿತು. ಆದರೆ ಇಳುವರಿಗಳ ಅನಿಶ್ಚಿತತೆಯನ್ನು ಹೆಚ್ಚಿಸಿತು. ಹಿಂದೆ ಜೈವಿಕಗೊಬ್ಬರಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದ ಸ್ಥಳಗಳಲ್ಲಿ ಅವುಗಳ ಬದಲು ಹೊಸ ರಾಸಾಯನಿಕಗೊಬ್ಬರಗಳನ್ನು ಬಳಸಿದ ಕಡೆಗಳಲ್ಲಿ ಅನಿಶ್ಚಿತತೆ ಹೆಚ್ಚಾಗಿ ಗೋಚರಕ್ಕೆ ಬಂದಿತು. ಹೊಸ, ಬೇಗ ಫಸಲು ನೀಡುವ ಬೀಜ ತಳಿ ಮಾದರಿಗಳನ್ನು ಬಳಸಿದುದು ಇಳುವರಿಯ ಪ್ರಮಾಣವನ್ನೇನೋ ತೀವ್ರವಾಗಿ ಹೆಚ್ಚಿಸಿತು. ಆದರೆ ಮಣ್ಣಿನ ಫಲವತ್ತತೆ ಕಡಿಮೆ ಆಯಿತು. ಅದರಲ್ಲೂ ಮಣ್ಣಿಗೆ ಹೆಚ್ಚಿನ ಪುಷ್ಟೀ ನೀಡುವ ರಾಸಾಯನಿಕಗಳನ್ನು, ನಿರ್ದಿಷ್ಟವಾಗಿ ಸೂಕ್ಷ್ಮ ಪುಷ್ಟಿಕಾರಿಗಳನ್ನು ಸಾಕಷ್ಟು ಹೆಚ್ಚು ಪ್ರಮಾಣಗಳಲ್ಲಿ ಬಳಸದಿದ್ದ ಕಡೆ ಇದು ಹೆಚ್ಚು ಗೋಚರಕ್ಕೆ ಬಂದಿತು. ಹೊಸ ಮಾದರಿಗಳು ಕೊನೆಯ ಪಕ್ಷ ಆರಂಭ ಘಟ್ಟಗಳಲ್ಲಿ ಮಣ್ಣಿನ ಫಲವತ್ತತೆಯನ್ನು ಕಾಪಾಡುವ ಉದ್ದೇಶದಿಂದ ಬಹಳ ಹಿಂದಿನ ಕಾಲದಿಂದ ಅನುಸರಿಸಿಕೊಂಡು ಬಂದಿದ್ದ ಸರದಿ ಬೆಳೆ ಪದ್ಧತಿಯ ಮೇಲೆ ದುಷ್ಪರಿಣಾಮ ಬೀರಿದವು. ಹಿಂದೆ ಇಡೀ ಕೃಷಿಹಿಡುವಳಿಯನ್ನು ಗಮನದಲ್ಲಿಟ್ಟುಕೊಂಡು ವ್ಯವಸಾಯ ಮಾಡುತ್ತಿದ್ದ ಕಡೆ ಈಗ ಕೇವಲ ಬಿಡಿ ಬೆಳೆಗಳ ಕಡೆಗೆ ಗಮನ

ಹರಿಸಲಾಯಿತು. ಕ್ರಿಮಿನಾಶಕಗಳೂ ತಮ್ಮವೇ ದುಷ್ಪರಿಣಾಮ ಉಂಟುಮಾಡಿದವು. ಅವು ಪರಾಗಸ್ಪರ್ಶ ಕ್ರಿಯೆಗೆ ಕಾರಣವಾಗಿದ್ದ ಪಕ್ಷಿಪ್ರಾಣಿಗಳ ಸಂಖ್ಯೆಯನ್ನಷ್ಟೆ ಅಲ್ಲ. ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುತ್ತಿದ್ದ ಎರೆಹುಳುಗಳಂಥ ಕ್ರಿಮಿಗಳ ಸಂಖ್ಯೆಯನ್ನು ಕಡಿಮೆ ಮಾಡಿದವು. ಗೊಬ್ಬರಗಳನ್ನೂ ಕ್ರಿಮಿನಾಶಕಗಳನ್ನೂ ಬಹುಹುಷಾರಿನಿಂದ ಬಳಸಿದುದು ನೆಲದ ಮೇಲಿನ ಹಾಗೂ ನೆಲದಡಿಯ ನೀರಿನ ಗುಣಕ್ಕೂ ಬಾಧೆ ಉಂಟುಮಾಡಿತು.

ಕೃಷಿಯು ನಮ್ಮ ಹೆಚ್ಚುತ್ತಿರುವ ಜನಸಂಖ್ಯೆಗೆ ಸಾಕಷ್ಟು ಆಹಾರ ಒದಗಿಸುತ್ತಲೇ ಹೋಗಬೇಕಾದರೆ ನಾವು ಹಿಂದಿನಂತೆ ಸ್ಥಿರತೆ ಹಾಗೂ ಉಳಿಕೆಗಳ ಕಡೆಗಷ್ಟೆ ಗಮನ ನೀಡುತ್ತ ಹೋದರೆ ಸಾಲದು. ನಾವು ಹೆಚ್ಚುವರಿಯನ್ನೂ ಸಾಧಿಸಬೇಕು. ಆದಾಗ್ಯೂ ಮೂಲ ಪರಿಸರವ್ಯವಸ್ಥೆಯನ್ನು ಏರುಪೇರು ಮಾಡಿದಲ್ಲಿ ಯಾವ ಹೆಚ್ಚುವರಿಯನ್ನು ಸಾಧಿಸಲಾಗದು. ಕೃಷಿವಿಜ್ಞಾನಿಗಳು ನಮ್ಮ ಹಿಂದಿನ ರೈತರಲ್ಲಿದ್ದ ಬುದ್ಧಿವಂತಿಕೆಯನ್ನು ಅರ್ಥಮಾಡಿಕೊಂಡು ಅದನ್ನು ಮೆಚ್ಚುವಷ್ಟು ವಿನಯತೋರಬೇಕು. ಪರಿಸರ ವ್ಯವಸ್ಥೆಯೊಂದಿಗೆ ಸರಿ ಹೊಂದಿಕೊಂಡು ಹೋಗುವಂಥ ರೀತಿಯಲ್ಲಿ ಹೊಸತಂತ್ರಕಲೆಗಳನ್ನು ಜಾರಿಗೆ ತರುವಂಥ ಕುಶಲತೆಯನ್ನೂ ತೋರಬೇಕು. ಆಗಷ್ಟೆ ನಿರ್ದಿಷ್ಟ ಗುರಿ ಮುಟ್ಟಲು ಸಾಧ್ಯವಾಗುವುದು.

ವಿಲ್‌ಡ್ಯುರೆಂಟ್‌ನ ಪ್ರಕಾರ ವಿಜ್ಞಾನದ ಮೂಲವೇ ಕೃಷಿ ಅದು ಕಲೆಯೂ ಹೌದು ಭೂಮಿಯನ್ನು ಕೃಷಿಕ ಉತ್ಪಾದನಾ ಮೂಲವಾದುದಷ್ಟೇ ಅಲ್ಲ ಅದು ಸುಂದರವಾಗಿರುವಂತೆಯೂ ನೋಡಿಕೊಂಡಿದ್ದಾನೆ. ಉಳುಮೆ, ಬಿತ್ತನೆ, ಕಳೆಕೀಳುವುದು ಮುಂತಾದ ಹಲವು ಹಂತಗಳಲ್ಲಿ ಅದರ ಸೌಂದರ್ಯವನ್ನು ಕಾಪಾಡಿಕೊಂಡು ಬಂದಿದ್ದಾನೆ. ಅದರ ಭಾಗವಾಗಿ ಹಾಡಿ, ಕುಣಿದು ಕುಪ್ಪಳಿಸಿದ್ದಾನೆ. ಹಾಗಾಗಿ ದಕ್ಷಿಣ ಕರ್ನಾಟಕದ ಹಾಡುಗಳಲ್ಲಿ ಸಹಜವಾಗಿ ಮಳೆ ಬೆಳೆ ಬೇಸಾಯದ ಉಪಕರಣಗಳು ಪಶುಪಾಲನ ಸಂಗತಿಗಳು ಮೇಲಿಂದ ಮೇಲೆಬರುತ್ತವೆ. ಮಳೆಯುನ್ನು ಆಧರಿಸಿದ ವ್ಯವಸಾಯ ಪ್ರದೇಶಗಳಲ್ಲಿ ಬೆಳೆಯುವ ಹಾರಕ, ಸಾಸುವೆ, ನವಣೆ ಗೋಧಿ, ರಾಗಿ ಕೊರಲೆ, ಸಜ್ಜೆ ಜೋಳ ಮುಂತಾದ ಆಹಾರದ ಬೆಳೆಗಳು ತೊಗರಿ ಹಲಸಂಧಿ, ಹೆಸರು ಉದ್ದು ಕಡಲೆ, ಹುರುಳಿ ಮುಂತಾದ ದ್ವಿದಳ ಧಾನ್ಯಗಳು ಸಾಸುವೆ, ಮೆಣಸಿನಗಿಡ ಕೊತ್ತುಂಬರಿ ಮೆಂಥ್ಯ ಮುಂತಾದ ಬೆಳೆಗಳು ಔಡಲ, ಎಳ್ಳು ಕುಸುವೆ ಮುಂತಾದ ಎಣ್ಣೆ ಬೆಳೆಗಳು ಹತ್ತಿ ಶೇಂಗಾ, ಈರುಳ್ಳಿ, ಜೋಳ ಮುಂತಾದ ವಾಣಿಜ್ಯ ಬೆಳೆಗಳು ಇವುಗಳ ಉಲ್ಲೇಖ ಪ್ರಾಸಂಗಿಕವಾಗಿ ಇಲ್ಲಿಯ ಬೇಸಾಯದ ಹಾಡುಗಳಲ್ಲಿ ಬರುತ್ತದೆ. ಭತ್ತ, ಕಬ್ಬು ಬಾಳೆ, ತೆಂಗು, ಅಡಿಕೆ, ಎಲೆಬಳ್ಳಿ ಇವುಗಳು ಹಾಡುಗಳಲ್ಲಿ ಹೇರಳವಾಗಿ ಕಂಗೊಳಿಸುತ್ತವೆ. ನೇಗಿಲು, ನೊಗ, ಕುಂಟೆ, ಕೂರಿಗೆ ಮುಂತಾದ ಕೃಷಿ ಸಾಮಗ್ರಿಗಳು, ಕೃಷಿಗೆ ನೆರವಾಗುವ ಆಯಾಗಾರರು,

ಕಣಜ, ವಾಡೇವುಗಳಂತಹ ಧಾನ್ಯಸಂರಕ್ಷಿಸುವ ತಾಣಗಳು, ಕೃಷಿಗೆ ಸಂಬಂಧಿಸಿದ ಹಬ್ಬಗಳು ಇವೆಲ್ಲ ಜನಪದ ಹಾಡುಗಳಿಗೆ ಸಮೃದ್ಧವಾದ ವಸ್ತುಗಳಾಗಿವೆ. ಸಕಲ ರೀತಿಯ ಸಂಸ್ಕೃತಿಗಳಿಗೆ ಕೃಷಿಸಂಸ್ಕೃತಿಯೇ ಮೂಲ. ನೆಲಸಂಸ್ಕೃತಿಯೇ ಅದಕ್ಕೆ ಮೂಲವಾದದ್ದು. ಕೃಷಿಕರು ರುತುಮಾನಗಳವ್ಯತ್ಯಾಸಗಳನ್ನು ಭಯ ಭಕ್ತಿಯಿಂದ ಕಾಯುವುದುಂಟು. ನೃತ್ಯ ಮತ್ತು ಗೀತೆಗಿಂತ ಅವನ್ನು ಆಚರಿಸುವುದಿದೆ. ಮೋಡ ಮತ್ತು ಮಳೆಗಳನ್ನು ಪಯಣಕ್ರಿಯೆಯ ಸಾಂಪ್ರದಾಯಿಕ ಸಂಗತಿಯಾಗಿ ನಂಬುವುದಿದೆ. ಮಳೆ ಮತ್ತು ಬಿರುಗಾಳಿ ಲೈಂಗಿಕತೆಯ ಹಂಬಲವನ್ನು ಉದ್ದೀಪಿಸುವ ಸಂಕೇತವಾಗಿಯೂ ಬಳಕೆಗೊಂಡಿದೆ. ಭತ್ತದ ಗದ್ದೆಗಳು, ಹುಲ್ಲು ಮಳಿಗೆಗಳು, ನದಿ ದಡಗಳು, ಬಾವಿಕೊಳಗಳ ಪಕ್ಕಗಳು ಕಾಡು ಪ್ರದೇಶ ಇವೆಲ್ಲ ಪ್ರಣಯಿಗಳು ಸಂಪರ್ಕಿಸುವ ತಾಣಗಳಾಗಿವೆ. ಕಾಯಕದ ಭಾಗವಾಗಿಬರುವ ಹೋಳಿಹುಣ್ಣಿಮೆಯಂತ ಹಬ್ಬಗಳು ಪ್ರಣಯ ಪ್ರಚೋದನೆಯ ಸಂಕೇತಗಳಾಗಿವೆ. ಇದರಿಂದ ಕೃಷಿಜಾನಪದದ ಅಧ್ಯಯನವೆಂದರೆ ಮಾನವ ಬೆಳವಣಿಗೆಯ ಇತಿಹಾಸದ ಅಧ್ಯಯನವೇ ಆಗಿದೆ. ಅದೊಂದು ಸಾಂಸ್ಕೃತಿಕ ಮಾನವಶಾಸ್ತ್ರದ ಅಧ್ಯಯನ. ಇದು ಪರಂಪರಾಗತವಾಗಿರೂಢಿಗೆ ಬಂದಿರುವಂತದ್ದು. ಜನಪದರು ಭೂಮಿಯನ್ನು ತಾಯಿ ಎಂದು ಭಾವಿಸಿ ಯಾವನೆಲಕ್ಕೆ ಯಾವರೀತಿ ಬೀಜವನ್ನು ಬಿತ್ತಬೇಕು, ಹೇಗೆ ಆರೈಕೆಮಾಡಬೇಕು, ಎಂತಹ ಬೆಳೆ ತೆಗೆಯಬೇಕು, ಅದರ ದಾಸ್ತಾನು ಹೇಗೆ ಮಾಡಬೇಕು. 'ಬೀಜಸಂರಕ್ಷಣೆ ಹೇಗೆ– ಇವೆಲ್ಲ ಅನುಭವದಿಂದ ತಿಳಿದುಕೊಂಡು ಪಾಲಿಸುತ್ತಾ ಬಂದರು. ಆದರೆ ಇಂತಹ ಸಾಂಪ್ರದಾಯಿಕ ಕೃಷಿಪದ್ಧತಿಯ ಮೇಲೆ ಆಧುನಿಕ ಕೃಷಿವಿಜ್ಞಾನದ ಪ್ರಭಾವ ಜಾಸ್ತಿಯಾಗುತ್ತಿರುವುದರಿಂದ ಆಮೂಲಾಗ್ರವಾಗಿ ಬದಲಾವಣೆಗೊಳ್ಳುತ್ತಿದೆ. ಪರಿಸರದ ಅಸಮತೋಲನೆಗೂ ಆಧುನಿಕ ಕೃಷಿವಿಜ್ಞಾನ ಕಾರಣವಾಗಿದೆ.

ಭಾರತದ್ದು ಬೀಜಸಂಸ್ಕೃತಿ ರೈತ ತಾನು ಬೆಳೆದ ಬೆಳೆಯಿಂದ ಬೀಜಮಾಡಿ ಅದರಿಂದ ಮತ್ತೆ ಬೆಳೆ ಬೆಳೆಯುವ ಕ್ರಮ ಇಲ್ಲಿಯದು. ಸ್ವಯಂಪರಿಪೂರ್ಣವಾದ ಈ ಬೀಜಸಂಸ್ಕೃತಿಯ ಜಾಗದಲ್ಲಿ ಹೈಬ್ರಿಡ್ ಸಂಸ್ಕೃತಿ ಜಾರಿಗೆ ಬಂದಿದೆ ಅಂತರಾಷ್ಟ್ರೀಯ ಕಂಪನಿಗಳು ಬೀಜವನ್ನು ಕೊಂಡುಕೊಳ್ಳತೊಡಗಿ ಅವುಗಳಿಗೆ ತಕ್ಕಂತೆ ಹೈಬ್ರೇಡ್ ಗೊಬ್ಬರ, ರಾಸಾಯನಿಕಗಳನ್ನು, ಔಷಧಿಗಳನ್ನು ಪೂರೈಸುತ್ತಿವೆ. ಇದರಿಂದ ಹಳ್ಳಿಗಾಡಿನ ಸ್ವಾವಲಂಬನೆಯನ್ನು ಹಾಗೂ ಕೃಷಿಕರ ಹಕ್ಕನ್ನು ಕಸಿದುಕೊಂಡಂತಾಗಿದೆ. ಬಿತ್ತನೆ ಬೀಜದಿಂದ ಹಿಡಿದು ಮಾರಾಟಮಾಡುವವರೆಗೆ ರೈತ ಪರಾವಲಂಬಿಯಾಗಿದ್ದಾನೆ, ಭಯಪೀಡಿತನಾಗಿದ್ದಾನೆ, ರಕ್ಷಣೆ ಇಲ್ಲದವನಾಗಿದ್ದಾನೆ ಅಂತರಾಷ್ಟ್ರೀಯ ಜಾಲಕ್ಕೆ ಸಿಲುಕಿ ಅದಕ್ಕೆ ಮುಖಾಮುಖಿಯಾಗಲು ಸಾಧ್ಯವಾಗದೆ ಆತ್ಮಹತ್ಯೆಯ ದಾರಿ ಹಿಡಿದಿರುವುದು ಶೋಚನೀಯ ಸಂಗತಿ. ಡಬ್ಲ್ಯು.ಟಿ.ಓ., ಐ.ಎಂ.ಎಫ್, ಗ್ಯಾಟ್ ಒಪ್ಪಂದಗಳು ಗ್ರಾಮಪರಿಸರವನ್ನು ನಾಶಮಾಡುವುದಂತೂ ಖಂಡಿತ.

ಜಾಗತೀಕರಣ ಕರಿನೆರಳಿನಲ್ಲಿ ಕೃಷಿಕರ ಬದುಕು ನಲುಗುತ್ತಿದ್ದ ವೇಳೆ ಅವನೊಬ್ಬ ಫಿನಿಕ್ಸ್ ಸತ್ತು ಹುಟ್ಟುತ್ತಿರುತ್ತಾನೆ ಅದೆಂತಾ ವಿಚಿತ್ರವಾದ ಬದುಕು. ಅಳುವ ಮಂದಿಯ ಕಣ್ಣಿಗೆ ಅವನೊಂದು ಓಟು ಮಾತ್ರ. ಕೃಷಿಕರು ಸಾಲ ಬಾದೆ ತಡೆಯಲಾರದೆ ಸಾವಿಗೆ ಶರಣಾಗುತ್ತಿದ್ದಾರೆಂಬುವುದನ್ನು ಓದುಗ ಕೇಳಿದಾಗ ಬರುವ ಪ್ರತಿಕ್ರಿಯೆ ಇಂಥ ವಿಚಾರಗಳನ್ನು ನಾವು ಗಂಭೀರವಾಗಿ ಯೋಚಿಸಲು ಸಾದ್ಯವಾದಾಗ ಅವರ ಸಮಸ್ಯೆಗಳಿಗೆ ಪರಿಹಾರ ಒದಗಿಸಲು ಮುಂದಾದಾಗ  ಮಾತ್ರ ನಾವು ಮನುಷ್ಯರಾಗುತ್ತೇವೆ. ಇಲ್ಲವಾದರೆ ಬುದ್ಧಿವಂತರು ಮಾತ್ರವಾಗುತ್ತೇವೆ. ಹೃದಯವಂತರಲ್ಲ.

ಹಸಿರು ಜನರ ಉಸಿರು ಅದನ್ನು ಈಗಾಗಲೇ ಕಿತ್ತುಕೊಳ್ಳುವ ಜಾಗತೀಕರಣ ವ್ಯವಸ್ಥೆ ರೂಪುಗೊಂಡಿದೆ. ಅವರು ಬೆಳೆದ ಬೆಳೆಗೆ ಬೆಲೆ ನಿರ್ಧರಿಸುವವರು ಅವರಲ್ಲ. ಮಾರು ಕಟ್ಟೆಯ ದಲ್ಲಾಳಿಗಳು. ಇದರಿಂದ ಮೆಣಸಿನಕಾಯಿ. ಟಮೋಟೋ ಹತ್ತಿ ಮೊದಲಾದುವನ್ನು ಬೀದಿಗೆ ಚೆಲ್ಲಿ ತಮ್ಮ ಕರುಳ ಆಕ್ರಂದನವನ್ನು ತೋರಿಸುತ್ತಿದ್ದಾರೆ. ಸರ್ಕಾರ ಆಗಾಗ ಪರಿಹಾರದ ಮಾತನಾಡುತ್ತಿದೆಯಾದರು ಅದು ಫಲಾನುಭವಿಗಳಿಗೆ ಧಕ್ಕುತ್ತಿಲ್ಲ. ರೈತರಿಗೆ ಸಾಲಬಡ್ಡಿ ಮನ್ನ ಎಂಬ ತಂತ್ರದ ಹಿಂದಿನ ಚಿತಾವಣೆ ಕೆಲವರದು. ಈಗಾಗಲೇ ಸಾಲಪಡೆದು ಬಡ್ಡಿ ಕಟ್ಟಲಾಗದ ಅಸಹಾಯಕರಿಗೆ ಮತ್ತೆ ಸಾಲಕೊಟ್ಟಂತೆ ಮಾಡಿ ಹಳೆಯ ಸಾಲವನ್ನು ಮುರಿದುಕೊಂಡು ಪುಡಿಗಾಸನ್ನು ಅವನಿಗಿತ್ತು ಹೊಸಸಾಲದ ಸಂಪೂರ್ಣಮೊತ್ತಕ್ಕೆ ಅವನನ್ನು ಹೊಣೆಗಾರನನ್ನಾಗಿ ಮಾಡಲಾಗುತ್ತಿದೆ ಸಾಲವಸೂಲಿಯಲ್ಲಿ ಮಹತ್ತರ ಸಾಧನೆ ಎಂದು ಮಾಧ್ಯಮಗಳಲ್ಲಿ ಘೋಷಿಸಿಕೊಳ್ಳಲಾಗುತ್ತಿದೆ. ಅದನ್ನು ಗಂಭೀರವಾಗಿ ಗಣಿಸುತ್ತಲೇ ಕೃಷಿ ಹಾಡುಗಳ ಬಗೆ ಆಲೋಚಿಸಬೇಕಾಗುತ್ತದೆ. ಅವರಪಾಡು ಹಾಡಾಗುತ್ತದೆ. ಕೃಷಿಹಾಡುಗಳು ಮುಗಿದು ಹೋದುವೆ? ಖಂಡಿತ ಇಲ್ಲ ಬೆವರಿನ ಜೊತೆಗೆ ಹನಿಹನಿಯಾಗಿ ಹೊರಹೊಮ್ಮುತ್ತಿವೆ. ಸುಖದುಃಖಗಳಿಗೆ ಹಿಗ್ಗದೆ ಕುಗ್ಗದೆ ಸಮಚಿತ್ತವನ್ನು ಕೃಷಿಕರು ಕಾಪಾಡಿಕೊಂಡು ಬಂದಿದ್ದಾರೆ. ಇಂದಿಗೂ ಗ್ರಾಮದಲ್ಲಿ ಕೃಷಿಸಂದರ್ಭದಲ್ಲಿ ಹಾಡುಗಳು ಕೇಳಿಬರುತ್ತಿವೆ. ಅವರಿಗೆ ಅವರದೇ ಆದ ಸಾಹಿತ್ಯವಿದೆ ಅದು ಸಹ ಕಾಲಕಾಲಕ್ಕೆ ಮರುಹುಟ್ಟು ಪಡೆದುಕೊಳ್ಳುತ್ತಿದೆ. ಕೃಷಿ ಇರುವವರಿಗೆ ಕೃಷಿಕರ ಹಾಡು ಇಂಗುವುದಿಲ್ಲ ಕಲಿತ ಹಾಡಿನ ಋಣವ ಹಾಡಿ ತೀರಿಸಬೇಕೆಂಬ ಬಯಕೆ ಅವರದು. ಹಾಗೆಯೇ ಹಾಡದಿದ್ದರೆ ಎದೆಯೊಳಗೆ ಅವು ಹಾಗೆಯೇ ಇಂಗಿ ಹೋಗುತ್ತವೆ ಎಂಬ ಎಚ್ಚರ ಅವರಿಗೆ ಇದೆ. ಇದರಿಂದಲೇ ಹಾಡು ಹರಿಯುತ್ತಲೇ ಇವೆ ನಾವು ಕೇಳುತ್ತಲೇ ಇದ್ದೇವೆ ಇದುವೇ ಜೀವನ.

ಹಳೆಯ ಜಾನಪದ ಪರಂಪರೆಗಳಿಗಿಂತ ಹೊರತಾದ ಹೊಸ ಯುಗದ ಜಾನಪದದಲ್ಲಿ ಆರ್ಥಿಕ ರಾಜಕೀಯ ಹಾಗೂ ತಾಂತ್ರಿಕಸಂಗತಿಗಳೇ ಅವುಗಳ ಮಾರುಕಟ್ಟೆಗಳೆ ಮಾನದಂಡವಾಗುತ್ತಿರುವಾಗ ಈ ಎಲ್ಲ ವರ್ತಮಾನದ ಸಂಸ್ಕೃತಿಗಳನ್ನು ಹೇಗೆ ಪರಿಭಾವಿಸುವುದು? ನವಮೌಖಿಕತೆಯ ಮೌಲ್ಯಗಳನ್ನು

ಜಾಗತೀಕರಣದ ಪ್ರಕ್ರಿಯೆಯಿಂದಲೇ ಗುರುತಿಸಿಕೊಳ್ಳುವುದಾದರೆ ಸಮೂಹಮಾಧ್ಯಮಗಳು ಕಲಿಸುತ್ತಿರುವ ಹಾಡಿಸುತ್ತಿರುವ ನವಜಾನಪದವು ನಮ್ಮ ಬಹುರೂಪಿ ಸಮಾಜಗಳನ್ನು ಎಲ್ಲಿ ತನಕ ಕೊಂಡೊಯ್ಯಬಹುದು. ( ಮೊಗಳ್ಳಿ ಗಣೇಶ್) ಎನ್ನುವ ಮಾತಿನ ಹಿಂದಿರುವ ಪ್ರಜ್ಞೆಯಲ್ಲಿ ಜಾನಪದದ ಅಂತಃಶಕ್ತಿಯ ಆಳದ ಬಗ್ಗೆ ಅಭಿಮಾನದ ಜೊತೆ ಅದರ ವೈಚಾರಿಕ ನಿಲುವುಗಳು ಮುಖ್ಯವಾಹಿನಿಗೆ ವಿಶ್ವಾತ್ಮಕ ಮಾಧರಿಯಾಗಬೇಕೆಂಬ ಆಶಯವೂ ಇದೆ. ಮನುಷ್ಯರು ಎಷ್ಟೇ ಆಧುನಿಕರಾಗಿದ್ದು, ಹೊಸ ಹೊಸ ತಂತ್ರಜ್ಞಾನವನ್ನು ಅವಿಷ್ಕರಿಸಿದಾಗಲೂ ಪ್ರಕೃತಿಯಲ್ಲಾಗುವ ವೈಪರಿತ್ಯಗಳ ಮೇಲೆ ಸಂಪೂರ್ಣ ಹಿಡಿತ ಸಾಧಿಸಲಿಕ್ಕೆ ಸಾಧ್ಯವಾಗಿಲ್ಲ. ಹಾಗಾಗಿಯೇ ಕೃಷಿಯ ಆರಂಭಿಕ ಹಂತದಲ್ಲಿದ್ದ ಪ್ರಕೃತಿಯ ಬಗೆಗಿನ ಭಯ ಆತಂಕಗಳು ಈಗಲೂ ಇರುವ ಕಾರಣಕ್ಕಾಗಿಯೇ ಕೃಷಿಯಲ್ಲಿ ಅನೇಕ ಆಚರಣೆಗಳು ನಡೆದುಕೊಂಡು ಬರುತ್ತವೆ. ಅಲ್ಲದೆ ಅವುಗಳು ಕೃಷಿಕರಿಗೆ ಮಾನಸಿಕ ನೆಮ್ಮದಿಯನ್ನು ತಂದುಕೊಡುವ ಕ್ರಿಯೆಗಳು ಆಗಿರುವುವು. ಕೃಷಿಕರು ತಾವು ಮಾಡುವ ಕೃಷಿ ಕೆಲಸಗಳಿಗೆ ಸಹಾಯಕವಾಗುವ ಪ್ರಾಣಿಗಳ ಬಗೆಗೆ, ಬಳಕೆಯಾಗುವ ವಸ್ತುಗಳ ಬಗೆಗೆ ಗೌರವದ ಭಾವನೆಯನ್ನು ಹೊಂದಿದ್ದು ಅವುಗಳನ್ನು ಆಚರಣೆಯ ಭಾಗವಾಗಿಸಿಕೊಂಡಿರುವುದು ಕಂಡು ಬರುತ್ತದೆ. ಅಲ್ಲದೆ ತಾವು ಬಿತ್ತಿ ಬೆಳೆಯುವ ಭೂಮಿಯ ಬಗೆಗೆ ಕೃತಜ್ಞತಾ ಮನೋಭಾವವಿದ್ದು ಆ ಕೃತಜ್ಞತೆಯನ್ನು ಸಲ್ಲಿಸುವ ಹಿನ್ನೆಲೆಯಲ್ಲಿಯೇ ಕೆಲವು ಕೃಷಿ ಆಚರಣೆಗಳಿರುವುದು ಕಂಡು ಬರುತ್ತದೆ. ಹೀಗೆ ಒಟ್ಟು ಕೃಷಿ ಆಚರಣೆಗಳೆಲ್ಲ ಭೂಮಿ, ಮಳೆ, ಬೆಳೆ, ಪ್ರಾಣಿಗಳಿಗೆ ಸಂಬಂಧಿಸಿದವುಗಳೇ ಆಗಿವೆ.

## ಅಧ್ಯಾಯ . ಒಂಬತ್ತು

# ಅಧ್ಯಯನದ ಫಲಿತಗಳು ಮತ್ತು ಸಾಧ್ಯತೆಗಳು.

ಜಗತ್ತಿನ ಇತರ ಭಾಗಗಳಲ್ಲಿ ಜಾನಪದವಿಜ್ಞಾನವನ್ನು ಕುರಿತು ನಡೆದಿರುವ, ನಡೆಯುತ್ತಿರುವ ಸಂಶೋಧನೆ, ವಿಶ್ಲೇಷಣೆ, ಪ್ರಕಟಣೆ, ಅನ್ವಯಕ್ರಿಯೆಗಳಿಗೆ ಹೋಲಿಸಿದರೆ ಭಾರತದಲ್ಲಿ ನಡೆದಿರುವ ಕೆಲಸ ತುಂಬಾಕಡಿಮೆ ಎಂದು ಭಾಸವಾಗುವುದು ಸಹಜ. ಜಾನಪದದ ಬಗೆಗಿನ ಆಸಕ್ತಿ ನಮ್ಮಲ್ಲಿ ಕುತೂಹಲದ ಚಿಪ್ಪೊಡೆದು, ಮೊಳಕೆಗೊಂಡು ಹೆಚ್ಚೂ ಕಡಿಮೆ ನೂರು ವರ್ಷಗಳೇ ಆದರೂ ಅದು ತನ್ನ ಅಸ್ಪೃಶ್ಯತೆಯನ್ನು ಕಳಚಿಹಾಕಿ ಸರ್ವಜನ ಪ್ರೀತಿಯನ್ನು ಗಂಭೀರ ಗೌರವವನ್ನು, ವೈಜ್ಞಾನಿಕದೃಷ್ಟಿಯನ್ನು ಗಳಿಸಿಕೊಂಡಿದ್ದು, ತೀರಾ ಇತ್ತೀಚಿಗೆ ಎಂಬ ಹೆಚ್.ಜೆ.ಲಕ್ಕಪ್ಪಗೌಡ ಅವರ ಮಾತು ನಮ್ಮಲ್ಲಿ ಜಾನಪದ ಕ್ಷೇತ್ರದಲ್ಲಿ ಮತ್ತಷ್ಟು, ಮೊಗೆದಷ್ಟು ಕೆಲಸಗಳು ಆಗಬೇಕು ಎನ್ನುವ ಆಶಯವನ್ನು ತಿಳಿಸುತ್ತದೆ. ಆ ನಿಟ್ಟಿನಲ್ಲಿ "ಮಳೆ ಕಥನ: ಜನಪದ ಪರಂಪರೆಯನ್ನು ಅನುಲಕ್ಷಿಸಿ" ಎನ್ನುವ ಪ್ರಬಂಧದಲ್ಲಿ ಜನಪದೀಯರ ಹಿನ್ನೆಲೆಯಲ್ಲಿ ಮಳೆ ಕುರಿತು ವಿವೇಚಿಸುವ, ವಿಶ್ಲೇಷಿಸುವ ಪ್ರಯತ್ನವನ್ನಷ್ಟೇ ಮಾಡಲಾಗಿದೆ.

ಮಾನವನಿಗೆ ಮೊದಲಿನಿಂದಲೂ ನಿಗೂಢವೂ, ವಿಸ್ಮಯಕರವೂ, ಕುತೂಹಲಪೂರ್ಣವೂ, ಅನ್ವೇಷಣಶಕ್ತಿ ಜನಕವೂ, ಆರಾಧನೀಯವೂ, ಸವಾಲು ಆಗಿರುವುದು ಎಂದರೆ ಪ್ರಾಕೃತಿಕಲೋಕ. ಅದು ತನ್ನ ಮೇಲೆ ನಿರಂತರವೂ ಬೀರುವ ಪ್ರಭಾವ, ಪರಿಣಾಮಗಳ ರಹಸ್ಯವನ್ನು ಸಂಶೋಧಿಸಲು ಅಂದಿನಿಂದಲೂ ಒಂದಲ್ಲಾ ಒಂದು ರೀತಿಯಲ್ಲಿ ಪ್ರಯತ್ನಿಸುತ್ತಲೇ ಬಂದಿದ್ದಾನೆ. ಆಕಾಶಕಾಯಗಳೆಡೆಗೆ ಮಾನವನದೃಷ್ಟಿ ಹರಿದದ್ದನ್ನು ಅವುಗಳಿಂದ ತನ್ನ ಮೇಲಾಗುವ ಪರಿಣಾಮಗಳಿಗೆ ತನ್ನನ್ನು ಒಡ್ಡಿಕೊಳ್ಳುವುದು ಮಾತ್ರವಲ್ಲದೆ ಅವುಗಳ ಬಗ್ಗೆ ಭಯ, ಗೌರವ, ಪ್ರೀತಿ ಕೃತಜ್ಞತೆ, ಆಶ್ಚರ್ಯ, ಆರಾಧನಾ ಮನೋಧರ್ಮವನ್ನು ಬೆಳೆಸಿಕೊಂಡಿದ್ದನ್ನು ಅದರ ಫಲವಾಗಿ ಕಲ್ಪನೆಗಳು, ಸಂಪ್ರದಾಯಗಳು ಬಗೆಬಗೆಯಾಗಿ ಬೆಳೆದು ನಿಂತವೆಂಬುದನ್ನು ಅವಲೋಕಿಸಬಹುದಾಗಿದೆ. ಈ ನಿಟ್ಟಿನಲ್ಲಿ ಮಳೆ ಕುರಿತಂತೆ ಜನಪದೀಯರಲ್ಲಿ ಇರುವ ಕಲ್ಪನೆ, ಸ್ವರೂಪ, ಆಚರಣೆ, ನಂಬಿಕೆ ಇತ್ಯಾದಿ ಸಂಗತಿಗಳ ವಿಶ್ಲೇಷಣೆ ಬಹಳ ಪ್ರಧಾನವಾದುದಾಗಿದೆ. ಮಳೆಯ ಬಗ್ಗೆ ಅತ್ಯಂತ ಆಸಕ್ತಿದಾಯಕವಾದ ಅಂಶಗಳನ್ನು ಒಂದೆಡೆಗೆ ತಂದು ಈ ಪ್ರಬಂಧದಲ್ಲಿ ಸಂಶೋಧನಾತ್ಮಕವಾಗಿ ವಿವರಿಸಲಾಗಿದೆ.

ಒಟ್ಟಾರೆ ಮಳೆಯೆಂದರೆ ಬದುಕು. ಇಡೀ ಜೀವ ಜಗತ್ತಿನ ಅನುಭವ. ಮಳೆ ಬಿದ್ರೆ ಸೊಬಗು, ಇಲ್ಲದಿದ್ರೆ ಕೊರಗು. ಮನುಷ್ಯ ವ್ಯವಸಾಯಗಾರನಾದ ಮೇಲಂತೂ ಮಳೆ ಇನ್ನೂ ಆಪ್ತವಾಯಿತು.

ಕೃಷಿಗಿಂತ ಮುನ್ನ ನೈಸರ್ಗಿಕವಾಗಿ ಪಡೆಯುತ್ತಿದ್ದ, ಸ್ನಾನಕ್ಕಾಗಿ, ಆಹಾರಕ್ಕಾಗಿ ಮಳೆಯನ್ನೇ ಇದಿರು ನೋಡುತ್ತಿದ್ದ ಮನುಷ್ಯ ನಾಗರಿಕನಾದಂತೆ ಮಳೆಯ ನೀರಿನ ಅವಶ್ಯಕತೆ ಹೆಚ್ಚಾಯಿತು. ಇಂತಹ ಮಳೆಯ ಹುಟ್ಟಿನ ಬಗೆಗೆ ಪ್ರಾದೇಶಿಕ ಮಟ್ಟದಲ್ಲಿ ಭಿನ್ನ ಭಿನ್ನವಾದ ಕಲ್ಪನೆ, ಕಥೆಗಳಿವೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಪ್ರಸ್ತುತ ಅಧ್ಯಯದ ಉದ್ದೇಶದಿಂದಾಗಿ ಕೆಲವು ಪ್ರದೇಶಗಳಲ್ಲಿನ ಕೆಲವು ಕಲ್ಪನೆಗಳನ್ನಷ್ಟೇ ತಿಳಿಸಲು ಪ್ರಯತ್ನಿಸಲಾಗಿದೆ.

ಮಳೆಯೆಂಬ ವಿಷಯ ಭಾರತೀಯಸಮಾಜದಲ್ಲಿ ಪಂಚಾಂಗದೊಂದಿಗೆ ತಳುಕು ಹಾಕಿಕೊಂಡು ಬೆಳೆದು ಬಂದರೆ ಮುಂದುವರೆದ ದೇಶಗಳಲ್ಲಿ ಮಳೆಶಾಸ್ತ್ರವೆಂದು ಬೆಳೆಯತೊಡಗಿದಂತೆ ಕಾಣುತ್ತದೆ. ಮಳೆಯ ಹುಟ್ಟು, ಮಳೆಯ ನಕ್ಷತ್ರ, ಮಳೆಯ ಬಗೆಗಿನ ಆಚರಣೆಗಳು. ನಂಬಿಕೆ ಕಲ್ಪನೆ ಮತ್ತು ಮಳೆ ಯಾವಾಗ ಬರುತ್ತದೆ, ಎಷ್ಟು ಕಾಲ ಬರುತ್ತದೆ, ಯಾವ ಮಳೆ ರೈತನ ಮಿತ್ರ, ಯಾವ ಮಳೆ ಹದವಾದಮಳೆ, ಬೆದೆಮಳೆ ಯಾವುದು ಇತ್ಯಾದಿ ವಿಷಯಗಳನ್ನು ಕುಳಿತಲ್ಲಿಯೇ ಹೇಳುವ ನಮ್ಮ ಗ್ರಾಮೀಣ ಜನತೆಯ ಪ್ರತಿಭೆ ನಿಜಕ್ಕೂ ಕಲಿತವರಿಗಿಂತ ಒಂದು ಕೈ ಮೇಲು ಎಂದೇ ಹೇಳಬೇಕು. ದಕ್ಷಿಣಭಾರತದ ವಿವಿಧ ಭಾಷೆಗಳಲ್ಲಿನ ಮಳೆಗಾದೆಗಳ ತೌಲನಿಕ ಅಧ್ಯಯನ ಈ ಭೂಖಂಡದಲ್ಲಿನ ಮಳೆ ನಂಬಿಕೆಗಳ ಮೇಲೆ ಇನ್ನಷ್ಟು ಬೆಳಕು ಚೆಲ್ಲಬಹುದು. ಮಳೆ ಲೆಕ್ಕಾಚಾರದ ಪದ್ಧತಿಯೇನೋ ಇಡೀ ಭಾರತದಲ್ಲೆಲ್ಲಾ ಏಕರೂಪವಾಗಿರುವಂತೆ ಕಾಣುತ್ತದೆ. ಆದರೆ ಮಳೆಶಕುನಗಳು, ವಿವಿಧ ವರ್ಗದ ಮಳೆಆಚರಣೆಗಳು, ಇವುಗಳಲ್ಲೆಲ್ಲಾ ಸಾಕಷ್ಟು ವ್ಯತ್ಯಾಸಗಳೂ ವೈವಿದ್ಯತೆಗಳೂ ಕಂಡುಬರುವ ಸಾಧ್ಯತೆ ಇದೆ. ಜಿಲ್ಲಾವಾರು, ಪ್ರದೇಶವಾರಾಗಿ ಇಂಥ ಅಧ್ಯಯನಗಳು ನಡೆದರೆ ಅವು ಮಾದರಿ ಅಧ್ಯಯನಗಳಾಗುವ ಸಾದ್ಯತೆಗಳಿವೆ.

ಆಧುನಿಕವಾಗಿ ಮನುಷ್ಯ ಎಷ್ಟೇ ಮುಂದುವರೆದರೂ ಪ್ರಕೃತಿ ನಿಸರ್ಗದ ಎದುರು ಅವನು ಕುಬ್ಜ. ವಿಶ್ವವ್ಯಾಪ್ತಿಯಾಗಿ ನಂಬಿಕೆ ಅಚರಣೆಗಳ ಮೂಲಕ ಭಾವನೆಗಳಾಗಿ ಆವರಿಸಿರುವ ಮಳೆ ಮಾನವನಲ್ಲಿ ತನ್ನದೇ ಅಸ್ತಿತ್ವವನ್ನು ಕಾಪಾಡಿಕೊಂಡಿದೆ. ಆಧುನೀಕರಣ ಪಾಶ್ಚಾತ್ಯೀಕರಣ ಜೀವನಶೈಲಿಯನ್ನು ಬದಲಿಸಿರಬಹುದು. ಶಿಕ್ಷಣ ಮೌಖಿಕಸಾಹಿತ್ಯವನ್ನು ನಿರ್ಲಕ್ಷಿಸಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಆಹಾರ, ನೀರು ಇವುಗಳನ್ನು ಹೊರತುಪಡಿಸಿ ಇನೇನನ್ನೂ ಸೇವಿಸಿ ಬದುಕಲಾರ. ಹೀಗಾಗಿ ಮಳೆಜೀವಿಯ ಅತ್ಯವಶ್ಯಕ ಅಂಶಗಳಲ್ಲಿ ಪ್ರಮುಖವಾದದು. ಮಳೆ–ಜನಪದ ಪರಂಪರೆಯನ್ನು ಅನುಲಕ್ಷಸಿ ಎನ್ನುವ ಈ ಪ್ರಬಂಧವು ಮಳೆಸಂಸ್ಕೃತಿಯನ್ನು ಆಧಾರವಾಗಿಟ್ಟುಕೊಂಡು ನೆಡೆಸಿದ ಸಂಶೋಧನೆಯಾಗಿದೆ. ಜನಪದ ಆಂತರ್ಯದಲ್ಲಿ ಜೀವಸೆಲೆಯಂತಿರುವ ಮಳೆಯ ಬಗೆಗಿನ ಭಾವನಾತ್ಮಕ ವಾಸ್ತವಸಂಬಂದಗಳನ್ನು ಮತ್ತು ಆ ಬಗೆಯ ಅನಿವಾರ್ಯತೆಯನ್ನು ಶೋಧಿಸುವ ಪ್ರಯತ್ನ

ಮಾಡಲಾಗಿದೆ. ಜನಪದ ಮನೋರಂಜನೆಯಷ್ಟೆ ಅಲ್ಲ ಜೀವನ ಕ್ರಮವು ಹೌದು. ಜಗತ್ತು ಮತ್ತು ಜೀವನ ಮುಂದುವರೆದಂತೆಲ್ಲಾ ಆದ ಪರಿವರ್ತನೆಗಳು, ಅಸ್ತಿತ್ವ, ಸಂಘರ್ಷ, ಪ್ರತಿರೋಧ ಮುಂತಾದವುಗಳಿಗೆ ಮಳೆ ಎನ್ನುವ ಪ್ರಕೃತಿ ನಿಯಮ ಹೇಗೆ ಕಾರಣವಾಯಿತು ಎನ್ನುವ ಅಂಶವು ಮನುಷ್ಯ ಬದುಕಿನಶೋಧವೇ ಅಗುತ್ತದೆ.

ಪ್ರದೇಶವಾರು ಗಡಿ, ಮಿತಿ ಎಂಬ ಅಂಶಗಳ ನಡುವೆಯು ಜೀವನಕ್ರಮ ಜನಪದೀಯವಾಗಿ ಅಲೋಚನಕ್ರಮಗಳಲ್ಲಿ ಏಕಮುಖವಾದ ಸಾಮ್ಯತೆ ಕಾಣಬಹುದು. ಹಾಗಾಗಿ ಪ್ರಾಚೀನಕಾಲದ ಜೀವನಕ್ರಮದ ಮೂಲ ಒಂದೇ ಆಗಿರಬಹುದಾದ ಜೊತೆಗೆ ಚದುರಿಹೋದ ಜನರು ಅಲ್ಲಿನ ಸಾಧ್ಯತೆ ಗಳನ್ನು ನಿರಾಕರಿಸುವಂತಿಲ್ಲ. ನಿಸರ್ಗಕ್ರಮಕ್ಕೆ ಅನುಗುಣವಾಗಿ ಬದುಕಿನ ಕ್ರಮವನ್ನು ರೂಢಿಸಿಕೊಂಡರು. ಸ್ತ್ರೀಪ್ರಧಾನ ಆದಿಮವ್ಯವಸ್ಥೆಯು ಪುರುಷಪ್ರಧಾನ ಆಧುನಿಕವ್ಯವಸ್ಥೆಯ ನಡುವಿನ ಕಾಲಘಟ್ಟದಲ್ಲಿ ಘಟಿಸಿದ ಸ್ಥಿತ್ಯಂತರಗಳನ್ನು ಗಮನಿಸಲಾಗಿದೆ. ಆಕಾಶದಲ್ಲಿ ಮೋಡಗಳಾಗಿ ಕರಗಿ ಕೆಳಮುಖವಾಗಿ ಚಲಿಸುವಮಳೆ ಒಂದಡೆಯಾದರೆ, ಭೂಮಿಯ ಕೆಳಭಾಗದಲ್ಲಿ ಅಡಗಿ ಮೇಲುಮುಖವಾಗಿ ಬರುವ ಅಂಶವನ್ನು ಗಮನಿಸಬಹುದು, ಆದರೆ ಮಳೆಯಾದರೆ ಮಾತ್ರ ಭೂಮಿಯ ತಳಭಾಗದಲ್ಲಿ ನೀರು ಎಂದು ನಂಬಿಕೊಂಡಿರುವ ಮನುಷ್ಯ ಮಳೆಗೆ ನೀಡುವ ಸ್ಥಾನವನ್ನು ಭೂಮಿಯ ತಳಭಾಗದಲ್ಲಿ ಸಿಗುವ ನೀರಿಗೆ ನೀಡಿಲ್ಲ.

ಗ್ರಾಮೀಣರ ನಂಬಿಕೆ, ಆಚರಣೆ, ಸಂಪ್ರದಾಯ ಆಚರಣೆ, ಆರಾಧನೆಯ ಭಾಗವಾಗಿರುವ ಮಳೆ ಇಡೀಯಾಗಿ ಬದುಕನ್ನೇ ಆವರಿಸಿದೆ. ಸ್ವಾತಿ ಮಳೆಯ ನೀರನ್ನು ಹಿಡಿದು ಹೆಪ್ಪುಹಾಕಿ ಹೈನುಗಾರಿಕೆಯನ್ನು ಪ್ರಾರಂಭಿಸುವುದು, ಹಸ್ತ ಹನಿಕಿ ಚಿತ್ತ ಬೆದಕಿ, ಅಕ್ಕ ಅಕ್ಕಿ ತಿಂದರೆ ಮದುವೆಯಲ್ಲಿ ಮಳೆ ಬರುತ್ತೆ, ಮಳೆ ಬಂದ್ರೆ ಕೆಡಲ್ಲ ಮಗ ಉಂಡರೇ ಕೇಡಲ್ಲ, ಸಂಜೆ ಬಂದ ನೆಂಟ ಮಳೆ ಎರಡು ಹೋಗಲ್ಲ, ಎನ್ನುವ ಜನಪದರು ಒಂದೊಂದು ಮಳೆಗೆ ನಾನಾ ರೀತಿಯ ನಂಬಿಕೆಗಳನ್ನು ಕೊಟ್ಟು ಆರಾಧಿಸುವಂತಹವರು. ಜೋಕುಮಾರ ಪರ್ಜನ್ಯ, ಇಗ್ಗುತ್ತಪ್ಪ, ಮಳೆಮಲ್ಲಪ್ಪ, ಮಳೆರಾಯ, ವರುಣ, ಎನ್ನುವ, ಮಳೆಯ ಪುರುಷದೇವತೆಗಳ ಜೊತೆಗೆ ೨೭ ಸ್ತ್ರೀನಾಮ ಮಳೆಗಳಾಗಿ ಹೇಗೆ ಸ್ಥಾನವನ್ನು ಪಡೆದವು ಎಂಬ ಅಂಶವನ್ನು ಗಮನಿಸಬಹುದು.

ಮಳೆಯು ಮನುಷ್ಯ ಸಂಬಂಧದಿಂದ ಪ್ರತ್ಯೇಕಗೊಳ್ಳುತಿರುವ ಈ ಸಂದರ್ಭದಲ್ಲಿ ಮಳೆಯು ಜೀವಪೋಷಕದಂತೆ ಜೀವನಾಶಿನಿಯು ಹೌದೆಂಬುದು ಜಗತ್ತಿಗೆ ಅರಿವಾಗುತ್ತಿದೆ. ಪ್ರಕೃತಿದತ್ತವಾದ ಮಳೆಯ ವೈಜ್ಞಾನಿಕಸಂಶೋಧನೆಗಳನ್ನು ಮೀರುವ ಧಾತುವನ್ನು ಹೊಂದಿದೆ. ಜಗತಿನ್ತ ಬದುಕು ನೀರಿನ ಅವಶ್ಯಕತೆ ಜಗತ್ತಿಗೆ ಗೊತ್ತಿದೆ. ಸಾಮಾನ್ಯಜ್ಞಾನವೆಂದರೆ ನೀರಿಗೆ ಮಳೆಯಲ್ಲದೆ ಬೇರಾವ ಮೂಲವೂ

ಇಲ್ಲದಿರುವುದು. ಅಂತರ್ಜಲಕುಸಿತಕ್ಕೂ ನೀರಿನ ಬಳಕೆಗೂ ಮಳೆಗೂ ನೇರವಾದ ಅವಿನಾಭಾವ ಸಂಬಂಧವಿದೆ. ವಿಶ್ವಸಂಸ್ಥೆಯ ಸಂಶೋಧನೆಯ ಪ್ರಕಾರ ಈ ಪರಿಸ್ಥಿತಿ ಹೀಗೆ ಮುಂದುವರಿದರೆ ಇನ್ನು ಕೇವಲ ೨೦ ವರ್ಷಗಳಲ್ಲಿ ನೀರು ಸಿಗದೇ ಜನ ಸಾಯುತ್ತಾರೆಂದು ಹೇಳಿಯೇ ೧೦ ವರ್ಷಗಳು ಕಳೆದಿವೆ. ನಮಗುಳಿರುವುದು ಕೇವಲ ೧೦ವರ್ಷಗಳಷ್ಟೆ. ಅಬ್ದುಲ್‌ಕಲಾಂರು ಕೂಡ ನೀರಿನ ನೆಲೆಗಳ ಹತ್ತಿರ ರಕ್ಷಣಾಪಡೆಯನ್ನು ನಿಲ್ಲಿಸಬೇಕಾದಿತೆಂದು ಆತಂಕ ವ್ಯಕ್ತಪಡಿಸಿದ್ದಾರೆ. ಮುಂದೊಂದು ದಿನ ೩ನೇ ವಿಶ್ವಸಮರ ನಡೆದರೆ ಅದು ನೀರಿಗಾಗಿ ಮಾತ್ರ ಎಂಬುದು ಕೂಡ ಸತ್ಯವಾದಿತು. ಇದೆಲ್ಲಕ್ಕೂ ನೇರವಾದ ಕಾರಣ ಮಳೆ ಎಂಬುದನ್ನು ಮರೆಯುವಂತಿಲ್ಲ. ಈ ಮಳೆ ನಮ್ಮನ್ನು ಕೈಬಿಡಲಾರದೆಂದು ಮನುಷ್ಯನಸ್ವಾರ್ಥಕ್ಕೆ ನಾಶವಾಗುತ್ತಿರುವ ಮರಗಳನ್ನು ಅಷ್ಟೇ ಉಳಿಸಿದರೆ ಸಾಕೆನ್ನುವ ಅರಿವು ನಮಗಾಗದಿರದು. ಪ್ರಸ್ತುತ ಸಂಶೋಧನೆಯು ಕಂಡುಕೊಂಡ ಫಲಿತಗಳನ್ನು ಕೆಳಗಿನಂತೆ ಕಂಡುಕೊಳ್ಳಲಾಗಿದೆ.

**ಮಳೆಯ ವಿಶ್ವವ್ಯಾಪಕ ಗುಣ**

ಜನಪದ ಎನ್ನುವ ಪರಿಕಲ್ಪನೆಯು ಸೀಮಿತ ಸಮುದಾಯ ಬದುಕಿನಕ್ಷೇತ್ರ ಸೀಮಿತವಾಗಿರದೆ ಅನಂತ ಬದುಕಿನ ವಿಸ್ತಾರತೆಯನ್ನು ಹೊಂದಿದೆ ಎಂದು ನಂಬುವ ಯಾರಿಗೆ ಅದರೂ ಜನಪದ ನಮ್ಮ ಸಾಂಸ್ಕೃತಿಕನೆಲೆಗಳ ಆಂತರ್ಯವೆಂಬುದು ಗೋಚರಿಸದಿರಲಾರದು. ಮಾನವನ ಇಡೀ ಬದುಕನ್ನು ನಿಯಂತ್ರಿಸುವುದು ಮಳೆಯೆಂಬುದನ್ನು ಪ್ರತ್ಯೇಕವಾಗಿ ಹೇಳುವ ಅವಶ್ಯಕತೆಯಿಲ್ಲ. ಪ್ರಸ್ತುತ ಪ್ರಬಂದವು ಅದನ್ನು ಗುರ್ತಿಸುವತ್ತ ತನ್ನ ವೈಧಾನಿಕಸ್ಪಷ್ಟತೆಯನ್ನು ಗುರ್ತಿಸಿಕೊಂಡಿದೆ. ಯಾಂತ್ರಿಕರಣ ವೈಜ್ಞಾನಿಕ ಸಂಶೋಧನೆಗಳು ಬೌದ್ಧಿಕಕೌಶಲ್ಯವನ್ನು ಸಾಬೀತುಪಡಿಸಿದರೂ ಮನುಷ್ಯ ಮಳೆಯ ಹೊರತಾದ ಚಿಂತನ ನಡೆಸುವುದು ಕಷ್ಟವಾಗುತ್ತದೆ. ಮಳೆಯನ್ನು ಸಮಾನತತ್ವದ ನೆಲೆಗಳಲ್ಲಿ ಅರ್ಥೈಸಿಕೊಳ್ಳುವುದು ಮುಖ್ಯವೇ. ನಿಸರ್ಗತತ್ವದನೆಲೆಗಳ ಮೇಲೆ ಅರ್ಥೈಸಿಕೊಂಡರೆ ಪ್ರಸ್ತುತ ಜಾಗತಿಕ ವಿನಾಶದಂಚಿನ ಹಲವಾರು ಕ್ರೌರ್ಯಗಳಿಗೆ ಈ ಕ್ರಮ ಹೇಗೆ ಸಿದ್ಧೌಷಧವಾಗಿ ಸಹಾಯವಾಗಬಲ್ಲದು ಎಂಬುದನ್ನು ಅಧ್ಯಯನದಲ್ಲಿ ಪ್ರಸ್ತುತಪಡಿಸಲಾಗಿದೆ.

**ಲಿಂಗಬೇಧ ಹಾಗೂ ಪ್ರತಿಸಾಂಸ್ಕೃತಿಕ ಸ್ತ್ರೀವಾದಿ ಶೋಧಿತ ನೆಲೆಗಳು**

ಜನಮಾನಸದಲ್ಲಿ ಇರುವ ಪ್ರಬಲ ಪರಿಕಲ್ಪನೆಯೆಂದರೆ ಮಳೆಯನ್ನು ಒಂದು ಭೌತಿಕವಸ್ತುವಾಗಿ ಪರಿಗಣಿಸಿದ್ದು. ವಿಜ್ಞಾನಿಗಳು ಅದನ್ನೊಂದು ಜಲಮೂಲವೆಂಬ ವೈಜ್ಞಾನಿಕ(ಇದು ಅಪ್ರಬುದ್ಧ ಚಿಂತನೆಯು ಹೌದು)ಸಂಶೋಧನೆಗೆ ಒಳಪಡಿಸಿದ್ದು. ಇವೆರಡೂ ಸಹ ಏಕಮುಖಿದೃಷ್ಟಿಕೋನವನ್ನು

ಹೊಂದಿದ್ದು ಪ್ರಸ್ತುತ ಅಧ್ಯಯನವು ಇವೆರಡನ್ನು ವಸ್ತುನಿಷ್ಠ ಹಾಗೂ ಆಧಾರಗಳೊಂದಿಗೆ ಒಡೆದು ಹಾಕುತ್ತದೆ. ಪಿತೃಮೂಲ ಆರ್ಯಸಂಸ್ಕೃತಿ ನಿರ್ವಚಿಸಿಕೊಂಡ ಕ್ರಮವೇ ಮಳೆ ಕುರಿತಾದ ಚಿಂತನೆಯನ್ನು ವೈಧಿಕಚಿಂತನೆಯಾಗಿಸಿದೆ. ಇದು ಒಂದು ರೀತಿಯ ಮಳೆಯ ಲಿಂಗಾಂತರಪ್ರಕ್ರಿಯೆಯಾಗಿಯೂ ಕಾರ್ಯಪ್ರವೃತ್ತವಾಗಿದೆ. ಮೂಲಸಂಸ್ಕೃತಿಯಲ್ಲಿ ಮಳೆಯು ಸ್ತ್ರೀಲಿಂಗಾವಸ್ಥೆಯಲ್ಲಿರುವುದನ್ನು ಮಳೆ ಸ್ತ್ರೀಲಿಂಗಸಂಬಂಧಿಯೂ ಆಗಿತ್ತೆಂಬುದನ್ನು ಸಾಕ್ಷೀಕರಿಸಲಾಗಿದೆ. ಪ್ರಚಲಿತವಿರುವ ಏಕಮುಖಿ ನಂಬಿಕೆಯನ್ನು ಪ್ರಶ್ನಿಸುವ ಮೂಲಕ ಮಳೆಯ ಭಿನ್ನ ಆಯಾಮಗಳತ್ತ ಗಮನ ಹರಿಸಲು ಪ್ರಸ್ತುತ ಅಧ್ಯಯನವು ಹೊಸಮಾರ್ಗ ತೆರೆಯುತ್ತದೆ.

ಮಳೆಯನ್ನು ಮಳೆಯಾಗಿ ಮಾತ್ರ ಗುರುತಿಸಿಕೊಳ್ಳದೆ ಅದೊಂದು ಸಂಸ್ಕೃತಿಯ ಆಕರವೆಂಬಂತೆ ಭಾವಿಸಲಾಗಿದೆ. ಕಥನಗಳ ಅಂತಸ್ಥಸ್ಥಿತಿಯನ್ನು ಅತ್ಯಂತಿಕವಾಗಿ ಗುರುತಿಸುವ ಪ್ರಯತ್ನವಿದೆ. ಪಿತೃಮೂಲಿಯಸಾಂಸ್ಕೃತಿಕ ಹೇರುವಿಕೆಗೆ ಪ್ರತಿರೋಧವೊಡ್ಡುವ ಅಂಶಗಳು ಕಥನಗಳಲ್ಲಿದೆ. ಪ್ರಮುಖವಾಗಿ ಸ್ತ್ರೀಯು ಸ್ಥಾಪಿತಮೌಲ್ಯಾತ್ಮಕ ಸಂಸ್ಕೃತಿಗೆ ನಿರ್ಮಿಸಿಕೊಳ್ಳುವ ಪ್ರತಿಸಾಂಸ್ಕೃತಿಕ ಚಹರೆಗಳು ಕಥನಗಳಲ್ಲಿ ನಿಚ್ಚಳವಾಗಿವೆ. ಪಿತೃಸಂಸ್ಕೃತಿಯು ಪ್ರಮುಖವಾಗಿ ವೈದಿಕಆಚರಣೆಗಳಿಂದ ಕೂಡಿದ ಮಾಟಮಂತ್ರಗಳಿಗೆ ಮೊರೆಹೊಗುತ್ತದೆ. ಇಂತಹ ನಿಷೇಧಾತ್ಮಕ ಆಚರಣೆಗಳು 'ಮಾಯದಂತಹ ಮಳೆ ಬಂತಣ್ಣ ಮದಗಾದ ಕೆರೆಗೆ' ಎನ್ನುವ ಕಥನದಲ್ಲಿ ಗುರ್ತಿಸಿ ಜೋಕುಮಾರಕಥನದಲ್ಲೂ ಬಂಡಾಯದ ನೆಲೆಯಲ್ಲಿ ಸ್ತ್ರೀಕೇಂದ್ರಿತ ಬಂಡಾಯವಾಗಿ ಗುರುತಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ.

**ಆಚರಣೆ, ಕಥನಗಳ ಆಳದ ದಲಿತ ಆದಿಮ ಪ್ರಜ್ಞೆ**

ಮಾನವವಿಕಾಸದ ಬೌದ್ಧಿಕಇತಿಹಾಸವನ್ನು ಗುರುತಿಸುವಲ್ಲಿ ನಾವು ಬಳಿಸಿಕೊಂಡ ಅಕರಗಳು ಲಿಖಿತರೂಪವಾಗಿರುವುದು ಸ್ಪಷ್ಟ. ಪ್ರಸ್ತುತ ಅಧ್ಯಯನದಲ್ಲಿ ಈ ಕ್ರಮವನ್ನು ಪ್ರಶ್ನಿಸಿ ಮಳೆ ಕುರಿತು ಆಚರಣೆಗಳಲ್ಲಿ ಅಂತಸ್ಥವಾಗಿರುವ ಆದಿಮಪ್ರಜ್ಞೆಯನ್ನು ಲಕ್ಷಿಸಿ ಮಾನವಚರಿತ್ರೆಯನ್ನು ಗ್ರಹಿಸಲು ಪ್ರಯತ್ನಿಸಲಾಗಿದೆ. ಮನುಷ್ಯ ಏನೇ ವೈಜ್ಞಾನಿಕಸತ್ಯಗಳನ್ನ ಒಪ್ಪಿಕೊಂಡರೂ ವಿಜ್ಞಾನವೂ ಸಹ ಕೆಲವೊಮ್ಮೆ ಸತ್ಯವನ್ನಷ್ಟೇ ನುಡಿಯಲಾರದು. ಕಾರಣ ಅದೂ ಕೂಡ ಒಬ್ಬ ವ್ಯಕ್ತಿಯ ಪ್ರಾಯೋಗಿಕ ಫಲಿತಾಂಶ ವಾಗಿದ್ದು ಅಲ್ಲಿ ಅನುಭವದ ಗೈರುಹಾಜರಿ ಕಂಡುಬಂದು ನಿರ್ಭಾವುಕವಾದ ಮಾಹಿತಿಯು ನಿರ್ದೇಶಿತ ನೆಲೆಯದಾಗಿರುವುದು. ಇಂತಹ ಪ್ರಯೋಗಕ್ಕೆ ಹೊರತಾಗಿ ಅಖಂಡತೆಯನ್ನು ಗ್ರಹಿಸಿ ಆಚರಣೆಗಳ ಮೂಲನೆಲೆಯನ್ನು, ವ್ಯಕ್ತಿಮನೋಭಾವಕ್ಕನುಗುಣವಾಗಿ ಸ್ಥಿತ್ಯಂತರವಾದ ನೀತಿಗಳನ್ನು ಗುರುತಿಸುವ ಮೂಲಕ ಅಚರಣೆಗಳಲ್ಲಿ ಅಡಗಿರುವ ಆದಿಮಪ್ರಜ್ಞೆಯು ಸಾಮುದಾಯಿಕ ನಿಷ್ಕಲ್ಮಷತೆಗೆ ಹಾಗೂ ಪ್ರತಿಪಾದಿಸಲ್ಪಡುವ ವಿಶ್ವಭ್ರಾತೃತ್ವ ಗುಣವನ್ನು ಗುರುತಿಸಿದೆ. ಈ ಕಾರಣಕ್ಕೆ ಊರ್ಧ್ವಮುಖಿ ಅಥವಾ

ಅಧೋಮುಖಿಕ್ರಮಗಳಲ್ಲಿ ಮುಖ್ಯವಾಹಿನಿಗೆ ತುಡಿಯುವ ನೆಲೆ, ಜನಪದದ ವಾರಸುದಾರರಾದ ದ್ರಾವಿಡರ, ದಲಿತರ ಮೂಲಪ್ರಜ್ಞೆಯನ್ನು ಬುದ್ಧಮಾರ್ಗಗಳನ್ನು ಲಕ್ಷಿಸಲಾಗಿದೆ. ಆಚರಣೆಗಳು ಆರ್ಯೀಕರಣ ಸ್ವರೂಪದವುಗಳಲ್ಲವೆಂಬುದನ್ನು ನಂತರ ಅವುಗಳಿಗೆ ಆರ್ಯೀಕರಣದ ಸ್ಪರ್ಶ ತಗಲಿರುವುದನ್ನು ಗುರುತಿಸಲಾಗಿದ್ದು ಆಚರಣೆಗಳು ಆರ್ಯಸಂಪ್ರದಾಯವನ್ನು ಲೌಕಿಕಸತ್ಯಗಳ ಪ್ರತಿಪಾದಕ ಅಕರಗಳು ದೈವಪರಿಕಲ್ಪನೆಯು ಅಭೌತವಾದಿ ನೆಲೆಯದು. ಆಚರಣೆಗಳು ಭೌತವಾದಿ ತತ್ವಜ್ಞಾನವನ್ನು ಹೇಗೆ ಪ್ರತಿಪಾದಿಸುವುದೆಂಬುದನ್ನು ನಿರ್ವಚಿಸಲಾಗಿದೆ.

**ಭೂಮಿ ಕೇಂದ್ರ ತತ್ವ ಮತ್ತು ಆಕಾಶ ಬೀಜತತ್ವಗಳ ಅನುಸಂಧಾನ**

ಸಂಸ್ಕೃತಿಗಳನ್ನು ವಿರೋಧದನೆಲೆಗಳಲ್ಲಿ ವಿಶ್ಲೇಷಣೆ ಮಾಡುವುದು ಸದ್ಯಕ್ಕೆ ಬೆಳೆದು ನಿಂತಿರುವ ಅಧ್ಯಯನಶಿಸ್ತು. ಕ್ರಮವಾಗಿ ವಿಮರ್ಶೆಗಳಲ್ಲೂ ಇದು ಪ್ರಚಲಿತದಲ್ಲಿದೆ. ಸಂಸ್ಕೃತಿಯಲ್ಲಿ ಪ್ರಧಾನಧಾರೆಗಳು ಹಲವು. ಹಾಗೇ ಪ್ರತಿಯೊಂದಕ್ಕೂ ತನ್ನದೇ ಆದ ವೈಲಕ್ಷಣಗಳಿರುತ್ತವೆ. ಆಶಯಗಳಿರುತ್ತವೆ. ಲೋಕದೃಷ್ಠಿ ಸೈದ್ಧಾಂತಿಕತೆಯಿರುತ್ತದೆ. ಇದನ್ನು ನೀರದೀವಿಗೆ ಕೃತಿಯಲ್ಲಿ ನಾರಾಯಣಸ್ವಾಮಿಯವರು ಆಗ್ನಿ ಜಲ ಸಂಸ್ಕೃತಿಗಳ ಹಿನ್ನಲೆಯಲ್ಲಿ ಸವಿವರವಾಗಿ ವಿಶ್ಲೇಷಿಸಿದ್ದಾರೆ. ಕೆಂದ್ರತತ್ವ ಬೀಜತತ್ವಗಳ ಹಿನ್ನೆಲೆ ಆದಕ್ಕೆ ಸೇರ್ಪಡೆಯಾಗಿದೆ. ಆದರೆ ಇವೆರಡನ್ನೂ ಪೂರ್ಣ ವಿರೋಧದನೆಲೆಗಳಲಿಯೇ ಕಾಣುತ್ತಾರೆ. ಪ್ರಸ್ತುತ ಈ ಪ್ರಬಂಧದಲ್ಲಿ ಭೂಮಿಯನ್ನು ಕೇಂದ್ರತತ್ವದಲ್ಲಿ ಆಕಾಶವನ್ನು ಬೀಜತತ್ವದ ಮಾದರಿಗಳಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಇವೆರಡನ್ನು ಭಿನ್ನರೂಪಗಳಲ್ಲಿ ವಿವರಿಸಿಕೊಂಡರೂ ಸಂಘರ್ಷಾತ್ಮಕ ವಿರೋಧದ ನೆಲೆಯಲ್ಲಿ ನಿರ್ವಚಿಸಿಕೊಂಡಿದೆ. ಪ್ರತ್ಯೇಕ ಅಸ್ತಿತ್ವವನ್ನು ಗುರ್ತಿಸಿ ಎರಡನ್ನು ಅನುಸಂಧಾನಿಸಿ ಫಲಿತಗಳನ್ನು ಕಂಡುಕೊಂಡು ಸಮನ್ವಯತತ್ವದ ನೆಲೆಯಲ್ಲಿ ಕಾಣಿಸಲಾಗಿದೆ.

**ತಾತ್ವಿಕತೆಯನ್ನು ಗುರ್ತಿಸಿಕೊಂಡ ಕ್ರಮ**

ಸಂಶೋಧನಾ ವಿಷಯ ಆಯ್ಕೆಯಾದ ನಂತರ ಪ್ರಬಂಧವು ಬೆಳೆಯಲು ಸಂಶೋಧಕ ಪ್ರಬಂಧದ ವಿಷಯಕ್ಕೊಂದು ಸೂಕ್ತವಾಗುವ ತಾತ್ವಿಕತೆಯನ್ನು ಗುರ್ತಿಸಿಕೊಂಡು ಅದರ ಮೇಲೆಯೇ ನಿರ್ವಚಿಸಿಕೊಳ್ಳುವ ಕ್ರಮವೇ ಪ್ರಬಂಧದ ಅನನ್ಯತೆಗೆ ಕಾರಣವಾಗುತ್ತದೆ. ಜನಪದ ಸಂಶೋಧನೆಗಳು ವಿವರಣೆ ಮತ್ತು ವಿಶ್ಲೇಷಣಾ ಮಾದರಿಗಳನ್ನು ಅನುಸರಿಸಿದೆಯೆಂಬುದು ಸ್ಪಷ್ಟ, ಜೊತೆಗೆ ವ್ಯಾಖ್ಯಾನಗಳೂ ನಡೆಯುತ್ತವೆಯೆಂಬುದು ಸ್ಪಷ್ಟ, ವಿಷಯಆಯ್ಕೆ ಮಳೆಕಥನಗಳಾದರೂ ಇದಕ್ಕೆ ಪ್ರಸ್ತುತದಲ್ಲಿರುವ ತಾತ್ವಿಕತೆಯನ್ನು ಹೋಗಲಾಡಿಸಿಕೊಂಡು ಆದಿಮ ಸಾಂಸ್ಕೃತಿಕಚಹರೆಗಳನ್ನು ಶೋಧಿಸಲು ಆದಿಮಪ್ರಜ್ಞೆಯ ದಲಿತ, ನಿರ್ಲಕ್ಷಿತಸಮುದಾಯಗಳ ಲೋಕದೃಷ್ಟಿಯ ಬಂಡಾಯ ಮನೋಧೋರಣೆಗೆ ಒತ್ತು ನೀಡಲಾಗಿದ್ದು ವಿದ್ವಾಂಸವಲಯ ನಿರ್ವಚಿಸಿಕೊಂಡಿರುವ ತಾತ್ವಿಕ ವಿವರಗಳಿಗಿಂತ ಹೆಚ್ಚಾಗಿ ಕಥನ

ಕಟ್ಟಿರಬಹುದಾದ ಪ್ರಜ್ಞಾತ್ಮಕಸ್ಥಿತಿಯನ್ನು ಹೆಚ್ಚು ಲಕ್ಷಿಸಿ ಮುಂದಿನ ಪರಂಪರೆಗೆ ತಲುಪಿಸುವ ಯತ್ನ ಮಾಡಲಾಗಿದ್ದು ವಕ್ತೃಕೇಂದ್ರ ವಿವರಣೆ, ವಿಶ್ಲೇಷಣೆಯನ್ನು ಗಣನೆಗೆ ತೆಗೆದುಕೊಳ್ಳುವ ಕ್ರಮದ ಪ್ರಾಮುಖ್ಯತೆಯನ್ನು ಮನಗಾಣಿಸಿದೆ.

**ಬದಲಾದ ಪರಿಸರಪ್ರಜ್ಞೆಯಲ್ಲಿ ಮಳೆಯ ಅರಿವಿನ ಪ್ರಸ್ತುತತೆ**

ಮನುಷ್ಯ ಬೌದ್ಧಿಕವಾಗಿ ವಿಕಾಸವಾದಂತೆಲ್ಲಾ ಪರಿಸರ ಕುರಿತು ಆತನ ಗ್ರಹಿಕೆ ದೃಷ್ಟಿಕೋನ ಬದಲಾಗುತ್ತದೆ. ಆತನನ್ನು ನಿಯಂತ್ರಿಸುವ ಪರಿಸರಾತ್ಮಕ ಅಂಶಗಳು ಬದಲಾಗುವ ಅವಕಾಶ ಇದೆಯಾದರೂ ಪಂಚಭೂತ ವೈಪರಿತ್ಯಕ್ಕೆ ಆಸಹಾಯಕನಾಗಿಯೇ ಉಳಿಯುತ್ತಾನೆ. ಆ ಅಂಶಗಳಲ್ಲಿ ಮಳೆಯು ಪ್ರಮುಖವಾದುದ್ದಾಗಿದೆ. ಮಳೆಯನ್ನೆ ಅನಿರ್ವಾಯವಾಗಿ ಮನುಷ್ಯ ಅಶ್ರಯಿಸಬೇಕಾಗಿದೆ. ಸದಾಕಾಲವೂ ಮನುಷ್ಯ ಮಳೆಯಾಶ್ರಿತನಾಗಿಯೇ ಇರಬೇಕಾಗುತ್ತದೆ. ಸಂಶೋಧನೆಯ ಮೂಲಕ ಜನಪದರ ಪಾರಂಪರಿಕ ವೈಜ್ಞಾನಿಕಸತ್ಯವನ್ನು ತಿಳಿಸುವ ಮೂಲಕ ಮಳೆಯ ಬಗೆಗಿನ ತಿಳುವಳಿಕೆಯನ್ನು ಹೆಚ್ಚಿಸುವುದು. ಇಂದಿಗೂ ಈ ಜಗತ್ತಲ್ಲಿ ಶುದ್ಧವಾಗಿ ಉಳಿದಿರುವುದು ಮಳೆಯ ನೀರು ಮಾತ್ರ, ಅದರ ಸಂಗ್ರಹ ಮತ್ತು ಸೇವನೆಯ ಬಗ್ಗೆ ಸಂರಕ್ಷಿಸುವ ಬಗ್ಗೆ ಅರಿವು ರೂಪಿಸುವುದು. ತಂತ್ರಜ್ಞಾನದ ಮುಖಾಂತರ ಕೃತಕಮಳೆಯನ್ನು ಬರಿಸುವುದರಿಂದ ಪರಿಸರದ ಮೇಲಾಗುವ ಅಡ್ಡ ಪರಿಣಾಮಗಳ ಬಗ್ಗೆಯೂ ಜಾಗೃತಿ ಮೂಡಿಸುವುದು ಮನುಕುಲದ ನಾಶದ ಬಗ್ಗೆ ಅರಿವು ಮೂಡಿಸುವ ಯತ್ನ.

**ಕಥನಗಳು ಹೊರಸೂಸುವ ಅಶಯ ನಿರ್ವಚಿಸಿದ ಬಗೆ**

ಒಂದರ್ಥದಲ್ಲಿ ಆರಂಭದ ಸಂಶೋಧಕ ಸಂಗ್ರಹಕಾರರು ನೀಡಿದ ವಿವರಗಳು ನಮಗೆ ಬಹುಮುಖ್ಯವಾಗುತ್ತವೆ. ಅದಕ್ಕಿಂತ ಹಿಂದಿನ ವೈದಿಕವಿದ್ವಾಂಸರು ವೈದಿಕನೆಲೆಗಳಲ್ಲಿಯೇ ಕಥನಾಶಯವನ್ನು ವಿವರಿಸುವರು. ಇವೆರಡಕ್ಕೂ ಪ್ರತ್ಯೇಕವಾಗಿ ವಸ್ತುವಿಷಯವನ್ನು ಪ್ರಸ್ತುತಕ್ಕೆ ಅನ್ವಯಿಸುವುದು ಸವಾಲು. ಕಥನಗಳು ಅಡಗಿಸಿಟ್ಟುಕೊಂಡಿರುವುದು ಮಾನವೀಯತೆಯಲ್ಲದೆ ಬೇರೇನೂ ಅಲ್ಲ. ಅವುಗಳನ್ನು ಅಧ್ಯಯನವು ವಿದ್ವಾಂಸರ ನೆಲೆಗಳನ್ನೊರತುಪಡಿಸಿ ನಿರ್ವಚಿಸಿಕೊಂಡಿದೆ.

ಮಳೆಯನ್ನು ಕುರಿತ ನಂಬಿಕೆ ಆಚರಣೆ ಕಥನಗಳು ವಿಶ್ವದ ಎಲ್ಲೆಡೆ ಕಂಡು ಬರುತ್ತವೆ. ಕಾಲ ದೇಶ, ಸಾಮಾಜಿಕ ಪರಿಸ್ಥಿತಿ ಸ್ಥಳ, ಸಾಂಸ್ಕೃತಿಕಭಿನ್ನತೆ ಆನನ್ಯತೆಗಳಿಂದಾಗಿ ಇವೆಲ್ಲವೂಗಳಲ್ಲೂ ವೈರುದ್ಯ ವೈಪರೀತ್ಯಗಳು ಕಂಡುಬರುತ್ತವೆ ಎಂಬುದು ಆಧ್ಯಯನ ಸಂದರ್ಭದಲ್ಲಿ ತಿಳಿಯಿತು. ಪ್ರಸ್ತುತ ಸಂಶೋಧನೆಯು ಸೀಮಿತವ್ಯಾಪ್ತಿಯೊಳಗೆ ನಡೆಯುತ್ತಿರುವುದರಿಂದ ಮಳೆ ಕುರಿತ ಸಂಪೂರ್ಣ ವಿಷ್ಲೇಷಣೆ ಸಾಧ್ಯವಾಗುವುದಿಲ್ಲ. ಆಲ್ಲದೆ ಇದು ಮೊದಲ ಸಂಶೋಧನಾ ಪ್ರಬಂಧವಾದ ಕಾರಣ ಕೆಲವು ಇತಿಮಿತಿಗಳಲ್ಲಿಯೇ ಸಂಶೋಧನೆ ಸಂಪೂರ್ಣವಾಗುತ್ತದೆ. ಪ್ರದೇಶಗಳನ್ವಯ ಮಳೆನಂಬಿಕೆ, ಗಾದೆ,

ಆಚರಣೆ, ಸಾಹಿತ್ಯವು ಭಿನ್ನವಾಗುವುದರಿಂದ ಪ್ರಸ್ತುತ ಪ್ರಂಬಂಧವು ಆ ಮಾಹಿತಿಯನ್ನು ಅನುಷಂಗಿಕವಾಗಿ ಮಾತ್ರ ಬಳಸಿಕೋಳ್ಳುತ್ತದೆ. ವಿದೇಶಿ ಮಳೆಯಆಚರಣೆ ವಿಶ್ಲೇಷಣಾಕ್ರಮಗಳು ಭಾರತಕ್ಕೆ ಹೊರತಾಗಿಯೂ ಅನ್ವಯವಾಗುತ್ತವೆ. ಸಾಮ್ಯತೆ ಭಿನ್ನತೆಗಳೇನು ಎಂಬುದನ್ನು ಈ ಪ್ರಬಂಧದಲ್ಲಿ ಗಮನಿಸಲಾಗಿಲ್ಲ. ಅದಕ್ಕೆ ಪ್ರತ್ಯೇಕ ಆಧ್ಯಯನಗಳ ಅವಶ್ಯಕತೆಯಿದೆ.

ವಾಸ್ತವವಾಗಿ ಮಳೆಜಾನಪದ ಆಕಾಶಜಾನಪದದ ಒಂದು ಅವಿಭಾಜ್ಯ ಅಂಗ. ಆಕಾಶ ಜಾನಪದದ ಬಗ್ಗೆಯೇ ತಲಸ್ಪರ್ಶಿ ಅಧ್ಯಯನ ಕನ್ನಡದಲ್ಲಿ ಈವರೆಗೆ ಆಗಿಲ್ಲ. ಮಳೆ ಜಾನಪದ ಕುರಿತು ನಾವು ನಡೆಸುವ ವಿಸ್ತೃತ ಅಧ್ಯಯನ ಆಕಾಶ ಜಾನಪದದ ಅಧ್ಯಯನ ಕ್ಷೇತ್ರಕ್ಕೆ ನಾವು ಸಲ್ಲಿಸಬಹುದಾದ ಕಾಣಿಕೆ ಎಂದು ಡಾ.ಎಸ್.ಪಿ. ಪದ್ಮಪ್ರಸಾದ್ ಹೇಳಿದ್ದಾರೆ. ಅವರ ಮಾತೇ ಪ್ರಸ್ತುತ ಸಂಶೋಧಕನ ಮಾತೂ ಆಗಿದೆ. ಮಳೆ ಕುರಿತ ಕಲ್ಪನೆ, ನಂಬಿಕೆ, ಆಚರಣೆಗಳ ಸಂಶೋಧನಾವಿಷಯ ಒಂದು ಮಹಾಪ್ರಬಂಧ ವಸ್ತು ವಿಷಯವು ಆಗಿರುವುದರ ಜೊತೆಗೆ ಈ ನಿಬಂಧವು ಆ ದಿಕ್ಕಿನಲ್ಲಿ ಇಟ್ಟ ಒಂದು ಸಣ್ಣ ಹೆಜ್ಜೆ ಎಂದು ಹೇಳುತ್ತಾ ಇಂತಹ ವೈಜ್ಞಾನಿಕಯುಗದಲ್ಲಿಯೂ ಈ ಹುಡುಕಾಟದ ಕ್ರಿಯೆಯೇ ಸಂತೋಷದಾಯಕ. ಬಿಸಿಲ ಬೇಗೆಯಲ್ಲಿ ಹನಿಯ ತುಂತುರು ತರುವ ಹರ್ಷೋಲ್ಲಾಸದಂತೆ ಎಂದು ಹೇಳುತ್ತಾ ಪ್ರಸ್ತುತ ಪ್ರಬಂಧವನ್ನು ಮುಕ್ತಾಯಗೊಳಿಸುತ್ತೇನೆ.

ಅನುಬಂಧ : ಒಂದು.

## ಮಳೆಕಥನಗಳು

### ಕಥನ. ಒಂದು : ಮಳೆದೇವೇಂದ್ರ

ಒಂದು ಪಟ್ಣ ಅಂತೆ. ಆ ಪಟ್ಣದಲ್ಲಿ ಒಬ್ಬ ದೊರೆ ಅಂತೆ. ಆ ದೊರಿಗೆ ಆರು ಜನ ಗಂಡು ಮಕ್ಳು ಅಂತೆ. ಆರು ಜನ ಗಂಡುಮಕ್ಳು ಆದ್ರೆ ಒಬ್ಬಳೇ ಒಬ್ಳು ಮಗಳಂತೆ. ಕಡೇವ್ಳು ಒಬ್ಬಳೇ ಒಬ್ಳು ಮಗಳಾದ್ರೇ ಆ ಮಗಳಿಗೆ, ನರಮನಸ್ರು ನೋಡಂಗಿಲ್ಲ. ಅಯಮ್ನ ನರಮನಸ್ರು ನೋಡ್ದಂಗೇ ಹನ್ನೆರಡು ಅಂತಸ್ತಿನ ಮಾಡಿ ಮೇಲೆ ಮಡಗ್ಬಿಟ್ರು ರಾಜ್ರು, ಅವಾಗ ರಾಜರು ಮಡಿಗ್ಬಿಟ್ಟು ಮಗಳ್ನ, ಹೂವ ಮುಡಿಸೋಕೆ ಒಬ್ರು, ತಲೆ ಬಾಚೋದೆ ಒಬ್ರು, ಊಟ ತಕೊಂದೋಗವ್ರೆ ಒಬ್ರು, ಹಾಸಾಕೇ ಒಬ್ರು ಗುಡಿಸವ್ರೇ ಒಬ್ರು, ನರಮಾನವ್ರ ಸಬ್ದ ಅನ್ನೋದಿಲ್ಲ ಮಗಳಿಗೆ. "ಏನಪ್ಪಾ ಎಷ್ಟು ದಿನ ಆದ್ರೂ ನನ್ನ ಇದೇ ತರ ನೀನು ಹನ್ನೆರಡು ಅಂತಸ್ತಿನ ಮಾಡಿ ಮೇಲೆ ನೀನು ಮಡಗ್ಬಿಟ್ರೇ, ನಾನು ನರಮಾನ್ರು ಅನ್ನೋರ ನೋಡಂಗಿಲ್ಲ ಭಾಳ ಬೇಸರಿಕೆ ಆಗ್ತಾ ಐತೆ. ಈ ಊರಲ್ಲಿ ಒಂದು ಕಥೆನಾದ್ರೂ ಮಾಡಿಸಬಾರ್ದಾ ಅಂತ ಮಗಳು ಅಪ್ಪ ಅವರ್ನ ಕೇಳಿದ್ಲು. ಅಯಮ್ಮಾ 'ನಾಳೆ ಮಾಡಿಸೋಣ' ಅಂತ ತಂದೆ ದಾಸ್ರನ್ನ ಕರಿಸ್ಬಿಟ್ಟು ಕಥೆ ಮಾಡಿಸೋಕೆ ಏರ್ಪಾಡು ಮಾಡಿದ್ರು ರಾಜ್ರು.

ರಾಜ್ರ ಮನೇ ಮುಂದೇನೆ ಕಥೆ ಮಾಡಿಸೋವಾಗ ಮಾಡಿಸೋಕೆಲ್ಲಾ ಏರ್ಪಾಟು ಮಾಡಿದ್ರು, ಕಥೆ ಮಾಡೋ ಹೊತ್ಗೆ ಇಳಿದು ಬಂದ್ರು, ಹನ್ನೆರಡು ಅಂತಸ್ತಿನಿಂದ, ಮಾಡಿ ಮೇಲಿಂದ. ಕೆಳಿಕ್ಕೆ ಇಳಿದು ಬಂದು ಕುಂತ್ಕೊಂಡ್ರು, ಕುಂತ್ಕೋಣೋ ವೊತ್ತಿಗೆ ಎಲ್ಲೂ ಇಲ್ಲದ ಮಳೆ ಬಂದ್ಬಿಡ್ತು. ಎಲ್ಲೂ ಇಲ್ಲದ ಮಳೆ ಬರೋವಾಕ್ಕೇನೆ, ಅಬ್ಬಬ್ಬಾ ಎಷ್ಟೋ ವರ್ಷಗಳಿಂದ ನಾನು ಕಥೆ ಮಾಡೋವಕ್ಕೆ ನಮ್ಮೂರಿಗೆ ದೊಂಬರು ಬಂದು ಎಲ್ಲೂ ಇಲ್ಲದ ಮಳೇ ಬಂದ್ಬಿಡ್ತು. ಈವತ್ತು ಬರೋ ದೇವೇಂದ್ರರಾಯ ನಾಳೆ ಆದ್ರೂ ಬರ್ಬಾದ್ದಾಗಿತ್ತಾ. ಅಂತ ಈಯಮ್ಮ ಅಂದ್ಲು ಮಗ್ಳು. ಅನ್ನೋವಾಕ್ಕೆ ದೊಂಬ್ರು ಕಥೆ ಆಡ್ಬಿಟ್ರು, ಅವತ್ಲೂ ದಿನ ಆಗೋಗಿಬಿಟ್ತು. ಅವತ್ಲು ದಿನ ಆಗೋಗಿ ಬಿಡ್ತು. ಅವತ್ಲ ದಿನ ಕಥೆ ಆಡಾದ ಮೇಲೆ ಹೊರಟೋಗಿಬಿಟ್ರು, ಮಗ್ಳು ಹನ್ನೆರಡು ಅಂತಸ್ತಿನ ಮಾಡಿ ಮೇಲಿದ್ದ ಮಗಳಿಗೆ ಮಾರನೇ ರಾತ್ರೆ ವೋಗಿ ದೇವೇಂದ್ರರಾಯ ಬಾಗಿಲು ತಟ್ಟಿದ.

ಏನಪ್ಪ ಇಲ್ಲಿ ನರಮಾನವ್ರ ಸಬ್ದನೇ ಇಲ್ಲ. ಈವತ್ತು ಬಾಕ್ಲು ತಟ್ತಾ ಅವ್ರೆ ಅಂದ್ಬಿಟ್ಟು ಯಾರು ನೀವು? ಅಂತ ಕೇಳಿದ್ಲು. ಈವತ್ತು ಬರೋ ದೇವೇಂದ್ರರಾಯ ನಾಳೇ ಬಾ ಅಂದ್ಯಲ್ಲಾ ನಾನು, ಅಂದ್ರು, ಏನಪ್ಪಾ ಈವಾಗ ಮಾಡೋದು? ಒಳ್ಳೆ ಸಿಕ್ಕಾಕ್ಕೊಂಬಿಟ್ನೇ ನಾನು? ಹೇಳೊಳು ಹೇಳ್ಬಿಟ್ಟೆ, ಈವಾಗ ದೇವೇಂದ್ರರಾಯ ಬಂದ್ಬಿಟ್ರು, ಕದ ತೆಗೆದೆ ಹೋದ್ರೆ ತಪ್ಪು ನಂದಾಗೋಗ್ಬಿಡ್ತದೆ. ಅಂತ ಯೋಚ್ನೆ ಮಾಡ್ತಾ

ಹತ್ತುನಿಮಿಷ ನಿತ್ಕೊಂಡ್ಲು. ಆ ಮೇಲಿಂದ ಕದ ತೆಗೆದ್ಲು. ಕದ ತೆಗಿತಲೇ ಬಂದ ದೇವೇಂದ್ರರಾಯ. ದೇವೇಂದ್ರರಾಯ ಬಂದು ಬೇಕಾದಂಗೇ ಪಗಡೇ ಆಡಕ್ಕೆ ಕುಂತ್ಕೊಂಡ್ರು, ದಾಯಿ-ಪಗಡೆ ಆಡಿದ್ರು, ಊಟ ಉಪಚಾರ ಮಾಡಿದ್ರು, ಐದುಗಂಟೆ ಹೊತ್ತಾಯ್ತು. ಬೆಳಗಿನ ಜಾವ ಎದ್ಬಿಟ್ಟು ಹೋಗ್ಬಿಟ್ರು, ಅವ್ರ ದೇಶಕ್ಕೆ ಅವ್ರು, ಇದೇ ರೀತಿ ಮಾಡ್ತಾ ಇದ್ರ, ಇದೇ ರೀತಿ ಘಸ್ಸು ದಿನ ಮಾಡಿ ಆನಂದ ಐಶ್ವರ್ಯದಿಂದ ಇದ್ರು, ಇರೋ ಹೊತ್ಗೆ 'ನೀವೀಗೆ ಇದ್ರೆ ಆಗೋಗ್ತದ? ಏನಾನ ನಿಮ್ಮ ದೇಶದ್ದು ನಂಗೊಂದು ಉಡುಗೊರೆ ತಂದ್ಕೊಡ್ಬೇಕು' ಅಂತ ಅಂದ್ಲು. ಏನು ಉಡುಗೊರೆ ತಂದ್ಕೋಡ್ತಿರಿ? ನಿಮ್ಮ ಗುರ್ತು ನಂಗೆ ಬೇಕು ಅನ್ನೋ ಹೊತ್ಗೆ, ಪೀತಾಂಬರದ ರವಿಕೆ ಹೊಲಸಿದ್ರು, ಅವ್ರ ದೇಸದಾಗೆ ಹೊಲಸಿಬಿಟ್ಟು, ಟ್ರಂಕನಾಗೆ ಮಡಿಗಿ, ಮಡಚಿ ಬೇರೆ ದೇಶಕ್ಕೆ ಮಳೆ ನಡೆಸಕ್ಕೆ ವೋಗ್ಬಿಟ್ಟ ದೇವೇಂದ್ರ.. ಬೇರೆ ದೇಶಕ್ಕೆ ಮಳೆ ನಡೆಸಕ್ಕೆ ಹೋದಾಗ ಈ ಜಾಕಿಟ್ಟು ಟ್ರಂಕನಲ್ಲಿ ಮಡಗಿದ್ದು ಸೂರ್ಯ ಚಂದ್ರ ಹೊಳೆದಂತೆ ಹೊಳೆತಿತ್ತು. ಈಚಕ್ಕೆ  ಬೆಳಕು ಹೊಡೀತಾ ಇತ್ತು. ನೋಡಿದ್ರು, ತೆಗ್ದು ನೊಡೋವಾಕ್ಕೆ ಅದರೊಳಗೆ ರವಿಕೆ ಇತ್ತು. ಇಷ್ಟು ಪೀತಾಂಬರದ ರವಿಕೆ ಹೊಲಿಬೇಕಾದ್ರೆ ಅವಳು ಇನ್ನೆಷ್ಟು ಸುಂದರವಾಗಿರ್ಬೇಕು ಅಂತ ಯೋಚ್ನೆ ಮಾಡ್ಬಿಟ್ಲು ದೇವೇಂದ್ರನ್ ಹೆಂಡ್ತಿ ಆದವ್ಳು.  ದೇವೇಂದ್ರನ ಹೆಂಡ್ತಿ ಯೋಚ್ನೆ ಮಾಡ್ಬಿಟ್ಟು, ವಾದ್ಯದ ಬೀದಿಗೆ ಹೋಗಿ ವಾದ್ಯಾರ್ನ ಕರ್ಸಿ ನಿನಗೆ ಒಂದು ಮರ ಚಿನ್ನ ಕೊಡ್ತೀನಿ, ಒಂದು ಮರ ಬೆಳ್ಳಿ ಕೊಡ್ತೀನಿ, ನಾನು ಹೇಳ್ದಾಗೆ ಸಣ್ಣ ಸೂಚಿ ಅರ್ಧಪಾವು ಸೂಜೀನ ಮಾಡ್ಬಿಟ್ಟು ನೀನು ಈ ರವಿಕೇಗೆ ನೇಯ್ದಿರೋ ನೆಯ್ಗೆ ಒಳಗೆಲ್ಲ ಸಸ್ದು ಬಿಡ್ಬೇಕು, ಅಂತ ಹೇಳಿದ್ಲು. ಆಯ್ತು ಅದೇ ತರ ಮಾಡಿಕೊಡ್ತೀವಿ. ಸಸ್ದು ಬಿಟ್ರು, ಸಸ್ದು ಬಿಟ್ಟು ಪುನಃ ತಂದು ರವಿಕೇನ ಅದೇ ತರ ಪಟ್ಣ ಕಟ್ಟು ಬಿಟ್ಟು ಟ್ರಂಕಲ್ಲಿ ಅಂಗೇ ಮಡಿಗ್ಬಿಟ್ರು, ಟ್ರಂಕಲ್ಲಿ ಅಂಗೇ ಮಡಗ್ದಾಗ ಆ ಹೆಂಡ್ತಿ, ಅದೇ ತರ ಮಡಿಗ್ಬಿಟ್ರು ಹೆಂಡ್ತಿ, ಗಂಡಂಗೆ ಗೊತ್ತಾಗ್ದಂಗೆ. ಈ ರವಿಕೆ ಹಿಂಗೆ ಅದಲ್ಲ ರವಿಕೆ ಅಂಗೆ ಪಟ್ಣದಲ್ಲಿದ್ದುದ್ದು ನೋಡ್ಬಿಟ್ಟು ಅರೆರೇ ನಾನು ಕಳಿಸ್ಲೇ ಇಲ್ಲ, ನಾನು ಇಲ್ಲೇ ಇಟ್ಕೊಂಬಿಟ್ಟಿದ್ದೀನ ರವಿಕೇನಾ ಹೊಲ್ಸಿ ಎಷ್ಟೋ ದಿನ ಆಗೋಯ್ತಲ್ಲ ಅಂತ ದೇವೇಂದ್ರ ಏನ್ಮಾಡಿದ್ರು ಬಂದು ರವಿಕೆ ತೆಗ್ದು ಕಾಗೇನ ತರಿಸಿ, ಕಾಗೆ ಕಾಲಿಗೆ ಕಟ್ಟಿ ಇಂಥ ಪಟ್ಣ, ಇಂಥ ರಾಜನ ಮಗ್ಳು, ಇಂಥ ಇದು, ಇಂಗೇ ಹನ್ನೆರಡು ಅಂತಸ್ತಿನ ಮಾಡಿ ಮೇಲೆ ಅವ್ಳೇ, ಕಾರಕಾರನೇ ಹೋಗಿ ನೀನು ಬಡ್ಕೊಂಡು ಅಲ್ಲಿ ಮಾಡಿ ಇಂದ ಕೆಳಗೆ ಬಾಗಿಲತ್ರ ಬಿಟ್ಟು ಬರ್ಬೇಕು ಈ ಜಾಗಿಟ್ಟು ಅಂತ ಹೇಳಿ ಹೆಸ್ರು ಬರ್ದು ಕಳಿಸ್ಬಿಡ್ತಾನೆ, ದೇವೇಂದ್ರ,  ಇದು ಬಂತು. ಹನ್ನೆರಡು ಅಂತಸ್ತಿನ ಮಾಡಿ ಮೇಲೆ ನಿಂತ್ಕೊಂತು. ಆ ಪಟ್ಣದೊಳಗೆ ಬಂದು ಕಾರಕಾರನೆ ಬಡಕ್ಕೊಳವಾಕ್ಕೆ ಈಚಿಗೆ ಬಾಗಿಲು ತೆಗೆದು ಬಂದ್ಲು. ಏನು? ಕಾಗೆ ಇವತ್ತು ಬಡಕ್ಕೊಂತಾ ಅದೇ ಅಂತ ರಾಜನಮಗ್ಳು ಬಂದು ನೋಡಿ. ಪಟ್ಣ ದೊಪ್ಪನೆ ಬಿತ್ತು. ಎತ್ಕೊಂಡು ನೋಡಿ ಓಹೋ ದೇವೇಂದ್ರ ಕಳಿಸೋದೆ ರವಿಕೆ. ಹೇಳೋಗಿದ್ರಲ್ಲ ಉಡುಗೊರೆ ಏನಾರೂ ಕಳಿಸ್ತೀನಿ ಅಂತ. ಈವತ್ತು ಜ್ಞಾಪಕಕ್ಕೆ ಬಂದು ಕಳಿಸವ್ರೇ ಅಂತ, ಹೇಳಿದ್ರು ಹೇಳಿ

ತಕ್ಕೊಂಡೋಗಿ ಆ ರವಿಕೇನಾ ಸ್ನಾನಮಾಡಿ ಮಡಿಮಾಡಿ ಊಟ ಉಪಚಾರ ತೀರಿಸ್ಕೊಂಡು ರವಿಕೇನ ತೊಟ್ಕೊಂಡ್ರು, ತೊಟ್ಕೊಂಡ್ಹೋತ್ಗೆ ಮೈಗೆಲ್ಲ ಮೈಯಾದು ಮೈಗೆಲ್ಲ, ಸೂಜಿ ಚುಚ್ಕೊಂಬಿಡ್ತು. ಚುಚ್ಕೊಂಬಿಟ್ಲುತೂ ಈಯಮ್ಮನೂಗೆ ಬಾಳಕೋಪ ಬಂದ್ಬಿಡ್ತು. ದಾದೇರು ನಾಕು ಜನ. ದಾದೇರು ಇದ್ದೋರು ಹತ್ರ ಚಿಮುಟ ತಕೊಂಡು ಎಲ್ಲ ಕೀಳಿಸ್ಬಿಟ್ಟು, ಕೀಳಿಸಿ ಅಳತೇ ಮಾಡೋ ಹೊತ್ಗೆ ಅರ್ಧಪಾವು ಸೂಜಿ ಇತ್ತು. ಸೂಜೀನಂಗೆ ತೆಗ್ದುಬಿಟ್ಟು ಬಲಗಡೆ ಒಳದೊಡೆ ಸೀಳುಬಿಟ್ಟು ಒಳದೊಡೆ ಒಳಗೆ ಮಡಿಗ್ಬಿಟ್ರು, ಯಾರ್ಗೂ ಕಾಣ್ದಂಗೆ, ಗೊತ್ತಾಗ್ದಂಗೆ ದಾದಿದೀರು ಗೊತ್ತಾಗ್ದಂಗೆ.

ಆಮೇಲೆ ಮಾರನೇ ದಿನ ರಾತ್ರಿ ಎಲ್ಲೋ ಯಾವ್ದೋ ದೇಶದಲ್ಲಿ ದೇವೇಂದ್ರ ಮಳೆ ನಡೆಸ್ಲಿಕ್ಕೆ ಪೋಗಿದ್ದ. ಪುನಃ ಬಂದಾ. ಬಂದು ಬಾಗಿಲು ತಟ್ಬೋ ಹೊತ್ಗೆ ಬಾಗಿಲು ತಗೀಲಿಲ್ಲ. ಒಂದು ಸಲೀ ತಟ್ಟಿದ್ರು ತಗೀಲಿಲಲ್ಲ, ಎರಡು ಸಲೀ ತಟ್ಟಿದ್ರು ತೆಗೀಲಿಲ್ಲ. ಮೂರನೇ ಸರ್ತಿ ತಟ್ಟಿದ್ರು ತೆಗಿಲಿಲ್ಲ. ಬೇಡ ಅನ್ಯಾಯವಾಗಿ ಕೆಟ್ಹೋಗ್ತಿಯಾ. ಬ್ಯಾಡ ನಾನು ಏನು ಪಾಪ ಮಾಡಿದ್ರು ಬಾಗಿಲು ತೆಗೆದು ಮಾತಾಡು ಅಂದ್ರು, ಆದ್ರೂ ತೆಗಿಲಿಲ್ಲ. ಒಂದು ಗುಡುಗು ಗುಡುಗದೇ ಅಂದ್ರೆ ನೀನು ತಲೇ ತಿರ್ಗಿ ರಪ್ಪನೆ ಬೀಳ್ಬೇಕು ಅಂದ್ರು, ಅಲ್ಲಿಗೂ ಮಾತಾಡ್ಲಿಲ್ಲ. ಒಂದು ಸಿಡಿಲು ಒಡ್ಡೇ ಅಂದ್ರೆ ನೀನು ಹನ್ನೆರಡು ಅಂತಸ್ತಿನ ಮಾಡಿ ಮ್ಯಾಗಿರೋ ಗಾಜೆಲ್ಲ ಪುಡಿಪುಡಿ ಆಗ್ಬೇಕು ಅಂದ್ರು, ಆದ್ರೂ ತೆಗಿಲಿಲ್ಲ. ಬ್ಯಾಡ ನಿನ್ನ ನಾಲ್ವರು ಅಣ್ಣ ತಮ್ಮಂದೀರು ಇರೋರು ಜೋಳಿಗೆ ಹೊತ್ಕೊಂಡು ಹೋಗ್ತಾ ಇರ್ತಾರೆ. ಸಮುದ್ರವಾಗಿ ನೀರು ಹರಿಸೋ ಹಂಗೆ ಮಾಡ್ತೀನಿ ಮಳೆ ಉಯ್ಯಿಸಿ ಅಂದ್ರು, ಅಲ್ಲಿಗೂ ತೆಗೀಲಿಲ್ಲ.

ನಿಮ್ಮ ತಾಯಿ ತಂದೆ ಉಣ್ಣೋ ಊಟದ್ದು ತಟ್ಟೆ ಅರಗಿನ ತಟ್ಟೆ ಗಿಂಡಿ ಚೆಂಬು ಬಂಗಾರ ತೇಲ್ಕೊಂಡು ಹೋಯ್ತಾ ಇರ್ತದೆ. ಅನ್ಯಾಯವಾಗಿ ಹೋಯ್ತು ಅಂತ ಅವಾಗಾದ್ರೂ ಮಾತಾಡು. ಮಾತಾಡಲ್ಲ. ನಾಲ್ಕು ಊರಿಂದ ತಿರುಕೊಂಬಂದು, ಊರಿನಾಚೆ ಗುಡಿಸ್ಲು ಹಾಕೀ ಅದರೊಳಗೆ ಭಿಕ್ಷೆ ತಂದು ಇಕ್ಕಿದಿದ್ನ ನಾನು ಬಂದು ಕಂಚಿನ ಕೋಳಿ ಬಿಟ್ಟು ಎಗರಿಸೀ ಅಡೀ ಮೇಯಿತಾ ಇರ್ತವೆ. ಆಗಾದ್ರೂ ಮಾತಾಡಲ್ಲ. ಹೋರಿ ಬಿಟ್ಬಿಟ್ಟು ಗುಟ್ಟರಿಕೆ ಹಾಕೀ ನೀವು ಹಾಕಿರೋ ಗುಡಿಸ್ಲನ್ನ ಕೊಂಬು ಒಂದು ಕಡೆ ಒಂದೊಂದು ಗರಿ ಒಂದೊಂದು ಕಡೆ ದಿಕ್ಕಾಪಾಲು ಮಾಡ್ತೀನಿ. ಆಗಾದ್ರೂ ಮಾತಾಡೊಲ್ಲ. ಅಲ್ಲಿಗೂ ಮಾತಾಡ್ಲಿಲ್ಲ. ಎಷ್ಟು ಹೇಳಿದ್ರೂ ಮಾತಾಡ್ಲೇ ಇಲ್ಲ. ಎಷ್ಟು ಹೇಳಿ ಎಷ್ಟು ಕೇಳಿದ್ರು ಮಾತಾಡ್ಲಿಲ್ಲ. ಆಮೇಲೆ ಪುನಃ ದೇವೇಂದ್ರರಾಯ ಶುರು ಮಾಡಿದ್ರು, ಒಂದು ಗುಡುಗುಗುಡುಗಿದ್ರು, ಗರಗರ ತಿರ್ಗೀ ಕೆಳಗೆ ಬಿದ್ಲು ಈಯಮ್ಮ. ಒಳಗಡೆನೇ ಒಂದು ಮಿಂಚಿದ ತಕ್ಷಣವೇ ಹನ್ನೆರಡು ಅಂತಸ್ತಿನ ಮಾಡಿ ಮೇಲೆ ಪಳಪಳನೇ ಉದರೋಗಿ ಬಿಡ್ತು. ಒಂದು ಮಿಂಚು ಮಿಂಚ್ತಾನೆ. ಕೆಳಕ್ಕೆ ಬಿದ್ದೋದ್ರು, ಈಯಮ್ಮ, ಬಿದೋತ್ಲನೇ ಏಕವಾಗಿ ಎಲ್ಲೂ ಇಲ್ಲದ ಮಳೆ ಬರಿಸಿಟ್ಟ, ಮಳೆ ಬರ್ಸಿದಾಗ ಈಯಮ್ಮನು ನಾಲ್ಕು ಆಳು

ಅಣ್ಣ ತಮ್ಮಂದೀರು ಜೋಳಿಗೆ ಒಳಗೆ ಕಟ್ಕೊಂಡು ಹೋಗ್ತಾ ಇರ್ತಾರೆ. ಇವರಪ್ಪ ಇವರಮ್ಮ ಊಟ ಮಾಡೋ ಬಂಗಾರದ ತಣಿಗೆ ತೇಲಿಕ್ಕೊಂಡು ವೋಗ್ತಾ ಇರ್ತದೆ. ಆದ್ರೂ ಮಾತಾಡದೋದ್ಲು.

ಪಕ್ಕದಳ್ಳೀಗೆ ವೋಗಿ ತಿರ್ದು, ಹೊರ್ದು ಅಣ್ಣತಮ್ಮಂದಿರು ತಂದು ದವಸ ರಾಗಿ ಅಕ್ಕಿ ತಂದಿಟ್ಟಿದ್ರೆ, ಕೋಳಿ ಬಿಟ್ಟು ಎಲ್ಲಾ ಚೆಲ್ಲಾಡಿಸಿಬಿಡ್ತಾನೆ, ದೇವೆಂದ್ರರಾಯ. ಅಲ್ಲಿಗೂ ಮಾತಾಡೋದೇ ಇಲ್ಲ. ಆಮೆಲಿಂದ ಪುನಃ ತಿರ್ಗಾ ಇವು ಹೋರಿಬಿಟ್ಟಟ್ಟು ಗುಟ್ರಕ್ಕೆ ಹಾಕ್ಸಿ ಈ ರೆಕ್ಕೆ ದಿಕ್ಕಾಪಾಲು ಆಗೋಗಿ ಬಿಡ್ತವೆ. ಅಲ್ಲಿಗೂ ಮಾತಾಡೊಲ್ಲ. ಏನ್ಮಾಡಿದ್ರು, ಇಷ್ಟಾದ್ರೂ ಮಾತಾಡ್ಲೇ ಇಲ್ವಲ್ಲ. ಏನೋ ಇರ್ಬೋದು ಅಂದ್ಬಿಟ್ಟು ಈ ಊರಲ್ಲಿ ಇವತ್ತು ಸಂಭ್ರಮ ಐತೆ. ಪ್ರತಿಯೊಬ್ರು ಬಂದು ಊಟ ಮಾಡ್ಬೇಕು. ಮಕ್ಳು ಮರಿ ಚಿಕ್ಕವ್ರು, ದೊಡ್ಡೋರು ಅಂತ ಅನ್ನದ ಸಂತರ್ಪಣೆ ಮಾಡೋ ಏರ್ಪಾಟು ಮಾಡ್ತಾರೆ. ಆಗಾದ್ರೂ ಬಂದು ಊಟ ಮಾಡಲ್ಲ. ಅಲ್ಲಿಗೂ ಮಾತಾಡೋಲ್ಲ. ನೀನು ಎಷ್ಟು ನಾಕೈದು ದಿನಾದ್ರೂ ಊಟ ಮಾಡ್ದೀರಾ ಅಸಿವಾತಲ್ಲ. ಆಗಾದ್ರೂ ಮಾತಾಡೋದಿಲ್ಲ. ಆಗ್ಲೂ ಮಾತಾಡಲ್ಲ ಅಂತ ಹೇಳ್ತಾಳೆ. ಆಮೇಲೆ ಇಷ್ಟು ಮಾಡಿ ಹೇಳಿ ಅದ್ರೂನಾ ದೇವೆಂದ್ರ ಮಾತೇ ಆಡೋದಿಲ್ಲ. ಮಾತಾಡ್ದೇ ಇರ್ದೇ ಹೋಬ್ಬಿಡ್ತಾರೆ. ಮಾತಾಡೋದೆ ಇಲ್ಲ. ಆಮೇಲೆ ಜನ ಎಲ್ಲಾ ಅಯ್ಯೋ ಯಾವಾ ಸೀಮೆ ದೊರೆ ಬಂದು ಬೇಕಾದಂಗೆ ನಾವು ಮಕ್ಳು ಮರೀ ಹೋಗಿ ಊಟ ಮಾಡೋಣ ಸಂತುಷ್ಟಿಯಾಗಿ ಅಂತ ಎಲ್ಲಾ ಊಟ ಮಾಡ್ತಾ ಇರ್ತಾರೆ ಸಂಭ್ರಮದಿಂದ. ಆಗೂ ಮಾತಾಡೋದೆ ಇಲ್ಲ ವೋಗೀ. ಊಟಾನೂ ಮಾಡಲ್ಲ. ವೋಗೋದು ಇಲ್ಲ. ಆಮೇಲಿಂದ ಎಲ್ಲಾ ಊಟ ಮಾಡ್ಕೊಂಡು ಪುನಃ ಬರ್ತಾರೆ. ಆಗೂನಾ ವೋಗೋದಿಲ್ಲ. ಆಮೇಲೆ ದೇವೇಂದ್ರ ಹೇಳ್ತಾರೆ. ಇಷ್ಟು ನೀನು ಹಟ ಮಾಡಿರೋದು ಏನು ? ಅಂತ ಪುನಃ ಬಂದು ಕೇಳೊವಕ್ಕೇ ಇಷ್ಟೆಲ್ಲಾ ಆಗೋಯ್ತಲ್ಲ, ಅನಾಹುತ. ಇನ್ನೇನು ತೇಲಾಗೋಯ್ತು, ಹನ್ನೆರಡು ಅಂತಸ್ತಿನ ಮಾಡೀನೂ ಬಿದ್ದಾಗೋಯ್ತು, ನೀನು ಮಾಡಿರೋದು ಈ ತಪ್ಪು ಅಂತ ಒಳದೊಡೇ ಸಿಗ್ದು ತೋರ್ಸ್ಸಾ ಹೊತ್ಗೆ, ಆಗ ಅದಿರಲ್ಲಿರೋದು ಸೂಜೀ ನೋಡಿ, ಆಗ ಅವ್ನ ಮನಸ್ಸು ಅವನೇ ತಿಳ್ಕೊಂಡು ಎಂಡ್ರು ಕೊಡಬಾರ್ದು ಕಷ್ಟ ಕೊಟ್ಟವ್ನೇ ಅಂದ್ಬಿಟ್ಟು, ಪುನಃ ಅವ್ರು ಗಂಡ ಹೆಂಡ್ರು ಮಳೆ ದೇವೇಂದ್ರ, ಆ ಹೆಂಡತಿನ ಬಿಟ್ಟುಬಿಟ್ಟು, ಹನ್ನೆರಡು ಅಂತಸ್ತಿನ ಮಾಡಿ ಹ್ಯಾಗಿತ್ತೋ ಪುನಃ ಅದೇತರ ಮಾಡಿಬಿಟ್ಟು, ಆಗ ಆಕಾಶದಷ್ಟು ಹಸೆ ಉಯ್ಯಿಸಿ ಭೂಮಿ ತಾಯಿಯಷ್ಟು ಚಪ್ಪರ ಹಾಕ್ಸಿ, ಅವಾಗ ಲಗ್ನ ಆಗೋಗ್ತಾರೆ'. (ನಾಗೇಗೌಡ.ಹೆಚ್.ಎಲ್. ಕನ್ನಡ ಜಾನಪದ ಕತೆಗಳು. ಪುಟ. ೧೨೭-೧೩೧)

**ಕಥನ: ಎರಡು. ಮಳೆರಾಯನ ಮಡದಿ**

ಒಂದು ಊರಿನಲ್ಲಿ ಒಬ್ಬ ರಾಜನಿಗೆ ಏಳು ಜನ ಗಂಡುಮಕ್ಕಳಿದ್ದರು. ಒಬ್ಬಳೇ ಒಬ್ಬಳು ಹೆಣ್ಣುಮಗಳು. ಒಬ್ಬಳೇ ತಂಗಿ ಎಂದು ಸುಖವಾಗಿ ಸಾಕಿಕೊಂಡಿದ್ದರು. ಅವಳಿಗೇ ಬೇರೆ ಮನೆಯನ್ನು

ಕಟ್ಟಿಸಿದರು. ಒಂದು ದಿನ ಮಳೆ ಚೆನ್ನಾಗಿ ಆಗಿತ್ತು. ಹೊಲಕ್ಕೆ ಸಸಿ ಹಾಕಲು ಏಳು ಜನ ಅತ್ತಿಗೆಯರೂ ಹೋಗಬೇಕಾಯಿತು. ಮನೆಯಲ್ಲಿದ್ದ ರಾಗಿ ಸ್ವಲ್ಪ ಮೆತ್ತಗಾಗಿ ನಾದಿನಿಯ ಹತ್ತಿರ ಬಂದು, ತಾಯಿ ಸಾಯಂಕಾಲ ರಾಗಿ ಬೀಸಬೇಕು ರಾಗಿ ಒಣಗಿಲ್ಲ. ನಾವೆಲ್ಲಾ ಸಸಿ ಹಾಕಾಕೆ ಹೋಗ್ತೀವಿ ಈ ರಾಗಿನ ಒಣಗಿಸಿ ಇಟ್ಟಿರು ಎಂದು ಹೇಳಿ ರಾಗಿಯನ್ನು ಕೊಟ್ಟು ಹೋದಳು., ಅತ್ತಿಗೆಯರು ಅತ್ತ ಹೋದ ಮೇಲೆ ಈ ಹುಡುಗಿ ರಾಗಿಯನ್ನು ಬಿಸಿಲಿಗೆ ಹಾಕಿದಳು. ಸ್ವಲ್ಪ ಹೊತ್ತಿನಲ್ಲಿಯೇ ಮಳೆ ಬಂದಿತು. ಮತ್ತೆ ಎತ್ತಿಕೊಂಡಳು. ಮಳೆ ಇಟ್ಟು ಬಿಸಿಲು ಬಂದಿತು. ಮತ್ತೆ ಒಣಗಲು ಹಾಕಿದಳು. ಮಳೆ ತಿರುಗಿ ಬಂದಿತು. ಸಂಜೆಯವರೆಗೂ ಹೀಗೇ ಆಯಿತು. ಆಗ ಈ ಹುಡುಗಿ ಈ ಹಾಳು ಮಳೆ, ಈಗ ಬರೋದು, ಸಾಯಂಕಾಲವಾದರೂ ಬರ್‍ಬಾರ್‍ದೆ ಎಂದಳು. ಮಳೆ ನಿಂತು ಬಿಸಿಲು ಬಂತು.

ಸಂಜೆಯಾಯಿತು. ಎಲ್ಲಾ ಊಟಮಾಡಿ ಮಲಗಿದರು. ಕಲ್ಲುನೀರು ಕರಗುವ ಹೊತ್ತಿನಲ್ಲಿ ಈ ಹುಡುಗಿಯ ಮನೆಯನ್ನು ಯಾರೋ ತಟ್ಟಿದರು. ಯಾರು ? ಎಂದಳು. ನೀನು ಯಾರ್‍ನ ಬರ್‍ಥೇಳಿದ್ದೋ ಅವರು ಎಂದು ಉತ್ತರ ಬಂತು. ಎರಡು ಮೂರು ಸಲ ಹಾಗೆಯೇ ಆಯಿತು. ಆಗ ಅವಳು ಎದ್ದು ಬಂದು ಬಾಗಿಲು ತೆರೆದಳು. ನಾನು ಮಳೆರಾಯ  ನೀನೇ ಬರ್‍ಥೇಳಿದ್ದೆ ಬಂದಿದೀನಿ  ಎಂದು ಲಕ್ಷಣವಾದ ಪುರುಷನಾಗಿ ಬಂದ.  ಮಳೆರಾಯನ ಮೇಲೆ ಅವಳಿಗೂ ಪ್ರೀತಿ ಬಂತು. ಸುಖವಾಗಿ ಆ ರಾತ್ರಿಯನ್ನು ಕಳೆದರು. ಪ್ರತಿದಿನವೂ ಮಳೆರಾಯ ಬರುತ್ತಿದ್ದ. ಒಂದು ದಿನ ಅವನನ್ನು ನನಗೆ ಒಂದು ಹೂವಿನ ಸೀರೆ ಮೊಗ್ಗಿನ ರವಿಕೆ ಬೇಕು ಎಂದು ಕೇಳಿದಳು. ಮಳೆರಾಯ ಅಷ್ಟೇತಾನೆ ನಾಳೆ ನನ್ನ ಮಾತಿನ ಗಿಣಿ ಕೈಯಲ್ಲಿ ಕಳಸಿಕೊಡ್ತಿನಿ ಎಂದ. ಮರುದಿನ ಮಾತಿನ ಗಿಣಿಯ ಕತ್ತಿಗೆ ಹೂವಿನ ಸೀರೆ, ಮೊಗ್ಗಿನ ರವಕೆ ಕಟ್ಟಿ, ಹೋಗಿ ಕೊಟ್ಟು ಬಾ ಎಂದು ಹೇಳಿ ಕಳಿಸಿದ. ಮಾತಿನ ಗಿಣಿ ಮನೆಯನ್ನು ಬಿಟ್ಟು ಬರುವಾಗ ಮಳೆರಾಯನ ಹೆಂಡತಿ ಗಿಣಿಯನ್ನು ಕರೆದು ಆ ಸೀರೆ ರವಿಕೆನ್ನು ನೋಡಿದಳು. ಈ ಸೀರೆ ರವಿಕೆ ಉಡುವಂಥಾ ಸೂಳೆಯನ್ನು ಮಳೆರಾಯ ಇಟ್ಟು ಕೊಂಡಿರಬಹುದು ಎಂದು ಆ ಸೀರೆಗೆ ಸೀಗೆ ಮುಳ್ಳು ಅಂಟಿಸಿ ಮಡಿಸಿ ಕೊಟ್ಟಳು. ಗಿಣಿ ಹಾರಿಬಹುದು ಈ ಹುಡುಗಿಗೆ ಕೊಟ್ಟು ಹೋಯಿತು. ಇವಳು ಸ್ನಾನ ಮಾಡಿ ಸೀರೆ ಉಟ್ಟುಕೊಂಡಳು. ಸೀಗೆಮುಳ್ಳಿನಿಂದ ಮೈಯೆಲ್ಲಾ ಅಂಟಿಸಿಬಿಟಿದ್ದಾನೆ ಎಂದು ದುಃಖಪಟ್ಟಳು.  ಮರುದಿನ ಮಳೆರಾಯ ಬಂದಾಗ ಇವಳು ಮಾತಾಡದೆ ಮಲಗಿಬಿಟ್ಟಳು. ಅವನು ಎಷ್ಟು ಮಾತಾಡಿಸಿದರೂ ಮಾತಾಡಲಿಲ್ಲ. ಮಳೆರಾಯ, ನಾನೇನೂ ಮಾಡಿಲ್ಲ ಇವಳು ಸುಮ್ಮನೆ ಮುನಿಸಿಕೊಂಡಿದ್ದಾಳೆ' ಈ ಮನೆಯ ಐಶ್ವರ್ಯವೆಲ್ಲಾ ಹಾಳಾಗಿ ದರಿದ್ರ ಬರಲಿ ಎಂದು ಕೋಪಿಸಿಕೊಂಡು ಹೊರಟು ಹೋದ.

ಇಲ್ಲಿ ಇವರಿಗೆ ಬಾರಿ ಬಡತನ ಬಂತು. ಏಳು ಜನ ಅಣ್ಣಂದಿರೂ ಸೌದೆ ಹೊತ್ತು ಮಾರತೊಡಗಿದರು. ಅಲ್ಲಿ ಇವರ ಸೌದೆಯನ್ನು ದೇವೇಂದ್ರನೇ ಬಂದು ತೆಗೆದುಕೊಳ್ಳುತ್ತಿದ್ದ. ಒಂದು

ಕೊಡುವ ಕಡೆ ಎರಡರಷ್ಟು ಹಣ ಕೊಟ್ಟು ಕಳಿಸುತ್ತಿದ್ದ. ಈ ಹುಡುಗಿಯೂ ಸೌದೆ ಹೊತ್ತುಕೊಂಡು ಹೋಗುತ್ತಿದ್ದಳು. ಹೀಗೆಯೇ ಕೆಲವು ದಿನ ಸಾಗಿತು. ಮಳೆರಾಯ ಒಬ್ಬ ಕುಂಬಾರನಗಿ ಅದೆ ಊರಿಗೆ ಬಂದು ಸೇರಿಕೊಂಡ. ಅವನಿಗೆ ಒಬ್ಬಳು ತಾಯಿ. ಮಗನ ಮಾತನ್ನು ಸ್ವಲ್ಪವೂ ಮೀರುತ್ತಿರಲಿಲ್ಲ. ಈ ಕಡೆ ಈ ಬಡವರ ಮನೆಯಲ್ಲಿ ಹುಡುಗಿ ರೊಟ್ಟಿಯನ್ನು ತಿನ್ನಬೇಕು ಎಂದು ಬಯಸಿದಳು. ರೊಟ್ಟಿಯ ಹೆಂಚೂ ಅವರ ಮನೆಯಲ್ಲಿರಲಿಲ್ಲ. ಆ ಹುಡಿಗೆ ತಾಯಿಗೆ, ಕುಂಬಾರನನ್ನು ಕೇಳಿ ಒಂದು ಓಡನ್ನು ಮಾಡಿಸು ಎಂದಳು. ತಾಯಿ ಕುಂಬಾರನ ಮನೆಗೆ ಬಂದಳು. ಕುಂಬಾರನ ಮನೆಯಲ್ಲಿದ್ದ ಮುದುಕಿಯನ್ನು ಸ್ವಲ್ಪ ಹೆಂಚನ್ನು ಕೊಂಡು, ರೊಟ್ಟಿ ಹಾಕಿ ಕೊಡ್ತಿನಿ ಎಂದಳು. ಮುದುಕಿ, ನನ್ನ ಮಗ ಬರಲಿ, ಕೇಳಿ ಕೊಡ್ತಿನಿ ಎಂದಳು. ಮಗ ಮನೆಗೆ ಬಂದ. ಮುದುಕಿ ಮಗನನ್ನು ಕೇಳಿದಳು. ಹೆಂಚು ಒಡೆದು ಹೋದರೆ ಅವಳ ಮಗಳನ್ನ ನನಗೆ ಕೊಟ್ಟು ಮದ್ವೆ ಮಾಡ್ತಾರ ಕೇಳ್ಕೊಂಡು ಬಾ ಎಂದ. ಮುದುಕಿ ಬಂದು ಕೇಳಿದಳು. ತಾಯಿ ಮಗಳನ್ನು ಕೇಳಿದಳು. ಮಗಳು, ರೊಟ್ಟಿ ಹಾಕಿದರೆ ಹೆಂಚು ಯಾಕೆ ಒಡೆಯುತ್ತೆ ಹುಷಾರಾಗಿ ಹಾಕಿದ್ರೆ ಆಯ್ತು ತೆಗೆದುಕೊಂಡು ಬಾರವ್ವ ಎಂದು ಹೇಳಿದಳು. ಹೆಂಚು ಬಂತು. ರೊಟ್ಟಿಯನ್ನು ಹಾಕುತ್ತಿದ್ದರು; ಎಲ್ಲರಿಗೂ ಹಾಕಿ ಕೊನೆಯಲ್ಲಿ ಮಗಳಿಗೆ ಹಾಕಬೇಕಾಗಿತ್ತು ಆಗ ಹೆಂಚು ಒಡೆದು ಹೋಯಿತು. ಮುದುಕಿ ತಕ್ಷಣ ಬಾಗಿಲಿಗೆ ಬಂದು, ಹೆಂಚನ್ನು ಕೊಡಿ ತಾಯಿ ಎಂದಳು. ಒಡೆದು ಹೋದ ಸುದ್ದಿ ಗೊತ್ತಾಯಿತು. ನಡೆದದ್ದನ್ನು ಬಂದು ಮಗನಿಗೆ ಹೇಳಿದಳು. ನಾಳೆಯೇ ಮದುವೆ ಆಗಬೇಕು ಎಂದು ಕುಂಬಾರ ಹೇಳಿ ಕಳಿಸಿದ. ಈ ಹುಡುಗಿ ನನ್ನ ಹಣೆಯಲ್ಲಿ ಹೀಗೆ ಬರೆದಿತ್ತೋ ಏನೋ ನೀವು ಏನೂ ಯೋಚಿಸಬೇಡಿ ಎಂದು ಒಪ್ಪಿಕೊಂಡಳು. ಮದುವೆಗೆ ಎಲ್ಲಾ ಸಿದ್ಧವಾಯಿತು. ಕುಂಬಾರ ಗಂಡಾಗಿ ಹಸೆಯನ್ನು ಏರಿದ. ಇವಳು ಕಣ್ಣೆತ್ತಿ ನೋಡ್ತಾಳೆ ಕುಂಬಾರನ ಸ್ಥಳದಲ್ಲಿ ಮಳೆರಾಯ ನಿಂತವನೆ. ಇವಳ ಕಣ್ಣಲ್ಲಿ ನೀರು ತುಂಬಿಕೊಂಡಿತು. ಸ್ವಾಮಿ ನಾವೇನು ಅಂಥ ಪಾಪ ಮಾಡಿದ್ದೊ ಇಷ್ಟು ಬಡತನ ಕೊಟ್ರಿ ಎಂದು ಕೇಳಿದಳು. ಮಳೆರಾಯ ಆಗ ಎಷ್ಟು ಮಾತಾಡಿಸಿದರೂ ನೀನು ಮಾತಡಲಿಲ್ಲ, ಅದಕ್ಕೆ ಹಾಗೆ ಮಾಡಿದೆ ಎಂದ. ನೀವು ಸೀರೆ ರವಿಕೆಗೆ ಸೀಗೆಮುಳ್ಳನ್ನು ಅಂಟಿಸಿ ಕೊಟ್ಟದ್ದು ಸರಿಯೆ ಎಂದಳು. ಮಳೆರಾಯನಿಗೆ ಆಶ್ಚರ್ಯವಾಯಿತು. ಮಾತಿನ ಗಿಣಿಯನ್ನು ಕರೆದು ವಿಚಾರಿಸಿದ. ದೊಡ್ಡರಾಣಿ ಮಾಡಿದ ತಪ್ಪನ್ನು ಅದು ಹೇಳಿತು. ಆಗ ಮಳೆರಾಯ ಹಿರಿಯ ರಾಣಿಯನ್ನು ಸಾಗಿಸಿ ತೋರಣ ಕಟ್ಟಿಸಿದ. ಇವಳನ್ನು ಮದುವೆಯಾಗಿ, ಬೇಕಾದಷ್ಟು ಐಶ್ವರ್ಯ ಕೊಟ್ಟು ಎಲ್ಲಾ ಸುಖವಾಗಿದ್ದರು. ( ಪರಮಶಿವಯ್ಯ.ಜಿ .ಶಂ. ಕನ್ನಡ ಜಾನಪದ ಕತೆಗಳು. ಪುಟ.೩೮–೩೯)

**ಕಥನ: ಮೂರು. ಈಗ ಬರೋ ದೇವೇಂದ್ರರಾಯ ರಾತ್ರಿಕಾಲ ಬಂದಿಯಾ**

ಒಂದನೊಂದು ಪಟ್ಣ. ಅ ಪಟ್ಣದೊಳಗೆ ಒಬ್ಬ ದೊರೆ ಇರ್ತಾನೆ. ಆ ದೊರೆಗೆ ಏಳು ಜನ ಗಂಡುಮಕ್ಕಳಿರುತ್ತಾರೆ. ಏಳು ಜನ ಗಂಡು ಮಕ್ಕಳ ಹಿಂದೆ ಒಂದೇ ಒಂದು ಹೆಣ್ಣು ಮಗ. ಏಳು ಜನ ಗಂಡು ಮಕ್ಕಳಿಗು ಲಗ್ನ ಆಗಿಬಿಟ್ಟಿತ್ತು. ಆ ಹೆಣ್ಣು ಮಗಿಗಿನ್ನು ಲಗ್ನ ಆಗಿರಲಿಲ್ಲ. ಆ ಮಗೂನ ಅವರ ತಂದೆ ತಾಯಿಗಳು ಎಷ್ಟರಮಟ್ಟಿಗೆ, ಆ ಮಗನ ಸಾಕೊಂಡಿದ್ರು, ಇರುವಾಗ್ಗೆ ಕೆಲವಾರು ದಿನಗಳು ಕಳೆದವು. ಅವರ ತಂದೆ ಮತ್ತು ತಾಯಿ ತೀರಿ ಹೋಗಿಬಿಟ್ರು, ಅವರ ತಾಯಿ ಸಾಯೋವಾಗ್ಗೆ ಏನಪ್ಪಾ ನಮ್ಮ ಮಗಾನ ನೀವೆಲ್ಲರೂ ಅತಿ ಪ್ರೀತಿಯಿಂದ ಸಾಕಿ ಒಳ್ಳೆ ಮನಿಗೆ ಕೊಟ್ಟು ಮದುವೆ ಮಾಡಬೇಕಪ್ಪ ಅಂತ ಹೇಳಿರ್ತಾಳೆ. ಅಂಗೇ ಆಗ್ಲಮ್ಮ, ನಿಮ್ಮ ಮಾತಿಗೆ ನಾವು ಬದ್ಲೇಳಲ್ಲ. ನೀವು ಏನು ಹೇಳ್ತಿರ ನಾವು ಅದೇ ವೇದವಾಕ್ಯ ಅಂತ ಭಾವನೆ ಮಾಡಿಕೊಂಡು, ಅದರಂತೆ ನಾವು ನಡಕೊಂತೀವಿ ಅಂತ ಏಳುಜನ ಅಣ್ಣಗಳು ಅವರ ತಂದೆ ತಾಯಿಗಳಿಗೆ ಪ್ರಮಾಣ ಮಾಡಿ ಹೇಳಿರ್ತಾರೆ.

ಒಂದಾನೊಂದು ದಿನ ಏನಾಗೋಯ್ತಪ್ಪ, ಏಳು ಜನ ಅಣ್ಣ ತಮ್ಮಂದಿರು, ತಂಗಿ ಎಲ್ಲರೂ ಆನಂದವಾಗಿದ್ದು, ಒಬ್ಬ ದೊಂಬರು ಬಂದು, ಈ ರಾಜರನ್ನ ಕೇಳಿಕೊಂಡ್ರು, ಏನು ಸ್ವಾಮಿ ನಾವು ಈವತ್ತಿನ ದಿನ ನಿಮ್ಮೂರಿನಲ್ಲಿ ದೊಂಬರಾಟ ಆಡಬೇಕೂಂತ ಇಷ್ಟ ಐತೆ. ನೀವು ಅಪ್ಪಣೆ ಕೊಟ್ರೆ, ನಿಮ್ಮ ಅರಮನೆ ಮುಂದೆ ಈವತ್ತಿನ ದಿನ ದೊಂಬರಾಟ ಆಡ್ತೀವಿ ಅಂತ ಕೇಳಿಗೊಂತಾರೆ. ಇವರಿಗೂನು ತುಂಬಾ ಸಂತೋಷ ಆಯ್ತು. ಆಗ ಅಂಗೇ ಮಾಡ್ರಪ್ಪ ನಮ್ಮನೆ ಹತ್ರನೆ ನೀವು ಇವತ್ತು ದೊಂಬರಾಟ ಆಡ್ರಿ ಅಂತ ಅಪ್ಪಣೆ ಕೊಡ್ತಾರೆ. ಆ ಹುಡುಗಿಗೂ ಕೂಡ ತುಂಬ ಸಂತೋಷ. ಅಣ್ಣಾ ದೊಂಬರಾಟ, ನಾನು ನೋಡಬೇಕು. ನನಗೂ ಬಲಾಸೆ ಅಣ್ಣ. ನಮ್ಮನೆ ಹತ್ರಾನೆ ಆಡೋಂಗೆ ಏರ್ಪಾಟು ಮಾಡಿ ಅಂತ ಹೇಳಿ ಆ ಮಗಾನು ಹೇಳ್ತದೆ. ಅಂಗೇ ಆಗ್ಲಮ್ಮ, ನಿನ್ನ ಮಾತಿನಂಗೇನೆ, ನಮ್ಮರಮನೆ ಮುಂದೇನೆ ದೊಂಬರಾಡೋಂಗೆ ಏರ್ಪಾಟು ಮಾಡ್ತೀವಿ ಅಂತ ಎಲ್ಲರೂ ಸಂತೋಷವಾಗಿರ್ತಾರೆ. ಆ ಪಟ್ಟಣದೊಳಗೆಲ್ಲ ಡಂಗೂರ ಹಾಕಿಸಿಬಿಡ್ತಾರೆ. ಈವತ್ತಿನ ದಿನ ನಮ್ಮ ರಾಜರ ಅರಮನೆ ಮುಂದೆ ದೊಂಬರಾಡ್ತಾರೆ, ಸರ್ವರೂ ಸಕಾಲಕ್ಕೆ ದಯಮಾಡಿಸಬೇಕೂಂತ ಪಟ್ಟಣದೊಳಗೆಲ್ಲ ಟಾಂ, ಟಾಂ, ಒಡೆದು ಬಿಡ್ತಾರೆ.

ಆವತ್ತು ಏನು ಸಾವಿರಾರು ಜನ ಬಂದು ಸೇರಿ ಬಿಟ್ಟಿದೆ. ದೊಂಬರಾಟ ಆಡ್ತಾ ಅವ್ರೆ, ಆಡ್ತಾ ಇರೋವಾಗ್ಗೆ ಬಹಳ ವಿಜೃಂಭನೆಯಿಂದ ಆಟ ನಡೀತಾ ಆದೆ. ಆ ಸಮಯದೊಳಗೆ ಏನು ಸುಮಾರು ನಾಲ್ಕು ಗಂಡೆ ಸಮಯ, ವಿಪರೀತ ಮಳೆ ಬಂದು ಬಿಡ್ತದೆ. ಜನಗಳೆಲ್ಲ ಅಯ್ಯೋ, ಎಂತಾ ಚನ್ನಾಗಿತ್ತಾಟ ಹಾಳು ಮಳೆ ಬಂದು ತೊಂದರೆ ಮಾಡಾಕಿ ಬಿಡ್ತಲ್ಲ ಎಂದು ಎದ್ದು ಹೋಗುವ ಸಮಯ. ಈ ಹುಡುಗಿ ಇರ್ತಾಳಲ್ಲ. ಒಳ್ಳೆ ಪ್ರಾಯ ಸಮರ್ಥಳಾದ ಹುಡುಗಿ. ಈ ಹುಡುಗಿ ಏಳು ಉಪ್ಪರಿಗೆ ಮೇಲೆ ಕೂತ್ಕೊಂಡು,

ಏಳು ಜನ ಅಣ್ಣಗಳು, ಏಳು ಜನ ಅತ್ತಿಗೆಗಳು, ಎಲ್ಲರೂ ಕೂತ್ಕೊಂಡು ನೋಡ್ತಾ ಇರ್ತಾರೆ. ಗುಡುಗು ಸಿಡ್ಲಿನಿಂದ ಮಳೆ ಬರ್ತಾ ಇರ್ತದಲ್ಲ ಈಯಮ್ಮನಿಗೆ ಆಟದ ಮೇಲೆ ತುಂಬಾ ಆಸಕ್ತಿ ಇರ್ತದೆ. ಅಯ್ಯೋ, ಆಟ ನಿಂತೋಗಿ ಬಿಡ್ತದಲ್ಲ. ಇನ್ನೂ ನೋಡಬೇಕಾದ್ದು ಎಷ್ಟೋ ಇತ್ತು ಅನ್ನೊ ಆಸೆಗೋಸ್ಕರವಾಗಿ, ಅಯ್ಯೋ ಹಾಳು ದೇವೇಂದ್ರರಾಯ, ಈಗ ಬರೋ ದೇವೇಂದ್ರರಾಯ ರಾತ್ರಿ ಕಾಲ ಬಂದಿಯಾ ಅಂತಳೆ, ಯಾವಾಗ ಅಂದ್ಲೋ ಇಲ್ಲೋ, ಇವಳು ಮಹಾಸ್ಪುರದ್ರೂಪಿ, ಆದ್ದರಿಂದ ದೇವೇಂದ್ರರಾಯ ನೋಡಿದ. ಓ ನನಗೆ ಇದೇ ಒಂದು ಮಾತು ಸಾಕು ಅಂದ್ಬಿಟ್ಟಿದ್ದು ಆ ವಿಪರೀತವಾಗಿ ಬರ್ತಾ ಇತ್ತಲ್ಲ ಮಳೆ, ಅದು ಎತ್ಲುದತ್ತೆ ಮಾಯವಾಗಿ ಬಿಟ್ಟಿದ್ದು ಅವರ ಪಟ್ಟಣದೊಳಗೊಂದನೀನು ಆಕದೀರ ಪಕ್ಕದಲ್ಲಿ ಹುಯ್ಯಕೊಂಡು, ಅದರ ಪಾಡಿಗೆ ಅದು ಹೊರಟೋಗಿ ಬಿಡ್ತು. ಮಳೆ ಯಾವಾಗ ನಿಂತೋಗಿ ಬಿಡ್ತೋ ದೊಂಬರಾಟ ಬಹಳ ಚನ್ನಾಗಿ ನಡೀತು. ಏನು ಜನಗಳೆಲ್ಲರೂ ಬೇಕಾದಷ್ಟು ಸಂತೋಷವಾಗಿ ನೋಡಿದ್ರು, ಸಾಯಂಕಾಲ ಆಟ ಪೂರೈಸೋವರೆಗೂ ಆಟ ನೋಡಿಕೊಂಡಿದ್ದು, ಅವರ ಮನೆಗೆ ಅವರು ಹೊರಟು ಹೋದರು.

ಇವರೆಲ್ಲರೂ ಊಟ ಉಪಚಾರ ಮಾಡಿಬಿಟ್ಟು, ಆ ರಾಜಕುಮಾರಿ ಏಳಂತಸ್ತಿನ ಉಪ್ಪರಿಗೆ ಮೇಲೆ ದಾದೇರ ಸಮೇತವಾಗಿ ಮಲಕ್ಕೊಂಡ್ಲು. ಒಳ್ಳೆ ನಿಶಿರಾತ್ರಿ, ನಿಶಿರಾತ್ರಿ ಒಳಗೆ ದೇವಂದ್ರರಾಯ ಬಂದುಬಿಟ್ಟ, ದೇವೇಂದ್ರರಾಯ ಬಂದು ಬಾಗಿಲು ತಟ್ತಾನೆ. ಅರೆರೆ ! ಇದೇನಪ್ಪ ? ಏಳು ಅಂತಸ್ತಿನ ಉಪ್ಪರಿಗೆ ಮೇಲಕ್ಕೆ ಈತರ ಬಂದು ಬಾಗಿಲು ತಟ್ಟಬೇಕಾಗಿದ್ರೆ ಯಾರಾಗಿರಬಹುದು ? ಏನು ಸಮಾಚರ ? ದೇವರೋ ? ದಿಂಡ್ರೋ ? ದೆವ್ವನೊ ಪೀಡೆನೊ ಇರಬಹುದೂಂತ ಈಯಮ್ಮ ಭಯಪಟ್ಟುಬಿಡ್ತಾಳೆ. ಯಾರು ಸ್ವಾಮಿ ನೀವು ? ದೇವರ ಅಥವಾ ದೇವಲೋಕದಿಂದ ಬಂದಿದ್ದೀರ ? ದೆವ್ವಗಳಾ ? ಯಾರು ಮಾತನಾಡಿದರೆ ಬಾಗಿಲು ತೆಗಿತೀನಿ. ಅಲ್ಲದಿದ್ದರೆ ತೆಗೆಯೋದಿಲ್ಲ ಅಂತ ಹೇಳ್ತಾಳೆ. ಬಾಗಿಲು ತೆಗಿ ಮದಲು ನಾನು ದೆವ್ವನೂ ಅಲ್ಲ. ಪೀಡೆನೂ ಅಲ್ಲ, ಪಿಶಾಚಿನೂ ಅಲ್ಲ. ಬಾಗಿಲು ತೆಗಿ ಆಮೇಲೆ ಹೇಳ್ತಿನಿ ಅಂತ ಹೇಳ್ತಾನೆ.

ಬಂದು ಬಾಗಿಲು ತೆಗೀತಾಳೆ. ಏನು ದೇವೇಂದ್ರ, ಒಳ್ಳೆ ಸೂರ್ಯ ಚಂದ್ರ ಉರದಂತೆ ಉರಿತಾವ್ನೆ! ಇವಳಿಗೆ ಗಾಬರಿ ಆಗೋಗಿ ಬಿಡ್ತು. "ಅರರೆ ! ಏನಪ್ಪ ಇದು ! ಇಂತ ನಿಶಿರಾತ್ರಿ ಒಳಗೆ ದೇವೇಂದ್ರರಾಯ ಬಂದು ಬುಟ್ಟವ್ನಲ್ಲಾ ! ಏನು ಸಮಾಚಾರ ? ಅಂತ ಅನ್ಯೋನ್ಯ ಭಕ್ತಿಯಿಂದ, ಅವರನ್ನ ಕರಕೊಂಡು ಹೋಗಿ, ಮಂಚದ ಮೇಲೆ ಕುಂಡ್ರಿಸಿ ಅವರಿಗೆ ಆತಿಥ್ಯ ತರ್ತಾಳೆ. ಉಪಚಾರ ಮಾಡಿ, ಏನ್ ಸ್ವಾಮಿ ಇಂತ ನಿಶಿರಾತ್ರಿ ಒಳಗೆ ನೀವು ಏಕಾಗಿಯಾಗಿರೋ ನನ್ನ ಹತ್ತಿರಕ್ಕೆ ಬರೋದಕ್ಕೆ ಕಾರಣ ಏನು. ಅಂತ ಕೇಳ್ತಾಳೆ. ಕೇಳೊವಾಗ್ಗೆ ನೀನು ಈವತ್ತು ಸಾಯಂಕಾಲ ಹೇಳಿದೆಯಲ್ಲಾ ದೊಂಬರಾಟ ನಡೀತಿರೋವಾಗ, ಈಗ ಬರೋ ದೇವೇಂದ್ರರಾಯ, ರಾತ್ರಿಕಾಲ ಬಂದಿಯಾ ಅಂತ

ಅಂದೆಯಲ್ಲಾ ಆ ಮಾತಿನ ಪ್ರಕಾರವಾಗಿ, ನಿನ್ನ ಮಾತು ನೆರವೇರಿಸೊಕೋಸ್ಕರವಾಗಿ ನಾನು ಬಂದಿದ್ದವನು ವಾಪಸ್ಸು ಹೋರಟು ಹೋದೆ. ನೀನು ಹೇಳಿದ ಪ್ರಕಾರ ಈಗ ಬಂದಿದ್ದೀನಿ ಅಂತ ಹೇಳ್ತಾನೆ. ಸ್ವಾಮಿ, ನಾನು ಅಬಲೆ ಏಳು ಜನ ಅಣ್ಣಗಳು, ಏಳು ಜನ ಅತ್ತಿಗೆಗಳ ಕೈಕೆಳಗೆ ಇರೋವಳು. ನನ್ನ ಈ ರೀತಿ ಬಲತ್ಕಾರಪಡಿಸೋದು ನ್ಯಾಯವಲ್ಲ ಅಂತ ಹೇಳ್ತಾಳೆ. ಎಷ್ಟು ಹೇಳಿದರೂ ದೇವೇಂದ್ರರಾಯ ಕೇಳೋಲ್ಲ. ಎಂದಿದ್ದರೂ ನಾನು ನಿನ್ನೇ ಮದುವೆಯಾಗೋದು ನಿಮ್ಮಣ್ಣಗಳೇ ಅಗಲಿ, ಮತ್ತೊಬ್ಬರೇ ಆಗಲಿ  ನಿನ್ನನ್ನು ನಾನು ಅಪಾರವಾಗಿ ಪ್ರೀತಿಸಿದ್ದೀನಿ. ನಿನ್ನನ್ನು ಬಿಟ್ಟು ನಾನು ಹೋಗೋಲ್ಲ ಅಂತ ಇಬ್ಬರೂನೂ ಒಬ್ಬರಿಗೊಬ್ಬರಿಗೆ ಸಮ್ಮತಪಟ್ಟು ರಾತ್ರಿಯೆಲ್ಲ ಆನಂದವಾಗಿ ಇರ್ತಾರೆ. ಕೋಳಿಕೂಗೋ ಸಮಯ ಆಯ್ತು ನಾನಿನ್ನು ಬರ್ತೀನಿ ಅಂತ ದೇವೇಂದ್ರರಾಯ ಹೊರಟು ಹೋಗ್ತಾನೆ.

ಅಂದಿನಿಂದೀಚೆಗೆ ಆಯಮ್ಮ ದೇವೇಂದ್ರರಾಯ ಕೂಡ ಪ್ರತಿದಿವಸ್ಲೂನೂ ರಾತ್ರಿ ಕಾಲ ಸಂತೋಷವಾಗಿ ಕಾಲಹರಣೆ ಮಾಡಿಕೊಂಡಿದ್ಲು. ಹಿಂಗೆ ಇರೋ ವಾಗ್ಗೆ ಕೆಲವು ತಿಂಗಳುಗಟ್ಲೆ ಹೀಗೆ ನಡೀತು. ಇಬ್ಬರ ವಿಶ್ವಾಸಾನೂ ಅತಿ ಹೆಚ್ಚನಾಗಿ ನಡೀತಾ ಬಂತು. ಒಂದಿನ ದೇವೇಂದ್ರರಾಯನೂ, ಆ ರಾಜಕುಮಾರಿ ಊಟಮಾಡಿ ಎಲೆ ಅಡಿಕೆ ಹಾಕ್ಕೊಂಡು, ಕೂತಿರೋವಾಗ, ಏನೇ ರಾಜಕುಮಾರಿ, ನಾನು ನಾಳೆ ದಿವ್ಸ ನಮ್ಮ ಪಟ್ಟಣದಲ್ಲಿರತಕ್ಕಂತ ದೇವಲೋಕದ ಹದ್ದಿನ ಕೈಲಿ, ಬಂಗಾರದ ಸೀರೆ, ಬೆಳ್ಳಿ ಕುಬಸ ಕೊಟ್ಟು ಕಳಿಸ್ತೀನಿ. ನೀನು ಉಟ್ಟುಕೊಂಡು, ಸ್ನಾನ ಸಂಧ್ಯಾವಂದನೆ ಮಾಡಿಕೊಂಡು, ಸೀರೆ ಉಟ್ಟುಕೊಂಡು, ನಾನು ಬಾರೋವಾಗ್ಗೆ ಅಲಂಕಾರಭೂಷಿತಳಾಗಿರಬೇಕು. ನೀನು ನಮ್ಮ ಲೋಕದ ಸೀರೆ, ಕುಬುಸ ಉಟ್ಟುಕೊಂಡು, ನಮ್ಮಲೋಕದ ಒಡವೆ ವಸ್ತ್ರ ತೊಟ್ಟುಕೊಂಡು ನಾನು ಬರೋವಾಗ್ಗೆ ಅಲಂಕಾರವಾಗಿದ್ದರೆ, ಇನ್ನಷ್ಟು ಚನ್ನಾಗಿರ್ತೀಯ ಅಂತ ಹೇಳಿ ಬಿಟ್ಟು ಹೇಳ್ತಾನೆ. ಅಂಗೇ ಆಗಲಿ ಸ್ವಾಮಿ. ನಾನು ಎಂದಿದ್ದರೂ ನಿಮ್ಮವಳೇ ಅದಮೇಲೆ ಈಗ ನೀವು ಏನುಕೊಟ್ಟರೂ ನಾನು ಧರಿಸುವುದಕ್ಕೆ ಸಿದ್ಧಳಾಗೆ ಇದ್ದೀ ಅಂತ ಹೇಳ್ತಾಳೆ. ಬೇಕಾದಷ್ಟು ಸಂತೋಷ ಆಗೋಗ್ತದೆ. ಇವನು ದೇವಲೋಕಕ್ಕೆ ಹೋದ.

ದೇವಲೋಕದೊಳಗಿನ ದೇವೇಂದ್ರನ ಪಟ್ಟಣದಿಂದ, ಆ ಹದ್ದಿನ ಕೈಲಿ ಒಂದು ಬಂಗಾರದ ಪೆಟ್ಗೆ ಒಳಗೆ, ಆ ಸೀರೆ, ಕುಬುಸ, ವಡವೆ ವಸ್ತ್ರ, ದೇವಲೋಕದ ಆಭರಣಗಳನ್ನೆಲ್ಲ ಇಟ್ಟುಬಿಟ್ಟು, ಸೀಲು ಮಾಡಿಬಿಟ್ಟು ಆ ಹದ್ದಿನ ಕೈಗೆ ಕಳಿಸಿಕೊಡ್ತಾನೆ. ಆ ಹದ್ದು ಅದರ್ನೆಲ್ಲ ಕಟ್ಟಿಕೊಂಡು, ಕಾಲಿನಲ್ಲಿ ಕಚ್ಚಿಕೊಂಡು ಬರ್ತಾಐತೆ. ದಾರಿ ಒಳಗೆ ಆ ದೇವೇಂದ್ರರಾಯನ ಅಕ್ಕನ್ನ ಕೊಟ್ಟಿರತಕ್ಕಂತ ಪಟ್ಟಣದ ಮೇಲೆ ಬರಬೇಕು. ಏನಾಗೋತದಪ್ಪ ಅಂದ್ರೆ, ಈಯಮ್ಮ ಏನಕ್ಕೊ ಈಚೆಗೆ ಬಂದಿರ್ತಾಳೆ. ನೋಡಿದ್ಲು ಅಲೆಲೆ ಏನಿದು? ನಮ್ಮಣ್ಣನ ಪಟ್ಟಣದಿಂದ, ನಮ್ಮಣ್ಣ ಸಾಕಿರೋ ಹದ್ದು ಬರ್ತಾ ಐತಲ್ಲ? ಏನೋ ವಿಶೇಷ ಐತೆ!

ಇದರಲ್ಲಿ ಏನೊ ವಿಚಿತ್ರ ಇರೋದ್ರಿಂದ ಈತರದ ಪೆಟ್ಟಿ ಕಟ್ಟಕೊಂಡು ಬತ್ತಾಐತೆ. ನೋಡಬೇಕು ಅಂತ ಹೇಳಿ ಕೂಗ್ತಾಳೆ. ಇದು ಏನೋ ಗ್ರಾಚಾರ ಬಂತಲ್ಲಪ್ಪ ಇದು ಅಂತ ಹೇಳಿ ಆ ಪೆಟ್ಟಿಗೆ ತೊಗೊಂಡು, ಆಯಮ್ಮನ ಅರಮನೆ ಹತ್ತಿರಕ್ಕೆ ಬಂದು ಅಲ್ಲಿ ಇಳೀತದೆ. ಏನಯ್ಯಾ ನಮ್ಮಣ್ಣ ಏನು ಕಳಿಸವ್ನೆ? ಎಲ್ಲಿಗೆ ಪ್ರಯಾಣ? ಏನು ಓತಾ ಇರೋದು ಅಂತ ಕೇಳ್ತಾಳೆ. ಏನಿಟ್ಟವರೋ ಏನೋ! ನನಗೇನೂ ಗೊತ್ತಿಲ್ಲ. ಈ ಪೆಟ್ಟಿಗೆ ತೊಗೊಂಡು ಹೋಗಿ ಯಾವುದೋ ಒಂದು ಪಟ್ಟಣ. ಆ ಪಟ್ಟಣದಲ್ಲಿರೋ ರಾಜಕುಮಾರಿ ಮನೆಗೆ ಕೊಟ್ಟುಬಿಟ್ಟು ಬಾಂತ ಹೇಳಿ ಹೇಳವ್ರೆ, ತೊಗೊಂಡೋತಾ ಇದ್ದೀನಮ್ಮ ಅಂತ ಹೇಳಿಹೇಳ್ತದೆ ಈ ಹದ್ದು. ಆಗಲಪ್ಪ ಬೇಕಾದಷ್ಟು ದೂರದಿಂದ ಬಂದಿದ್ದೀಯಾ. ಬಿಸಿಲು, ಹೋಗಿಯಂತೆ, ಸ್ವಲ್ಪ ನೀರು ಕುಡಿದು ಹೋಗಿಯೆ ಬಾ ಅಂತಹೇಳಿ ಮನೆಗೆ ಕರಕೊಂಡು ಹೋಗ್ತಾಳೆ.

ಮನೆಗೆ ಕರಕೊಂಡು ಹೋಗಿಬಿಟ್ಟು, ಪೆಟ್ಟಿಗೆತೆರೆದು ನೋಡ್ತಾಳೆ. ಏನು ಬಂಗಾರದ ಸೀರೆ, ಬೆಳ್ಳಿ ಕುಬುಸ, ಒಳ್ಳೆ ವಜ್ರಖಚಿತವಾದಂತ ವಡವೆವಸ್ತುಗಳನ್ನೆಲ್ಲ ಇಟ್ಟಿರ್ತದೆ ನೋಡಿದ್ಲು. ಇದನ್ನೆಲ್ಲ ತೆಕ್ಕೊಂಬಿಟ್ಟಿದ್ದು ಚೇಳಿನ ಸೀರೆ, ಹಾವಿನ ಕುಬುಸ, ಇವಳತ್ತಿರ ಇದ್ದ ಚಿಟ್ಟಿಪಟ್ಟಿ ಒಡ್ವೆನೆಲ್ಲ ಅದರೊಳಕ್ಕೆ ತುಂಬಿಟ್ಟಿದ್ದು. ಯಥಾಪ್ರಕಾರವಾಗಿ ಬೀಗ ಹಾಕಿಬಿಟ್ಟು, ಹೂಂ ನಿನ್ನ ಪೆಟ್ಟಿಗೆ ನೀನು ತೊಗೊಂಡೋಗಪ್ಪ ಅಂತ ಹದ್ದಿನ ಕೈಗೆ ಕೊಟ್ಟಿಡ್ತಾಳೆ. ಈ ಹದ್ದು, ಏಳಂತಸ್ತಿನ ಉಪ್ಪರಿಗೆ ಆ ರಾಜಕುಮಾರಿ ಇರೋದು. ಆ ಉಪ್ಪರಿಗೆಗೆ ಬಂದು ಕೂತ್ಕೊಮತದೆ. ಈ ರಾಜಕುಮಾರಿ ಬಂದ್ಲು, ಅದನ್ನ ಇಸ್ಕೊಂಬಿಟ್ಟು. ಹದ್ದು ತನ್ನ ಪಾಡಿಗೆ ತಾನು ಹೊರಟೋಗಿಬಿಡ್ತು. ಈಯಮ್ಮ ಮನೆಗೆ ಹೋಗಿ ಸ್ನಾನ ಸಂಧ್ಯಾವಂದನೆ ಎಲ್ಲ ಪೂರೈಸಿಕೊಂಡು ಬಂದು, ಆ ಪೆಟ್ಟಿಗೆ ತೆಗೆದು ಸೀರೆನು ಕುಬುಸ ತೊಟ್ಕೊಂತಳೆ. ಯಾವಾಗ ಆ ಸೀರೆ ಕುಬುಸ ತೊಟ್ಕೊಂಡ್ಲೊ ಇಲ್ಲೋ ಒಂದೊಂದು ಮಚ್ಚೆ ಇಷ್ಟಿಷ್ಟು ಗಾತ್ರ, ಮೈಯಾದ ಮೈಯೆಲ್ಲ ಬೊಬ್ಬೆಗಳಾಗಿಬಿಟ್ಟು ಏನು ಉರಿ ಸಂಕಟ, ಎಲ್ಲೂ ಇರಕಾಗದು, ಇದು ಬಾಧೆ ಆಗೋ ಬುಡ್ತು. ಈಯಮ್ಮ ಆಲೋಚನೆ ಮಾಡಿದ್ಲು ತುಂಬಾ ಸಂಕಟ ಬಂದುಬಿಡ್ತು. ಎಲೆ ಎಲೆ ನಮ್ಮ ಅಣ್ಣಗಳು ನಮಗೇನು ಕಡಿಮೆ ಮಾಡಿದ್ರು? ನಾನು ಉಡಬೇಕೂಂತ ಅನ್ನೋಂತಾದ್ದೆ ನನಗೆ ತಂದು ಕೊಟ್ರು, ತೊಡಬೇಕೂ ಅನ್ನೊದನ್ನ ತೊಡಸವ್ರೆ, ಇಷ್ಟೆಲ್ಲಮಾಡಿ ನಾನು ಇವರನ್ನ ಗತಿಇಲ್ಲ ಅಂತೆ ಕೇಳಿಗೊಂಡ್ನಾ? ಅವರಾಗವರು ದೇವಲೋಕದ ಆಭರಣ, ದೇವಲೋಕದ ಸೀರೆ ಕುಬುಸಗಳನ್ನ ಕಳಿಸ್ತೀನಿ ಅಂತ ಹೇಳಿ, ಇಂತಾ ಸೀರೇನಾ ಕಳಿಸೋದು? ಇಂತಾ ಕುಬುಸಾನ ಕಳಿಸೋದು? ನನ್ನ ರೂಪು ಕೆಟ್ಟುಹೋಗ್ಲಿ ಅಂತಹೇಳಿ ಯಾಕಿಷ್ಟು ಆಕ್ಲೇಶ? ಅಥವಾ ನನ್ನ ಮೇಲೆ ಅವರಿಗೆ ಮಮತೆ ಇಲ್ಲದೆ ಹೋದ್ರೆ, ಇನ್ನು ಬರೋದಿಲ್ಲಾಂತ ಹೇಳಿದ್ರೆ ಸಾಕಾಗಿತ್ತಲ್ಲ. ಅದು ಬದಲಾಗಿ ನನ್ನ ರೂಪು ಕೆಡಸಬೇಕೂಂತ ಹೇಳಿ, ಈ ಚೇಳಿನ ಸೀರೆ, ಹಾವಿನ ಕುಬುಸ ಕಳಿಸಬೇಕಾಗಿತ್ತಾ? ಛೆ, ನಾನು ಸತ್ತರೂ ಇನ್ನು ಮಾತಾಡೋದಿಲ್ಲ ಮುಖದರ್ಶನ ಮಾಡೋದಿಲ್ಲ ಅಂತ ಶಪಥ ಮಾಡಿಕೊಂಡು ಬುಡ್ತಾಳೆ. ಸುಮ್ಮನೆ ಆಗಿಬಿಟ್ಟು,

ಈ ದೇವೇಂದ್ರರಾಯನಿಗೆ ಈ ಮಧ್ಯೆ ನಡದಿರತಕ್ಕಂತ ಅಚಾತುರ್ಯದ ಬದುಕೇನು ಗೊತ್ತು ಅವನಿಗೆ? ಏನೂ ಕಾಣ. ಓಹೋ ಇವತ್ತು ನನ್ನ ರಾಣಿ ನಾನು ಕೊಟ್ಟಿರತಕ್ಕಂತ ಬಟ್ಟೆಬರೆಗಳನ್ನು ತೊಟ್ಟುಕೊಂಡು, ಅಲಂಕಾರವಾಗವ್ಳೆ. ಮೊದಲೇ ಮಹಾಸ್ಫುರದ್ರೂಪಿ. ಅದರೊಳಗೆ ಈ ದೇವಲೋಕದ ಆಭರಣಗಳನ್ನೆಲ್ಲ ಧರಿಸಿಕೊಂಡ ಮೇಲೆ ಸಾಕ್ಷತ್ ಸರಸ್ವತಿದೇವಿ ಇದ್ದಂಗಿರ್‍ತಾಳೆ ಅಂದು ಏನು ಇವನು ಅಲಂಕಾರ ಭೂಷಿತನಾಗಿ, ಬೇಕಾದಷ್ಟು ಸಂತೋಷವಾಗಿ ಬರ್‍ತಾನೆ. ಬಂದ್ರೆ, ಹನ್ನೆರಡು ಘಂಟೆ ರಾತ್ರಿ ಸರಿಯಾಗಿ ಬಂದ. ಬಾಗಿಲು ತಟ್ಟಿದ. ಮಾತಾಡ್ಲಿಲ್ಲ. ಬೇಕಾದಷ್ಟು ತರವಾಗಿ ಹೇಳಿದ. ರಾಜಕುಮಾರಿ ನಾನಿವತ್ತು ನಿನ್ನ ಅಲಂಕಾರನ ನೋಡಬೇಕೂಂತ ಹೇಳಿ, ನಾನು ಅಲಂಕಾರ ಮಾಡಿಕೊಂಡು ಬೇಕಾದಷ್ಟು ಸಂತೋಷವಾಗಿ ಬಂದಿದ್ದೀನಿ. ಇವತ್ತು ಒಂದು ದಿನ ಬಾಗಿಲು ತೆಗಿ. ಇನ್ನು ಮೇಲೆ ನೀನು ಬಂದ್ರೆಬಾ, ಬಿಟ್ರೆಬಿಡು. ಇವತ್ತೊಂದಿನ ನಾನು ನಿನ್ನ ದರ್ಶನ ಮಾಡಬೇಕು ಅಂತ ಕೇಳಗಂತಾನೆ. ಏನು ಕೇಳಿಕೊಂಡ್ರು, ಮಂಚಕ್ಕೆ ಮಕಾಡೆ ಮಲಕ್ಕೊಂಡು ಬಾಗಿಲು ತೆಗೀಲಿಲ್ಲ. ಇವನಾಗು ಮಾತಾಡ್ಲಿಲ್ಲ. ಇವನಿಗೆ ತುಂಬಾ ಸಿಟ್ಟು ಬಂದುಬಿಡ್ತು. ಆ ಕದಾನ ಜಾಡಿಸಿದ್ದೆ ಒದ್ದು ಬಿಟ್ಟ, ಎತ್ಲುದತ್ತೆ ಒರಟೋಯ್ತು. ಒಳಗಡೀಕೆ ಓದ. ಮಂಚಕ್ಕೆ ಮಕಾಡೆ ಮಲಗವ್ಳೆ. ಬೇಕಾದಷ್ಟು ತರವಾಗಿ ಕೇಳಿಗಂಡ ನನ್ನಲ್ಲೇನು ತಪ್ಪಿದ್ದರೂ ಈಗ ನನ್ನಲ್ಲೇಳು. ನಾನು ಆ ತಪ್ಪನ್ನೆಲ್ಲ ನಿವಾರಣೆ ಮಾಡೋನು ನಾನು. ಈಗ ಬಿಟ್ಟು ನೀನು ಸುಮ್ಮನೆ ಏನೂ ಮಾತಾಡದೆ ಮೌನವಾಗಿದ್ದು ಬಿಟ್ರೆ ಏನೂಂತ ಅರ್ಥ ಮಾಡಿಕೊಂಡ್ಲಿ. ತಪ್ಪು ನಿಂದು ಅಂತ ಅರ್ಥಮಾಡ್ಲ, ಅಥವಾ ನಂದೆ ಅದ ಅಂತ ಅರ್ಥಮಾಡ್ಲ? ನನ್ನ ಮೇಲೆ ಇಷ್ಟವಿಲ್ಲದಾ ಇದ್ರೆ ಇನ್ನು ಮೇಲೆ ನನಗು, ನಿನಗು ಯಾವ ಸಂಬಂಧ ಇಲ್ಲಾಂತ ಹೇಳಿಬಿಡು. ಇವತ್ತೆ ಹೊರಟೋತೀನಿ. ಯಾವುದು ಇಲ್ಲದೆ ಸುಮ್ಮನೆ ಇರಬೇಡ ರಾಜಕುಮಾರಿ ಅಂತ ಬೇಕಾದಷ್ಟು ತರವಾಗಿ ಬೇಡಿಕೊಂತಾನೆ. ಎಷ್ಟು ಬೇಡಿಕೊಂಡಾಗ್ಯೂ ಕೂಡ ಆ ಅನ್ನಲ್ಲ ಊ ಅನ್ನಲ್ಲ, ಸುಮ್ಮನೆ ಇದ್ದುಬುಡ್ತಾಳೆ. ಅಯ್ಯೋ ಪ್ರಚಂಡಿ ನೋಡು ನಾನಿಷ್ಟು ತರವಾಗಿ ಕೈಮುಗಿದು ಕೇಳಿಕೊಂಡೆ. ಕಾಲಿಗೆಬಿದ್ದು ಕೇಳಿಕೊಂಡೆ. ಎಷ್ಟೇ ಕೇಳಿಕೊಂಡಾಗ್ಯೂ ಕೂಡ ನನ್ನ ಮಾತಿಗೆ ಒಂದು ಉತ್ತರಾನೂ ಕೂಡ ಹೇಳದೆ ಹೋಗಿಬಿಟ್ಟೆ, ಆಗಲಿನೋಡು ನಿನ್ನದೆಸೆ ನಿನ್ನ ಪಟ್ಣಾನೆ ಹಾಳಾಗೊ ಗತಿ ಬತ್ತದೆ. ನಿನ್ನ ಅಣ್ಣಗಳು ಅತ್ತಿಗ್ಗಳು ತಿರಕೊಂತಿನ್ನೋ ಹಾಗೆ ಮಾಡಿಬಿಡ್ತೀನಿ. ಬ್ಯಾಡ ನಂದು ಇದೊಂದು ಮಾತು ಕೇಳು, ನಿನಗೆ ಏನು ತೊಂದರೆ ಮಾಡಿದ್ದೀನಿ ಅಂತ ಹೇಳ್ತಾನೆ. ಏನೇ ಹೇಳಿದರೂ ಮಾತಾಡೋಲ್ಲ. ಅಯ್ಯೋ ಚಂಡಿ, ನೋಡು ಈಗ ನಾನು ನಿನ್ನ ಪಟ್ನದೊಳಗಾಗಿ ಒಂದು ತೊಟ್ಟು ಹನೀನೂ ಕೂಡ, ನಿಮ್ಮ ಪಟ್ನದ ಮೇಲೆ ಹಾಕೊಲ್ಲ. ಇದೇ ರೀತಿ ಇದ್ರೆ ಈ ಪಟ್ನಕ್ಕೆ ವಿಪರೀತ ಕ್ಷಾಮ ಬಂದುಬಿಡ್ತದೆ. ನಿಮ್ಮ ಅಣ್ಣಗಳ ಭಕ್ಷ ಬಂಡಾರದಲ್ಲಿರೋ ಹಣಾ ಎಲ್ಲಾ ರೈತರ ಪಾಲಾಗಿ, ನೀವು ಪಾಪರ್ ಆಗೋ ಗತಿ ಬಂದ್ಬಿಡೊಂಗೆ ಮಾಡಿಬಿಡ್ತೀನಿ. ಆಗ ನೀನು ಈ ದೇಶ ಬಿಟ್ಟು ಮುಂದಕ್ಕೆ ಅನ್ನ ಅನ್ನ ಅಂತ ಅಲಕೊಂಡು

ಹೋಗಬೇಕಾಗ್ತದೆ. ಮಾತಾಡು, ಒಂದು ಮಾತಾಡು, ಇದನ್ನೆಲ್ಲಾ ನಾನು ಪರಿಹಾರ ಮಾಡ್ತೀನಿ ಅಂತ ಹೇಳ್ತಾನೆ. ಅಲ್ಲಿಗೂ ಮಾತಾಡೋಲ್ಲ. ನೋಡು ಚಂಡಿ, ನೀನು, ನಿಮ್ಮಣ್ಣಗಳೆಲ್ಲರೂ ಸೇರಿ, ಅನ್ನನ್ನಂತಾ ಅಲೀತಿರೋವಾಗ, ನಿನ್ನ ಏಳು ಜನ ಅಣ್ಣಗಳೂ ನಿನ್ನ ಪ್ರೀತಿಯಿಂದ ಹೆಗಲಮೇಲೆ ಕುಂಡ್ರಿಸಿಕೊಂಡು ಓತಾರೆ. ಅವರಿಗೆ ಏನಕ್ಕೂ ತ್ರಾಣ ಇಲ್ಲದಂತೆ ನಿಶ್ಯಕ್ತಿಯಾಗಿ ಹೋಗ್ತಾ ಇರ್ತಾರೆ. ದಾರಿ ಒಳಗೆ ಒಂದು ಜಂನೇರಳೆ ಮರ ಆಗಿಬಿಟ್ಟು, ಒಂದೊಂದು ಹಣ್ಣು ಕೂಡ ಅಷ್ಟಷ್ಟು ಗಾತ್ರ ಬಿಟ್ಕಂಡು ಫಳಫಳಾಂತ ಫಳಗುಟ್ಟಾ ಇರ್ತೀನಿ. ಅದನ್ನು ನೋಡಲಾರದ ನಿನ್ನ ಏಳಾಳು ಅಣ್ಣಗಳು ಕೂಡ, ಈ ಹಣ್ಣಾದರೂ ತಿಂದು ನಿನ್ನ ಹಸಿವು ಹೋಗಲಾಡಿಸಿಕೊ ಅಮ್ಮ ಅಂತ ಬೇಳಾಡ್ತಾರೆ. ಆ ಹಣ್ಣನ್ನ ನೋಡಿ ಬಿಡಲಾರದೆ ತಿನ್ನಬೇಕಾಗಿ ಬರ್ತದೆ ನೀನು. ಆ ಹಣ್ಣ ತಿಂದಾಗಲಾದರೂ ನನ್ನ ಮಾತಾಡ್ಸಿದ ಹಾಗಾಗೊಲ್ಲವಾ? ಅಂತ ಹೇಳ್ತಾನೆ. ಏನು ಹೇಳಿದರೂ ಇವಳು ಮಾತಾಡೋದಿಲ್ಲ. ನೋಡು ನಿನ್ನ ಏಳಾಳು ಅಣ್ಣಗಳೂ, ಏಳಾಳು ಅತ್ತಿಗ್ಗಳೂ ದೇಶವೆಲ್ಲ ತಿರುಗಿ ನನ್ನ ಪಟ್ನಕ್ಕೆ ಬರಬೇಕಾಗ್ತದೆ. ನನ್ನ ಪಟ್ಣದೊಳಗೆ ಪ್ರತಿ ಮನೆ ಮನೆಗೂನೂ ಕೂಲಿಮಾಡಿ ಜೀವನ ಮಾಡಬೇಕಾಗಿಬತ್ತದೆ. ಆಗ ಪ್ರತಿ ಮನೆಒಳಗು ನಾನೇ ಆಗಿಬಂದು ನಿಮ್ಮ ಅಣ್ಣಗಳಿಗೆ ಭಿಕ್ಷ ಕೊಡ್ತೀನಿ. ಆ ಭಿಕ್ಷ ತೊಗೊಂಡು ಹೋಗಿ ನಿಮ್ಮನೇ ಒಳಗೆ ಅಡಿಗೆ ಮಾಡ್ಕೊಂಡು ಊಟ ಮಾಡಿದರೆ, ಆಗ ನನ್ನ ಮಾತಾಡ್ಸಿದಂಗೆ ಆಗಲ್ವ? ಚಂಡಿ ಅಂತ ಹೇಳ್ತಾನೆ. ಅಲ್ಲಿಗೂ ಮಾತಾಡಲ್ಲ. ನೋಡು, ಗಿಡಕ್ಕೆ ಹೋಗಿ ಸೌದೆ ತಗಂಡು ಬಂದು, ನಮ್ಮ ಪಟ್ಟಣದೊಳಗೆಲ್ಲಾ ತಿರುಗಿ ಮಾರಬೇಕಾಗ್ತದೆ. ಯಾರೂ ತೊಗೊಳೊದಿಲ್ಲ. ಎಲ್ಲಾರು ಕೊಡೋದಕ್ಕಿಂತ ಇನ್ನೂ ಒಂದೊಂದು ರೂಪಾಯಿ ಹೆಚ್ಚಾಗಿ ಕೊಟ್ಟು, ಆ ನಿಮ್ಮ ಅಣ್ಣಗಳ ಸೌದೆ, ಅತ್ತಿಗೆಗಳ ಸೌದೆನೆಲ್ಲ ನಾನೇ ಹಾಕಿಸಿಕೊಳ್ಳುತ್ತೀನಿ. ಹಿಂಗೇ ಮಾಡ್ತಾ ಇರೋವಾಗ, ನಿನ್ನ ಭವ ನೋಡಲಾರದೆ, 'ಏನಯ್ಯ, ನಿಮ್ಮೊಟ್ಟೆ ಸಾಕಿಕೊಳ್ಳದೇ ಕಷ್ಟವಾಗದೆ. ಆ ಹುಡುಗೀನ ಒಂದು ಹಿಂದೆ ಹಾಕ್ಕೊಂಡು, ಹೊಟ್ಟೆಗಿಲ್ಲದೆ ಯಾಕೆ ನಲಗಸ್ತೀರಾ? ನಮ್ಮನೇ ಒಳಗೆ ಬಿಡ್ರಿ, ನಾವು ಸಾಕ್ಕೊಂತೀವಿ ಅಂತ ಹೇಳಿ ನಿನ್ನ ನಾನು ಖರೀದಿ ಕೊಂಡುಕೊಂಡುಬಿಡ್ತೀನಿ, ಅವರು ನನ್ನ ವಶಕ್ಕೆ ಬಿಟ್ಟುಬಿಡ್ತಾರೆ. ಆಗ ನಮ್ಮ ಮನೆ ಹತ್ರ ರಾಗಿ ಒಣಗಿ ಹಾಕಿಬಿಟ್ಟು, ಆ ರಾಗಿ ಕಾಯೋದಕ್ಕೆ ನಿನ್ನ ಇರಸ್ತೀವಿ. ಆಗ ನಾನು ದೇವೇಂದ್ರನ ಕೋಳಿಯಾಗಿ ಬಂದು ಒಂದೊಂದು ಪಾವು ಒಂದೊಂದ್ಸಲ ನುಂಗ್ತಾ ಇರ್ತೀನಿ, ಆ ನುಂಗಿದಾಗಲೂ 'ಚೂ' ಅನ್ನೋದಿಲ್ಲವಾ ನೀನು? 'ಚೂ' ಅಂತ ಓಡಿಸಿದಾಗಲಾದರೂ ನನ್ನ ಮಾತಾಡಿಸಿದಂಗಾಗೊಲ್ಲವಾ? ಚಂಡಿ, ಈಗಾನ ಮಾತಾಡು ಅಂತಾನೆ. ಏನು ಮಾಡಿದರೂ ಅವಳು ಮಾತೇ ಆಡೋದಿಲ್ಲ. ನಾನು ಏನು ಹೇಳಿದ್ದೀನಿ. ಈ ಕಷ್ಟವೆಲ್ಲ ನಿನಗೆ ತಪ್ಪಿದ್ದಲ್ಲ. ಇಷ್ಟು ತರವಾಗಿ ನಾನು ಬೇಡಿಕೊಂಡರೂ ಕೂಡ ನನ್ನ ಮಾತಿಗೆ ಬೆಲೆ ಕೊಡಲಿಲ್ಲ. ಥೂ ಭ್ರಷ್ಟಮುಂಡೆ ಅಂತ ಹೇಳಿಬಿಟ್ಟಿದ್ದೆ ಹೊರಟು ಹೋಗ್ತಾನೆ.

ಯಾವಾಗ ಇವನು ಆಚೆಗೆ ಹೋದನೋ ಇಲ್ಲವೋ ಅವತ್ತಿನಿಂದ ಕೇವಲ ಐದಾರು ವರ್ಷಗಳಾದರೂ ಕೂಡ ಒಂದು ಹನಿ ಮಳೆ ಆ ಪಟ್ನದ ಮೇಲೆ ಬೀಳಲಿಲ್ಲ. ಕೆರೆ ಕುಂಟೆಗಳೆಲ್ಲಾ ಒಣಗಿಹೋದವು. ಮರ-ಮಂಡಿಗಳೆಲ್ಲ ಒಣಗ್ತಾಬಂದವು, ಭೂಮಿ ಎಲ್ಲಿ ನೋಡಿದರೂ ಬಿರುಕು ಬಿಟ್ಟು, ದನಕರುಗಳಿಗೆ ಮೇವಿಲ್ಲದೆ ಸಾಯೋ ಪರಿಸ್ಥಿತಿ ಬಂದುಬಿಡ್ತು. ಮನುಷ್ಯರು ಅನ್ನವಿಲ್ಲದೆ ಸಾಯತಕ್ಕಂತ ಪರಿಸ್ಥಿತಿ ಬಂದು ಬಿಡ್ತು. ಈ ಪಟ್ಟಣದಲ್ಲಿರತಕ್ಕಂತ ಜನಗಳು ಹೊಟ್ಟೆಗಿಲ್ಲದೆ ಬಂದು ಈ ದೊರೆಮನೆ ಹತ್ತಿರ ಸ್ವಾಮಿ, ನಮಗೆ ಅನ್ನದಾನಮಾಡ್ರಿ, ಹಣಕೊಡ್ರಿ, ಹಂಗಕೊಡ್ರಿ ಹಿಂಗ ಕೊಡ್ರಿ ಅಂತೇಳಿಬಿಟ್ಟು ಸಾವಿರಾರು ಜನ ದೊರೆ ಮನೆಮುಂದೆ ಕುಂತುಕೊಂಡು ಬಿಡ್ತಾರೆ. ಆ ದೊರೆಗಳು ಏನುಮಾಡಿಬಿಟ್ರು, ಬೇರೆ ದೇಶದಿಂದ ಧವಸಧಾನ್ಯಗಳನ್ನೆಲ್ಲಾ ತರಿಸಿ, ಆ ಬಡರೈತರಿಗೆಲ್ಲಾ ದಾನ ಮಾಡ್ತಾ ಅವ್ರೆ.

ಇದೇ ರೀತಿ ದಾನಮಾಡ್ತಾ ಇರೋವಾಗ್ಯೆ ಕೆಲವಾರು ವರ್ಷಗಳು ಕಳೆದವು. ಆ ಹಣ ಎಲ್ಲಾ ಮುಗಿದು ಹೋಗಿಬಿಡ್ತು. ಒಂದಾನೊಂದು ದಿನ ಎಲ್ಲರನ್ನೂ ಕುಂಡ್ರಿಸಿಕೊಂಡು "ಏನಪ್ಪಾ ನಮ್ಮ ಭಕ್ಷ-ಬಂಡಾರದಲ್ಲಿರತಕ್ಕಂತ ಹಣ ಎಲ್ಲ ಮುಗಿದು ಹೋಯಿತು. ನಾವು ನಿಮ್ಮ ಅಂತಸ್ತಿಗೆ ಬಂದುಬಿಟ್ವಿ, ನಾವು ಏನೂ ಮಾಡಕೆ ಆಗೋಲ್ಲಪ್ಪ. ಇನ್ನು ಅವರವರು ಬದುಕೋ ದಾರಿ ಅವರದು. ಅವರವರಿಗೆ ಅನುಕೂಲವಾಗಿರೋಂತ ಪಟ್ಟಣಗಳಿಗೆ ಹೋಗಿ ಅಲ್ಲಿ ಜೀವನ ಮಾಡಬೋದು. ನಮ್ಮ ಗ್ರಾಚಾರ ಪರಿಹಾರ ಆಗೋವರಿಗೂ ನಾವು ಏನೂ ಮಾಡೋಕೆ ಆಗೋಲ್ಲ. ನಮಗೆ ಅಪಾರವಾದ ಗಂಡಾಂತರಗಳು ಬಂದು ಒದಗವೆ. ಕ್ಷಾಮ ಪರಿಹಾರ ಆಗೋವರೆಗೂ, ನಾವು ನಮಗೆ ಅನುಕೂಲವಾಗಿರತಕ್ಕಂತ ಸ್ಥಳಗಳಿಗೆ ಹೋಗಿ ಜೀವನ ಮಾಡಿಕಳಾಣ" ಅಂತ ಎಲ್ಲರೂ ತೀರ್ಮಾನ ಮಾಡಿಬಿಟ್ರು. ತೀರ್ಮಾನ ಮಾಡಿಬಿಟ್ಟಿದ್ದೆ ಹೊರಟ್ರು. ಏನು ಯಾರ‍್ಯಾರಿಗೆ ಯಾವ್ಯಾವ ಊರು ಅನುಕೂಲ ಅವೋ ಆಯಾ ಪಟ್ಟಣಗಳಿಗೆ ಹೋಗಿ ಕೂಲಿಮಾಡೋರು ಕೂಲಿಮಾಡ್ಕೊಂಡ್ರು, ವ್ಯಾಪಾರ ಮಾಡಿಕೊಣೋರು ವ್ಯಾಪಾರ ಮಾಡೋದು. ಇನ್ನು ಬೇರೆ ಬೇರೆ ಕಸುಬು ಐತಲ್ಲ ಅವರ ಕಸುಬುಗಳಿಗೆ ಅನುಗುಣವಾಗಿ ಎಲ್ಲೆಲ್ಲಿಗೆ ಬೇಕೋ ಅಲ್ಲಲ್ಲಿ ಹೊರಟೋಗಿ ಬಿಟ್ರು.

ಏಳಾಳು ಅಣ್ಣಗಳು, ಏಳಾಳು ಅತ್ತಿಗ್ಗಳು ಇವರೂನು ಅವರಬುತ್ತಿ ಗಂಟೆಲ್ಲ ಕಟ್ಟಿಕೊಂಡು, ಇವರೊಂದು ಕಡೆ ಪ್ರಯಾಣ ಮಾಡ್ತಾಅವ್ರೆ, ಈ ಹುಡುಗಿ ಪಾಪ ಎಂದೂ ನಡದದ್ದಲ್ಲ! ಏಳಾಳು ಅಣ್ಣಗಳು ಗೂಸುಬಿಲ್ಲೆ ಹಾಕ್ಕೊಳೊದು, ಹೆಗಲ ಮೇಲೆ ಕುಂಡ್ರಿಸ್ಕೊಣೋದು. ಒಬ್ಬರ ಕೈ ಒಬ್ಬರು ಹಿಡ್ಕೊಂಡು ಆಯಮ್ಮನ್ನ ಒಂದು ಹೆಜ್ಜೆ ನಡಸ್ದಂಗೆ ಎತ್ತಿಕೊಂಡು, ಪಾಡುಬಿದ್ಗೊಂಡು ಓತಾಅವ್ರೆ, ತಿನ್ನಾಕನ್ನ ಇಲ್ಲ. ಕುಡಿಯಾಕೆ ನೀರಿಲ್ಲ, ಒಂದು ಬಾಬು ನಡೀಬೇಕು ಅಂದ್ರೆ ಆಯಾಸ ಆತದೆ. ಎಂಗೋ ಪಾಡುಬಿದ್ಗೊಂಡು ಆ ತಂಗೀನ ನೆಲದಮೇಲೆ ನಡಸದಂತೆ ಕರಕೊಂಡು ಓತಾ ಅವ್ರೆ, ಓದ್ರು, ಓದ್ರು ಬೇಕಾದಷ್ಟು ದೂರ ಹೋದ್ರು, ಅಲ್ಲಿ ಒಂದು ಅರಣ್ಯ. ಆ ಅರಣ್ಯದೊಳಗೆ ಏನು ಬಾಯಾರಿ ಬಳಲಿ

ಓಗಿಬಿಟ್ಟವ್ರೆ, ನೀರು ನೀರು ಅಂತಾವ್ರೆ, ಇಲ್ಲಿ ಒಂದು ಜಂಬುನೇರಳೆಮರ ಆಗಿ ಏನು ಝೋಂಕರಿಸ್ತಾ ಅದೆ. ಅದರೊಳಗೆ ಪಿತ ಪಿತ ಅಂತ ಮೆತ್ತವೆ ಹಣ್ಣು. ಎಲ್ಲ ನೆಲದಾಗೆ ಬಿದ್ದಿದ್ದು. ನೋಡಿದ್ರು, ಏನು ನಾನು ಮುಂದು, ನೀನು ಮುಂದು ಅಂತ ಹೊಟ್ಟೆ ಹೊಡೆಯೊಷ್ಟು ತಿಂದುಬಿಡ್ತಾರೆ. ಅದರೊಳಗೆ ಏಳಾಳು ಅಣ್ಣಗಳು. ಏಳಾಳು ಅತ್ತಿಗ್ಗಳು ಒಂದುಚೂರು ಮಿಷ್ಟಿಕಿಲ್ಲದಿರತಕ್ಕಂತ ಒಳ್ಳೊಳ್ಳೆ ಹಣ್ಣು ಆರಿಸಿಕೊಂಡು ಬಂದು ಅಮ್ಮ ಈ ಹಣ್ಣುಗಳು ನೋಡು, ಎಂತಾ ಚೆನ್ನಾಗವೆ, ನೀನು ತಿನ್ನಮ್ಮ. ಏನೋ ಒಂದಿನ ಎರಡುದಿನ ಇದನ್ನ ತಿಂದು ನೀರು ಕುಡಿದು, ನಾವು ಹೊಟ್ಟೆ ಹೊರಕೊಣನ. ಯಾವುದಾದರೂ ಒಂದು ಪಟ್ಟಣಕ್ಕೋಗಿ ತಿರದೋ, ಒರದೋ ಕೂಲಿಮಾಡೋ ಜೀವನ ಮಾಡಾನ. ನಿನಗೂ ರವಷ್ಟು ದಿಂಬಾಗಿರ್‍ತದಮ್ಮ, ಈಹಣ್ಣು ತಿನ್ನಮ್ಮ, ತಿನ್ನಮ್ಮ ಅಂತಾರೆ. ಏನುಮಾಡಿದರೂ ತಿನ್ನಲ್ಲ. ನನಗೆ ಹಸಿವಾಗಿಲ್ಲ ಅಂತಾಳೆ. ಯಾಕೆ? ಈ ದೇವೇಂದ್ರರಾಯ ಹೇಳಿದ್ನಲ್ಲ ಆ ರಾತ್ರಿ, ನೋಡು ಇಂಗೆಲ್ಲ ಅಂತೀನಿ ಅಂತ, ಆ ಹಣ್ಣು ತಿಂದ್ರೆ ಮಾತಾಡಿದಂಗೆ ಆಗೋಬುಡ್ತದಲ್ಲ ಥೂ ಆ ಚಂಡಾಲನಾಗೆ ನಾನು ಮಾತನಾಡಬಾರದು. ಹಣ್ಣು ತಿಂದುಬಿಟ್ರೆ, ನಾನು ಮಾತಾಡ್ದಂಗೆ ಆಗೋತದಲ್ಲ. ಸತ್ತರೂ ಸರಿ ಆ ಹಣ್ಣು ತಿನ್ನಬಾರದು. ಮಾತಾಡಂಗಾಗೋಗತದೆ ಅನ್ನೋ ಒಂದು ಹಟ. ಆ ಹಟಮಾರಿತನದಿಂದ ಆ ಹಣ್ಣು ತಿನ್ನಲಿಲ್ಲ.

ಇನ್ನು ಮುಂದೆ ಹೋದ್ರು ಏನು ಅಲ್ಲಿ ಹಾಲುಬಾವಿ ಆಗಿ ಫಲ ಫಲಾಂತ ಅದೆ. ಇವ್ರು ಹೋಗಿ ಹೊಟ್ಟೆ ತುಂಬಾ ಹಾಲುಬಾವ್ಯಾಗೆ ಹಾಲು, ನೀರುಬಾವ್ಯಾಗೆ ನೀರು ಕುಡಿದ್ರು, ಅಲ್ಲಿ ಒಂದು ಮರದಡೆ ತಣ್ಣಗಿತ್ತು, ಎಲ್ಲಾರು ಮಲಕೊಂಡ್ರು, ಈ ಯಮ್ಮನ್ನ ನೀರು ಕುಡಿಯಮ್ಮ, ನೋಡು ಹಾಲು ಎಂತಾ ಚನ್ನಾಗವೆ. ಹಾಲಿದ್ದಂಗೆ ಅವೆ ರವಷ್ಟು ಹಾಲು ಕುಡಿಯಮ್ಮ, ನೀರು ಬಾವ್ಯಾಗೆ ರವಷ್ಟು ನೀರು ಕುಡಿಯಮ್ಮ ಅಂದ್ರು, ಇಲ್ಲಣ್ಣ ನಾನು ಕುಡೀಲಿಲ್ಲ ಯಾಕೆ? ಹಾಲು ಬಾವ್ಯಾಗೆ ಹಾಲು ಕುಡುದ್ರೆ ಮಾತಾಡ್ದಂಗಾಗೋಬುಡ್ತದಲ್ಲ. ಕುಡಿಯಲಿಲ್ಲ. ಆ ಮರದಡೆ ಎಲ್ಲರೂ ಕೂತವ್ರೆ, ಈಯಮ್ಮನೂ ಕೂತ್ಕೊಂಡ್ಳು. ಎಲ್ಲರೂ ವಿಶ್ರಾಂತಿ ತೊಗೊಂಡ್ರು; ಮುಂದಕ್ಕೆ ಪ್ರಯಾಣ ಮಾಡಿದರು. ಮಾಡ್ತಾ ಮಾಡ್ತಾ ಬೇಕಾದಷ್ಟು ದೂರ ಹೋದರು. ಅಲ್ಲೊಂದು ಪಟ್ನ. ಆ ಪಟ್ಟಣದೊಳಗೆ ಕೆಲವಾರುದಿನ ಇದ್ರು, ಕೆಲವಾರು ದಿನ ಕೂಲಿಮಾಡೋದೊ, ನಾಲಿಮಾಡೋದೋ ಈ ರೀತಿ ಅಲ್ಲೊಂದು ಕೆಲವುದಿನ ಕಾಲಕಳೆದ್ರು, ಮುಂದಕ್ಕೆ ಪ್ರಯಾಣ ಮಾಡಿಕೊಂಡು ದೇವೇಂದ್ರನ ಪಟ್ಟಣಕ್ಕೆ ಬಂದ್ರು, ದೇವೇಂದ್ರನ ಪಟ್ಟಣದೊಳಗೆ ಅಲ್ಲೊಂದು ಮಂಟಪ, ಆ ಮಂಟಪದ ಹತ್ರ ಸೇರಿಕೊಂಡ್ರು, ಇವರ ಕೆಲಸ ಏನಪ್ಪ; ಬೆಳಿಗ್ಗೆ ಅಷ್ಟೊತ್ತಿಗೆ ಎದ್ದೇಳೋದು, ಏಳು ಜನ ಅಣ್ಣಗಳು ಇರ್‍ತಾರಲ್ಲ; ಏಳು ಮಚ್ಚುಗಳ್ನ ತೊಗೋಳೋದು, ಏಳುಜನ ಅತ್ತಿಗುಳಿರ್ತಾರಲ್ಲ, ಹಗ್ಗಗುಳೆಲ್ಲ ತೊಗೊಳೋದು, ಗಿಡಕ್ಕೆ ಹೋಗೋದು. ಹದಿನಾಲ್ಕು ಹೊರೆ ಸೌದೆಕಡಿಯೋದು. ಹದಿನಾಲ್ಕುಹೊರೆ ಸೌದೆಕಟ್ಟಿ, ಏಳುಜನ ಅತ್ತಿಗುಳು, ಏಳು ಜನ

ಅಣ್ಣಂದಿರು ಈ ಹೊರೆಗಳನ್ನ ಹೊತ್ಕೊಂಡು ಬಂದು, ಆ ದೇವೇಂದ್ರನ ಪಟ್ಟಣದೊಳಗೆಲ್ಲ. ಸೌದೆ ತಗೋಂತೀರೇನಮ್ಮಾ ಸೌದೆ ಅಂತ ಮಾರ್ತಾ ಇರೋದೆ ಕೆಲಸ ಆಗೋಯ್ತು. ಆ ಪಟ್ಟಣದೊಳಗೆ ಯಾರು ಎಷ್ಟೊಂತ ತಗೊಂತಾರೆ? ಆ ಊರಿಗೆ ಯಾರೋ ಒಂದು ಹತ್ತು ಜನ ಸೌದೆ ಆಕಿಸಿಕೊಹೋರು. ಇನ್ನು ಎಲ್ಲ ಅವರೆ ತೊಗೊಂಬಂದು ಸೌದೆ ಮನೆಗೆ ಮಡಿಕೊಹೋಂತ ರೈತರೆಲ್ಲ ಏನೇಳೋದಾಯ್ತು ಅಯ್ಯೋ ಇಲ್ಲೆಲ್ಲ ಯಾಕೊತ್ಕೊಂಡು ಅಲೀತೀರ. ನಮ್ಮೂರು ದೇವೇಂದ್ರರಾಯ ಅವನೆ. ಎಷ್ಟು ಹೊರೆ ತೊಗೊಂಬಂದ್ರೂ ತೊಗೊಂತಾನೆ. ಎರಡೆರಡು ರೂಪಾಯಿ ಕೊಡೋತಾವ ನಾಲ್ಕು ನಾಲ್ಕು ರೂಪಾಯಿ ಕೊಡ್ತಾನೆ. ಅವನು ಮಹಾದಯಾಳು. ಅವನತ್ತರಕ್ಕೆ ತೊಗೊಂಡೋದ್ರೆ ನಿಮಗೆ ಹೆಚ್ಚಿಗೆ ಲಾಭಾನೂ ಬತ್ತದೆ. ಜೀವನಾನು ಸುಖವಾಗಿ ನೆಡೀತದೆ ಹೋಗ್ರಪ್ಪ ಅಂತ ಹೇಳಿ ಹೇಳ್ತಾರೆ. ಸೌದೆ ಬೇಕೇನಮ್ಮಾ ಸೌದೆ ಅಂತ ಆ ದೇವೇಂದ್ರರಾಯನ ಅರಮನೆ ಹತ್ರ ತೊಗೊಂಡೋಗ್ತಾ ಇರ್‍ತಾರೆ. ಕೂಗ್ತಾನೆ ದೇವೇಂದ್ರರಾಯ. ಏನಯ್ಯ ತಗೊಂಬಾರಯ್ಯ ಇಲ್ಲಿ ಅಂದ್ರೆ ಇವರೆಲ್ಲರೂ ತೊಗೊಂಡೋಗ್ತಾರೆ. ಏನುಕೊಡಬೇಕಯ್ಯ ಅಂತಾರೆ. ಮೂರು ಮೂರು ರೂಪಾಯಿ ಕೊಡಿ ಸ್ವಾಮಿ ಅಂತಾರೆ. ಐದು ಐದು ರೂಪಾಯಿ ಕೊಡ್ತೀನಿ ಒಂದೊಂದು ಹೊರೆಗೆ, ಪ್ರತಿದಿವಸಾನು ಹದಿನಾಲ್ಕು ಹೊರೆ ಸೌದೆ ತೊಗೊಂಬಂದು ಹಾಕಿಬಿಡ್ರಿ, ದಿವಸ ಐದು ಐದು ರೂಪಾಯಂತೆ ಸಾರಾಸಗಟಾಗಿ ಕೊಟ್ಟುಬಿಡ್ತೀನಿ ಅಂತ ಹೇಳಿ ಹೇಳ್ತಾನೆ. ಏನು ಇವರಿಗೆ ಬೇಕಾದಷ್ಟು ಸಂತೋಷ ಆಗೋಯ್ತು. ದಿವಸ ಐದು ಐದು ಒಂದೊರೆಗೆ ಅಂದ್ರೆ, ಎಷ್ಟು ಸಂಪಾದನೆ ಆಯ್ತು "ಹೋ ಪರವಾಗಿಲ್ಲ, ಇದೇ ಗಿರಾಕಿ ಸರಿ, ನಾವಿನ್ನ ಮೇಲೆ ದಿವಸಾ ಇಲ್ಲಿಗೆ ತಂದುಹಾಕಿದ್ರೆ, ಒಂದೊಂದೊರೆ ತಂದಾಕೊತಾವ ಎಲ್ಡೆಲ್ಡು ತಂದಾಕಿದರೆ, ಒಬ್ಬೊಬ್ಬರಿಗೆ ಹತ್ತತ್ತು ರೂಪಾಯಿ ಗಿಟ್ಟತದೆ. ಹತ್ತು ರೂಪಾಯಿ ಗಿಟ್ಟಿದರೆ ದಿವಸಕ್ಕೆ ನೂರನಲವತ್ತು ನೂರೈವತ್ತು ರೂಪಾಯಿ ಸಂಪಾದನೆ ಮಾಡಬಹುದು ಅನ್ನೋ ಆಸೆಗೆ, ಎರಡೆರಡು ಹೊರೆ ತರಾಕೆ ಶುರು ಮಾಡ್ತಾರೆ.

ಅವರು ಆ ದುಡ್ಡನ್ನ ತೊಗೊಂಡೋಗೋದು. ರಾಗೀನ ಕೊಂಡುಕೊಹೋದು. ಆಯಮ್ಮನಿಗೆ ಏನಮ್ಮ ಈ ರಾಗೀನ ಒಣಗಾಕಿ ಓತೀವಿ. ನಾವು ಸೌದೆ ತೊಗೊಂಬರೋ ತನಕ ಒಣಿಕ್ಕೊಳ್ಳಿ. ದನ, ಕರ, ಕೋಳಿ, ಕತ್ತೆ ಇವುನ್ನೆಲ್ಲ ನೋಡಿಕೊಂಡುಕೂತ್ಕೊ ಅಮ್ಮ ಅಂತ ಹೇಳಿ ಹೇಳ್ತಾರೆ. ಹೇಳಿದ್ರೆ ಆಗ್ಲಿ ಅಂತ ಹೇಳ್ತಾಳೆ ಇವ್ರು ಯಾವಾಗ ಒಣಗಾಕಿ ಬಿಟ್ಟು ಹೋಗಿರ್‍ತಾರೊ ದೇವೇಂದ್ರರಾಯ ಕೋಳಿ ಆಗಿಬಂದು, ಏನು ಒಂದೊಂದು ಪಾವು ಒಂದೊಂದೇ ಸಲ ನುಂಗ್ತದೆ. ಏನು ನುಂಗಿರು ಆ ಕೋಳೀನ ಹೊಡೆಯಲ್ಲ, ಯಾಕೆ ಹೊಡೆಯಲ್ಲ? ದೇವೇಂದ್ರರಾಯನ್ನ ಮಾತಾಡಿಸ್ದಂಗಾಗಿ ಬಿಡ್ತದಲ್ಲ. ಆ ದೇವೇಂದ್ರರಾಯ ಹೇಳಿದ್ನಲ್ಲ. ಕೋಳಿ ಆಗಿ ಬಂದು, ಒಂದೊಂದು ಪಾವು ಒಂದೊಂದ್ಸಲ ತಿಂತಿರ್‍ತಿನಿ. ಆವಾಗ ಛೂ ಅಂದ್ರೆ ನನ್ನ ಮಾತಾಡಿಸಿದಂಗಾಗಲ್ವ ಅಂತ ಹೇಳಿರ್‍ತಾನಲ್ಲ. ಆದ್ದರಿಂದ ಇವನ್ನ ಓಡಸಲ್ಲ.

ಏನಾಗೋಯ್ತಪ್ಪ ಆಪಕ್ಕದಾಗಿರೋ ಎಂಗಸ್ರೆಲ್ಲ ಅಯ್ಯೊ ಹಾಳುಡಗಿ ರಾಗಿನೆಲ್ಲ ಕೋಳಿ ತಿಂದಾಕಿಬಿಡ್ತು; ಓಡ್ಸೆ ಅಂತ ಹೇಳಿರೂನು ಇವಳು ಓಡ್ಸಲ್ಲ. ಆ ಪಕ್ಕದೋರೆ ಬಂದು ಎಲ್ಲೊ ಮಂಕು ಹುಡುಗಿ ಇವಳು. ಗೊಂಬೆ ಕೂತಂಗೆ ಕೂತಿದ್ಯಲ್ಲೇ ಅಂತ ಅವರೇ ಓಡಸ್ತಾರೆ. ಇವನ ದೇವೇಂದ್ರರಾಯ ನೋಡಿದ ನಾನೇನು ಮಾಡಿದ್ರು ಇವ್ಳು ಆಡಿದ ಮಾತಿಗೆ ತಪ್ಪಲಿಲ್ಲಾ. ಇಷ್ಟು ಮಾಡೀನು ಇವ್ಳು ಮಾತೇ ಆಡ್ಲಿಲ್ಲ. ಇನ್ನು ಎಂತಾ ಪ್ರಚಂಡಿ ಆಗಬಹುದು ಇವಳು ಇವಳ ಮನಸ್ಸಿನಾಗೇನದೆ ಅಂತ ನಾನು ಅರ್ಥಮಾಡ್ಲಿ? ನಾನು ತಪ್ಪು ಮಾಡಿದೇಂತ ಇವ್ಳು ನನ್ನ ಮೇಲೆ ಇಷ್ಟೊಂದು ಶರತ್ತಾಗಿ ಅನ್ನಾ ನೀರು ಬಿಟ್ಟರೂನೂ ನನ್ನ ಮಾತೂಂತ ಹೇಳಿಕೊಂಡು. ಇದ ಮಾಡಿಕೊಂಡವಳಲ್ಲಾ! ಇಂತಾ ಪಟ್ಟಗಾರ ಹುಡುಗೀನ ಎಲ್ಲೂ ಕಾಣಲಿಲ್ಲಪ್ಪ! ಎಂಗ ನಾನಿವಳ್ನ ಮಾತಾಡ್ಸೋದು? ನಾನು ಹೊಂದೊ ರೂಪ ಏನು ಅಂತ ಯೋಚನೆ ಮಾಡ್ತಾ ಅವನೆ.

ಒಂದು ದಿನ ಇವರೆಲ್ಲರೂ ಸೌದೆ ಹೊತ್ಕೊಂಡು ಬಂದ್ರು. ಏನಪ್ಪ ನಮ್ಮನೆ ಒಳಗಿವತ್ತೊಂದು ಹಬ್ಬ ಐತೆ. ಆ ಹಬ್ಬಕ್ಕೆ ನೀವೆಲ್ರೂ ಊಟಕ್ಕೆ ಬಂದುಬಿಡಬೇಕು. ಇವತ್ತು ಸೌದೆಗೆ ನೀವ್ಯಾರು ಹೋಗಬೇಕಾಗಿಲ್ಲ. ನಮ್ಮನೆ ಒಳಗೇನೆ ಸ್ನಾನ ಸಂಧ್ಯಾ ವಂದನೆನೆಲ್ಲ ಪೂರೈಸಿಕೊಂಡು ಊಟಮಾಡ್ರಿ. ನಿಮಗೆ ಮಾಮೂಲು ಕೊಡಬೇಕಾದಂತೆ ಹತ್ತು-ಹತ್ತು ರೂಪಾಯಿ ನಾನು ಕೊಟ್ಬಿಡ್ತೀನಿ. ನೀವು ಸೌದೇನೂ ತರಬೇಡ್ರಿ. ಏನೂ ಮಾಡಬೇಡ್ರಿ. ನಮ್ಮಮನೆ ಒಳಗೆ ಈ ಜನಗಳಿಗೆಲ್ಲ ಊಟ, ಉಪಚಾರ ಮಾಡಿಕೊಂಡು, ನೀವು ಊಟಮಾಡಿಬಿಟ್ಟು ಸಂತೋಷವಾಗಿರಬೇಕು. ಅಂತ ಹೇಳಿ ಆ ದೇವೇಂದ್ರರಾಯ ಹೇಳ್ತಾನೆ. ಆಹಾ! ಏನಪ್ಪ, ಇವನೆಂತಾ ಧರ್ಮಿಷ್ಟ, ನಾವು ಸೌದೆ ತರದೇ ಇದ್ರೂ ಕೂಡ ನಮಗೆ ದಿವಸಾ ಕೊಡುತಿದ್ದಂತೆ ಕೂಲಿನ-ಸೌದೆವರೆಗೆ ಕೊಡತಿದ್ದಷ್ಟು ದುಡ್ಡು ಅಷ್ಟೇ ಕೊಡ್ತೀನಿ ಈವತ್ತು ಊಟ ಮಾಡ್ರಿ ಅಂತ ಹೇಳ್ತಾರಲ್ಲ ಇಂತಾ ಧರ್ಮಶಾಲಿಗಳು ಎಷ್ಟು ಜನ ಇರ್‍ತಾರೆ? ಈ ಮಹಾನುಭಾವನಿಂದ ನಮ್ಮ ಜೀವನ ಸುಗಮವಾಗಿ ನಡೀತದೆ. ಇನ್ನೂ ನೂರು ವರ್ಷ ಬದುಕಪ್ಪ ನೀನು ಅಂತ ಆಶೀರ್ವಾದ ಮಾಡಿ, ಅದರಂತೇನೆ ಈ ಹದಿನಾಲ್ಕು ಜನ, ಈ ರಾಜಕುಮಾರಿ, ಹದಿನೈದು ಜನಾನು ಅವರ ಮನೆಗೆ ಊಟಕ್ಕೋಗ್ತಾರೆ. ನಾನು ಬರಲ್ಲಣ್ಣ, ನಾನೇನು ಮಾಡಿದ್ರೂ ಬರಲ್ಲ. ಅವರ ಮನೇ ಒಳಗೆ ಊಟ ಮಡೋದಿಲ್ಲ ಅಂತ ಈಯಮ್ಮ ಹಟ ಹಿಡಿದು ಬಿಡ್ತಾಳೆ. ಆದ್ರೂ ಆಗಲಮ್ಮ ಅವರೇನೂ ಕೊಡ್ತಾರೆ. ನಮಗೆ ನಿಮ್ಮ ಹೆಣ್ಣು ಮಗಾನ ಕರಕೊಂಡು ಬರ್‍ರಿ ಅಂತಹೇಳವ್ರೆ ಕರಕೊಂಡು ಹೋಗದೆ ಇದ್ರೆ ದೊರೆಗಳು ಅವರೇನಾದರೂ ಅಂದು ಗೋಣಾದಿಲ್ಲೆನಮ್ಮ ನೀನು ಊಟ ಮಾಡದಿದ್ದರೆ ಕೆಡ್ತು ನಮ್ಮ ಜತೆ ಒಳಗಾದರೂ ಬಂದು ಅಲ್ಲಿ ಊಟಮಾಡಿದ ಶಾಸ್ತ್ರಮಾಡಿ; ನೀನು ಬರಬೇಕಮ್ಮ ಅಂತ ಬಲವಂತಮಾಡಿ, ಈ ರಾಜಕುಮಾರೀನ ಕರಕೊಂಡು ಹೋಗ್ತಾರೆ.

ಅಲ್ಲಿಹೋದ್ರು, ಎಲ್ಲರಿಗೂ ಊಟಕ್ಕೆ ಬಡ್ಸಿದ್ರು, ನೀರುಕೊಡೋದು, ಎಲೆ ಎತ್ತಾಕೋದು, ಈತರ ಎಲ್ಲರೂ ಸೇರಿ ಮಾಡಿದ್ರು, ಮಾಡಿದ್ದಾದಮೇಲೆ ಇವರು ಹದಿನೈದು ಜನಾನು ಒಂದುಕಡೆ ಕೂತ್ಕೊಂಡು ಊಟಮಾಡ್ತಾ ಅವ್ರೆ. ದೇವೇಂದ್ರ ರಾಯ ಬಂದು, ಓಹೋ ಎಲ್ಲರೂ ಊಟಕ್ಕೂ ತಿಂದಿರೇನಪ್ಪ ಊಟಮಾಡಿ ಸಂತೋಷ ಅಂತ ಅಂದು ಓಹೋ ಈ ಹುಡಗಿ ಯಾರು ಅಪರೂಪವಾಗಿ, ನಾನು ಎಂದೂ ನೋಡಲಿಲ್ಲಾ? ಈ ಹುಡುಗಿ ಎಂದೂ ಸೌದೆ ಹೊತ್ಕೊಂಡು ಬರ್ಲಿಲ್ಲ ಮತ್ತೇನೂ ಇರ್ಲಿಲ್ಲ. ಈ ಹುಡುಗಿ ಎಲ್ಲಿರೋಳು? ಇಲ್ಲಿಗೆ ಬಂದಾಗಿನಿಂದ ಎಲ್ಲಿ ಬಿಟ್ಟಿದ್ರಿ? ಏನು ಸಮಾಚಾರ' ಅಂತ ಕೇಳ್ತಾನೆ. ಏನೂ ಇಲ್ರಿ ನಾವು ಅಲ್ಲೊಂದು ಚಾವಡಿ ಒಳಗಿದ್ವಿ, ಆ ಚಾವಡಿ ಒಳಗೇನೆ ಈ ಮಗ ಇರೋದು. ನಾವು ಸೌದೆ ಸೊಪ್ಪು ತೊಗೊಂಬಂದು ನೀವು ಕೊಟ್ಟ ದುಡ್ಡಿನೊಳಗೆ ರಾಗಿ ತೊಗೊಂಡೋಗಿ ಕೊಟ್ರೆ, ಅದನ್ನ ಮಾಡಿ, ಕೇರಿ, ಬೀಸಿ ಅಡಗೆ ಮಾಡಿಕೊಂಡಿರೋದು. ನಮ್ಮ ಪಾಡಿಗೆ ನಾವು ಸೌದೆಗೋಗ್ತೀವಿ ಅಂತ ಹೇಳ್ತಾರೆ. ಓಹೋ ಪಾಪ ಇಂತಾ ಮಗಾನ ಏನನ್ಯಾಯ ಮಾಡಿಬಿಟ್ರಪ್ಪ. ಆದ್ರೂ ಆಗಲಿ. ನಾವಗು ಸಾಕ್ಕೊಂತೀವಿ. ಏನೋ ನಿಮ್ಮ ಕಷ್ಟ ನೀವು ಪಟ್ಟುಬಿಡ್ರಿ, ಈ ಮಗಾನ ನಾವು ಸಾಕ್ಕೊಂಡು ನಾವೇ ಮದುವೆ ಮಾಡಿಕೊಂಬಿಡ್ತೀವಪ್ಪ ಕೊಟ್ಟುಬಿಡ್ರಿ, ಅಂತ ಹೇಳಿ ಹೇಳ್ತಾರೆ. ಅಯ್ಯೋ ಏನು ಸ್ವಾಮಿ ನಾವು ನೋಡಿದ್ರೆ ಭಿಕ್ಷಾವೃತ್ತಿಯಲ್ಲಿರೋರು. ನೀವು ನೋಡಿದ್ರೆ ಚಕ್ರವರ್ತಿಗಳು. ನಮ್ಮ ಹೆಣ್ಣುಮಗಾಂದ್ರೇನು ನೀವು ಅಂದ್ರೇನು? ಎಲ್ಲಿಂದಲ್ಲಿಗೆ ಸುಮ್ಮನಿರಿ ಸಾಕು ಅಂತಾರೆ. ಆ, ಇಲ್ಲಯ್ಯಾ ಇನ್ನು ಮೇಲೆ ನಮ್ಮನ್ನೇ ಒಳಗಿದ್ದು ಬಿಡ್ಲಿ ಹೋಗ್ರಿ ಅಂತ ಹೇಳಿಬಿಡ್ತಾರೆ. ಇವರಿಗೂ ತುಂಬಾ ಸಂತೋಷ ಆಯ್ತು. ಆ ಮಗೂನ ಅವರಿಗೇನೆ ಅರ್ಪಿಸಿಬಿಟ್ಟು, ಅವರ ಪಾಡುಗೆ ಇವರು ಪಟ್ಟುಕೊಂಡಿರ್ತಾರೆ.

ಇರುವಾಗ್ಗೆ ಇವನೇನು ಮಾಡಿದ? ಯಾವ ರೀತಿ ಇವಳನ್ನ ಮಾತಾಡಿಸಬೇಕು? ಏನು ಮಾಡಿದರೂ ಮಾತಾಡ್ಲಿಲ್ಲ. ಆ ಅತ್ತೆಗೆ ಸ್ನಾನ ಸಂಧ್ಯಾವಂದನೆ ಮಾಡ್ಸೋದು. ತಲೆಒಳಗೆ ಏನು ನೋಡೋದು. ಬಟ್ಟೆ ಬರೆ, ಒಕ್ಕೊಡೋದು. ಅವರ ಮನೆ ಒಳಗೆ ಅಡಿಗೆ ಮಾಡಿಕೊಂಡು ಸುಖವಾಗಿ ಅವ್ಳೆ. ಒಂದು ದಿನ ಆ ದೇವೇಂದ್ರರಾಯನ ತಾಯಿ, ಆ ಸೊಸೆಕೊಡ ಏನೆ ರಾಜಕುಮಾರಿ, ನಾನಿವತ್ತು ನನ್ನ ಮಗಳ ಮನೆಗೆ ಹೋಗಿ ಬತ್ತೀನಿ. ಮನೆಕಡೆ ಉಷಾರಾಗಿ ನೋಡಿಕೋಮ್ಮ ಅಂತ ಹೇಳಿಬಿಟ್ಟು ಹೊರಟೋತಾಳೆ. ಹೋಗೋವಾಗ್ಗೆ ದೇವೇಂದ್ರರಾಯ ನೋಡಿದ ಓಹೋ ಇದೇ ಸಮಯ ಸರಿ ಅಂತ ಹೇಳಿ ಅವರ ತಾಯಿ ಆಚೆಗೋದ್ಲೋ ಇಲ್ಲೋ, ಇವನೇನು ಮಾಡಿದ ತನ್ನ ತಾಯಿವೇಷ ಆಕ್ಕೊಂಡು, ಒಂದು ಅರ್ಧ ಗಂಟೆ ಆದ ಮೇಲೆ ಬತ್ತಾನೆ.

ಮನೆಬಾಗಿಲಿಗೆ ಬಂದ್ಲು. ಯಾಕತ್ತೆಮ್ಮಾ ಮಗಳ ಮನೆಗೆ ಓತೀನಿ ಅಂದ್ರಿ, ಬಂದುಬಿಟ್ರೆ ಯಾಕರಿ? ಅಂತಾಳೆ. ಏಳೇಳೆ ಯಾಕೊ ಶಕುನ ಸರೋಗ್ಲಿಲ್ಲ ನಾಳೆ ಓದರಾಯ್ತು ಅಂತ ಬಂದುಬುಟ್ಟೆ ಅಂತ ಹೇಳಿ ಮನೆಗೆ ಬತ್ತಾಳೆ ಯಾಕೊ ತಲೆ ಕಡಿತದೆ, ಒಸಿ ಏನ್ನೋಡಬಾರೆ ಅಂತಕೂಗ್ತಾಳೆ. ಕೂಗಿದ್ರೆ, ಅತ್ತೆ

ಹೇಳಿಬಿಟ್ರೆ ಸೊಸೆ ಬರಬೇಕಲ್ಲ ಸೊಸೆ ಏನುಮಾಡಿದ್ಲು, ಏನು ನೋಡಿಕೊಂಡು ಕೂತಿದ್ಲು. ಇಂಗೇ ಆ ಮಾತು ಈ ಮಾತು ಆಡ್ತ ಏನೇ ಹುಡಗೀ, ನೀನು ಯಾಕೆ ನಮ್ಮ ದೇವೇಂದ್ರರಾಯನಾಗೆ ಒಂದು ದಿನಾನು ಮಾತಾಡಿದ್ದು, ನಾನು ಕಾಣ್ನೆಲ್ಲಾ ಏನು ಸಮಾಚಾರ? ಅಂತ ಕೇಳ್ತಾಳೆ. ಇಲ್ಲ ಏನೂ ಇಲ್ಲ ಮಾತಾಡ್ದೆ ಏನು? ಮಾತಾಡ್ತೀನಿ ಅಂತಾಳೆ. ನಾನು ಒಂದು ದಿನಾನು ನೋಡಿಲ್ಲ ಕಣೆ, ಅಂಗಿದ್ಮೇಲೆ ನಾಳೆ ನನ್ನ ಎದುರಿಗೆ ನೀವು ಮಾತಾಡಬೇಕು ಅಂತಾಳೆ. ಮಾತಾಡಬೇಕೂ ಅಂದ್ರೆ ಅವಳಿಗೆ ಕನಿಕರ ಬತ್ತದೆ. ಇವರ ಗ್ರಹಚಾರ ಹರಿಯೋ ಕಾಲ ಬಂದಿತ್ತೋ ಏನೋ ಆಗ.

ಅತ್ತೆಮ್ಮ ಅದೊಂದು ದೊಡ್ಡ ಕತೆ, ನನಗೆಷ್ಟೆಷ್ಟು ಇಕ್ಕಟ್ಟು ಕೊಟ್ರು, ಏನುಮಾಡಿದ್ರು, ಏನುಮಾಡಿದ್ರೂನೂ ನಾನು ಅವರಾಗೆ ಮಾತಾಡೋದಿಲ್ಲಾಂತ ಹೇಳಿ ಎಂದೋ ಹಟ ಮಾಡಿಬಿಟ್ಟೇದ್ದೀನಿ. ನಾನು ಸಾಯೋವರೆಗೂ ಅವರಾಗೆ ಮಾತಾಡೋದಿಲ್ಲ. ಅತ್ತೆಮ್ಮ ನನಗಂತ ಕೆಲಸ ಕೊಟ್ಬಿಟ್ರು ಅಂತ ಅವಳು ಹೇಳ್ತಾಳೆ. ಏನೆ ಹುಡ್ಗೆ ಅಂತ ಕೆಲ್ಸ ಕೊಟ್ಟಿದ್ದು. ನನ್ನಗೇಳ್ದೆ ಇನ್ನಾರಾಗೆ ಏಳೋದು ನೀನು? ನಾನು ಇವತ್ತು ಅತ್ತಿಗತ್ತೆ, ತಾಯಿಗೆ ತಾಯಿ ಅಂತ ಭಾವನೆ ಮಾಡಿಗೊ. ನಿನ್ನ ತಾಯಿ ಅಂತ ಹೇಳಮ್ಮ ನನಗೆ, ಏನಿದ್ರೂ ಪರಿಹಾರ ಮಾಡ್ತಿನಿ ಹೇಳಮ್ಮ; ಅದೇನ್ನಡ್ದದೆ ಅಂತ ಕೇಳ್ತಾಳೆ. ಆವಾಗ ಹೇಳ್ತಾಳೆ. ನೋಡತ್ತೆಮ್ಮಾ. ನಮ್ಮೂರೊಳಗೆ ದೊಂಬರಾಡ್ತಾ ಇದ್ರು, ವಿಪರೀತ ಮಳೆಬಂತು. ಬರೋ ಮಟ್ಟಕ್ಕಿತ್ತು. ಆಗ ಈಗ ಬರೋ ದೇವೇಂದ್ರರಾಯ ರಾತ್ರೀಕಾನ ಬಂದ್ಯಾ ಅಂತ ಅಂದೆ. ಅಂದ ಮಾತ್ರಕ್ಕೇನೆ ಮಳೆ ಎತ್ಲದತ್ತಕ್ಕೆ ಹೊರಟೋಗಿ ಬಿಡ್ತು. ಆ ದಿನ ರಾತ್ರಿ ಹನ್ನೆರಡು ಗಂಟೆಗೆ ಸರಿಯಾಗಿ ಇದೇ ದೇವೇಂದ್ರರಾಯರು ಬಂದ್ರು, ಏನೋ ನನ್ನ ಮರಳು ಮಾಡಿದ್ರೊ, ಬಿಟ್ರೊ ನಮ್ಮಿಮ್ಮರ ಮನಸ್ಸು ಒಂದಾಯ್ತು. ಆವತ್ಲಿಂದೂನು ಕೆಲವಾರು ತಿಂಗಳುಗಳ ಕಾಲ ಆನಂದವಾಗಿದ್ವಿ, ಇರೋವಾಗ್ಗೆ, ಒಂದಾನೊಂದಿನ ದೇವಲೋಕದಿಂದ ದೇವೇಂದ್ರನ ಸೀರೆ ಕುಬುಸ ವಡವೆ ವಸ್ತುಗಳನ್ನೇಲ್ಲಾ ಕಳಸ್ತೀನಿ. ಅದರ್ನ ಉಟ್ಕೊಂಡು, ನಾನು ಬರೋವಾಗ್ಗೆ ಅಲಂಕಾರ ಭೂಷಿತಳಾಗಿರು"ಅಂತ ಹೇಳಿದ್ರು, ಅಂಗೆ ಆಗ್ಲಿ ಅಂತೇಳಿ ಒಪ್ಕೊಂಡೆ. ಆದ್ರೆ ಏನತ್ತೆಮ್ಮಾ ನನಗೆ ಚೇಳಿನ ಸೀರೆ, ಹಾವಿನ ಕುಬುಸ ಕಳಿಸಿಬಿಟ್ಟು, ಆ ಸೀರೆ ನಾನು ಉಟ್ಕೊಂಡೆ ಅತ್ತೆಮ್ಮ ನನ್ನ ಮೈಯೊಳಗೆಲ್ಲ, ಒಂದೊಂದು ಬೊಬ್ಬೆ ಇಷ್ಟಿಷ್ಟಾನ್ತ್ರ ಆಗಿಬಿಟ್ಟು ಛಳಕು ಎಲ್ಲೂ ಇರಾಕಾಗದಂಗಾಗಿ ಬಿಡ್ತು, ನನಗೆ ಗತಿಯಿಲ್ಲದೆ ಅವರ್ನ ಕೇಳಿದ್ನಾ? ನನ್ನಂತಾ ನಿರಪರಾಧಿಗೆ ಇಂತಾ ಸೀರೆ ಕುಬುಸ ಕಳಿಸಿಬಿಟ್ಟು ನನ್ನ ಪ್ರಾಣ ಕಳಿಯಾಕೆ ಮಾಡಿದ್ರಲ್ಲಾ? ಸಾಯ್ಸಾಕೇನನ ಇವರು ರೋಸಿದೋರಾ? ಇಂತಾ ಚಂಡಾಲರ ಮುಖ ನೋಡಬೌದ? ಮಾತಾಡಬೌದ? ಇಷ್ಟೆ ಕಾಣತ್ತಮ್ಮ ಅಂತ ಹೇಳ್ತಾಳೆ. ಹೇಳ್ತಿದ್ದಂಗೆನೆ ಇವನು 'ಕಾರ್ ಅಂತ ನಕ್ಕಬಿಡ್ತಾನೆ. ನಕ್ಕುಬಿಟ್ಟಿದ್ದು ತನ್ನ ದೇವೇಂದ್ರನ ರೂಪಧರಿಸಿ ಅಯ್ಯೋ, ಚಂಡಿ ಅವತ್ತೇ ನನಗೆ ಹೇಳಿದ್ರೆ, ನಾನು ಒಂದು ನಿಮಿಷದಾಗೆಲ್ಲ ಬಗೆಹರಿಸ್ತಾ ಇದ್ದೆ. ಸತ್ಯವಾಗಲು ನಾನು ಅಂಗೆ ಮಾಡ್ದೋನಲ್ಲ. ತಡಿ, ಇದರ ನಿಜಸ್ಥಿತಿ ತಿಳಿಬೇಕಾದರೆ ಈಗಲೇ

ತಿಳಿಸ್ತೀನಿ"ಅಂತ ದೇವೇಂದ್ರನ ಹದ್ದಿತ್ತಲ್ಲ ಅದನ್ನ ಕೂಗ್ತಾನೆ. ಏನಯ್ಯಾ ನಾನು ಅವತ್ತು ಪೆಟ್ಟಿಗೆ ನಿನ್ನ ಕೈಗೆ ಕೊಟ್ಟಿಲ್ಲಾ, ಅದನ್ನ ಸೀದಾ ತಗೊಂಡೋಗಿ ರಾಜಕುಮಾರಿ ಮನೆಗೆ ಕೊಟ್ಯಾ ಅಥವಾ ಮಧ್ಯ ಎಲ್ಲಾದರೂ ಇಳ್ದಿದ್ದಿಯಾ? ಅಂತ ಕೇಳ್ತಾನೆ. ಕೇಳೋವಾಗ್ಗೆ ಏನೂ ಇಲ್ಲ. ನಾನು ತೊಗೊಂಡೋಗ್ತಾ ಇದ್ದೆ. ಮಧ್ಯೆ ದಾರಿ ಒಳಗೆ ನಿಮ್ಮಕ್ಕಾವ್ರು ಪಟ್ಟಣದ ಮೇಲೆ ಓಗಬೇಕಾಗಿ ಬಂತು. ನಿಮ್ಮಕ್ಕಾವ್ರು ನನ್ನ ಕೂಗೊಂಡ್ರು, ನಾನು ಹೋದೆ. ಏನಯ್ಯ ಈ ಬಿಸ್ಲಾಗೆ ಓಗ್ತಾ ಇದ್ಯಾ? ರವಷ್ಟು ನೀರು ಕುಡಿದು ಸ್ವಲ್ಪ ಸುಧಾರಿಸಿಕೊಂಡು ಹೋಗಿಯಂತೆ ಬಾ ಅಂತ ಹೇಳಿಬಿಟ್ಟು, ಈ ಪೆಟ್ಟಿಗೆ ತೊಗೊಂಡು ಒಳೀಕಿಕ್ಕಿಕೊಂಡ್ರು, ನನಗೆ ಸ್ವಲ್ಪ ಊಟಾನೂ ಹಾಕಿದ್ರು, ನಾನು ಸ್ವಲ್ಪ ವಿಶ್ರಾಂತಿ ತೊಗೊಂಡೆ. ಆ ಮೇಲೆ ನಾನು ಹೊರಡೋವಾಗ್ಗೆ ಆ ಪೆಟ್ಟಿಗೆ ತೊಗೊಂಬಂದು ಕೊಟ್ರು, ಅದರ್ನ ತೊಗೊಂಡೋಗಿ ಇವರ ಕೈಗೆ ಕೊಟ್ಟೆ ಅಷ್ಟೆ ಅಂತ ಹೇಳಿ ಆ ಹದ್ದು ಹೇಳ್ತದೆ. ನೋಡು ರಾಜಕುಮಾರಿ ನಿನ್ನ ಮೇಲೆ ಅನ್ಯಥಾ ನಾನು ಮಾಡ್ಡೋನಲ್ಲ. ಎಲ್ಲ ನಡ್ಡಿರೋದು ನಮ್ಮಕ್ಕನಿಂದ.

ನಮ್ಮಕ್ಕ ನಾನು ಕೊಟ್ಟಂತ ಸೀರೆ, ಒಡವೆನೆಲ್ಲ ಮಡಿಕ್ಕೊಂಡು, ಇಂಥಾ ಸೀರೆ ಕೊಟ್ಟು ನಿನಗೂ ನನಗೂ ಇಂತಾ ಬದ್ಧ ದ್ವೇಷ ಬರೋಂತೆ ಮಾಡ್ಡೋಳು ನಮ್ಮ ಅಕ್ಕನೇ ವಿನಹ ನಾನಲ್ಲ ಅಂತ ಆವಾಗ ನಿಜಸ್ಥಿತಿ ಹೇಳ್ತಾನೆ. ಹೇಳೋತೂನು ಇವಳಿಗೆ ಅನುಮಾನ ಎಲ್ಲ ಪರಿಹಾರ ಆಗ್ತದೆ. ಆಗ ಬೇಕಾದಷ್ಟು ಸಂತೋಷದಿಂದ ಇರ್ತಾರೆ. ಇರೋವಾಗ್ಗೆ ಏಳು ಜನ ಅಣ್ಣಗಳು, ಏಳು ಜನ ಅತ್ತಿಗುಳಿರ್ತಾರಲ್ಲ ಅವರನ್ನ ಕರಸಿ ಇಲ್ಲಿಗೆ ನಿಮಗೆ ಎಲ್ಲ ವಿಧವಾದ ಗ್ರಹಚಾರಗಳು ಹರಿದವು. ನಿಮ್ಮ ಪಟ್ಟಣಕ್ಕೆ ನೀವು ಹೋಗ್ರಿ, ಅಲ್ಲಿ ಸುಭಿಕ್ಷವಾಗಿ ಮಳೆ ಬೆಳೆಗಳಾಗ್ತವೆ. ಇನ್ನು ಯಥಾಪ್ರಕಾರವಾಗಿ ನಿಮಗೆ ಮೊದಲಿದ್ದಂತೆ ದೇಶ ಸುಭಿಕ್ಷವಾಗ್ತದೆ. ಇನ್ನು ಸುಖವಾಗಿ ನಿಮ್ಮ ರಾಜ್ಯಭಾರ ಮಾಡಿಕೊಂಡು, ನಿಮ್ಮ ಪಟ್ಟಣದೊಳಗಿರ್ರಿ ಅಂತ ಅವರಿಗೆ ಬೇಕಾದಷ್ಟು ಭಕ್ಷ ಭಂಡಾರ ಕೊಟ್ಟು ಕಳಿಸಿಕೊಡ್ತಾನೆ. ಆಗ ಅವರು ಅವರ ಪಟ್ಟಣಗಳಿಗೆ ಹೋಗಿ ಸುಖವಾಗಿ ರಾಜ್ಯಭಾರ ಮಾಡಿಕೊಂಡು ಅವರೆ. (ವೀರಣ್ಣ.ಸಿ. ಸಂ. ಒಬ್ಬನೇ ಹೇಳಿದ ಇಪ್ಪತ್ತೆರಡು ಕತೆಗಳು. ಪುಟ. ೧೮೭-೨೦೧)

**ಕಥನ: ನಾಲ್ಕು. <u>ನಾಗಕನ್ಯೆ</u>**

ಒಂದು ಪಟ್ಟಣ. ಅಲ್ಲೊಬ್ಬ ರಾಜ ದಂಡು, ದರ್ಬಾರು ಇಟ್ಟಕೊಂಡು ಅಗದಿ ವೈಭವದಿಂದ ರಾಜಕೀಯ ಮಾಡುತ್ತಿದ್ದ. ಅವನಿಗೆ ಇಬ್ಬರು ಗಂಡಸು ಮಕ್ಕಳು. ಆ ವರ್ಷ ಮಳೆ ಹೋಯ್ತು ನೀರಿನ ಅಭಾವ ಜಾಸ್ತಿಯಾಯ್ತು. ಎಲ್ಲೆಲ್ಲಿ ಬಾವಿ ತೆಗೆದರೂ ಸೆರೆ ನೀರು ಬರದು. ಆವಾಗ ರಾಜರು ಜೋಯಿಸರ್ನ ಕರೆಸಿ ಪ್ರಶ್ನೆ ಕೇಳತಾರೆ. ಅವರು 'ಇದ್ದಂತ ಹೇಳ್ಲಾ ಇಲ್ಲದಂತ ಹೇಳ್ಲಾ' ಅಂತ ಕೇಳತಾರ. ಆವಾಗ ಅವರಿದ್ದು 'ಇದ್ದಂಗ ಹೇಳ್ರಲಾ' ಅಂದರು. ಸದರಿ ಜೋಯಿಸರು ' ಹಿರೇ ಮಗ್ನ ಕಡಿದರ ಆ

ಬಾವೀಲಿ ನೀರು ಬರತದ' ಅಂತ ಹೇಳತಾರ. ರಾಜ ಅವನ ಕಡಿಸಲು ಒಪ್ಪಿಕೊಂಡ. ಆದರೆ ರಾಣಿಗೆ ಭಾಳ ದುಃಖವಾಗತದ. ಆಕೆ ಏನಾದರೂ ಮಾಡಿ ಮಗ್ನ ಉಳಿಸಬೇಕು ಅಂತ ವಿಚಾರ ಮಾಡತಾಳೆ. ರಾಜಕುಮಾರ ಇದ್ದ ಖೋಲಿಗೆ ಪಹರೆ ಹಚ್ಚತಾರ. ಅವನಿಗೆ ಮೂರು ದೋಸ್ತಿಗಳಿರತಾರ. ಅವರು ಮಂತ್ರಿ ಕುಮಾರ, ಬಡಿಗಿ, ಕುಂಬಾರ. ರಾಣಿ ಬೇಕಾದಷ್ಟು ರೊಕ್ಕ ಕೊಟ್ಟು ಮೂರು ಕುದುರೆ ಕೊಟ್ಟು 'ನೀವು ಎಲ್ಲಾದರೂ ಹೋಗಿ ಬದುಕೊಳ್ಳಿ' ಅಂತ ಹೇಳಿದಳು. ತಾಯಿ ಮಾತಿನಂತೆ ರಾಜಕುಮಾರ ದೋಸ್ತರ ಕೂಡಿಕೊಂಡು ಹೊಂಟ. ಹಿಂಗ ಅಡವಿ ಅರಣ್ಯ ಹತ್ತಿ ಇಳಿದಾಗ ಒಂದೂರು ಕಾಣತದ. ಆ ಊರಲ್ಲಿ ಹಜ್ಜೆ ಗುರುತಾ ಕಂಡುಹಿಡಿಯುವ ಒಬ್ಬಾತ ಇದ್ದ. ಈ ದೋಸ್ತರ ಪೈಕಿ ಕುಂಬಾರ ಹೆಜ್ಜೆ ಗುರುತಾ ಕಲಿಯಲು ಆ ಊರಲ್ಲೇ ಉಳಿದ. ಇನ್ನಿಬ್ಬರು ಮುಂದ ಹ್ವಾದರು. ಅಲ್ಲೇ ವಸತಿ ಮಾಡಿದರು. ಆ ಊರಲ್ಲಿ ಒಬ್ಬ ವಿಮಾನ ಮಾಡಿ ಅಂತರಿಕ್ಷದಲ್ಲಿ ನಡೆಸುವ ಕೆಲಸ ಮಾಡುತ್ತಿದ್ದ. ಬಡಿಗಿ ತಾನೂ ಅದ್ನ ಕಲಿಯಲು ಅಲ್ಲೇ ಉಳಿದ. ಮಂತ್ರಿ ಕುಮಾರ, ರಾಜಕುಮಾರ ಮುಂದ ಹೊಂಟರು. ಅಡವಿಯಾಗ ಒಬ್ಬ ಸಾಧು ತಪ್ಪಸಿಗೆ ಕುಂತಿದ್ದ. ಅವನ ಉದ್ದೇಶ ಏನಪ್ಪಾ ಅಂದರ ಸಂಜೀವಿನಿ ಕಡ್ಡಿ ವಶಪಡಿಸಿ ಕೊಳ್ಳುವುದಕ್ಕಾಗಿ. ಮಂತ್ರಿ ಕುಮಾರ ಸಾಧುವಿನ ಬಳಿ ವಿದ್ಯೆ ಕಲಿಯಲು ರೊಕ್ಕ ಕೊಟ್ಟಂಡು ಅಲ್ಲೇ ಉಳಿದ. ರಾಜಕುಮಾರ ಒಂಟಿಯಾಗಿ ಮುಂದೆ ಹೊಂಟ.

ಇತ್ತಕಡೆ ಏನಾಯ್ತು ಅಂದರ ಇವನ ತಾಯಿ ತಂದೆಗಳು ಹಲುಬಿ ನೆಲಕ್ಕೆ ಬಿದ್ದು ಹೋದರು. ರಾಜಕುಮಾರ ಆಲದ ಮರದ ಬುಡಕ್ಕೆ ಕುದುರೆ ಕಟ್ಟಿ ತಾನೂ ಮನಗಿದ. ಅಪರಾತ್ರಿ ಹೊತ್ತು ನಾಗರಾಜ ಮತ್ತು ಅವನ ಮಗಳು ಅಲ್ಲೇ ವಾಸ ಮಾಡುತ್ತಿದ್ದರು. ನಾಗರಾಜ ಮಾಣಿಕ್ಯ ಇಟ್ಟು ಮೇಯಲಿಕ್ಕ ಹತ್ತಿದ, ರಾಜಕುಮಾರ ಮರದ ಮ್ಯಾಲಿಂದ ಸೆಗಣಿಯನ್ನು ಮಾಣಿಕ್ಯದ ಮ್ಯಾಲೆ ಹಾಕಿದ. ನಾಗರಾಜನಿಗೆ ಕಣ್ಣು ಕತ್ತಲಾಯ್ತು ಸಿಟ್ಟಿನಿಂದ ಮುಂದೆ ಬಂದು ಚಾಪಿಸಿ ತನ್ನ ಹೆಡೆ ಕತ್ತರಿಸಿಕೊಂಡು ಬಿತ್ತು. ಇವನು ಮರದಿಂದ ಇಳಿದುಬಂದು ಹಳ್ಳ ತೊಳೆಯಾಕ ಬಾವಿಗೆ ಹ್ವಾದ. ಆಗ ಬಾವಿ ಬಯಲಾಗುತ್ತಾ ಹೋಯ್ತು. ನೀರು ಬತ್ತಿ ಹೋಯ್ತು. ಅಲ್ಲಿ ನಾಗರಾಜನ ಮಗಳಿದ್ದಳು. ಅವಳು ಇವನ ನೋಡಿ 'ನಮ್ಮ ತಂದೆ ಎಲ್ಲಿ?' ಅಂದಳು. ನಡೆದ ವೃತ್ತಾಂತ ಹೇಳಿದ. ಇಬ್ಬರೂ ಪ್ರೇಮದಿಂದ ಲಗ್ನ ಮಾಡಿಕೊಂಡು ಸುಖವಾಗಿದ್ದರು.

ಇತ್ತಕಡೆ ಏನಾಯ್ತು ಅಂದರ ಮೂವರು ಮೂರು ವಿದ್ಯೆ ಕಲಿಯಲು ಒಂದೊಂದೂರಿನಲ್ಲಿ ಉಳಿದುಕೊಂಡಿದ್ದರಲ್ಲಾ ಅವರ ಪೈಕಿ ಕುಂಬಾರ ಹೆಜ್ಜೆ ಗುರುತಾ ಕಂಡುಹಿಡಿಯುವ ವಿದ್ಯೆ ಪೂರೈಸಿಕೊಂಡು ಹೆಜ್ಜೆ ಗುರುತಿನ ಮ್ಯಾಲೆ ಬಂದು ಬಡಿಗಿಯನ್ನು ಪತ್ತೆ ಹಚ್ಚಿದ. ಇಬ್ಬರೂ ಕಲೆತು ಮುಂದ ಹೊಂಟರು. ಹಾದೀಲಿ ಮಂತ್ರಿ ಮಗನ ಜೊತೆ ಸೇರಿದರು. ಇವನು ಅಷ್ಟರಲ್ಲಿ ಸಂಜೀವಿನಿ ವಿದ್ಯ ಕಲಿತಿದ್ದ. ಮೂರು ಜನರೂ ರಾಜಕುಮಾರ್‍ನ ಹುಡುಕುತ್ತಾ ಆ ಆಲದ ಮರದ ಬುಡಕ್ಕೆ ಬಂದರು.

ಅಲ್ಲಿ ನೋಡಿದರೆ ಕುದುರೆ ಸತ್ತು ಹೋಗಿದೆ. ಕುಂಬಾರ ಹೆಜ್ಜೆ ಗುರುತಾ ಹಿಡಿದು ಬಾವಿ ಬಳಿ ಬಂದು ರಾಜಕುಮಾರ ಇದೇ ಬಾವಿಯೊಳಗ ಅದಾನ' ಅಂತ ಹೇಳಿದ. ನಾಗಕನ್ಯೆ ನಿತ್ಯ ಪೂಜೆಗೆ ಮ್ಯಾಲೆ ಬರುತ್ತಿದ್ದಳು. ನಾಗಕನ್ನಿಕಾ ಎಂದಿನಂತೆ ಪೂಜೆಗೆ ಬಂದಾಗ ಅಲ್ಲಿ ಮುದುಕಿ ಕಣ್ಣೀಗೆ ಬಿದ್ದಳು. ಮುದುಕಿ ಯಾಕ ಅಲ್ಲಿಗೆ ಬಂದ್ಲು ಅಂದರ ದನ ಕಾಯುತ ಅಡವಿಗೆ ಬಂದಿದಾಗ ಜಗ್ಗಿ ಮಳೆ ಬಂತು. ಅದ ತಪ್ಪಿಸುವ ಸಲುವಾಗಿ ಆಕೆ ಇಲ್ಲಿಗೆ ಬಂದಿದ್ದಳು. ಆಕೆ ಮುಂಜಾನೆ ಎದ್ದು ರಾಜವಾಡೆಗೆ ಬಂದು ರಾಜನಿಗೆ ವಿಷಯವನ್ನು ತಿಳಿಸಿ 'ಗುಡಿಗೆ ಬಂದು ಅವಳ್ನ ಹಿಡಿಯಿರಿ, ನಾತೋರಿಸ್ತೀನಿ' ಅಂತ ಹೇಳಿದಳು. ಮುಂಜಾನೆ ಆಕೆ ಪೂಜೆಗೆ ಬಂದಾಗ ಮುದುಕಿ ರಾಜಭಟರಿಗೆ ತೋರಿಸಿದಳು. ಅವರು ಜಗ್ಗಿ ಎಳೆದುಕೊಂಡು ರಾಜವಾಡೆಗೆ ಹೋದರು. ಇತ್ತಕಡೆ ರಾಜಕುಮಾರನಿಗೆ ಅನ್ನ ನೀರು ಇಲ್ಲದೆ ಸತ್ತು ಹೋದ. ದೋಸ್ತ್ ಈ ಮೂರು ಮಂದಿ ಮಡಿ ಮಾಡ್ಕೊಂಡು ಗುಡಿ ಮುಂದ ಪ್ರಾಣ ಕೊಡಲು ನಿಂತರು. ದೇವರು ಪ್ರತ್ಯಕ್ಷವಾಗಿ ಪ್ರತ್ಯಕ್ಷವಾಗಿ ರಾಜಕುಮಾರಿಯನ್ನು ಈ ಊರಿನ ರಾಜ ಬಲಾತ್ಕಾರವಾಗಿ ಕರ್‍ಕಂಡು ಹೋಗಿರುವ ವಿಷಯ ತಿಳಿಸಿ ಮಾಯವಾಯ್ತು.

ಈ ಮೂರು ಮಂದಿ ಅವಳ ಹುಡ್ಕತಾ ಹೊಂಟರು. ಒಬ್ಬ ಹೆಣ್ಣಿನ ರೂಪ ಧರಿಸಿ ರಾಜಾಡಗೆ ಹೋದ. ರಾಜಕುಮಾರಿ ಭೆಟಿ ಮಾಡಿ ಅವಳಿಂದ ವಿಷಯ ತಿಳಿದ. ಆಕೆ ತನ್ನ ಬಂಧನದ ಸಂಗತಿ ಹೇಳಿ ಇಪ್ಪತ್ತೊಂದು ದಿವಸ ವ್ರತವಿರುವುದಾಗಿ ಹೇಳಿದಳು. ಆ ಮ್ಯಾಲ ಮೂರು ಮಂದಿ ಮುದುಕಿ ಮನೆಯಾಗ ಬಂದು ವಸತಿ ಮಾಡಿದರು. ರಾಜನಿಗೆ ಕೀಲು ಕುದುರೆ ಖಯ್ಯಾಲಿ ಭಾಳ ಜಾಸ್ತಿ, ಬಡಿಗೆಯವರ್ನ ಕರೆಸಿ ತೇರು ಮಾಡಲು ಅಪ್ಪಣೆ ಕೊಟ್ಟ. ಇತ್ತಕಡೆ ಮಾಣಿಕ್ಯದ ಹರಳ ಅವಳಿಂದ ತಗೊಂಡು ಬಾವಿಯಾಗ ಬಂದ ಹರಳದ ಸಹಾಯದಿಂದ ರಾಜಕುಮಾರ್‍ನ ಬದುಕಿಸಿದರು. ಆಮ್ಯಾಲೆ ನಾಕೂ ಮಂದಿ ಬಂದು ಮುದುಕಿ ಮನ್ಯಾಗ ವಸತಿ ಮಾಡಿದರು. ಬಡಿಗಿ ಮೆರವಣಿಗೆ ಹೊಂಡ್ರಿಸಿ. ಆಗ ನಿಮ್ಮ ಕಿಮ್ಮತ್ ಜಾಸ್ತಿ' ಅಂದ. ರಾಜ ಕೀಲು ಕುದುರೆ ನಡೆಸಿ ಸಂತೋಷಪಟ್ಟ, ಮತ್ತೊಮ್ಮೆ ಮುದುಕಿ ರಾಜ ಇಬ್ಬರನ್ನೂ ಕುಂಡ್ರಿಸಿ ಮ್ಯಾಲ ಹಾರಿಸಿ ಅವರಿಬ್ಬರನ್ನೂ ಜಾಡಿಸಿ ಕೆಳಗೆ ನೂಕಿದರು. ಅವರು ತಳ್ಗ ಬಿದ್ದು ಸತ್ತರು. ಹೊಳ್ಳಿ ರಾಜವಾಡೆಗೆ ಬಂದು ನಾಗಕನಿಕಾ ಕರ್‍ಕಂಡು ಈ ನಾಕುಮಂದಿ ದೋಸ್ತಿಗಳು ತಮ್ಮ ಪಟ್ಟಣಕ್ಕೆ ಬಂದರು. ರಾಜ ರಾಣಿ ಬಹಳ ಸಂತೋಷಪಡುತ್ತಾರೆ. ರಾಜಕುಮಾರನಿಗೆ ಪಟ್ಟಗಟ್ಟಿ ಅಗದಿ ವೈಭವದಿಂದ ನಾಗಕನಿಕಾ ಜೊತೆ ಮದುವೆ ಮಾಡಿ ಎಲ್ಲರೂ ಸುಖವಾಗಿರುತ್ತಾರೆ. (ಹಾ.ಮಾ.ನಾಯಕ. ಪ್ರಸಂ.ರಾಯಚೂರು ಜಿಲ್ಲೆಯ ಜನಪದ ಕತೆಗಳು. ಪುಟ.೭೧-೭೩)

**ಕಥನ: ಐದು. ಶಿವಪಾರ್ವತಿಯರ ಸೋಲು**

ಕುರುಬ ಬೀರನು ಕುರಿ ಕಾಯುತ್ತ ಕಾಯುತ್ತ ಒಂದು ಹಳ್ಳದ ದಂಡೆಗೆ ಬಂದನು. ಅಲ್ಲಿಯ ನೀರು ನೆರಳು ನೋಡಿ, ಕುರುಬನು ತನ್ನ ಕುರಿಗಳಿಗೆ ದಡ್ಡಿಹಾಕಲು ತಕ್ಕ ಸ್ಥಳವೆಂದು ಬಗೆದನು. ಅದರಂತೆ ದಡ್ಡಿ ಹಾಕಲು ತೊಡಗಿದನು.

ಅಷ್ಟರಲ್ಲಿ ಅತ್ತ ಕಡೆಯಿಂದ ಶಿವಪಾರ್ವತಿ ಬಂದರು. "ಇಲ್ಲೇಕೆ ದಡ್ಡಿ" ಎಂದು ಕೇಳಿದರು.

"ಅದಕ್ಕೇನು ಆಗುವುದಿಲ್ಲ" ಎಂದನು ಬೀರನು.

"ಮಳೆ ಆಗಿಬಿಟ್ಟರೆ ಹಳ್ಳಕೊಳ್ಳ ತುಂಬಿ ಬರುವದಿಲ್ಲವೇ?" ಎಂದು ಶಿವ ಪಾರ್ವತಿ ಕೇಳಿದರು.

"ಮಳೆಹೋಯಿತು ತನ್ನ ನಾಡಿಗೆ ಮೂರು ತಿಂಗಳು" ಎಂದು ಬೀರನು ಅವರಿಗೆ ಮರು ನುಡಿದನು.

ಶಿವಪಾರ್ವತಿಯರು ಇಲ್ಲಿ ನಿಲ್ಲದೆ ಹೋಗಿಬಿಟ್ಟರು. ಅವರು ನೇರವಾಗಿ ವರುಣನ ಲೋಕಕ್ಕೆ ತೆರಳಿ "ಈಗಲೇ ಮಳೆರಾಯನನ್ನು ಕಳಸಿಕೊಡು" ಎಂದು ಹೇಳಿದರು.

"ಮಳೆರಾಯನನ್ನು ಬೇರೆ ನಾಡಿಗೆ ಕಳಿಸಿದ್ದೇನೆ. ಅವನು ಬರುವುದು ಮೂರು ತಿಂಗಳು ಕಳೆದ ಬಳಿಕ" ಎಂದು ವರುಣನು ತಿಳಿಸಿದನು.

ಆ ಮಾತು ಕೇಳಿ ಶಿವಪಾರ್ವತಿಯರ ಮುಖ ಬಾಡಿಹೋದವು. ಮರು ನುಡಿಯದೆ ತಂಗಿದವು. ಹಳ್ಳದ ದಡದಲ್ಲಿ ಬೆಳೆದು ನಿಂತ ಹುಲ್ಲು ಮೇದು, ಹಳ್ಳದ ನೀರು ಕುಡಿಯುತ್ತ ಮೂರು ತಿಂಗಳು ಕಳೆದವು.

ಆ ಸಂದರ್ಭದಲ್ಲಿ ಅತ್ತ ಕಡೆಯಿಂದ ಶಿವಪಾರ್ವತಿಯರು ಬಂದರು. ಕೇಳಿದರು "ಬೀರಾ, ದಡ್ಡಿ ಕಿತ್ತಿದೆಯಲ್ಲ! ಯಾಕೆ?"

"ಮಳೆರಾಜ ಬಂದಿರುವನಲ್ಲವೇ ನಮ್ಮ ನಾಡಿಗೆ" ಇದು ಬೀರನ ಮರುನುಡಿ.

"ಎಷ್ಟು ಸೊಕ್ಕು ಈ ಕುರುಬನಿಗೆ? ಮಳೆ ಬರುವದೆಂದು ಸ್ಪಷ್ಟವಾಗಿ ಹೇಳುತ್ತಿರುವನಲ್ಲ! ಏತರ ಮೇಲಿಂದ ಹೇಳುತ್ತಾನೆ ಹೀಗೆ?" ಎಂದು ಶಿವಪಾರ್ವತಿ ತಮ್ಮ ತಮ್ಮಲ್ಲಿಯೇ ಅಂದುಕೊಂಡು, ನೇರವಾಗಿ ದೇವಲೋಕಕ್ಕೆ ನಡೆದರು. ಅಲ್ಲಿ ವರುಣನ ಬಳಿಗೆ ಹೋಗಿ ಹೇಳಿದರು "ಮಳೆರಾಯನನ್ನು ಮರಳಿ ಕರೆಯಿಸು.

ವರುಣ ಬಿನ್ನಯಿಸಿದನು "ಆ ಹೊತ್ತು ನೀವು ಸೂಚಿಸಿದಂತೆ ಆತನನ್ನು ಇಂದೇ ಅತ್ತ ಕಡೆ ಕಳಿಸಿದ್ದೇನೆ. ಮೋಡಗಳು ಮುಂದೆ ಮುಂದೆ, ಸಿಡಿಲು ಮಿಂಚುಗಳು ಹಿಂದೆ ಹಿಂದೆ ಹೋಗಿವೆ. ನನ್ನ ಕೈಯಲ್ಲಿ ಏನಿದೆ? ಕೊಟ್ಟ ಹುಕುಮು ಅವರ ಕೈಯಲ್ಲಿದೆ. ಆ ಮಾತು ಕೇಳಿ ಶಿವಪಾರ್ವತಿಯರು ಅಂದುಕೊಂಡರು "ನಾವಿಂದು ಕುರುಬನಿಗೆ ಸೋತೆವು'.( ಸಿಂಪಿಲಿಂಗಣ್ಣ. ಉತ್ತರ ಕರ್ನಾಟಕದ ಜನಪದ ಕತೆಗಳು. ಪುಟ. ೬೨-೬೩)

## ಕಥನ: ಆರು. ಉತ್ತರೀಮಳೆ

ಅತ್ತೆ ಸೊಸೆಯರು ಹಿತ್ತಲಮನೆಯಲ್ಲಿ ಒಂದಿಷ್ಟು ವಾದಿಸಾಡುತ್ತಿದ್ದರು. ಅಷ್ಟರಲ್ಲಿ ಹೊಲದಿಂದ ಮಗನು ಬಂದನೆಂದು ಅತ್ತೆ ಎದ್ದು ಹೋದಳು. ಮಗನಿಗೆ ಉಣಬಡಿಸಬೇಕಲ್ಲವೇ?

ಊಟಕ್ಕೆ ಕುಳಿತ ಮಗನಿಗೆ ಉಣಬಡಿಸುತ್ತ ಹಗುರಾಗಿ ಎಳೆತೆಗೆದಳು ತಾಯಿ "ಈ ಸೊಸೆ ಬೇಡಪ್ಪ ಮಗನೇ, ಇವಳನ್ನು ತವರಿಗೆ ಕಳಿಸು."

"ಕಳಿಸಿಬಿಡುವುದಕ್ಕೆ ಎತ್ತೇ ಎಮ್ಮೆಯೇ? ಸೂತ್ರದ ಗೊಂಬೆಯಂಥ ಹೆಣ್ಣು ತರವೆನು. ಮಗನೇ ಬಿಟ್ಟುಬಿಡು ಇವಳನ್ನು" ತಾಯಿಯ ಆಗ್ರಹ.

"ಆವಲ್ಲ ಕರುವಲ್ಲ, ಬೊಗಸೆತುಂಬ ತೆರವುಕೊಟ್ಟು ತಂದವಳನ್ನು ಬಿಡುವುದೆಂತು ತಾಯಿ?

"ಕಿವಿಯೊಳಗಿನ ವಜ್ರದೋಲೆ ಮಾರುತ್ತೇನೆ. ಬ್ಯಾಂಗಡಿಯಂಥ ಹೆಣ್ಣು ತರುತ್ತೇನೆ. ಬಿಟ್ಟುಬಿಡು ನನ್ನ ಮಗನೇ ಇವಳನ್ನು" ಮತ್ತೆಯೂ ಅದೇ ಒತ್ತಾಯ ತಾಯಿಯದು.

"ಕೊಂಡುತಂದ ಆಡು-ಮರಿ ಬಿಟ್ಟುಬಿಡುವುದಕ್ಕಾಗುವದಿಲ್ಲ. ದೈವಸಾಕ್ಷಿಯಾಗಿ ಕೈ ಹಿಡಿದವಳನ್ನು ಹೇಗೆ ಬಿಡುವುದು ಅವ್ವಾ?"

"ಇದೋ ಈ ಮೂಗುತಿಯನ್ನು ಮಾರುತ್ತೇನೆ. ಮುತ್ತಿನ ಮಡದಿಯನ್ನು ತರುತ್ತೇನೆ. ಬಿಟ್ಟುಬಿಡು ಇವಳನ್ನು" ಅನ್ನುತ್ತಾಳೆ ತಾಯಿ.

ಮೂರು ಸಾರೆ ಹೇಳುತ್ತ ಬಂದರೆ ಸುಳ್ಳೇ ಸತ್ಯವಾಗುವದಂತೆ. ಛಲಹಿಡಿದು ಬಿಟ್ಟ ಮಾತು ಗೆಲ್ಲಲೇ ಬೇಕಲ್ಲವೇ? ಸೊಸೆ ತನ್ನ ತವರಿಗೆ ಹೊರಟುನಿಂತಳು.

"ಸೊಸೆ ಮುದ್ದೇ, ನೆಲುವಿನ ಮೇಲಿಟ್ಟ ನೆಲ್ಲಕ್ಕಿ ಬೋನವನ್ನಾದರೂ ಉಂಡು ಹೋಗು" ಎಂದು ಅತ್ತೆ ತೋರಿಕೆಯ ಆಗ್ರಹಪಡಿಸಿದರೆ, ಸೊಸೆ ಏನೆಂದು ಮರು ನುಡಿಯುತ್ತಾಳೆ "ಅದನನು ನೀನುಣ್ಣು ಇಲ್ಲವೆ ಮಗನಿಗೆ ಉಣಬಡಿಸು. ಉಳಿದರೆ ಬರುವವಳಿಗಾಗಿ ಕಾಯ್ದಿಡು".

"ಚೆಟ್ಟಿಗೆಯೊಳಗಿರುವ ಗಟ್ಟಿತುಪ್ಪವೊಂದಿಷ್ಟು ತಿಂದಾದರೂ ಹೋಗಮ್ಮ ಮುದ್ದು ಸೊಸೆಯೇ" ಎಂದು ಅತ್ತೆಯಾಡಿದ ಉಪಚಾರದ ಮಾತಿಗೆ ಸೊಸೆ ಹೇಳುತ್ತಾಳೆ "ನೀನಾದರೂ ತಿನ್ನು, ನಿನ್ನ ಮಗನಿಗಾದರೂ ತಿನ್ನಿಸು ಅದರಲ್ಲಿ ಒಂದಿಷ್ಟು ಬರುವವಳಿಗಾಗಿ ಕಾಯ್ದಿರಿಸು".

ಒಲೆಯಮೇಲಿಟ್ಟ ಹಸುವಿನ ಹಾಲನ್ನಾದರೂ ಕುಡಿದು ಹೋಗು ಎಂದಾಗ ಹಾಗೂ ಪೆಟ್ಟಿಗೆಯೊಳಗಿನ ಸಂಣಂಚಿನ ಕುಪ್ಪಸವನ್ನಾದರೂ ತೊಟ್ಟುಕೊಂಡು ಹೋಗು ಎಂದಾಗ ಸೊಸೆ ಅದೇ ರೀತಿಯಲ್ಲಿ ಉತ್ತರಿಸುತ್ತಾಳೆ.

ಹೇಳಿದ್ದಕ್ಕೆಲ್ಲ ಮರಳಿ ಉತ್ತರ ಕೊಡುವಳೆಂದು ಆ ಸೊಸೆಗೆ ಉತ್ತರಾದೇವಿಯೆಂದು ಹೆಸರಾಯಿತೇನೋ. ಅಂತೂ ಉತ್ತರಾದೇವಿ ಅತ್ತೆಯಮನೆಯಿಂದ ತವರು ಮನೆಯತ್ತ ಹೊರಟಳು.

ಒಂದು ಮಗುವನ್ನು ಬಗಲಲ್ಲಿ ಎತ್ತಿಕೊಂಡಿದ್ದಾಳೆ. ಇನ್ನೊಂದನ್ನು ಕೈಹಿಡಿದು ನಡೆಸುತ್ತಿದ್ದಾಳೆ. ತುಸು ಮುಂದೆ ಸಾಗುವಷ್ಟರಲ್ಲಿ ಬಾಳೆ ಬನವನ್ನು ಕಂಡು, ಅದಕ್ಕೆ ಹೇಳುತ್ತಾಳೆ, ತವರುಮನೆಗೆ ಹೋಗುವೆನೆಂದು. "ನೀನು ಹೋದರೆ ನಮಗೆ ನೀರುಣ್ಣಿಸುವವರಾರು? ಹಣ್ಣಾದರೆ ತಿನ್ನುವವರಾರು?" ಎಂದು ಕೇಳಿತು ಬಾಳೆಯ ಬನ.

"ನೀರುಣ್ಣಿಸುವದಕ್ಕೂ ಹಣ್ಣು ತಿನ್ನುವದಕ್ಕೂ ನನಗಿಂತ ಜಾಣೆಯಾದವಳು ಈ ಮನೆಗೆ ಬರುತ್ತಾಳೆ" ಎಂದು ಮರು ನುಡಿಯುತ್ತಾಳೆ ಉತ್ತರೆ.

ಇನ್ನೂ ಮುಂದೆ ಹೋದಾಗ ಕಿತ್ತಳೆಯ ಬನಕ್ಕೂ ಹೇಳುತ್ತಾಳೆ ತವರೂರಿಗೆ ಹೋಗುವೆನೆಂದು, ಕಿತ್ತಳೆ ಬನವೂ ಕೇಳುತ್ತದೆ "ನೀನು ಹೋದರೆ ನನಗೆ ನೀರುಣ್ಣಿಸುವರಾರು? ಹಣ್ಣಾದರೆ ತಿನ್ನುವವರಾರು?" ಎಂದು. ಅದಕ್ಕೂ ಮರುನುಡಿಯುತ್ತಾಳೆ ಅದೇ ಬಗೆಯಾಗಿ "ನೀರುಣ್ಣಿಸುವದಕ್ಕೂ ಹಣ್ಣು ತಿನ್ನುವದಕ್ಕೂ ನನಗಿಂತ ಜಾಣೆಯಾದವಳು ಈ ಮನೆಗೆ ಬರುತ್ತಾಳೆ. ಅತ್ತೆಯಾದವಳು ಸೀರೆಕುಪ್ಪಸಗಳ ದೊಡ್ಡ ಗಂಟನ್ನೇ ಆಕೆಯ ಮುಂದೆ ಇಳುಹಿದರೆ ಸೊಸೆ "ಇನ್ಯಾವ ಸೀರೆಯೂ ಬೇಡ. ಬೇರಾವ ಕುಪ್ಪಸವೂ ಬೇಡ, ನಮ್ಮವ್ವ ನನಗೆಂದು ಕೊಟ್ಟ ಸೀರೆಕುಪ್ಪಸ ಎತ್ತಿ ಇಡಿರಿ ಈಚೆಗೆ" ಎಂದಳು. ಒಂದು ಮಗುವನ್ನು ಬಗಲಲ್ಲಿ ಎತ್ತಿಕೊಂಡು, ಇನ್ನೊಂದನ್ನು ಕೈಯಲ್ಲಿ ಹಿಡಿದುಕೊಂಡು ಕಾಲ್ಗೆಜ್ಜೆಯನ್ನು ಗಿಲಿಸುತ್ತ ಹೊರಟ ಆಕೆಯನ್ನು ಕಂಡ ದೊಡ್ಡ ಮನುಷ್ಯರೊಬ್ಬರು ಕೇಳಿದರು "ನೀನಾವ ರಾಜನ ಸೊಸೆಯಮ್ಮ?" "ನಾನಾವ ರಾಜನ ಸೊಸೆಯಾಗಲಿ? ಅತ್ತೆಮ್ಮನ ಉರವಣಿಗೆಯಲ್ಲಿ ತವರೂರಿಗೆ ಹೊರಟಿದ್ದೇನೆ" ಎಂದು ಉತ್ತರಾ ಮರುನುಡಿಯುತ್ತಾಳೆ.

ಮೊದಲು ತಂದೆಯ ಮನೆಗೆ ಹೋಗಿ "ಅಪ್ಪ, ಕದತೆಗೆ, ಅಪ್ಪಯ್ಯ, ಕದತೆಗೆಯಿರಿ. ನನ್ನಪ್ಪಾ ನನಗೆ ಕದತೆಗೆ" ಎಂದು ಕೂಗಲು ಒಳಗಿನಿಂದ ತಂದೆಯ ಉತ್ತರ ಬರುತ್ತದೆ. "ಕಂದವ್ವನನ್ನು ತೊಡೆಯಮೇಲೆ ಹಾಕಿಕೊಂಡು ಚಾಪೆಯಮೇಲೆ ಕುಳಿತಿದ್ದೇನೆ. ದೀಪದ ಬುರುಡೆ ತುಂಬಿದೆ. ಹೀಗೆ ಎದ್ದು ಬರಲಿ? ಮಗಳೇ, ನಿಮ್ಮಣ್ಣನ ಮನೆಗೆ ಹೋಗವ್ವ, ಬಳಿಕ ಅಣ್ಣನಮನೆಗೆ ಹೋಗಿ ಅಲ್ಲಿಯೂ ಅದೇ ಬಗೆಯಾಗಿ ಹಲುಬಿದರೆ, ಅಣ್ಣನ ತೊಡೆಯ ಮೇಲೆ ಮುದ್ದು ಮಗು ಮಲಗಿದ್ದರಿಂದ ಅವನಿಗೂ ಎದ್ದು ಬರಲಿಕ್ಕಾಗಲಿಲ್ಲ. ಅಕ್ಕನಮನೆಗೆ ಹೋಗಲು ತಿಳಿಸಿದನು. ಅಕ್ಕನ ಮನೆ ಆಯಿತು. ತಂಗೆಯ ಮನೆ ಆಯಿತು. ಅಲ್ಲಿ ತೋಳಿನಲ್ಲಿ ಕೆಂಪವ್ವ ಮಲಗಿದ್ದರೆ. ಇಲ್ಲಿ ಕಾಳವ್ವ ಮಲಗಿದ್ದಳು. ಆದ್ದರಿಂದ ಎದ್ದು ಬರುವವರಾರು? ತಂಗಿಯ ಸೂಚನೆಯಂತೆ ಅವ್ವನ ಮನೆಗೆ ಹೋದಳು. ಕಣ್ಣೀರು ಕೋಡಿಯಾಗಿ ಹರಿಯುತ್ತದೆ. "ಕದ ತೆಗೆ ಅವ್ವಾ" ಅಂದಾಗ ಅವಳು ಕದತೆಗೆದು ಮಗಳನ್ನು ಅಪ್ಪಿಕೊಂಡು ತಲೆತಡವಿದಳು. ಕಣ್ಣೀರು ಹೊಳೆಯಾಗಿ ಹರಿಸುತ್ತ ಹೇಳಿದಳು. "ನಿನ್ನಪ್ಪ ನನ್ನನ್ನು ಉರಿಸಿದನು. ನನ್ನ ಪಾಡು ನಿನಗೂ ತಗುಲಿತೇ? ನೀನು ಉತ್ತರಾಮಳೆಯಾಗಿ ಹೊರಡಿನ್ನು". ಮಗಳು ಒಂದು ಮಗುವನ್ನು

ಬಗಲಲ್ಲಿ ಎತ್ತಿಕೊಂಡು, ಇನ್ನೊಂದನ್ನು ಕೈಯಲ್ಲಿ ಹಿಡಿದುಕೊಂಡು ಕಾಲುಗೆಜ್ಜೆ ಗಿಳಕ್ ಅನ್ನುತ್ತಿರಲು, ಉತ್ತರೆಯಾಗಿ ಹೊರಟಳು. ಉತ್ತರೆಮಳೆಗಾಗಿ ದಾರಿಕಾಯದವರು ಯಾರಿದ್ದಾರೆ. (ಸಿಂಪಿಲಿಂಗಣ್ಣ. ಉತ್ತರ ಕರ್ನಾಟಕದ ಜನಪದ ಕತೆಗಳು. ಪುಟ. ೧೩೮-೧೪೦)

**ಕಥನ: ಏಳು. ಮಾದಿಗನ ತೋಪು.**

ಒಬ್ಬ ರಾಜನಿಗೆ ಒಬ್ಬಳು ಮಗಳಿದ್ದಳು. ಅವಳಿಗೆ ಓದಿ ಬರೆದು ಬೇಜಾರಾಗಿತ್ತು. ಅದಕ್ಕೆ ಅವಳು ತನ್ನ ಗೆಳತಿಯರನ್ನು ಒಂದು ದಿನ ಹಣ್ಣಿನ ತೋಟಕ್ಕೆ ವನಭೋಜನಕ್ಕೆ ಕರೆದುಕೊಂಡು ಹೊರಟಳು. ಅರಮನೆಯಲ್ಲಿ ಅವರಿಗೆ ಬೇಕಾದ ರಸಭರಿತ ಊಟವನ್ನು ತಿಂಡಿಗಳನ್ನು ಮಾಡಿಕೊಟ್ಟಿದ್ದರು. ರಾಜಯೋಗ್ಯವಾದ ವಿಶಿಷ್ಟ ಭಕ್ಷ್ಯಗಳನ್ನು ತೆಗೆದುಕೊಂಡು ಉದ್ಯಾನದ ಹಣ್ಣಿನ ತೋಟಕ್ಕೆ ಬಂದರು. ಅಲ್ಲಿ ಎಲ್ಲರೂ ಊಟ ಮಾಡಿದರು. ಆಮೇಲೆ ದೊಡ್ಡವರ ತರ ಎಲೆ ಅಡಿಕೆ ಹಾಕಿಕೊಂಡು ಜಗಿದರು. ಮಳೆರಾಯ ಗುಡುಗುತ್ತಾ ಮಿಂಚುತ್ತಿದ್ದ. ಆಗ ರಾಜಕುಮಾರಿ ಮಳೆರಾಯನೆ, ನಮ್ಮ ವನಭೋಜನ ಈಗ ಮುಗಿದಿದೆ. ನಮ್ಮ ಸಂತಸ ಈಗ ಪ್ರಾರಂಭವಾಗಿದೆ. ಈಗ ಬರುವ ಬದಲು ರಾತ್ರಿಯಾದರೂ ನೀನು ಬಾರಬಾರದೆ? ಎಂದು ಕೇಳಿಕೊಂಡಳು.

ಆಗ ಮಳೆ ಒಂದೇ ಕ್ಷಣಕ್ಕೆ ನಿಂತಿತು. ಆ ನಂತರ ಅವರು ಸಂಜೆ ಊಟ ಮುಗಿಸಿ, ಆಟವಾಡಿ ಸಂತೋಷದಿಂದ ಕುಣಿದು ಕುಪ್ಪಳಿಸಿ ಮನೆಗೆ ವಾಪಾಸಾದರು.

ಮಹಡಿಯಲ್ಲಿದ್ದ ತನ್ನ ಮಲಗುವ ಕೋಣೆಗೆ ರಾಜಕುಮಾರಿ ಹೊರಟಳು. ಆ ರಾತ್ರಿ ಮಳೆರಾಯ ಅವಳ ಮಲಗುವ ಕೋಣೆಯ ಹೆಂಚುಗಳನ್ನು ಪಕ್ಕಕ್ಕೆ ಸರಿಸಿ ಕೋಣೆಗೆ ಅಲ್ಲಿಂದ ದುಮುಕಿ ಬಂದ. ಅವನು ಬಂದ ಶಬ್ದಕ್ಕೆ ಎಚ್ಚರಗೊಂಡ ರಾಜಕುಮಾರಿ ಅಯ್ಯೋ, ಯಾರು ನೀನು?ಎಂದು ಕೇಳಿದಳು.

ಆಗ ನೀನು ಈಗ ಬರಬೇಡ, ರಾತ್ರಿ ಬಾ ಅಂತ ಹೇಳಿರಲಿಲ್ಲವೆ? ಅದಕ್ಕೆ ನಾನ ಈಗ ಬಂದೆ ಎಂದ ಮಳೆರಾಯ.

ಸರಿ ಹಾಗಾದ್ರೆ, ನೀನು ಹಾಗೆ ಮಾಡಿದ್ದು ಬಹಳ ಸಂತೋಷವಾಯಿತು ಎಂದು ಹೇಳಿ ಅವನಿಗೆ ಟೀ ಮಾಡಿಕೊಟ್ಟಳು. ಸ್ನಾನಕ್ಕೆ ಬಿಸಿನೀರು ಕೊಟ್ಟಳು. ಆಮೇಲೆ ಅವರು ಬಹಳ ಹೊತ್ತು ಮಾತನಾಡಿದರು. ಕೊನೆಗೆ ಮಳೆರಾಯ, ನೀನು ನನ್ನನ್ನು ಚೆನ್ನಾಗಿ ನೋಡಿಕೊಂಡೆ. ಅದಕ್ಕೆ ಬದಲಾಗಿ ನಾನು ನಿನಗೇನು ಕೊಡಲಿ?' ಎಂದು ಕೇಳಿದ.

ನನಗೆ ಏನೂ ಬೇಕಿಲ್ಲ.

ಅಂಗಂದ್ರೆ ಹೆಂಗೆ? ನಿನಗೆ ಇಷ್ಟ ಆಗಿದ್ದನ್ನ ಏನಾದ್ರು ಕೇಳು.

ನೀನು ಅಷ್ಟೊಂದು ಬಲವಂತ ಮಾಡೋದಾದ್ರೆ ನನಗೊಂದು ಚೆನ್ನಾಗಿರೋ ರೇಷ್ಮೆ ರವಿಕೆ ತಂದುಕೊಡು.

ಅದಾದ್ರೆ ಸುಲಭ ತಂದುಕೊಡ್ತಿನಿ ಎಂದು ಹೇಳುತ್ತಾ ಎಲ್ಲಿಂದ ಇಳಿದಿದ್ದನೊ ಅಲ್ಲಿಂದಲೇ ಹತ್ತಿ ಹೊರಟು ಹೋದನು ಮಳೆರಾಯ.

ಅವನು ಮನೆಗೆ ಹೋಗುವ ದಾರಿಯಲ್ಲಿ ತನ್ನ ಹೆಂಡತಿಯರಾದ ಗಂಗಕ್ಕನಿಗೆ ಒಂದು, ಗೌರಕ್ಕನಿಗೆ ಒಂದು ಮತ್ತು ರಾಜಕುಮಾರಿಗೊಂದು ರವಿಕೆಗಳನ್ನು ಕೊಂಡುಕೊಂಡನು. ಅವರವರ ರವಿಕೆಯನ್ನು ಕೊಟ್ಟುಬಿಟ್ಟನು. ಆ ಸಮಯದಲ್ಲಿ ಒಬ್ಬಳು ಹೆಂಡತಿ ಅವನಿಗೆ ಊಟಕ್ಕೆ ನೀಡುತ್ತಿದ್ದಳು. ಇನ್ನೊಬ್ಬಳು ಅವನ ಜೇಬನ್ನು ತಡಕಾಡಿದಾಗ ರವಿಕೆ ಕಂಡಿತು. ಯಾರಿಗೆ ಇದನ್ನ ತಗೊಂಡಿರಬಹುದು? ಎಂದು ಹೊಟ್ಟೆಕಿಚ್ಚಿನಿಂದ ಯೋಚನೆಮಾಡುತ್ತಾ ಹಿತ್ತಲಲ್ಲಿ ಇದ್ದ ಚುರುಕಿನ ಸೊಪ್ಪಿನಿಂದ ಆ ರವಿಕೆಯನ್ನು ಉಜ್ಜಿ ಮತ್ತೆ ಜೇಬಿಗೆ ತಂದು ಇಟ್ಟುಬಿಟ್ಟಳು.

ಮಳೆರಾಯನಿಗೆ ಇದರ ಬಗ್ಗೆ ಗೊತ್ತಾಗಲಿಲ್ಲ. ಅವನು ಒಂದು ಪತ್ರವನ್ನು ಕಾಗೆಯ ಕತ್ತಿಗೆ ಕಟ್ಟಿ ರವಿಕೆಯನ್ನು ಅದರ ಪುಚ್ಚಕ್ಕೆ ಕಟ್ಟಿ ಹಾರಲು ಬಿಟ್ಟ, ಅರಮನೆಗೆ ಹೋಗಲು ಹೇಳಿದ. ಕಾಗೆ ರಾಜಕುಮಾರಿಯ ಮಲಗುವ ಕೋಣೆಯ ಮೇಲಿಂದ ಪರಚಿ, "ಕಾ!ಕಾ!" ಎಂದು ಕೂಗಿತು. ರಾಜಕುಮಾರಿಗೆ ಆ ಸದ್ದು ಕೇಳಿಸಿ ಹೊರಗೆ ಬಂದಳು. ಅವಳು ಅದಕ್ಕೆ ಕಟ್ಟಿದ ಕಾಗದ ಮತ್ತು ರವಿಕೆ ನೋಡಿ ತೆಗೆದುಕೊಂಡಳು.

ಮಾರನೇ ದಿನ ಬೆಳಿಗ್ಗೆ ಎದ್ದವಳೆ ಸ್ನಾನಮಾಡಿ ಆ ರವಿಕೆಯನ್ನು ಹಾಕಿಕೊಂಡಳು. ಅದನ್ನು ಹಾಕಿಕೊಂಡ ತಕ್ಷಣವೇ ಮೈಯೆಲ್ಲಾ ಕಡಿಯಲು ಶುರುವಾಯಿತು. ಮತ್ತೆ ಸ್ನಾನದ ಮನೆಗೆ ಓಡಿದಳು. ಮತ್ತೆ ಸ್ನಾನ ಮಾಡಿದರೂ ಕಡಿತ ನಿಲ್ಲಲಿಲ್ಲ. ಅವಳಿಗೆ ಚಿಂತೆಯಾಯಿತು. ಅಸಹನೆಯಿಂದಲೇ ಆ ರವಿಕೆಯನ್ನು ಹರಿದುಹಾಕಿ ತಿಪ್ಪೆ ಗುಂಡಿಗೆ ಬಿಸಾಕಿದಳು. ನಂತರ ತಣ್ಣೀರಿನಲ್ಲಿ ಸ್ನಾನಮಾಡಿ ಒದ್ದೆ ಬಟ್ಟೆ ತೊಟ್ಟುಕೊಂಡ ಮೇಲೆ ಸಮಾಧಾನವಾಗಿ ನಿದ್ದೆ ಮಾಡಿದಳು. ಅವನು ಯಾಕೆ ಕೆಳಗೆ ಮಲಗಿದ್ದೀಯಾ? ಅಂತ ಕೇಳಿದ. ಅವಳು ಒಂದಿಂಚು ಅಲುಗದೆ ಇದ್ದಳು. ಅವನು ಕೇಳಿದ್ದಕ್ಕೆ "ಆ" ಅನ್ನಲಿಲ್ಲ "ಊ" ಅನ್ನಲಿಲ್ಲ. 'ಉಪ್ಪಿನಕಾಯಿ' ಅನ್ನಲಿಲ್ಲ. ಅವನು ಮಾತಾಡಿಸಿ ನೋಡಿದ. ಪುಸಲಾಯಿಸಿ ನೋಡಿದ. ಏನೇನೋ ಉಪಾಯಮಾಡಿದ. ಅವಳಿಂದ ಮಾತಿಲ್ಲ. ಅವನಿಗೆ ಕೋಪಬಂತು. ಕೊನೆಗೆ ಇಲ್ನೋಡು, ಯೋಚ್ನೆಮಾಡು, ನನ್ನ ಜೊತೆಗೆ ಇಂಗೆ ನಡ್ಕೊಂಡರೆ ನೀನು ಭಿಕ್ಷೆ ಬೇಡಿ, ಬೇರೆಯೋರು ಎಸೆದ ತಂಗಳು ತಿನ್ನಬೇಕಾಯ್ತದೆ. ಅದರ ಬಗ್ಗೆ ಯೋಚ್ನೆಮಾಡು ಅಂದ.

ಆಗಲೂ ಅವಳು ಮಾತಾಡಲಿಲ್ಲ. ಅವಳಿಗೆ ಬಹಳ ಬೇಜಾರಾಗಿತ್ತು. ಕೋಪ ಬಂದಿತ್ತು. 'ಇಷ್ಟೇನಾ, ನನ್ನ ಜೊತೆ ಮಾತಾಡುವುದಿಲ್ಲವೆ? ನಿನ್ನನ್ನ 'ಹೊಲೇರು ನೋಡುವಂಗೆ' ದೂರ

ಇಟ್ಟದ್ದೀಯಾ? ನೀನು ನನ್ನ ಕಡೆ ನೋಡಿದರೆ ಅದು ಮಾತಾಡ್ದಂಗೆ ಅಂತ ತಿಳ್ಕೋಂತಿನಿ. ನಾನು ತಂದ ಹಣ್ಣು ತಿನ್ನಿಸಿ ನಿನ್ನನ್ನು ಮಾತಾಡೋ ಅಂಗೆ ಮಾಡ್ತೀನಿ, ನಾನು ಕತ್ತೆ ತರ ಬಂದು ಉಚ್ಚೆ ಮಾಡ್ತೀನಿ ನೋಡ್ತಾ ಇರು ಎಂದು ಹೆದರಿಸಿದನು. ಅಬ್ಬರಿಸಿದನು, ಹುಚ್ಚುಚ್ಚಾಗಿ ಕೂಗಾಡಿದನು. ಆಗಲೂ ಆಕೆ ಮಾತಾಡಲಿಲ್ಲ.

ಆಗ ಮರಗಳೆಲ್ಲ ಒಣಗಿದವು. ಕೆರೆಗಳೆಲ್ಲಾ ಬತ್ತಿಹೋದವು. ಮಳೆರಾಯ ಅವಳ ತಂದೆ ತಾಯಿಗೆ ಬಡತನ ಕೊಟ್ಟು ಅರಮನೆ ಬಿಡುವಂಗೆ ಮಾಡಿದ. ಭಿಕ್ಷೆ ಬೇಡೋ ಸ್ಥಿತಿಗೆ ತಂದುಬಿಟ್ಟ, ಅವರು ಅರಮನೆ ಬಿಟ್ಟು ಬಿಸಿಲಿನಲ್ಲಿ ನಡೆದರು. ಅವರು ಕಾಲು ಬೆಂಕಿಯಂತೆ ಸುಡ್ತಾ ಇದ್ದವು. ರಸ್ತೆಯಲ್ಲಿ ಒಂದು ಆಲದಮರ ಇತ್ತು. ಅಲ್ಲಿ ಅವರೆಲ್ಲ ಕೂತರು. ಆದರೆ ಮಗಳು ನೆರಳಿಗೆ ಹೋಗದೆ ಬಿಸಿಲಲ್ಲೇ ನಿಂತಳು. ಅವರು ಒಂದು ಕಲ್ಲಂಗಡಿ ಹಣ್ಣಿನ ತೋಟಕ್ಕೆ ಹೋದರು. ಒಂದು ದೊಡ್ಡ ಕಲ್ಲಂಗಡಿ ಹಣ್ಣು ಉರುಳಾಡಿಕೊಂಡು ಬಯಲೆಲ್ಲಾ ಅದೇ ಅನ್ನೋ ರೀತಿ ಕಾಣ್ತ ಇತ್ತು. ರಾಜ ಹೋಗಿ ಅದನ್ನು ತಂದ. ಅವರೆಲ್ಲ ಅದನ್ನು ತಿಂದರು. ಅವಳು ಮಾತ್ರ ಕೈಯಲ್ಲೂ ಮುಟ್ಟಲಿಲ್ಲ. ಮಳೆರಾಯ ಮಾದಿಗನ ವೇಷದಲ್ಲಿ ಬಂದು ಅವರಿಗೆಲ್ಲ ಗಂಧದ ತುಂಡಿನಲ್ಲಿ ಚಪ್ಪಲಿಮಾಡಿ ತಂದಿದ್ದ. ತಗೊಳ್ಳಿ, ಬಿಸಿಲು ಜಾಸ್ತಿ ಇದೆ ಹಾಕ್ಕೊಳ್ಳಿ ಎಂದು ಕೊಟ್ಟ, ಅವಳ ತಂದೆ ತಾಯಿ ಹಾಕಿಕೊಂಡರೂ ಅವಳು ಮಾತ್ರ ಅದನ್ನು ಮುಟ್ಟಲೂ ಇಲ್ಲ.

ಪಕ್ಕದ ಊರಿನಲ್ಲಿ ಒಬ್ಬಳು ಜಾಣೆಯಾದ ಮುದುಕಿದ್ದಳು. ಅವಳ ಹತ್ತಿರ ರಾಜಕುಮಾರಿಯ ತಂದೆ ತಾಯಿ ಹೋಗಿ ತಮ್ಮ ಕಷ್ಟ ಹೇಳಿಕೊಂಡರು. ಬಡತನ ಯಾರಿಗೆ ಬೇಕಾದ್ರು, ಯಾವಾಗ ಬೇಕಾದ್ರು ಬರಬಹುದು. ನನ್ನ ಜೊತೆ ನೀವು ಇರಿ ಎಂದು ತನ್ನ ಗುಡಿಸಲಲ್ಲಿ ಮುದುಕಿ ಜಾಗಕೊಟ್ಟಳು. ಅಲ್ಲಿ ಅವರು ಎರಡು ದಿನ ಇದ್ದು ಮೂರನೇ ದಿನಕ್ಕೆ ಹೊಲದಲ್ಲಿ ಒಂದು ಕೆಲಸ ಹುಡುಕಿಕೊಂಡರು.

ಕೆಲಸಮಾಡಿ ಅವರು ಜೋಳತಂದರು. ತಾಯಿ ಮಗಳಿಗೆ ಈ ಜೋಳ ಹಸಿ ಇದೆ. ಒಣಗಿಸಿ ಇಡು. ನಾನು ಸಂಜೆ ಬಂದು ಬೀಸುತ್ತೇನೆ ಎಂದು ಹೇಳಿ ಕೆಲಸಕ್ಕೆ ಹೋದಳು. ಜೋಳ ನೋಡಿಕೊಂಡು ಅವಳು ಕೂತಿದ್ದಾಗ ಒಂದು ಕತ್ತೆ ಬಂದು ಜೋಳ ತಿನ್ತ ಇತ್ತು. ಅಲ್ಲೇ ಉಚ್ಚೆನೂ ಮಾಡ್ತು. ಅವಳು ಏನೂ ಮಾಡಲಿಲ್ಲ. ಅದನ್ನು ತೂ ಅಂತ ಬೈಯಲಿಲ್ಲ, ಹೊಡಿಲಿಲ್ಲ, ದೂರ ಓಡಿಸಲಿಲ್ಲ. ಆಗ ಅಲ್ಲಿಗೆ ಮುದುಕಿ ಬಂದು ಏನಾಗಿದೆ ನಿನಗೆ? ಒಳ್ಳೆ ದಡ್ಡಿ ನೀನು ಅಲ್ಲಿ ಕುಳಿತಿದಿಯಾ. ಕತ್ತೆ ಬಂದು ಜೋಳನೆಲ್ಲ ಮೇಯ್ತಾ ಅದೆ. ಉಚ್ಚೇನೂ ಮಾಡ್ತು ಅಂತ ಬೈದುಕೊಂಡು ಅದನ್ನೆಲ್ಲಾ ಒಟ್ಟುಮಾಡಿ ಒಳಗೆ ಇಟ್ಟಳು.

ಮಾರನೆ ದಿನ ಮಳೆರಾಯ ಬಳೆ ಮಾರುವವನ ವೇಷದಲ್ಲಿ ಬಂದ. "ಬಳೆ, ಬಳೆ" ಅಂತ ಕೂಗ್ತಾ ಇದ್ದ. ಅವಳ ಕೈಯಲ್ಲಿ ಬಳೆ ಇರಲಿಲ್ಲ. ಅವಳು ಸುಮ್ಮನೆ ಕೂತಿದ್ದಳು. ಪಕ್ಕದ ಮನೆ ಹೆಂಗಸು ಅವಳನ್ನು ಬಾರವ್ವ, ನಿನ್ನ ಕೈಯಲ್ಲಿ ಬಳೆ ಇಲ್ಲ, ಬಂದು ಇಲ್ಲಿ ಬಳೆ ತೊಡಿಸಿಕೊ ಎಂದು ಕರೆದಳು.

ಅವಳು ಅಲುಗಾಡಲಿಲ್ಲ. ಆಗ ಪಕ್ಕದ ಮನೆ ಹೆಂಗಸರು ಅವಳನ್ನ ಬಲವಂತವಾಗಿ ಕರೆದುಕೊಂಡು ಹೋಗಿ ಬಳೆಗಾರನ ಮುಂದೆ ಕೂರಿಸಿದಳು. ತಾನು ಕೋಣೆಯಲ್ಲಿ ಏನೋ ಇಟ್ಟಿದ್ದನ್ನು ನೋಡಿಕೊಂಡು ಬರಲು ಒಳಗೆ ಹೋದಳು. ಅಲ್ಲಿ ಹೊರಗೆ ಬಳೆಗಾರ ಮತ್ತು ರಾಜಕುಮಾರಿ ಇಬ್ಬರೇ ಇದ್ದರು. ಅವನು ಅದಕ್ಕಾಗಿ ಕಾಯ್ತಾ ಇದ್ದ. ಅವಳನ್ನ ಕರೆಕೊಂಡು ಅಲ್ಲಿಂದ ಮಾಯವಾದ.

ಇನ್ನೊಂದು ಹಳ್ಳಿಗೆ ಅವರು ಬಂದರು. ಅಲ್ಲಿ ಇನ್ನೊಬ್ಬಳು ಬಡ ಮುದುಕಿ ಇದ್ದಳು. ಅಲ್ಲಿಗೆ ಅವಳನ್ನು ಕರೆದುಕೊಂಡು ಹೋಗಿ ನಮಗಾಗಿ ಮರುದಿನ ಅಡುಗೆಮಾಡಿ ಹಾಕುವಂತೆ ಕೇಳಿಕೊಂಡನು. ಅವಳಿಗೆ ಸಂತೋಷ ಆಯ್ತು. ಒಪ್ಪಿಕೊಂಡಳು. ನೀನು ನನ್ನ ಮಗ ಇದ್ದಂಗೆ, ನೀನು ನನ್ನ ಸೊಸೆ ತರ ಅಂತ ಆಕೆ ಸಂಭ್ರಮಪಟ್ಟಳು. ಅಲ್ಲಿದ್ದು ನಾಲ್ಕು ದಿನ ಆಯ್ತು. ಆ ಮುದುಕಿ ಇವರನ್ನು ಗಮನಿಸ್ತಾ ಇದ್ದಳು. ಅವಳಿಗೆ ಆಶ್ಚರ್ಯ ಆಯ್ತು. ಅವರು ಗಂಡ ಹೆಂಡತಿ ತರ ನಡ್ಕೋತಾ ಇರಲಿಲ್ಲ. ಒಂದು ದಿನ ಅವಳೇ ನಿಮ್ಮಿಬ್ಬರಿಗೂ ಏನಾದ್ರು ಜಗಳ ಆಯ್ತಾ? ನೋಡುದ್ರೆ ಗಂಡ ಹೆಂಡತಿ ತರ ಇದಿರಿ. ಆದ್ರೆ ಒಬ್ಬೊರಿಗೊಬ್ಬರು ಮಾತಾಡಲ್ಲ. ಏನು ಸಮಾಚಾರ? ನನಗೆ ಒಂಥರ ಬೇಜಾರಾಯ್ತದೆ ನಿಮ್ಮನ್ನ ನೋಡುದ್ರೆ ಅಂದಳು.

ವೇಷಧಾರಿ ಮಳೆರಾಯ ಅವಳನ್ನ ಒಂದು ಬದಿಗೆ ಕರಕೊಂಡು ಹೋಗಿ ನೀನು ಕೇಳಜ್ಜಿ, ಅವಳು ಯಾಕೆ ಮಾತಾಡಲ್ಲ ಅಂತ. ಅವಳ ಬಾಯಿಂದ ಏನು ಬತ್ತದೆ ಅಂತ ತಿಳ್ಕೋ. ನಾನು ಮನೆ ಮೇಲೆ ಇರ್ತೀನಿ ಅಂತಂದ.

ಆ ಮುದುಕಿ ಸಂಜೆ ಹೊತ್ತಲ್ಲಿ ರಾಜಕುಮಾರಿಯ ಯಾಕಿಂಗೆ ಇದ್ದೀಯಾ ಸಪ್ಪಗೆ. ನಿಮ್ಮಿಬ್ಬರ ನಡುವೆ ಏನು ನಡೀತು, ನನಗಾದ್ರು ಹೇಳಬಾರದ? ನೀವಿಬ್ಬರು ಮಾತಾಡಿದ್ದೇ ನೋಡಿಲ್ಲ ಅಂತ ಕೇಳಿದಳು.

ಅವ್ವ, ನಾನೇನು ಹೇಳುದ್ರು ಏನೂ ಆಗುದಿಲ್ಲ ಅಲ್ಲವೆ?

ಏನಾಯ್ತು ಎಲ್ಲನೂ ಹೇಳು ಭಯ ಬೀಳಬೇಡ.

ಅವ್ವ, ನಾನು ನನ್ನ ಗೆಳತಿರೆಲ್ಲ ಒಂದು ಇದನ ಕಾಲಕಳೆಯೋಕೆ ಅಂತ ತೋಟಕ್ಕೆ ಹೋಗಿದ್ವೊ. ಆಗ ಮಳೆ ಬರೋತರ ಗುಡುಗು, ಮಿಂಚು ಬಂತು. ಆಗ ನಾನು ಓ ಮಳೆರಾಯ ಈಗ ಬರೋದ ರಾತ್ರಿಯಾದರು ಬರಬ್ಯಾಡ್ವೆ? ಅಂದೆ. ಅವತ್ತು ಅವನು ರಾತ್ರಿ ನನ್ನ ಕೋಣೆಗೆ ಬಂದ. ನನಗೇನು ಬೇಕು ಅಂತ ಕೇಳಿದ. 'ರವಿಕೆ ಬೇಕು' ಅಂದೆ. ನನಗೆ ಒಂದು ರವಿಕೆನ ಕಾಗೆ ಕೈಲಿ ಕಳಿಸಿದ. ನಾನು ತೊಟ್ಟುಕೊಂಡೆ. ಅದನ್ನು ಹಾಕ್ಕೊಂಡ ತಕ್ಷಣ ಮೈಯೆಲ್ಲ ಕಡಿಯೋಕೆ ಶುರುವಾಯ್ತು. ಒಂದಿನ ಎಲ್ಲ

ನಾನು ನೋವು ಅನುಭವಿಸಿದೆ. ಇಂತ ಕೆಟ್ಟ ಯೋಚ್ನೆಮಾಡಿ ನನಗೆ ರವಿಕೆ ಕೊಟ್ಟಿದ್ದ. ಅದಕ್ಕೆ ನಾನು ಅವನ ಜೊತೆ ಮಾತಾಡಲ್ಲ. ಸಂಬಂಧಾನೂ ಇಟ್ಕೊಂಡಿಲ್ಲ ಅಂತ ಹೇಳಿದಳು.

ಅವನು ಅವಳು ಹೇಳಿದ್ದೆಲ್ಲವನ್ನೂ ಕೇಳಿಸ್ಕೊಂಡ. ಕೆಳಗೆ ಇಳಿದು ಬಂದು ಅಜ್ಜಿಗೆ ಸಾವಿರ ರೂಪಾಯಿ ಕೊಟ್ಟು ತನ್ನ ಹೆಂಡತಿಯನ್ನು ಮನೆಗೆ ಕರೆದುಕೊಂಡು ಹೋದ. ಅಲ್ಲಿ ಗೌರಕ್ಕ ಗಂಗಕ್ಕರನ್ನು ಕರೆದ.

ಯಾರು ಈ ರವಿಕೆ ತಗೊಂಡಿದ್ದೋರು ಎಂದು ಗದರಿಸಿ ಕೋಪದಿಂದ ಕೇಳಿದ. ಅವರು 'ನಾನಲ್ಲ, ನಾನಲ್ಲ' ಅಂದರು. ಸತ್ಯ ಹೇಳಿ, ಯಾರು ತಗೊಂಡಿದ್ದೋರು? ನಾನಲನಾನಲ್ಲ ಅಂತೇಳಿ ಗೌರಕ್ಕ ಇನ್ನೊಬ್ಬಳನ್ನು ಕೇಳಿದಳು. ನಾನಲ್ಲ! ಅಂತ ಅವಳಿಗೆ ಇವಳು ಹೇಳಿದಳು. ಅವರಿಬ್ಬರೂ ಒಬ್ಬರಿಗೊಬ್ಬರು ಆರೋಪ ಹೊರಿಸಿದರು. ಅವರ ಜಗಳದಿಂದ ನಿಜ ಹೊರಗೆ ಬಂತು.

ನಿಮ್ಮನ್ನು ನಾನು ಮನೆಬಿಟ್ಟು ಓಡಿಸ್ತಿನಿ, ಏನು ಮಾಡಿದ್ರಿ ಅದನ್ನ ಮಾಡಿ ತೋರ್ಸಿ ಎಂದು ಬಯ್ದ ಮೇಲೆ ಅವರು ನಿಜ ಹೇಳಿದರು.

ಆಗ ಮಳೆರಾಯ ಅವರನ್ನು ಆನೆಕಾಲಿಗೆ ಕಟ್ಟಿಸಿ ರಾಜ ಬೀದಿಲೆಲ್ಲ ಮೆರವಣಿಗೆ ಮಾಡಿ ಎಳೆಸಿದ. ಬೀದಿಲೆಲ್ಲಾ ಎಳೆಸಿದ ಮೇಲೆ ಅವರು ನೋವು ತಾಳಲಾರದೆ ಸತ್ತು ಹೋದರು.

ಅವನು ಮನೆಗೆ ಬರುತ್ತಿದ್ದಂತೆ ರಾಜಕುಮಾರಿ ತಂದೆಗೆ ಮತ್ತೆ ಐಶ್ವರ್ಯ ಸಂಪತ್ತು ಎಲ್ಲ ವಾಪಸ್ಸು ಬಂತು. ನಂತರ ಮಳೆರಾಯನಿಗೂ ರಾಜಕುಮಾರಿಗೂ ಬಹಳ ವೈಭವದಿಂದ ಮದುವೆ ನಡೆಯಿತು. ಅವರು ಅಲ್ಲಿ ಸುಖವಾಗವರೆ, ನಾವು ಇಲ್ಲಿ ಕುಂತೀವಿ. (ರಮೇಶ್.ಸ.ಚಿ. ಕರಾವು.ಪುಟ.೨೨-೨೭)

**ಕಥನ. ಎಂಟು. ಮಳೆರಾಯನ ಮದುವೆ**

ಮಳೆರಾಯನ ಕಥೆಯಲ್ಲಿ ಮಳೆರಾಯ ಒಬ್ಬ ದೇವತಾ ಪುರುಷ. ರಾಜಕುಮಾರಿಯೊಬ್ಬಳು ತಾನು (ಆಕೆ ಹೆಸರು ಕಲಾವತಿ) ಮದುವೆ ಆಗುವುದಾದರೆ ದೇವತಾ ಪುರುಷನನ್ನೆ ಎಂದು ಹಟ ಹಿಡಿಯುವಳು. ಒಮ್ಮೆ ಸ್ನಾನ ಮಾಡಿ ಮೇಲು ಉಪ್ಪರಿಗೆಯಲಿ ನಿಂತು ಕೂದಲನ್ನು ಆರಿಸಿಕೊಳ್ಳುತ್ತಾ ಇರುವಾಗ ಪ್ರಪಂಚದ ಪರ್ಯಟನೆಗಾಗಿ ಸಂಚಾರ ಹೊರಟು ಅದೇ ಮಾರ್ಗವಾಗಿ ಬರುತ್ತಿರುವ ಮಳೆರಾಯ ಅವಳನ್ನು ನೋಡುವನು ಅಲ್ಲೆ ಮಳೆಯನ್ನು ಸುರಿಸಿ ಅವಳು ಒಳಗೆ ಹೋದ ತಕ್ಷಣ ಮಳೆ ನಿಲ್ಲಿಸಿ ಹೊರಗೆ ಬಂದಾಗ ಮಳೆ ಸುರಿಸುವ ಆಟವಾಡುತ್ತಾನೆ. ಆಗ ಕಮಲಾವತಿ ಕೋಪ ಬಂದು, ಹೊಟ್ಟೆಕಿಚ್ಚಿನ ಮಳೆರಾಯ ನನ್ನ ಕಣ್ಣಿಗೆ ಕಂಡ್ರೆ ಮರ್ಯಾದೆ ತೆಗಿತೀನಿ ಅಂತಾಳೆ. ಅವಳು ಹಾಗೆ

ಅಂದುದ್ದೆ ಸರಿ ಅದೇ ರಾತ್ರಿ ಅವಳನ್ನು ಬೇಟಿಯಾಗಿ, ಅವಳನ್ನು ಒಲಿಸಿಕೊಳ್ಳುತ್ತಾನೆ. ಇಬ್ಬರು ಪ್ರೇಮಿಗಳಾಗುವರು.

ಕಮಲಾವತಿಯನ್ನು ಮದುವೆ ಆಗುವುದಾಗಿ ಮಳೆರಾಯ ವಚನವನ್ನು ಕೊಟ್ಟು ಪ್ರೇಮದ ಕುರುಹಿಗಾಗಿ ಬಂಗಾರದ ಸೀರೆಯನ್ನು ಕಾಗೆಯೊಡನೆ ಕಳುಹಿಸಿಕೊಡುವುದಾಗಿ ಹೇಳಿ ಊರಿಗೆ ಮರಳುವನು. ನಂತರ ಮಳೆರಾಯ ಕಾಗೆ ಕಾಲಿಗೆ ಬಂಗಾರದ ಸೀರೆಯನ್ನು ಕಟ್ಟಿ ಕಮಲಾವತಿಗೆ ಕೊಟ್ಟು ಬಾ ಎಂದು ಹೇಳಿ ಕಳುಹಿಸುವನು. ಅದು ಮಳೆರಾಯನ ಅಕ್ಕ ಮತ್ತು ಆಕೆಯ ಮಗಳ ಕೈಗೆ ಸಿಕ್ಕಿ ಬೀಳುವುದು. ಮಗಳನ್ನು ಮಳೆರಾಯನಿಗೆ ಕೊಟ್ಟು ಮದುವೆ ಮಾಡಬೇಕೆಂಬುದು ಅಕ್ಕನ ಆಸೆ. ಆದರೆ ಅಕ್ಕನ ಮಗಳು ಮೇಲೆ ಮಳೆರಾಯನಿಗೆ ಇಷ್ಟವಿಲ್ಲ. ಅವನು ಬೇರೆಯ ಕಡೆ ಸಂಬಂಧ ಬೆಳೆಸುವುದು ಆಕೆ ಸಹಿಸಲಿಲ್ಲ. ಹೇಗೊ ಕಾಗೆಯನ್ನು ಹಿಡಿದು, ಬಂಗಾರದ ಸೀರೆ ಬಿಚ್ಚಿ ಅದರ ಕಾಲಿಗೆ ಸೂಜಿ ಚುಚ್ಚಿದ ಸೀರೆಯೊಂದನ್ನು ಕಟ್ಟಿ ಕಳುಹಿಸಿಕೊಡುವಳು. ಕಮಲಾವತಿ ಆ ಸೀರೆಯನ್ನು ಬಿಚ್ಚಿ ನೋಡಲಾಗಿ. ಬರೀ ಸೂಜಿಗಳೇ. ಅವನ್ನು ಕಂಡು ಕೋಪಗೊಳ್ಳುತ್ತಾಳೆ. ಕಮಲಾವತಿ ನಿಜ ಸಂಗತಿ ತಿಳಿಯದೆ ಮಳೆರಾಯನ ಜೊತೆ ಮಾತು ಬಿಡುವಳು. ಅಷ್ಟೇ ಅಲ್ಲ ಮಾತಾಡುವುದನದನ್ನು ನಿಲ್ಲಿಸುವಳು. ಆಕೆ ಮಾತಾಡುವಂತೆ ಮಾಡಲು ಅವಳ ತಂದೆ , ತಾಯಿ ಅಣ್ಣ ಅತ್ತಿಗೆಯವರನ್ನು ಕಡುಬಡವರನ್ನಾಗಿ ಮಾಡುತ್ತಾನೆ. ಅವಳು ಬಾಯಾರಿದಾಗ ನೀರಾಗಿ ಹರಿಯುವುದು. ಹಸಿದಾಗ ಹಣ್ಣಿನ ಮರವಾಗಿ ನಿಲ್ಲುವುದು. ಕಾಳನ್ನು ಕಾಯುತ್ತಾ ಕುಳಿತಾಗ ಕೋಳಿಯಾಗಿ ಬಂದು ತಿನ್ನುವುದು. ಹೀಗೆ ಏನೇ ಮಾಡಿದರೂ ಆತನನ್ನು ಗುರುತಿಸಿ ಮಳೆರಾಯನ ಎಲ್ಲಾ ಸಹಾಯಗಳನ್ನೂ ನಿರಾಕರಿಸುವಳು. ಕೊನೆಗೆ ಆತ ಹರಿವಾಣದಲ್ಲಿ ಊಟವನ್ನು ಕಳುಹಿಸುವಂತೆ ನಟಿಸಿ ಯಾರಿಗೂ ಕಾಣದಂತೆ ಅದೇ ಹರಿವಾಣವನ್ನು ಕದ್ದು ತರುವನು. ಮಾರನೇ ದಿನ ಬೆಳಗ್ಗೆ. ನನ್ನ ಹರಿವಾಣ ಕೊಡಿ ಇಲ್ಲ ನಿಮ್ಮ ಮಗಳನ್ನು ನನಗೇ ಕೊಡಿ ಎಂದು ಕರಾರು ಹಾಕಿ ಬರೆಯಿಸಿ ಕಮಲಾವತಿಯನ್ನು ಕರೆದುಕೊಂಡು ಹೋಗುವನು. ಕೊನೆಗೆ ಅವಳನ್ನೆ ಮದುವೆಯಾಗುವುದರಲ್ಲಿ ಯಶಸ್ವಿಯು ಆಗುವನು'. (ರೇವಣ್ಣ ಮೈಲಳ್ಳಿ. ಮಾದಾರ ಸಂಸ್ಕೃತಿ ಮತ್ತು ಸಾಹಿತ್ಯ. ಪುಟ.೧೮೮-೧೮೯)

**ಕಥನ: ಒಂಬತ್ತು. ಮಳೆರಾಯ ಕಾರ್ಥೆಣ್ಣು**

ಇದು ಬಯಲುಸೀಮೆಯಲ್ಲಿ ಮಹಿಳೆಯರು ವಿರಾಮವಾಗಿ ಕಾಲ ಕಳೆಯುವಾಗ ಹಾಡುವ ಹಾಡು, ಇದರ ಕಥಾಸಾರಾಂಶ ಇಷ್ಟು, ಕಾರ್ಥೆಣ್ಣು (ಮಾರ್ಥೆಣ್ಣು, ಎಂದೂ ಈಕೆಯನ್ನು ಸಂಭೋದಿಸಿರುವುದುಂಟು) ಒಬ್ಬ ಸುಂದರ ಕನ್ಯೆ. ಅವಳಿಗೆ ಆರು ಮಂದಿ ಅಕ್ಕಂದಿರು, ಆರು ಮಂದಿ ಅಣ್ಣಂದಿರು, ಒಂದು ದಿನ ಇವಳು ಅಣ್ಣಂದಿರು ಪ್ರೀತಿಯಿಂದ ಹಾಕಿಕೊಟ್ಟ ಉಯ್ಯಾಲೆ ಆಡುತ್ತಿರುವಾಗ

ಮೂಡಲಿಂದ ಮಳೆ ಬರ್ತದೆ (ಅಂದರೆ ಮಳೆರಾಯ ಅಭಿಸಾರಕ್ಕೆ ಆಶಿಸಿದ ಎಂಬ ಧ್ವನಿ). ಸಂಜೆ ಬರುವಂತೆ ಹೇಳುತ್ತಾಳೆ. ಮಳೆರಾಯ ಸಂಜೆ ಬಂದು ಬಾಗಿಲು ತಟ್ಟುತ್ತಾನೆ. ಪ್ರೇಮ ಸಲ್ಲಾಪ ನಡೆಯುತ್ತದೆ. ಅವನು ಹೋಗುವಾಗ ಗರುಡನ ಕೈಲಿ ಪದಕವೊಂದನ್ನು ಕಳಿಸುವುದಾಗಿ ಹೇಳಿ ಹೋಗುತ್ತಾನೆ. ಅದರಂತೆ ಕಳಿಸುತ್ತಾನೆ ಕೂಡ. ಆದರೆ, ಗರುಡನು ಬರುತ್ತಿರುವಾಗ ಮಳೆರಾಯನ ಸೂಳೆ ಅವನನ್ನು ನಿಲ್ಲಿಸಿ, ಸತ್ಕರಿಸಿ ಅವನು ನಿದ್ದೆ ಮಾಡುತ್ತಿರುವಾಗ ಅವನ ಕೊರಳೊಳಗಿನ ಹೊಸ ಪದಕವನ್ನು ತೆಗೆದು ಹಳೇ ಪದಕವನ್ನು ಹಾಕಿ ಕಳಿಸುತ್ತಾಳೆ. (ಇದು ಅಸೂಯೆಯ ಆಶಯ) ವ್ಯತ್ಯಾಸ ಅರಿಯದ ಗರುಡ ಆ ಹಳೇ ಪದಕವನ್ನು ಕಂದು ಕಾರ್ಥೆಣ್ಣಿಗೆ ತಲುಪಿಸುತ್ತಾನೆ. ಹಳೇ ಪದಕ ಕಳಿಸಿದ್ದಕ್ಕೆ ಈಕೆಗೆ ಸಿಟ್ಟು ಬರುತ್ತದೆ. ಸಂಜೆ ಮಳೆರಾಯ ಬಂದಾಗ ಮಾತನಾಡಿಸದೇ ಮೌನವಾಗಿರುತ್ತಾಳೆ. ಏನೇನು ಹೇಳಿದರೂ, ಅಂಜಿಸಿದರೂ ಮೌನವೇ! ಹಲವಾರು ರೀತಿಯಿಂದ ಅವಳನ್ನು ಪೇಚಿಗೆ ಸಿಕ್ಕಿಸಲು ನೋಡಿದರೂ ಅದು ನಡೆಯುವುದಿಲ್ಲ. ಕೊನೆಗೆ ಬಳೆಗಾರನಾಗಿ ಬರುತ್ತಾನೆ. ಆಗ ಹಳೇಪದಕವನ್ನು ಅವನತ್ತ ಎಸೆಯುತ್ತಾಳೆ. ಈಗ ಮಳೆರಾಯನಿಗೆ ಇವಳ ಕೋಪದ ಗುಟ್ಟು ತಿಳೀತದೆ. ಆಗ ಅವಳಿಗೆ ನಿಜಸಂಗತಿ ತಿಳಿಸಿ, ಅಷ್ಟೈಶ್ವರ್ಯ ಕೊಟ್ಟು ಸುಖವಾಗಿ ಬದುಕೆಂದು ಹೇಳುತ್ತಾನೆ.

ಅದು ನಾನು ಮಾಡಿದ್ದು ಅಲ್ಲ ಸುವ್ವಲಾಲೀ

ನಾನು ಹೊಸ ಪದಕ ಕಳುವಿದ್ದೆ ಸುವ್ವಲಾಲೀ

ನನ್ನ ಹಳೇ ಸೂಳೆ ಮಾಡಿರುವ ಕೆಲಸವನ್ನ ಸುವ್ವಲಾಲೀ

ನಿನ್ಗೆ ಹೊಸ ಪದಕಾವ ಸುವ್ವಲಾಲೀ

ಕಳುವೇನು ಮಾರ್ಥೆಣ್ಣು ಸುವ್ವಲಾಲೀ

ಇದ್ದ ರಾಜ್ಯವ ಕೊಟ್ಟ ಸುವ್ವಲಾಲೀ

ಇದ್ದ ಐಶ್ವರ್ಯ ಕೊಟ್ಟ ಸುವ್ವಲಾಲೀ

ಮಾರ್ಥೆಣ್ಣು ನೀನು ಸುಖವಾಗಿ ಬದುಕೆಂದ ಸುವ್ವಲಾಲೀ. (ಹೇಳಿದವರು. ಪಾಲಮ್ಮ. ಓಬಯ್ಯನಹಟ್ಟಿ, ಚಳ್ಳಕೆರೆ. ತಾಲೂಕು.)

ಅನುಬಂಧ : ಎರಡು

## ಮಳೆ ಗಾದೆಗಳು

೧. ಅಶ್ವಿನಿ

೧. ಅಸೂನಿಮಳೆ ಆದರೆ ಸಿಸುಗೊಳಿಗೂ ನೀರು ಸಿಗೋದಿಲ್ಲ.

೨. ಅಶ್ವಿನಿ ಸಸ್ಯನಾಶಿನಿ

೩. ಅಶ್ವಿನಿಮಳೆ ಬಿದ್ರೆ ಅಡಿಕೆ ತೆಂಗಿಗೆ ಕೇಡವಿ

೪. ಅಶ್ವಿನಿಮಳೆ ಅರಿಸಿನಕ್ಕೆ ಮೇಲು, ಅಡಿಕೆ ತೆಂಗಿಗೆ ಕೇಡು

೫. ಅಶ್ವಿನಿಯೋ ನಾಶಿನಿಯೋ ? (ಅಶ್ವಿನಿಯೋ ನಾಶವೋ)

೬. ಅಶ್ವಿನಿಪೊಡತೆ ಅಶ್ವೀಸಂಜೆ ಕೊಡ ನೀಂಡದು

೨. ಧರಣಿ :

೧. ಭರಣಿಮಳೆ ಧರಣೇಗೊಳ್ಳೇದು.

೨. ಘರಣಿ, ಬಂಗಾರದ ಕರಣಿ

೩. ಭರಣಿಮಳೆ ಬಂದು ಧರಣಿ ತಂಪಾಯ್ತು

೪. ಭರಣಿ ಸುರಿದು ಧರಣಿ ಬದುಕಿತು.

೫. ಭರಣಿಮಳೆ ಧರೆಗೆ ಗಂಡ.

೬. ಭರಣಿ ಬಂದೆ ಧರಣಿ ಎಲ್ಲಾ ಬೆಳ್ಳೆ

೩. ಕೃತಿಕಾ :

೧. ಕರ್ತಕೀಮಳೇನ ಕೇಳವರ ಇಲ್ಲ

೨. ಕೃತ್ತಿಕೆ, ಬೀಳ್ದಿದ್ರೆ ಬಾಯಿಗೆ ಮೃತ್ತಿಕೆ

೩. ಕೃತ್ತಿಕೆಗೆ ಕುರುಹು ಗಾಳಿ

೪. ರೋಹಿಣಿ :

೧. ರೋಹಿಣಿಮಳೇಲಿ ದೋಣಿ ಹಾಕೋದು

೨. ರೋಹಿಣಿಮಳೆಗೆ ಓಣೆಲ್ಲಾ ಜೋಳ

೩. ರೋಹಿಣಿಮಳೇಲಿ ಊರೆಲ್ಲಾ ಕೆಸರು

೪. ರೋಣಿಮಳೇಲಿ ಬಿತ್ತಿದ್ರೆ ರೋಗ ಇಲ್ಲ.

೫. ಮೃಗಶಿರಾ :

೧. ಮೃಗಶಿರಾಮಳೇಲಿ ಮಿಸುಗಾಡದೆ ಹೊಳೆ ಬಂತು.

೨. ಮೃಗಶಿರಾಮಳೆ, ಮೃಗಗಳಿಗೆ ಸೆರೆ.

೩. ಮಿಕ್ಕ ಎಳ್ಳು, ಮೃಗಶಿರೇಲಿ ಬಿತ್ತು.

೪. ಬತ್ತದ ನೆಲವನ್ನು ಮೃಗಶಿರೆಲಿ ಬಿತ್ತು.

೬. ಆದ್ರಾ :

೧. ಅರಿದ್ರಾಮಳೆಗೆ ಆದೋನೇ ಗಂಡ

೨. ಆದರ ಆರಿದ್ರಾ, ಆಗಿದಿದ್ದರ ದರಿದ್ರ ಆದ್ರೆ ಆರಿದ್ರ, ಇಲ್ಲಿದ್ದರೆ ದರಿದ್ರ

೩. ಆರ್ದ್ರೆ ಹಾಂಗೆ ಮುಂದಿನ ಆರು ನಕ್ಷತ್ರ

೪. ಆದ್ರೆಮಳೆ, ಹೂದರೆ ಬೆಳೆ

೫. ಆದ್ರೆಮಳೆ, ಅದ್ದೂರಿ ಬೆಳೆ.

೬. ಆದ್ರಿಮಳೆ ಲೋಕಕ್ಕೇ ಆರಂಭ

೭. ಆರಿದ್ರಮಳೆ ಗುಡುಗಿದರೆ ಮುಂದಿನ ಆರು ಮಳೆ ಹೋಯ್ತು.

೮. ಆರಿದ್ರ ಮೃಗಶಿರೆ ಹಂಗಾದ್ರೆ, ನಾನೂ ನಾಲ್ಕು ರಂತೆ ಆರಂಭಗಾರು.

೭. ಪುನರ್ವಸು

೧. ಪುನರ್ವಸುನಲ್ಲಿ ಪುಣ್ಯ ಇದ್ದಷ್ಟೇ ಮಳೆ

೨. ಪುನರುಶುಡು ಪುನಲ ದೀವರ ಬುಡುಜಿ (ತುಳು)

೮. ಪುಷ್ಯ :

೧. ಪುಷ್ಯದ ಮಳೆ ಹುಸಿಯದ ಮಳೆ

೨. ಪುಷ್ಯಡು ಪುರು

೯. ಆಶ್ಲೇಷಾ :

೧. ಆಸ್ಲಿ ಮಳೆಗೆ ಅಸಲು ಬಡ್ಡೀ ಕೂಡೇ ಬರ್ತಾವ

೨. ಅಸ್ಲಿ ಮಳೆಗೆ ತಸ್ಲಿ (ಮೀನು) ಬೆಟ್ಟ ಏರ್ತು

೩. ಅಶ್ಲೇಷ ಮಳೆ, ನಿಶ್ಯೆಷ ಕೊಳೆ

೪. ಅಶ್ಲೇಷ ಮಳೆಗಿಂತ ಬಿಸಿಲೇ ಲೇಸು

೫. ಅಸಲೆ ಮಳೆ ಬಿದ್ದರೆ ಭೂಮಿಯೆಲ್ಲಾ ಹಸಿರು

೬. ಆಸಲೆ ಮಳೆ ಕೈಕೊಟ್ಟು ಮೀಸಲಾಯ್ತು ಬೆಳೆ

೭. ಅಸಲೆ ಮಳೇಲಿ ಬಿತ್ತಿದ್ರೆ ಎಸಲು ಎಸಳು ಕಾಯಿ.

೮. ಅಸಲೆ ಮಳೆಗೆ ನೆಲವೆಲ್ಲ ಹಸಲೆ

೯. ಅಸಲ್ ಫಿಸಲ್ ಗಯಾ, ಕಮ್‌ಜೋರ್ ಚಡ್‌ಗಯಾ

೧೦. **ಮಗೆ/ಮಖೆ:**

೧. ಮಗೆ ಮಳೆ ಹುಯ್ದ್ರೆ ಕೇಡಲ್ಲ, ಮನೆ ಮಗ ಉಂಡ್ರೆ ಕೇಡಲ್ಲ.

೨. ಮಗಾ ಮಳಿ ಬಿದ್ದರ, ಮುಗಿಲೆ ನೀರು ಸುರುವಿದಾಂಗ

೩. ಊದರೆ(ಹೂತರೆ) ಮಗೆ, ಓಟರೆ (ಹೋದರೆ) ಹೊಗೆ

೪. ಮಖೆ ಗುಡುಗು ಮರದ ಮೇಲೆ ಕೇಳು

೫. ಆದರೆ ಮಗಿ, ಆಗದಿದ್ರೆ ಹೋಗಿ

೬. ಮಘೆಯ ಮಳೆ ಮೊಗೆ ಮೊಗವ ತುಂಬಬೇಕು.

೭. ಮೇಗಾ ಮಳೆ ಮಗನಿಗೂ ಬಿಡದು

೮. ಮಗೆ ಮಳೆ ಹೊಯ್ದರೆ ಮಗೆ ಗಾತ್ರ ತೆನೆ

೧೧. **ಹುಬ್ಬ/ಪೂರ್ವಾ/ಗುಬ್ಬ:**

೧. ಹುಬ್ಬೆ ಮಳೆ ಅಬ್ಬೆ ಹಾಲು ಕುಡಿದಂಗೆ

೨. ಉಬ್ಬೆ ಮಳೆಗೆ ಗುಬ್ಬಿ ತಲೆಯೂ ನೆನೆಯದು.

೩. ಉಬ್ಬೆ ಮಳೆ ಚೆಂದ, ತಬ್ಬಲಿ ಮಕ್ಕಳು ಚೆಂದ

೪. ಉಬ್ಬೆ ಮಳೇಲಿ ಬಿತ್ತಿದರೆ ಹುಲ್ಲು ಕಾಳೂ ಇಲ್ಲ

೫. ಹುಬ್ಬಿ ಹತ್ತಿದರೆ ಗುಬ್ಬಿಗೋಳಿಗೆಲ್ಲಾ ಸಾವು

೬. ಅಮ್ಮನ ಕಂಡದ ನೀರು ಮಗಕ್ಕು ಬುಡಾಯೆ, ಮಗನೆ ಕಂಡದ ಸೇರು ಅಮ್ಮೆಕ್ಕು ಬಂಡಾಯೆ.

೭. ಉಬ್ಬವಾನ ಉಬ್ಬಿ ಉಬ್ಬಿ ಕುರುಸಿನ ಗುಬ್ಬಶೆಟ್ಟಿ ಕಿಂದನ್ಯಾನೆ ಲೇದು

೮. ಹುಬ್ಬೆ ಮಳೆಗೆ ಗೌರಮ್ಮ ಉಬ್ಬೆಹೊದ್ದು ಬಂದಳು

೧೨. ಉತ್ತರಾ:

೧. ಉತ್ತರ ಮಳೆಗೆ ಎತ್ತು ಬಾಯ್ಬಿಡುತ್ತಾವೆ

೨. ಉತ್ತರ ಮಳೆಗೆ ಪೈರು ಹುತ್ತ ಬೆಳೆದಾಂಗ ಬೆಳೀತದೆ

೩. ಆದರ ಉತ್ತರಿ ಆಗದಿದ್ದರೆ ಕತ್ತರಿ

೪. ಹೊನ್ನುತ್ರೆ–ಹೊಳ್ಳುತ್ರೆ

೫. ಉತ್ತರಿ ಮಳೆ ಬಂದರೆ ಕೂತಲ್ಲಿ ಕೂಳು

೬. ಉತ್ತರೆ ಬೀಳದಿದ್ರೆ ಹೆತ್ತವ್ವ ತೊರೆದ್ಹಾಂಗೆ

೭. ಉತ್ತರೆ ಮಳೇಲಿ ಉತ್ತ ಎತ್ತು ನೀರಿಗೆ ಬಿತ್ತು.

೮. ಉತ್ತರೆ ಮರೆತರೆ, ಹೆತ್ತಮ್ಮ ತೊರೆದರೆ, ಮುತ್ತು ಮಣ್ಣಾದರೆ ಲೋಕ ಬೆಳಗು ಬೈಗು ಆಗೋದು ಹ್ಯಾಗೆ?

೯. ಉತ್ತರೆಡೆ ಹತ್ತರೆ ಅವುಂದ

೧೦. ಉತ್ತರ ಸೂಸ್ಕುನಿ ಎತ್ತರ ಗಂಪ

೧೧. ಉತ್ತರಮನೆ ರಾಕುಂಟ ಎತ್ತರಗಂಡ

೧೨. ಉತ್ತರಿ ಮಳೆ ಹೋದ್ರೆ, ಹೆತ್ತಮ್ಮನೂ ಆಗೋಲ್ಲ

೧೩. ಹಸ್ತಾ:

೧. ಆದರ ಹಸ್ತ, ಅಗದಿದ್ರ ಹಲ್ಲುಕ್ಕಿಸ್ದ

೨. ಹಸ್ತ ಆರ್‌ಕಾಳು, ಚಿತ್ತ ಮೂರ್‌ಕಾಳು

೩. ಹಸ್ತೆ ಹಣುಕ್ಬೇಕು, ಚಿತ್ತೆ ಬರೀಬೇಕು

೪. ಹಸ್ತದ ಮಳೆ ಹಂಗಾದರೆ, ಹೆತ್ತ ತಾಯಿ ಹಿಟ್ಟಕ್ಯೋದಿಲ್ಲ

೫. ಹಸ್ತೆಗೆ ಆರು ಕಾಯಿ, ಚಿತ್ತೆಗೆ ಮೂರು ಕಾಯಿ.

೧೪. ಚಿತ್ತ (ಚಿತ್ರೆ)

೧. ಚಿತ್ತಿ ಮಳೆ ಅದಂಗೆ, ಹಿರಿ ಸೊಸಿ ನಡೆದಂಗೆ

೨. ಚಿತ್ತಿ ಮಳಿ ಚಿತ್ತಗಡಕ

೩. ಕುರುಡು ಚಿತ್ತಿ

೪. ಕುಡ್ಡೀ ಮಳಿ ಬಿದ್ದಲ್ಲೆ ಬಿತ್ತು, ಎದ್ದಲ್ಲೆ ಎತ್ತು

೫. ಹುಳುಕು ಚಿತ್ತಿ

೬. ಚಿತ್ತಾ ಮಳೆ, ವಿಚಿತ್ರದ ಬೆಳೆ.

೭. ಕುರುಡು ಚಿತ್ತ ಮಳೆ, ಎರಚಿದತ್ತ ಬೆಳೆ

೮. ಚಿತ್ತಿ ಮಳೆಗೆ ಕುರುಡು, ದಿಗಿಲು; ಹಗಲು ಬರುತ್ತೆ, ರಾತ್ರಿ ಬರಲ್ಲ

೯. ಚಿತ್ತ ವಾನುಲೋ ಚಿನಕು ನೇಲ ಪಡೆಲೇದು

೧೦. ಚಿತ್ತಿ ಮಳೆಗೆ ಗಳೆ ಹೊಡೆದ ಒಂದು ಎತ್ತಿನ ಕೊಂಬು ತೋಯಿತು ಇನ್ನೊಂದರ ಕೊಂಬು ತೋಯಲಿಲ್ಲ

೧೧. ಸ್ವಾತಿ ಮಳೆಗೆ ಎತ್ತಿನ ಒಂದು ಕುಂಡಿ ತೋದರೆ ಇನ್ನೊಂದು ಕುಂಡಿ ತೋಯೂದಿಲ್ಲ

೧೫. ಸ್ವಾತಿ :

೧. ಸ್ವಾತಿ ಮಳೇಗೆ ತ್ಯಾಪ ಹಾಕೋದು

೨. ಸ್ವಾತಿ ಮಳೆ ಹೇತೇನಂದ್ರೂ ಬಿಡದು

೩. ಸ್ವಾತಿ ಸುರ‍್ಯಾಕ ಹತ್ತಿದರ ಹೇತಾಡಿದರೂ ಬಿಡೂದಿಲ್ಲ

೪. ಸ್ವಾತಿ ಮಳಿ ಆದಮ್ಯಾಲ ಯಾತರ ಮಳಿ ?

೫. ಸ್ವಾತಿಗು ಮುತ್ತುವು ಲೆಗುನು

೬. ಸ್ವಾತಿ ಮಳಿ ಆದಮ್ಯಾಕೆ ಅತೇನು ?

೭. ಸ್ವಾತಿ ಮಳೆ ಮುತ್ತಿನ ಮಳೆ

೮. ಸ್ವಾತಿ ಮಳೇಲಿ ಕಾಸಿಗೊಂದಿ ಕುರಿ

೯. ಸ್ವಾತಿ ಮಳೇಲಿ ಸಾಲೊಳಗೆ ನೀರು ಹರಿದ್ರೂ ಬಿತ್ತುವುದು ಬೇಡ

೧೦. ಸ್ವಾತಿನು ಪೇರಿಗು ಬೆರ್ಮ

೧೧. ಸ್ವಾತಿಡ್ ಬಿತ್ತ್ ಬೂರುಂಡ ಶಾಶ್ವತೊ.

೧೬. ವಿಶಾಖಾ :

೧. ವಿಶಾಖಾ ಮಳೆ ಪಿಶಾಚಿ ಹಿಡಿದ ಹಾಗೆ

೨. ವಿಶಾಖಾಮಳೆ ಆಶಿಷಿ ಅಂದ್ರೂ ಬಿಡದು

೩. ವಿಷಾಕುವಾನುವಸ್ತೇ ವಿಷಪುಲಗಲು ಮೊತಾಯಿ

## ೧೭. ಅನುರಾಧಾ :

೧. ಅನುರಾಧಾ ಮಳೆಗೆ ಆನೆ ಮೈ ನಡುಗ್ತು

೨. ಅನುರಾಧ ಬಿತ್ತು, ಮನೋರೋಗ ಹೋಯ್ತು

೩. ಅನುರಾಧ ಬಂದ್ರೆ ನಮ್ಮ ರಾಗಿ ನಮ್ಮದು

## ೧೮. ಮಿಶ್ರ ಹಾಗೂ ಸಾಮಾನ್ಯ ಗಾದೆಗಳು:

೧. ಅರೆ ಮೇಲೆ ಕಟ್ಟದ್ರೆ ಕೆರೆ, ಕಡ್ಲಾಗ ಕಟ್ಟದ್ರ ಮದ್ಲು

೨. ಆದದ್ದು ಆದ್ರಿ ಮಳೇಲಿ ಚೆಲ್ಲು, ಮಿಕ್ಕಿದ್ದು ಮಿಕ್ಸಿರಿ (ಮೃಗಶಿರಾ) ಮಳೇಲಿ ಚೆಲ್ಲು

೩. ಅತ್ತೆ (ಆರ್ದ್ರಾ) ಮಳೆ ಹೂದು, ಚಿತ್ತಿ ಬಿಸಿಲು ಕಾದು, ಸ್ವಾತಿ ಜಡಿ ಹಿಡಿದರೆ ಮುತ್ತಿನಂಥ ಆರಂಭ.

೪. ಅಶ್ವಿನಿ ಮಳೆ ಆಗದೆ ಹೋಗಲ್ಲ, ಆರ್ದ್ರೆ ಮಳೆ ಗುಡುಗದೆ ಹೋಗಲ್ಲ

೫. ಆರಿದ್ರ ಘರ್ಜಿಸಲು ಆಷಾಢದಲ್ಲಿ ಮಳೆ ಬರಲು ಲೇಸಲ್ಲ

೬. ಆಷಾಢ ಮಳಿ ಬೀಸಿ ಬೀಸಿಒ ಬಡಿವಾಗ ಹೇಸಿ ನನ್ನ ಜೀವ ಹೆಣ್ಣಾಗ್ಯಾಕ ಹುಟ್ಟಲಿಲ್ಲ ?

೭. ಆರಂಭ ಮಳೆ ಆಗದಿದ್ರೆ ಕಷ್ಟ, ಅಧಿಕಾರ ಕೈತಪ್ಪಿದ್ರೆ ಕಷ್ಟ.

೮. ಆಟೀಡು ಅಟ್ಟ ಬೊಲ್ಲಿನು, ಸೋನಡು ಸೊಂಟ ಬಲ್ಲಿನು

೯. ಆಟ ಆನೆಡು ಪೋವುನು ಸೋನ ಕುದುರೆಯಿತ್ತು ಪೋವನು ಶ್ರಾವಣದಲ್ಲಿ ಸೊಂಟ ಮುರಿಯುತ್ತೆ'

೧೦. ಉತ್ತರಿಕಾರ್ತಿ ಅತ್ತಳ ಕೊತ್ತಳ, ಹಸ್ತಕಾತಿ ಅಸ್ತವ್ಯಸ್ತ

೧೧. ಎರಿ, ಮಳಿಯಾಗದಿದ್ರ ಬಾಯಿತೆರಿ.

೧೨. ಚಿತ್ತದಲ್ಲಿ ಭತ್ತ, ಹಸ್ತದಲ್ಲಿ ಹೊಸ್ದು

೧೩. ತಿಂಗಳು (ಚಂದ್ರ) ಗುಡಿಕಟ್ಟಿದ್ರೆ ತಿಂಗಳು ಮಳೆ ಇಲ್ಲ

೧೪. ಪೂರ್ವಾಷಾಢ ಉತ್ತರಾಷಾಢ ಬೇಡವೇ ಬೇಡ

೧೫. ಭರಣಿಡು ಬರೆ ಪಾಡ್‌ದು ಬಿತ್ತಂಡ ಪೋವದು. ಕರ್ತಿಗೆಡು ಗೊಬ್ಬ ಪಾಂಡಲ ಕೋರ್ಪ್

೧೬. ಮೃತಶಿರ ಮಳೆ ಮಿಂಚಬಾರದು, ಆರ್ದ್ರಿ ಮಳೆ ಗದ್ದರಿಸಬಾರದು.

೧೭. ಮಳೆ ನಿಂತ್ರೂ ಮರದ ಹನಕ್ಲು ನಿಲ್ಲಲ್ಲ

೧೮. ಮಳಿ ಆದ್ರೆ ಕೇಡಲ್ಲ, ಮಗ ಉಂಡ್ರೆ ಕೇಡಲ್ಲ

೧೯. ಮಳಿ ನೀರು ಬಿಟ್ಟು ಮಂಜಿನ ನೀರಿಗೆ ಕೈಯೊಡ್ಡಿದಂತೆ

೨೦. ಮಳೆ ಬರುವ ಮೊದಲು ಮಾಳಿಗೆ ನೋಡಬೇಕು. ಹಲ್ಲು ಬರುವ ಮೊದಲು ಎಡೆ ಹೊಡೆಯಬೆಕು

೨೧. ಮಕ್ಕಳು ಹುಟ್ಟಿದರೆ ಕೇಡಲ್ಲ, ಮಳಿ ಬಂದರೆ ಕೇಡಲ್ಲ

೨೨. ಸೂರ್ಯ ಗುಡಿ ಕಟ್ಟಿದ್ರೆ ಸೂರೆಲ್ಲ ಮಳೆ

೨೩. ಮಕ್ಕಳು ನೆನೆದ್ರೆ ಒಕ್ಕಲು ಬದುಕುತ್ತೆ.

೨೪. ಹಿರಿಪಿಶಾ ಚಿಕ್ಕ ಪಿಶಾ (?) ಮಲ್ಲಾದಡವರಿಗೆ ಮಾತು ಕೊಟ್ಟ ಮಳೆ.

೨೫. ಹಸ್ತ ಹಣಿಕಿ, ಚಿತ್ತ ಬರೆಸಿ, ಸ್ವಾತಿಮಳಿ ಮರಿಮಳಿಯದ್ರೆ ಮತ್ತು ಕೊಟ್ಟು ಎಮ್ಮಿ ತಾ ಅಂದಳು.

೨೬. ಹಸ್ತದ ಮಳೇಲಿ ಆರಂಭ ಬೇಡ, ಚಿತ್ತದ ಮಳೇಲಿ ಹೋರಾಟ ಬೇಡ

೨೭. ರೇವತಿ ಬೇಕು, ಅಶ್ವಿನಿ ಬೇಡ

೨೮. ಅಸಲಿಲ್ಲದೆ ಬಡ್ಡಿ ಇಲ್ಲ, ಮಳೆ ಇಲ್ಲದೆ ಚಳಿ ಇಲ್ಲ.

೨೯. ಅರಿಯದ ಮಳೆ ಬಂದು ಅರಿವೆ ನೆನೆಸಿತು.

೩೦. ಅರೇಪುರಕ್ಕೆ ಆನೆಕಲ್ಲು ಮಳೆ, ಬೆಗೂರಿಗೆ ಬಟ್ಟೆ ನೆನೆಯೋ ಮಳೆ, ಕೋಟೆ ಕಡೆಗೆ ಮಳೆಯೆ ಇಲ್ಲ.

೩೧. ಅರುಗಾಲ ಉತ್ತರೂ ಮಳೆ ಇಲ್ಲದೆ ಬೆಳೆ ಇಲ್ಲ.

೩೨. ಆದರೆ ಮಳೆಗಾಲ, ಹೋದ್ರೆ ಕೊನೆಗಾಲೆ

೩೩. ಆಕಾಶದ ಮಳೆ, ಭೂಮಿಯ ಬೆಳೆ

೩೪. ಅದಷ್ಟೇ ಆರಂಭ, ಹೋದಷ್ಟೇ ಮಳೆಗಾಲ

೩೫. ಮಕರದ ಮಳೆ ಹೋದರೆ, ಮಕ್ಕಳ ಬಾಯಿಗೆ ಮಣ್ಣು

೩೬. ಮಂಜು ಮಳೆಯಲ್ಲ, ಮರಳು ಸಕ್ಕರೆಯಲ್ಲ, ಎಂದಿದ್ರೂ ಸೂಳೆ ತಿರವಿಲ್ಲ.

೩೭. ನಡುಗಿದರೆ ಗುಡುಗು ಕೇಳೀತೆ ?

೩೮. ಧನಿಕ ಅಂತ ಹನಿ ಬೀಳೋದು ತಪ್ಪೀತೆ ?

೩೯. ದಿನಾ ಹೋಗಿ ಮಳೆಗಾಲವೆ ?

೪೦. ತೆಂಕಣ ಗಾಳಿ ಮಂಕು ಮಳೆ ಬರಿಸಿತು.

೪೧. ಗುಡಗುಡ ಅಂದ್ರೆ ಗುಡ್ಡದ ಗಾತ್ರ ಹನಿ ಬಿದ್ದೀತೆ ?

೪೨. ಕ್ವಾಟೆ ಮೂಲೇಲಿ ಮಿಂಚಿದ್ರೆ, ದಟ್ಕಂಡಾದ್ರು ಮಳೆ ಬರ್ತದೆ.

೪೩. ಕಾಡಿಗೆ ಮಳೆ, ನಾಡಿಗೆ ಬೆಳೆ

೪೪. ಉತ್ತು ಬಿತ್ತಿದ ಭತ್ತವಾದರೂ ಮಳೆ ಇಲ್ಲದೆ ಬೆಳೆಯದು

೪೫. ಮಳೆ ಇಲ್ಲದೆ ಪೈರು. ಮಾತೆ ಇಲ್ಲದ ಕೂಸು ಸಮ

೪೬. ಸಂಜೆಗೆ ಬಂದ ಮಳೆ, ಸಂಜೆಗೆ ಬಂದ ನೆಂಟ

೪೭. ಮಳೆಗಾಲದ ಬಿಸಿಲನ್ನು ನಾಗೆಗಾರನ ಮಾತನ್ನು ಎಂಬಬಾರದು

೪೮. ಮಳೆ ಬಿದ್ರೆ ಸೊಬಗು, ಇಲ್ದಿದ್ರೆ ಕೊರಗು

೪೯. ಮಳೆ ಹನಿ ಬಿಟ್ಟರೂ, ಮರದ ಹನಿ ಬಿಡದು

೫೦. ಮಳೆಹನಿ ನಿಂತ ಮರದ ಹನಿ ಘನ

೫೧. ಮೊದಲ ಮಳೆ ಚೆಂದ, ಮೊದಲ ಯೌವ್ವನ ಚಂದ.

೫೨. ಯೋಗವಾಗಿದ್ರೆ, ಮೇಘವೆಲ್ಲ ಮಳೆ

೫೩. ರಾತ್ರಿಯ ಮಳೆ ಸಹ ಕಾತ್ರಿಯ ಮಾಲು ಹಸ

೫೪. ಸುರಿಮಳೆ ಅರಗಳಿಗೆ, ಸೋನಿ ಮಲೆ ದಿನವೆಲ್ಲ.

೫೫. ಹಡಗು ಗಾಳಿಗೆ ಲೇಸು, ಮಳೆ ಗುಡಿಗೆ ಲೇಸು.

೫೬. ಹದಕ್ಸರಿಯಾಗಿ ಮಳೆ ಆಗ್ತಿದ್ರೆ, ರೈತ ತನ್ನ ಹಾಚಾರಾನು ಉತ್ತಿ ಬಿಡ್ತಾನೆ.

೫೭. ಉಯ್ಯದ ಮಳೆಗೆ ಅಯ್ಯನ ತಲೆ ಅಲ್ಲಾಡಿಸು

೫೮. ಬೇಡಿದಾಗ ಮಳೆ ಅದರ ಒಳ್ಳೆಯ ಎಲ್ಲಾ ಹೆಂಡ

೫೯. ಗೌರಿ ಹೊತ್ತಿಗೆ ನಡಿಗೆ ಮುಳುಗುವ ಮಳೆ

೬೦. ಕಾಲವಲ್ಲದ ಕಾಲದಲ್ಲಿ ಮೂಲದ ಮಳೆ ಬಂತು

೬೧. ಮಳೆಗೊಂದು ಗಾದೆ ಬೆಳೆಗೊಂದು ಆಚರಣೆ

## ವಕ್ತೃಸೂಚಿ

| ಕ್ರಸಂ | ಹೆಸರು | ಲಿಂಗ | ವಯಸ್ಸು | ಊರು | ವೃತ್ತಿ | ಜಾತಿ |
|---|---|---|---|---|---|---|
| ೧ | ಚಂದ್ರಪ್ಪ | ಗಂಡು | ೫೮ | ಉಕ್ಕಡಗಾತ್ರಿ | ವ್ಯವಸಾಯ | ಕುರುಬ |
| ೨ | ನಿಂಗಪ್ಪ.ಕೆ.ಜಿ | ಗಂಡು | ೪೩ | ಸತ್ತೂರು | ಪೂಜಾರಿಕೆ | ಹರಿಜನ |
| ೩ | ರಾಜಪ್ಪ.ವಿ | ಗಂಡು | ೪೧ | ಸತ್ತೂರು | ವ್ಯವಸಾಯ | ಲಿಂಗಾಯಿತ |
| ೪ | ದರುಗದಹಾಲಮ್ಮ | ಹೆಣ್ಣು | ೭೩ | ಸತ್ತೂರು | ಮನೆಗೆಲಸ | ಹರಿಜನ |
| ೫ | ಬಸವರಾಜಪ್ಪ. | ಗಂಡು | ೬೧ | ಕಂಚಿಕೇರಿ | ವ್ಯವಸಾಯ | ಲಿಂಗಾಯಿತ |
| ೬ | ಸಿದ್ದಲಿಂಗಪ್ಪ. | ಗಂಡು | ೫೫ | ಕಂಚಿಕೇರಿ | ಕುರಿವ್ಯಾಪಾರ | ನಾಯಕ |
| ೭ | ಹನುಮಂತಪ್ಪ | ಗಂಡು | ೫೦ | ಪುರದಕೆರೆ | ಹೋಟಲ್ | ಲಿಂಗಾಯಿತ |
| ೮ | ಲಲಿತಮ್ಮ | ಹೆಣ್ಣು | ೪೭ | ಪುರದಕೆರೆ | ಅಂಗಡಿ | ಸಾದರ |
| ೯ | ಯಲ್ಲಪ್ಪ | ಗಂಡು | ೫೨ | ಚಿಕ್ಕಕಬ್ಬಾರ | ಪೂಜಾರಿಕೆ | ಹೂಗಾರ |
| ೧೦ | ಗೋವಿಂದಪ್ಪ | ಗಂಡು | ೪೫ | ಚಿಕ್ಕಕಬ್ಬಾರ | ಪೂಜಾರಿಕೆ | ಹೂಗಾರ |
| ೧೧ | ರಂಗಪ್ಪ ಪೂಜಾರ್ | ಗಂಡು | ೪೪ | ಚಿಕ್ಕಕಬ್ಬಾರ | ಪೂಜಾರಿಕೆ | ಹೂಗಾರ |
| ೧೨ | ನಾಗೇಂದ್ರಪ್ಪ | ಗಂಡು | ೬೦ | ಹೊಸಕಟ್ಟೆ | ದನಸಾಕಾಣೆ | ಮಡಿವಾಳ |
| ೧೩ | ನೆಹರೂ.ಬಿ | ಗಂಡು | ೫೩ | ಹಿರೆಕಬ್ಬಾರ | ಅಂಗಡಿ | ಕಮ್ಮಾರ |
| ೧೪ | ದಾನೇಶ್ಅಂಗಡಿ | ಗಂಡು | ೬೩ | ಹಿರೆಕಬ್ಬಾರ | ಶಿಕ್ಷಕರು | ಲಿಂಗಾಯಿತ |
| ೧೫ | ನಾಗರಾಜ್ | ಗಂಡು | ೩೮ | ಬಾಡ | ಕ್ಷೌರಿಕ | ಕ್ಷೌರಿಕ |
| ೧೬ | ರಾಮಲಿಂಗ | ಗಂಡು | ೪೫ | ಅರಸೀಕೆರೆ | ವ್ಯವಸಾಯ | ನಾಯಕ |
| ೧೭ | ಶಿವಪ್ಪಕಾಯಕದ | ಗಂಡು | ೭೧ | ಬಿಲ್ಲಹಳ್ಳಿ | ವ್ಯವಸಾಯ | ಗೌಡರು |
| ೧೮ | ಅಂಜನಪ್ಪ | ಗಂಡು | ೪೦ | ಮೇಡ್ಲೇರಿ | ಪಶುಸಾಗಣಿ | ಕುರುಬ |
| ೧೯ | ಪಾಲಾಕ್ಷಪ್ಪ | ಗಂಡು | ೫೫ | ಬನ್ನಿಕೋಡು | ವ್ಯವಸಾಯ | ಲಿಂಗಾಯಿತ |
| ೨೦ | ಪ್ರಭುಸ್ವಾಮಿ | ಗಂಡು | ೪೧ | ಕೊಟ್ಟೂರು | ವ್ಯವಸಾಯ | ಜಂಗಮ |
| ೨೧ | ಎಚ್.ಡಿ.ದಾಸಪ್ಪ | ಗಂಡು | ೫೮ | ಗೊಲ್ಲರಹಟ್ಟಿ | ವ್ಯವಸಾಯ | ಗೊಲ್ಲರು |
| ೨೨ | ನಾಗರಾಜ್.ಜೆ | ಗಂಡು | ೪೦ | ಗೊಲ್ಲರಹಟ್ಟಿ | ವ್ಯವಸಾಯ | ಗೊಲ್ಲರು |
| ೨೩ | ಹೇಮಂತ್ | ಗಂಡು | ೩೮ | ಗೊಲ್ಲರಹಟ್ಟಿ | ವ್ಯವಸಾಯ | ಗೊಲ್ಲರು |
| ೨೪ | ಟಿ.ಮಂಜಪ್ಪ | ಗಂಡು | ೩೮ | ಗೊಲ್ಲರಹಟ್ಟಿ | ಕೂಲಿ | ಗೊಲ್ಲರು |
| ೨೫ | ದುರುಗಪ್ಪ | ಗಂಡು | ೪೫ | ಕೊಕ್ಕನೂರು | ಕೂಲಿ | ಹರಿಜನ |
| ೨೬ | ಶೇಖರಪ್ಪ | ಗಂಡು | ೫೧ | ಪಾಳ್ಯ | ಅಂಗಡಿ | ಕುರುಬ |
| ೨೭ | ಹನುಮಂತಪ್ಪ.ಕೆ | ಗಂಡು | ೪೮ | ಎಳೆಹೊಳೆ | ವ್ಯವಸಾಯ | ಕುರುಬ |

| ೨೮ | ಹೇಮಣ್ಣ | ಗಂಡು | ೬೨ | ಹೊಸಹಳ್ಳಿ | ವ್ಯವಸಾಯ | ರೆಡ್ಡಿ |
|---|---|---|---|---|---|---|
| ೨೯ | ಕೋಟ್ರೇಶ್.ಕೆ | ಗಂಡು | ೩೩ | ಕಮಲಾಪುರ | ಉಪನ್ಯಾಸಕ | ಲಿಂಗಾಯಿತ |
| ೩೦ | ಪಕೀರಪ್ಪ | ಗಂಡು | ೫೫ | ಬಸನಾಳ | ವ್ಯವಸಾಯ | ನಾಯಕ |
| ೩೧ | ಹನುಮಂತಪ್ಪ | ಗಂಡು | ೫೮ | ನದಿಹರಳಳ್ಳಿ | ಕೂಲಿ | ಕುರುಬ |
| ೩೨ | ಹನುಮಕ್ಕ | ಹೆಣ್ಣು | ೫೫ | ನಂದಿಗಾವಿ | ಕೂಲಿ | ಹರಿಜನ |
| ೩೩ | ಪಕೀರವ್ವ | ಹೆಣ್ಣು | ೪೬ | ನಂದಿಗಾವಿ | ಕೂಲಿ | ಹರಿಜನ |
| ೩೪ | ಶೋಭಕ್ಕ | ಹೆಣ್ಣು | ೪೪ | ನಂದಿಗಾವಿ | ಕೂಲಿ | ಹರಿಜನ |
| ೩೫ | ಚಂದ್ರಮ್ಮ | ಹೆಣ್ಣು | ೩೮ | ನಂದಿಗಾವಿ | ಕೂಲಿ | ಹರಿಜನ |
| ೩೬ | ತಿಪ್ಪಮ್ಮ | ಹೆಣ್ಣು | ೫೩ | ನಂದಿಗಾವಿ | ಕೂಲಿ | ಹರಿಜನ |
| ೩೭ | ಪರತವ್ವ | ಹೆಣ್ಣು | ೫೪ | ನಂದಿಗಾವಿ | ಕೂಲಿ | ಅಂಬಿಗರು |
| ೩೮ | ಪಕೀರಜ್ಜಿ | ಹೆಣ್ಣು | ೫೩ | ನಂದಿಗಾವಿ | ಕೂಲಿ | ಗಂಗಾಮತ |
| ೩೯ | ಚಂದ್ರಮ್ಮ | ಹೆಣ್ಣು | ೪೩ | ನಂದಿಗಾವಿ | ಕೂಲಿ | ಗಂಗಾಮತ |
| ೪೦ | ವಿಜಯವ್ವ | ಹೆಣ್ಣು | ೪೪ | ನಂದಿಗಾವಿ | ಕೂಲಿ | ಗಂಗಾಮತ |
| ೪೧ | ತಿಪ್ಪವ್ವ | ಹೆಣ್ಣು | ೫೬ | ನಂದಿಗಾವಿ | ಕೂಲಿ | ಗಂಗಾಮತ |
| ೪೨ | ಕರಿಯಪ್ಪ | ಗಂಡು | ೩೫ | ಕಡೂರು | ಪಶುಪಾಲನೆ | ಕುರುಬರು |
| ೪೩ | ಸಿದ್ದಪ್ಪ | ಗಂಡು | ೬೧ | ಕಡೂರು | ವ್ಯವಸಾಯ | ಕುರುಬರು |
| ೪೪ | ಹನುಮಂತಪ್ಪ | ಗಂಡು | ೫೩ | ಕಡೂರು | ಕೂಲಿ | ಕುರುಬರು |
| ೪೫ | ರಾಮಚಂದ್ರಪ್ಪ | ಗಂಡು | ೫೫ | ಕಡೂರು | ಕೂಲಿ | ಕುರುಬರು |
| ೪೬ | ಹನುಮಜ್ಜಿ | ಹೆಣ್ಣು | ೮೦ | ಮೆಣಸಿನಹಳ್ಳಿ | ಕೂಲಿ | ಕುರುಬರು |
| ೪೭ | ಗಂಗಮಾಳಮ್ಮ | ಹೆಣ್ಣು | ೫೮ | ಹಳ್ಳೂರು | ಕೂಲಿ | ಸುಣ್ಣಗಾರು |
| ೪೮ | ಕೊಟ್ರಮ್ಮ | ಹೆಣ್ಣು | ೫೫ | ಹಳ್ಳೂರು | ಕೂಲಿ | ಸುಣ್ಣಗಾರು |
| ೪೯ | ಸಣ್ಣ ಪಕ್ಕಿರವ್ವ | ಹೆಣ್ಣು | ೪೩ | ಹಳ್ಳೂರು | ಕೂಲಿ | ಸುಣ್ಣಗಾರು |
| ೫೦ | ಈರಮ್ಮ | ಹೆಣ್ಣು | ೪೪ | ಹಳ್ಳೂರು | ಕೂಲಿ | ಸುಣ್ಣಗಾರು |
| ೫೧ | ಮಂಜುಳಮ್ಮ | ಹೆಣ್ಣು | ೫೫ | ಹಳ್ಳೂರು | ಕೂಲಿ | ಸುಣ್ಣಗಾರು |
| ೫೨ | ಎಲ್ಲಮ್ಮ | ಹೆಣ್ಣು | ೪೬ | ಹಳ್ಳೂರು | ಕೂಲಿ | ನಾಯಕ |
| ೫೩ | ಸಿದ್ಧಪ್ಪ | ಗಂಡು | ೪೮ | ಸಿರಿಗೆರೆ | ವ್ಯವಸಾಯ | ನಾಯಕ |
| ೫೪ | ಕೃಷ್ಣಪ್ಪ | ಗಂಡು | ೩೩ | ರಾಂಪುರ | ವ್ಯವಸಾಯ | ಲಿಂಗಾಯಿತ |

## ಗ್ರಂಥಋಣ


೧. ಅರ್ಕಸಾಲಿ ವೃಷಬೇಂದ್ರಾಚಾರ್ : ಮಳೆರಾಜ ಪರಂಪರೆ. ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ. ೨೦೧೦.

೨. ಅರ್ಜುನ ಗೊಳಸಂಗಿ : (ಸಂ.)ದಲಿತರ ಬದುಕು ಮತ್ತು ಸಂಸ್ಕೃತಿ (ಜಾನಪದೀಯ ಅಧ್ಯಯನ) ವಿಮೋಚನಾ ಪ್ರಕಾಶನ. ಅಥಣಿ.೨೦೦೦.

೩. ಈಶ್ವರಪ್ಪ ಎಂ.ಜಿ. : ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೧೯೯೫

೪. ಈಶ್ವರಪ್ಪ ಎಂ.ಜಿ : ಜಾನಪದ ಇಬ್ಬನಿಗಳು. ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಬೆಂಗಳೂರು.೧೯೯೯,

೫. ಕಲಬುರ್ಗಿ.ಎಂ.ಎಂ. : ಜಾನಪದ ಸಾಹಿತ್ಯ ದರ್ಶನ ಭಾಗ-೧೨, ಆಕರಜಾನಪದ ಕನ್ನಡ ಅದ್ಯಯನ ಪೀಠ. ಕರ್ನಾಟಕ ವಿ.ವಿ.ಧಾರವಾಡ. ೧೯೯೪

೬. ಕಾಳೇಗೌಡ ನಾಗವಾರ(ಸಂ) : ಬಯಲು ಸೀಮೆಯ ಲಾವಣಿಗಳು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ.೧೯೭೩

೭. ಕುಮುದಿನಿ ಸಿ.ಕೆ. : (ಅನು)ಪ್ರಾಚೀನ ಭಾರತದಲ್ಲಿ ಬೇಸಾಯ, ಐ.ಸಿ.ಎ.ಆರ್. ಪ್ರಕಟಣೆ ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು.

೮. ಕುಮಾರಪ್ಪ. ಈ. (ಅನು) : ಮೂಲ.ದೇವಿಪ್ರಸಾದ ಚಟ್ಟೋಪಾಧ್ಯಾಯ ಮಾತೆಯರು ಮಾನ್ಯರಾಗಿದ್ದಾಗ. ನವಕರ್ನಾಟಕಪ್ರಕಾಶನ, ಬೆಂಗಳೂರು೧೯೯೭

೯. ಕೃಷ್ಣಕುಮಾರ್. : ಜಾನಪದ ಜಾಗರ. ಚಿತ್ರಭಾನು ಪ್ರಕಾಶನ, ಮೈಸೂರು, ೧೯೮೭

೧೦. ಕೃಷ್ಣಯ್ಯ. ಸ.ಕ. : ಬಾಚಿಗೊಂಡನಹಳ್ಳಿ ಮತ್ತು ಎಣಿಗಿ ಬಸಾಪುರದ ಜನಪದ ಗೀತೆಗಳು

ಪ್ರಾದೇಶಿಕ ಜಾನಪದ ಸಂಸ್ಥೆ.
ಗುಲ್ಬರ್ಗಾ. ೧೯೮೬

೧೧. ಕೃಷ್ಣಮೂರ್ತಿ ಬಿಳಿಗೆರೆ : ಅನ್ನದೇವರ ಮುಂದೆ
ಉಮಾಮಹೇಶ್. ೨೦೦೮.

೧೨. ಖಂಡೋಬಾ. ಪಿ.ಕೆ : ಜನಪದ ಕಥನ ಗಿತೆಗಳು
ಕರ್ನಾಟಕ ಸಾಹಿತ್ಯ ಅಕಾಡೆಮಿ,
ಬೆಂಗಳೂರು-೧೯೯೬

೧೩. ಗಾಯತ್ರಿ ನಾವಡ : ವಿರಚನೆ. ಎನ್.ಆರ್.ಎ.ಎಂ.ಎಚ್.
ಪ್ರಕಾಶನ ಕೋಟೇಶ್ವರ, ದಕ್ಷಿಣಕನ್ನಡ.
೧೯೯೭

೧೪. ಚಂದ್ರಶೇಖರ ನಂಗಲಿ. ವಿ : ನಿರ್‌ಬೀಜೀಕರಣದ ವಿರಾಟ್ ಸ್ವರೂಪ,
ಲೋಹಿಯಾ ಪ್ರಕಾಶನ ಬಳ್ಳಾರಿ. ೧೯೯೯

೧೫. ಜವರೇಗೌಡ.(ಸಂ) : ಜನಪದ ಗೀತಾಂಜಲಿ
ಸಪ್ನ ಬುಕ್ ಹೌಸ್.೨೦೧೪.

೧೬. ಜ್ಯೋತ್ಸ್ನಾ ಕಾಮತ್ : ಮಹಿಳೆ: ಒಂದು ಅಧ್ಯಯನ
ನವಕರ್ನಾಟಕ ಪ್ರಕಾಶನ,
ಬೆಂಗಳೂರು ೧೯೯೯,

೧೭. ತಲ್ವಾಡಿ. ಬಿ.ಎಸ್. : ಜನಪದ ಕಲರವ.ಅನ್ನಪೂರ್ಣ ಪ್ರಕಾಶನ
ಬೆಂಗಳೂರು ೨೦೧೦

೧೮. ತಿಪ್ಪೇಸ್ವಾಮಿ.ಜಿ.ಆರ್. (ಸಂ) : ದಕ್ಷಿಣ ಕರ್ನಾಟಕದ ಬೇಸಾಯದ
ಹಾಡುಗಳು. ಕನ್ನಡ ಮತ್ತು ಸಂಸ್ಕೃತಿ
ಇಲಾಖೆ. ೨೦೦೯.

೧೯. ದಾಸೇಗೌಡ ಜೆ.ವಿ. : ನಮ್ಮ ಜನಪದ ನಂಬಿಕೆಗಳು,
ಕನ್ನಡ ಅಧ್ಯಯನ ಸಂಸ್ಥೆ,
ಮೈಸೂರು ವಿಶ್ವವಿದ್ಯಾಲಯ, ಮೈಸೂರು.
೧೯೭೩

೨೦. ನರೇಂದ್ರರೈ ದೇರ್ಲ : ಬೊಗಸೆ ತುಂಬಾ ಬೀಜ
ಸಿ.ವಿ.ಜಿ. ಬೆಂಗಳೂರು -೨೦೦೪

೨೧. ನರೇಂದ್ರ ರೈ ದೇರ್ಲ : ಸಾವಯುವ ಕೃಷಿ,
ಪುಸ್ತಕ ಪ್ರಕಾಶನ, ಮೈಸೂರು. , ೧೯೯೭

೨೨. ನಾಗರಾಜ್.ಎಂ.ಜಿ. : ಕೇರಳ ಸಾಂಸ್ಕೃತಿಕ ಜಾನಪದ ನೆಲೆಗಳು
ಕರ್ನಾಟಕ ಪರಿಷತ್ತು ಪ್ರ-೨೦೧೦

೨೩. ನಾಗರಾಜ.ಡಿ.ಆರ್. : ಶಕ್ತಿಶಾರದೆಯ ಮೇಳ.
ಅಕ್ಷರಪ್ರಕಾಶನ. ಹೆಗ್ಗೋಡು. ೧೯೮೨

೨೪. ನಾಗಭೂಷಣಸ್ವಾಮಿ ಓ.ಎಲ್ : ವಿಮರ್ಶೆಯ ಪರಿಭಾಷೆ.
ಅಂಕಿತ ಪುಸ್ತಕ ಪ್ರಕಾಶನ ಬೆಂಗಳೂರು.
೧೯೯೮

೨೫. ನಾಗೇಗೌಡ. ಹೆಚ್.ಎಲ್ : ಪದವವೆ ನಮ್ಮ ಎದೆಯಲ್ಲಿ.
ಪ್ರಸಾರಾಂಗ ಜ್ಞಾನಭಾರತಿ ಬೆಂಗಳೂರು
ವಿ.ವಿ. ಬೆಂಗಳೂರು. ೧೯೭೬

೨೬. ನಾಗೇಗೌಡ. ಹೆಚ್.ಎಲ್ : ಸೋಬನೆ ಚಿಕ್ಕಮ್ಮನ ಪದಗಳು
: ಕನ್ನಡ ಜನಪದಗಳು
ಕರ್ನಾಟಕ ಜಾನಪದ ಪರಿಷತ್ತು,
ಪ್ರ.ಮು.೨೦೦೮.

೨೭. ನಾರಾಯಣಸ್ವಾಮಿ. ಕೆ.ವೈ. : ನೀರದೀವಿಗೆ. ಪ್ರಗತಿ ಗ್ರಾಫಿಕ್ಸ್.
ಬೆಂಗಳೂರು.೨೦೦೯.

೨೮. ನಾಲವಗಿ ಸಿ.ಕೆ. : ಜಾನಪದ ಸಮಾಲೋಕ,
ಪ್ರಕಾಶನ ಕನ್ನಡ ಸಾಹಿತ್ಯ ಪ್ರತಿಷ್ಠಾಪನ(ರಿ)
ಬೆಂಗಳೂರು. ೨೦೦೩

೨೯. ನಾವಲಗಿ ಸಿ.ಕೆ. : ಉತ್ತರ ಕರ್ನಾಟಕದ ಕೃಷಿ ಜನಪದ
ಸಾಹಿತ್ಯಭರತ ಪ್ರಕಾಶನ, ಗೋಕಾಕ.
೨೦೦೬

೩೦. ನಾವಡ. ಎ.ವಿ., : ಒಂದು ಸೊಲ್ಲು ನೂರು ಸೊರೆ,
ಕರ್ನಾಟಕ ಸಂಘ,
ಪುತ್ತೂರು ದಕ್ಷಿಣ ಕನ್ನಡ ೧೯೯೯.

೩೧. ಪದ್ಮ ಪ್ರಸಾದ್. ಎಸ್.ಪಿ. : ಮಳೆ ಒಂದು ಜಾನಪದೀಯಅಧ್ಯಯನ.
ಸುಂದರ ಪುಸ್ತಕ ಪ್ರಕಾಶನ.
ಧಾರವಾಡ೧೯೯೪.

೩೨. ಪುರುಷೋತ್ತಮ ಬಿಳಿಮಲೆ : ಕೂಡುಕಟ್ಟು, ಅನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೧೯೯೭.

೩೩. ಪ್ರಭಾಕರ. ಎ.ಎಸ್ : ಮ್ಯಾಸಬೇಡರ ಕಥನಗಳು ಕನ್ನಡ ವಿ.ವಿ. ಹಂಪಿ. ೨೦೧೧

೩೪. ಬಾಲಗೋಪಾಲ್. ಕೆ.(ಅನು) : ಪ್ರಾಚೀನ ಭಾರತದ ಚರಿತ್ರೆ, ಡಿ.ಡಿ. ಕೋಸಾಂಬಿಯವರ ಚಿಂತನೆಗಳು, ಅನು:ಶ್ರೀಮತಿ. ಎಚ್.ಬೆಳ್ಳಿಚುಕ್ಕಿಬುಕ್‌ಟ್ರಸ್ಟ್, ಬೆಂಗಳೂರು. ೧೯೯೮

೩೫. ಬೋರಲಿಂಗಯ್ಯ, ಹಿ.ಚಿ. : ಬುಡಕಟ್ಟು ದೈವಾರಾಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ .೨೦೦೦

೩೬. ಬೈರೇಗೌಡ. ಎಂ. : ಜಾನಪದ ವೈವಿದ್ಯ, ಶಕ್ತಿ ಮುದ್ರಣ ಪ್ರಕಾಶನ ಬೆಂಗಳೂರು ೧೯೯೯

೩೭. ಮಂಜುನಾಥ ಬೇವಿನಕಟ್ಟೆ : ಜಾನಪದ ಉತ್ಖನನ. ಶಕ್ತಿಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ೨೦೦೭.

೩೮. ಮಂಜುನಾಥಬೇವಿನಕಟ್ಟೆ : ಮೈಲಾರಲಿಂಗನಕಾವ್ಯ. ಪ್ರಸಾರಾಂಗ. ಕನ್ನಡ ವಿ.ವಿ ಹಂಪಿ,೧೯೯೯

೩೯. ಮಲ್ಲಿಕಾರ್ಜುನ ಕಂಬಾರ : ಜನಪದ ಲೇಖನಗಳು. ಕನ್ನಡಸಾಹಿತ್ಯ ಪರಿಷತ್ತು ಪ್ರಮು.೨೦೧೦

೪೦. ಮಾದವ ವತಾಳ್(ಅನು) : ಬತ್ತದಚಿಲುಮೆ. ಮೂಲ. ವಂದನಾಶಿವ. ಪ್ರಸಾರಾಂಗ. ಕನ್ನಡ ವಿ.ವಿ. ಹಂಪಿ.೨೦೦೫

೪೧. ಮುತ್ತಯ್ಯ , ಎಸ್. ಎಂ : ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿಸಂಸ್ಕೃತಿ. ಕನ್ನಡ. ಸಾಹಿತ್ಯ ಪರಿಷತ್ತು, ಬೆಂಗಳೂರು ೨೦೦೮.

೪೨. ಮೂಲಗಿ.ಆರ್.ಬಿ. : ಧಾರವಾಡ ಜಿಲ್ಲೆಯ ಜನಪದ ಸಂಪ್ರದಾಯಗಳು. ಸಾಹಿತ್ಯ ಪ್ರಕಾಶನ ಹುಬ್ಬಳಿ -೨೦೧೦

೪೩. ಮೊಗಳ್ಳಿ ಗಣೇಶ್ : ಹಂಪಿ ಜೀವಜಾಲ ಜಾನಪದ. ಪ್ರಸಾರಾಂಗ. ಕನ್ನಡ ವಿ.ವಿ ಹಂಪಿ. ೨೦೧೦.

೪೪. ಮೊಗಳ್ಳಿ ಗಣೇಶ್ : ಅವ್ಯಕ್ತ ಚರಿತ್ರೆ, ಪ್ರಸಾರಾಂಗ ಕನ್ನಡ ವಿ.ವಿ ಹಂಪಿ. ೨೦೦೯.

೪೫. ಮೈತ್ರೇಯಿ ಮುಖ್ಯೋಪಾಧ್ಯಾಯ, : ಬೆಳ್ಳಿಯ ಸಂಕೋಲೆಗಳು, (ಅನು), ವೈದೇಹಿ, ಅಕ್ಷರ ಪ್ರಕಾಶನ ಸಾಗರ. ೧೯೮೫

೪೬. ಮೈಲಹಳ್ಳಿ ರೇವಣ್ಣ : ಮಾದಾರ ಸಾಹಿತ್ಯ ಮತ್ತು ಸಂಸ್ಕೃತಿ ಸಾಹಿತ್ಯ. ರಾಜ್ ಪ್ರಕಾಶನ, ಮೈಸೂರು ೨೦೦೪

೪೭. ರಮೇಶ್. ಸ.ಚಿ. : ಕೃಷಿ ಪಾರಂಪರಿಕ ಜ್ಞಾನ. ಪ್ರಸಾರಾಂಗ. ಕನ್ನಡ ವಿ.ವಿ.ಹಂಪಿ. ೨೦೧೧.

೪೮. ರಮೇಶ್.ಸ.ಚಿ. : ಕರಾವು. ಅಂಶು ಪ್ರಕಾಶನ. ಹೊಸಪೇಟೆ ೨೦೦೮

೪೯. ರಹಮತ್ ತರೀಕೆರೆ. : ಧರ್ಮ (ವಿಶ್ವಕೋಶ), ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦

೫೦. ರಹಮತ್ ತರೀಕೆರೆ. : ಮರದೊಳಗಿನ ಕಿಚ್ಚು. ಕನ್ನಡ ಸಂಸ್ಕೃತಿ ಇಲಾಖೆ. ಬೆಂಗಳೂರು. ೨೦೧೦

೫೧. ರಾಜಪ್ಪ. ಟಿ.ಎಸ್. : ರಾಯಚೂರು ಜಿಲ್ಲೆಯ ಜನಪದ ಕತೆಗಳು ಕನ್ನಡ ಅಧ್ಯಯನ ಸಂಸ್ಥೆ, ಮೈ. ವಿ.ವಿ. ೧೯೭೬.

೫೨. ರಾಜೇಗೌಡ. ಹ.ಕ : ಜನಪದ ಶೋಧ. ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ. ೨೦೧೧.

೫೩. ರಾಧಾಕೃಷ್ಣ ಭಡ್ತಿ ಎಸ್ : ಮೇಘ ಮೇದಿನಿ. ಸಾಹಿತ್ಯ ಪ್ರಕಾಶನ ಹುಬ್ಬಳ್ಳಿ ಪ್ರಮು.೨೦೧೦.

೫೪. ರಾಧಾಕೃಷ್ಣ ಭಡ್ತಿ ಎಸ್ : ಅಮೃತಧಾರೆ ಸಾಹಿತ್ಯ ಪ್ರಕಾಶನ ಹುಬ್ಬಳ್ಳಿ ಪ್ರಮು.೨೦೧೦.

೫೫. ರಾಧಾಕೃಷ್ಣ ಭಡ್ತಿ. ಎಸ್ : ಪಾರಂಜವ್ವ ಸಾಹಿತ್ಯ ಪ್ರಕಾಶನ ಹುಬ್ಬಳ್ಳಿ ಪ್ರಮು.೨೦೧೦.

೫೬. ರಾಮಚಂದ್ರಪ್ಪ ಬರಗೂರು (ಪ್ರ.ಸಂ.) ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ೧೯೯೩.

೫೭. ರಾಮಕೃಷ್ಣ. ಜಿ. : ಲೋಕಾಯತ. ಮೂಲ. ದೇವಿಪ್ರಸಾದ್ ಚಟ್ಟೋಪಧ್ಯಾಯ.ನವಕರ್ನಾಟಕ ಪ್ರಕಾಶನ ಮೊದಲ ಮುದ್ರಣ ೨೦೧೧

೫೮. ರಂಗರಾಜ ವನದುರ್ಗ : ಜನಪದ ಸಾಂಸ್ಕೃತಿಕ ವೀರರು, ಡಾ॥ಬಿ.ಅರ್.ಅಂಬೇಡ್ಕರ್‌ಅಧ್ಯಯನ ಕೇಂದ್ರ, ಕುವೆಂಪು ವಿ.ವಿ. ೨೦೦೭

೫೯. ಲಕ್ಕಪ್ಪಗೌಡ. ಹೆಚ್.ಜೆ(ಪ್ರ.ಸಂ) : ಸುವರ್ಣ ಜಾನಪದ –೨, ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ. ೧೯೯೮.

೬೦. ಲಕ್ಕಪ್ಪಗೌಡ.ಹೆಚ್.ಜೆ.(ಪ್ರ.ಸಂ) ಜಿ.ಆರ್.ತಿಪ್ಪೇಸ್ವಾಮಿ. : ಜನಪದ ಗಂಗೋತ್ರಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು ಸಂಪುಟ ೦೮. ಸಂಚಿಕೆ ೦೧ –೧೯೯೫

೬೧. ಲಿಂಗಯ್ಯ ಡಿ. : ಕೊಂತಿಪೂಜೆ. ದಿನಕರಪ್ರಕಾಶನ, ಬೆಂಗಳೂರು. ೧೯೬೭

೬೨. ವೀರಣ್ಣ ದಂಡೆ. (ಸಂ) : ಜನಪದ ಕಾವು – ಪ್ರಥಮ ವಿಮರ್ಶೆ ಪ್ರಗತಿ ಪ್ರಕಾಶನ ಕಲ್ಬುರ್ಗಿ ೧೯೯೩.

೬೩. ವೀರಣ್ಣದಂಡೆ.(ಪ್ರ.ಸಂ) : ಒಬ್ಬನೇ ಹೇಳಿದ ೨೨ ಕಥೆಗಳು, ಪ್ರಸಾರಾಂಗ – ಬೆಂಗಳೂರು ವಿಶ್ವವಿದ್ಯಾಲಯ, ಪ್ರಮು. ೧೯೭೪

೬೪. ವೀರಣ್ಣ ದಂಡೆ : ದೇಸೀ ದೃಸ್ಟಿ, ಕವಿಮಾರ್ಗ ಪ್ರಕಾಶನ, ಕಲುಬುರ್ಗಿ, ೨೦೦೧,

೬೫. ವೃಷಬೇಂದ್ರಸ್ವಾಮಿ. ಎಸ್.ಎಂ (ಪ್ರ.ಸಂ): ಜಾನಪದ ಸಾಹಿತ್ಯ ದರ್ಶನ ಭಾಗ-೧೦ ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿ.ವಿ.ಧಾರವಾಡ, ೧೯೮೭

೬೬. ವೆಂಕಟರಾವ್. ಖ. : ಕೃಷಿ ಬೆಳವಣಿಗೆ, ವಿದ್ಯಾನಿಧಿ ಪ್ರಕಾಶನ, ಗದಗ. . ೧೯೮೫

೬೭. ವೆಂಕಟರಾವ್. ಬಿ.ವಿ. : ಕೃಷಿ ಮತ್ತು ಪರಿಸರ ಹೊಸ ಸೂಲುಗಳು ನವಕರ್ನಾಟಕ ಪ್ರಕಾಶನ ೪ನೇ ಮುದ್ರಣ ೨೦೧೧

೬೮. ಶಂಕರನಾರಾಯಣರಾವ್ ಎನ್.ಪಿ(ಅನು) ಪ್ರಾಚೀನ ಭಾರತ. ಮೂಲ. ಶರ್ಮ ಆರ್.ಎಸ್. ನವಕರ್ನಾಟಕ ಪ್ರಕಾಶನ, ಬೆಂಗಳೂರು. ೧೯೯೭.

೬೯. ಶ್ರೀಕಂಠ ಕೂಡಿಗಿ : ಜನಪದ ಶೋಧ. ಕನ್ನಡ ಭಾರತಿ ಕುವೆಂಪು ವಿ.ವಿ. –೨೦೧೦೪

೭೦. ಶ್ರೀಮತಿ ಎಚ್.ಎಸ್. (ಸಂ) : ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬

೭೧. ಶ್ರೀಮತಿ. ಹೆಚ್.ಎಸ್.(ಅನು) : ಪ್ರಾಚೀನ ಭಾರತದ ಚರಿತ್ರೆ, ಮೂಲ.ಬಾಲಗೋಪಾಲ್.ಕೆ. ಪ್ರಗತಿ ಗ್ರಾಫಿಕ್ಸ್ ಬೆಂಗಳೂರು–೨೦೧೨.

೭೨. ಶ್ರೀರಾಮ ಇಟ್ಟಣ್ಣನವರ : ಜಾನಪದ ಪರಿಶ್ರಮ ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು.೨೦೧೦

೭೩. ಸ್ವಾಮಿ. ಬಿ.ಎಸ್. : ಜನಪದ ಝೇಂಕಾರ. ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು.೧೯೮೨

೭೪. ಸಿದ್ದರಾಮಯ್ಯ. ಎಸ್.ಜಿ(ಪ್ರ.ಸಂ) ಸಂದ್ಯಾರೆಡ್ಡಿ, : ಸುವರ್ಣ ಜನಪದ ಕಾವ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೨೦೦೬.

೭೫. ಸಿದ್ದಲಿಂಗಯ್ಯ. ಎಸ್. ಗ್ರಾಮದೇವತೆಗಳು, ಪ್ರಕಾಶನ ಅಂಕಿತ ಪುಸ್ತಕ, ಬೆಂಗಳೂರು, ೧೯೯೭.

೭೬. ಸುಮಂಗಳ ಅತ್ತಿಗೇರಿ : ಕೃಷಿ ಜಾನಪದ ಮತ್ತು ಮಹಿಳೆ. ಸಂಶೋಧನಾ ಮಹಾಪ್ರಬಂಧ, ಕರ್ನಾಟಕ ಜಾನಪದ ಅಕಾಡೆಮಿ.೨೦೧೦

೭೭. ಸೂರ್ಯನಾಥ ಯು. ಕಾಮತ್ : ಕರ್ನಾಟಕ ರಾಜ್ಯ ಗೆಜೆಟಿಯರ್ ಕರ್ನಾಟಕ ರಾಜ್ಯ ಸರ್ಕಾರ. ೧೯೮೬

೭೮. ಸೋಮಣ್ಣ. : ವ್ಯವಸಾಯ ಸಂಬಂಧಿ ಆಚರಣೆಗಳು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೧೦

೭೯. ಸಂಧ್ಯಾರೆಡ್ಡಿ ಕೆ.ಆರ್ : ಜನಪದ ಸಾಹಿತ್ಯದಲ್ಲಿ ಮಹಿಳೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. . ೧೯೯೫,

೮೦. ಸಿಂಪಿಲಿಂಗಣ್ಣ, (ಸಂ) : ಉತ್ತರ ಕರ್ನಾಟಕದ ಜನಪದ ಕಥೆಗಳು ಸಾಹಿತ್ಯ ಅಕಾಡೆಮಿ.ನವದೆಹಲಿ, ಎರಡನೇ ಮುದ್ರಣ ೧೯೯೬.

೮೧. ಹರಿಲಾಲ್ ಪವಾರ್ : ಭೂಮಿ, ಜನಪದ ಸಾಹಿತ್ಯ ದರ್ಶನ, ಭಾಗ-೨೩ (ಜನಪದ ನಂಬಿಕೆಗಳು), ಎಂ.ಬಿ. ನೇಗಿನಹಾಳ (ಪ್ರಸಂ.) ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೯೯.

೮೨. ಹಲಸಂಗಿ ಗೆಳೆಯರು. (ಸಂ) : ಹಲಸಂಗಿ ಹಾಡು. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೦೦.

೮೩. ಹಾ. ಮಾ. ನಾಯಕ : ರಾಯಚೂರು ಜಿಲ್ಲೆಯ ಜನಪದಕಥೆಗಳು. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ೧೯೭೬

೮೪. ಹಿರಿಯಣ್ಣ ಅಂಬಳಿಕೆ : ಕಚ್ಚೆಗೌಳಿಗರ ಸಂಸ್ಕೃತಿ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೮೫. ಹಿರೇಮಠ ಎಸ್.ಎಸ್ : ಕರ್ನಾಟಕ ಸಂಸ್ಕೃತಿ ಪರಂಪರೆ. ಭಾಗ-೧ ಹಬ್ಬಗಳು, ಸಮತಾ ಪ್ರಕಾಶನ, ಹರಪನಹಳ್ಳಿ, ೧೯೯೨

## ಛಾಯಾಚಿತ್ರಗಳು



ಜೋಕುಮಾರನ ಪ್ರತಿಮೆ ಮಾಡುತ್ತಿರುವುದು



ಜೋಕುಮಾರನ ಹೆಡಿಗೆ ಪೂಜೆ ಮಾಡುತ್ತಿರುವುದು



ಜೋಕುಮಾರನನ್ನು ಹೊತ್ತು ಊರಾಡುತ್ತಿರುವುದು



ಮನೆಗಳ ಮುಂದೆ ಧಾನ್ಯ ಬೇಡುತ್ತಿರುವುದು



ಮಳೆಮಲ್ಲಪ್ಪನ ಗುಡಿಮುಂದೆ ಮಾಹಿತಿ ಸಂಗ್ರಹಣೆ



ಮಳೆರಾಯನ ಹಾಡು. ಗುಂಪು ಹಾಡುಗಾರಿಕೆ



ಮಳೆ ಕುರಿತ ಹಾಡುಗಳನ್ನು ಹಾಡಿದ ವಕ್ತೃಗಳು



ಜುಂಜಪ್ಪನ ಪರುವಿನಲ್ಲಿ 'ಮಳೆ' ಮಾಹಿತಿ ಸಂಗ್ರಹಣೆ



ಜೋಕುಮಾರನ ವಿಸರ್ಜನೆ. ಹಳ್ಳದ ದಂಡೆ



ಜೋಕುಮಾರನ ವಿಸರ್ಜಿಸುವ ಹಾಡು ಹಾಡುತ್ತಿರುವುದು



ಮಳೆಮಾಹಿತಿ ನೀಡುತ್ತಿರುವ ಕಬ್ಬಾರ ಗ್ರಾಮಸ್ಥರು



ಮಳೆದೇವನ ಪೂಜೆ

